ಶ್ರೀ ಜಯಚಾಮರಾಜೇಂದ್ರ

ಶ್ರೀ ವಸಿಷ್ಠ ಮಹರ್ಷಿ ವಿರಚಿತವೂ ಶ್ರೀ ವಾಲ್ಮೀಕಿ ಮಹರ್ಷಿ ಪ್ರೋಕ್ತವೂ
ಆದ

# ಯೋಗವಾಸಿಷ್ಠ

ಸಂಪುಟ ೧೯

## ನಿರ್ವಾಣ ಪ್ರಕರಣ

ಕನ್ನಡಿಸಿದವರು.
ದೇವುಡು

ಮುದ್ರಕರು
ಶ್ರೀ ಸುಜಾತ ಪ್ರಿಂಟಿಂಗ್ ವರ್ಕ್ಸ್
ನಂ. 17 ನೆಕ್ಕದ ಪಿಲ್ಲಣ್ಣನ ಗಲ್ಲಿ, ಅಕ್ಕೀಪೇಟೆ, ಬೆಂಗಳೂರು ನಗರ.
೧೯೫೬

ಶ್ರೀ

# ಯೋಗವಾಸಿಷ್ಠ

ಸಂಪುಟ—೯

## ನಿರ್ವಾಣ ಪ್ರಕರಣ

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ—ಸಂಖ್ಯೆ ೩೪

ಶ್ರೀ ವಸಿಷ್ಠ ಮಹರ್ಷಿ ವಿರಚಿತವೂ ಶ್ರೀ ವಾಲ್ಮೀಕಿ ಮಹರ್ಷಿ ಪ್ರೋಕ್ತವೂ
ಆದ

# ಯೋಗವಾಸಿಷ್ಠ

**ಸಂಪುಟ ೧೯**

## ನಿರ್ವಾಣ ಪ್ರಕರಣ

**ಕನ್ನಡಿಸಿದವರು :**

**ದೇವುಡು**

**ಮುದ್ರಕರು**

ಶ್ರೀ ಸುಜಾತ ಪ್ರಿಂಟಿಂಗ್ ವರ್ಕ್ಸ್,

೩. 117, ನೆಶ್ಯದ ಪಿಲ್ಲಣ್ಣನ ಗಲ್ಲಿ, ಅರಳೇಪೇಟೆ, ಬೆಂಗಳೂರು ನಗರ.

೧೯೫೩

# ಪೀಠಿಕೆ

ಯೋಗವಾಸಿಷ್ಠವು ಅದ್ವೈತಸಿದ್ಧಾಂತಕ್ಕೆ ಸೇರಿದ ಪ್ರಕರಣ ಗ್ರಂಥ. ಇದಕ್ಕೆ ವಾಸಿಷ್ಠರಾಮಾಯಣ ಎಂದೂ ಹೆಸರುಂಟು. ಅದ್ವೈತ ಗುರು ಪರಂಪರೆಯ ಆದ್ಯರಾದ ವಸಿಷ್ಠರು "ಸೃಷ್ಟಿಯ ಮೊದಲು ದಿನಗಳಲ್ಲಿ ಲೋಕದಲ್ಲಿ ಶಾಂತಿಯು ನೆಲೆಗೊಳ್ಳಲೆಂದು ಭಗವಂತನಾದ ಚತುರ್ಮುಖನು ಉಪದೇಶಿಸಿದ ಜ್ಞಾನವಿದ್ಯೆ' ಯನ್ನು ಶ್ರೀರಾಮನ ಚಿತ್ತಶಾಂತಿಗೆಂದು ಹೇಳಿದರೆಂದೂ. ಅದನ್ನೇ ವಾಲ್ಮೀಕಿಗಳು ಬ್ರಹ್ಮನಾಜ್ಞೆಯಿಂದ ಗ್ರಂಥವಾಗಿ ವಿರಚಿಸಿದರೆಂದೂ ಈ ಗ್ರಂಥದಲ್ಲಿ ಹೇಳಿದೆ. ವಿದ್ಯಾರಣ್ಯರು ನಿಶ್ಚಲದಾಸರು ಮೊದಲಾದ ಅದ್ವೈತಾಚಾರ್ಯರನೇಕರು ಈ ಗ್ರಂಥದ ಅನೇಕಾಂಶಗಳನ್ನು ತಮ್ಮ ಗ್ರಂಥ ಗಳಲ್ಲಿ ಸಂಗ್ರಹಿಸಿದ್ದಾರೆ. ವಾಸಿಷ್ಠಸಿದ್ಧಾಂತವೂ ಶಾಂಕರಸಿದ್ಧಾಂತವೂ ಕೆಲವೆಡೆಗಳಲ್ಲಿ ಭಿನ್ನೈಸುವುದೆಂದು ಕೆಲವರ ಅಭಿಪ್ರಾಯವಿದೆ: ಆದರೂ ಅದ್ವೈತ ಸಂಪ್ರದಾಯವನ್ನು ಹಿಡಿದ ಮುಮುಕ್ಷುಗಳೂ ಜಿಜ್ಞಾಸುಗಳೂ ಈ ಗ್ರಂಥ ವನ್ನು ಪರಮಾದರದಿಂದ ಅಧ್ಯಯನಮಾಡುತ್ತಾರೆ.

ಭೋಗೈಕಪರಾಯಣವಾದ ಆಧುನಿಕ ನಾಗರಿಕತೆಯು ದೇಶಗಳಲ್ಲಿಯೇ ಹುಟ್ಟಿ ಬೆಳದ ಅನೇಕ ದಾರ್ಶನಿಕರು ನಿರೂಪಿಸಿರುವ ಸಿದ್ಧಾಂತಗಳಿಗೂ ಈ ವಾಸಿಷ್ಠಸಿದ್ಧಾಂತಕ್ಕೂ ಎಷ್ಟೋ ಅಂಶಗಳಲ್ಲಿ ಏಕತಾನತೆಯು ಇರುವುದು ಒಂದು ವಿಶೇಷ ಸಂಗತಿ.

ಈ ಗ್ರಂಥದಲ್ಲಿ ನಿರ್ಣಯಸಾಗರದ ಪ್ರೆಸ್ಸಿನಲ್ಲಿ ತಾತ್ಪರ್ಯಪ್ರಕಾಶವೆಂಬ ವ್ಯಾಖ್ಯಾನದೊಡನೆ ಮುದ್ರಿತವಾಗಿರುವ ಮೂಲವನ್ನೇ ಬಹುಮಟ್ಟಿಗೆ ಅನುಸರಿಸ ಲಾಗಿದೆ. ಹಿಂದೆ ಆಸ್ಥಾನ ವಿದ್ವಾನ್ ಬ್ರಹ್ಮಶ್ರೀ ಗುಂಡಶಾಸ್ತ್ರಿಗಳು ಕೃಷ್ಣರಾಜ ವೈಭವವೆಂಬ ಹೆಸರಿನಿಂದ ವೈರಾಗ್ಯ, ಮುಮುಕ್ಷು, ವ್ಯವಹಾರ, ಉತ್ಪತ್ತಿ, ಸ್ಥಿತಿ, ಉಪಶಮಗಳೆಂಬ ಮೊದಲಿನೈದು ಪ್ರಕರಣಗಳನ್ನು ಮೂಲ-ಅನುವಾದ ಸಹಿತವಾಗಿ ಪ್ರಕಟಿಸಿದ್ದರು. ಈಗ ಇಲ್ಲಿ ಪ್ರಕಟವಾಗಿರುವ ಅನುವಾದವು ಸ್ವತಂತ್ರವು. ಅವಶ್ಯವೆಂದು ತೋರಿದ ಕಡೆಗಳಲ್ಲಿಯೂ ಗ್ರಂಥಾಂತರಗಳಲ್ಲಿ ಹೇಳಿರುವುದು ಓದುಗರ ಗಮನಕ್ಕೆ ಬಂದು ಓದಿದ ವಿಷಯವು ದೃಢವಾಗಲೆಂದೂ ಟಿಪ್ಪಣಿಗಳನ್ನು ಕೊಡಲಾಗಿದೆ

ಭಾರತವಿಂದು ಜಾಗ್ರತವಾಗಿದೆ. ಮಾದರಿಯ ಮೈಸೂರು ಅಕ್ಷರ ಪ್ರಚಾರವನ್ನು ದೇಶಾದ್ಯಂತವೂ ಹರಡಿ ಕೀರ್ತಿವಂತವಾಗಿದೆ. ನಾನಾಮುಖ ವಾಗಿ ಬೆಳೆಯುತ್ತಿರುವ ದೇಶದ ಸೌಭಾಗ್ಯ ಮಂದಿರಕ್ಕೆ ಕಲಶವಾಗಿ ಜನರಲ್ಲಿ

ವಿದ್ಯಾವಂತರಾಗಬೇಕೆಂದು ಆಸೆ ಬಲವಾಗುತ್ತಿದೆ. ಕಲಿತ ವಿದ್ಯೆಗಳೆಲ್ಲವೂ ಸಾರ್ಥಕವಾಗಬೇಕಾದರೆ ಬ್ರಹ್ಮವಿದ್ಯೆಯನ್ನು ಕಲಿಯಲೇಬೇಕೆಂಬ ಪ್ರಾಚೀನರ ಉಪದೇಶವಿಂದು ಎಲ್ಲರ ಮನಸ್ಸಿಗೂ ಬರುವ ಕಾಲವೂ ಒಂದಿದೆ. ಇಂತಹ ಸಂಧಿಕಾಲಗಳಲ್ಲಿ ಈ ಗ್ರಂಥವು ಸುಲಭಕನ್ನಡದಲ್ಲಿ ಬರುವುದು ಕನ್ನಡಲೋಕದ ಸುದೈವ. ಕಾವ್ಯ ಶೈಲಿಯಲ್ಲಿ ವೇದಾಂತವನ್ನು ಇಷ್ಟು ಸುಂದರವಾಗಿ ಸುಲಭವಾಗಿ ಬೋಧಿಸುವ ಗ್ರಂಥ ಇನ್ನೊಂದಿಲ್ಲ. ಇದನ್ನು ಓದಿ ಅರ್ಥ ಮಾಡಿಕೊಳ್ಳಲು ಗ್ರಂಥಾಂತರಗಳ ಸಹಾಯವು ಬೇಕಿಲ್ಲ: ಶ್ರದ್ಧೆಯೊಂದಿದ್ದರೆ ಸಾಕು: ಆದರಿಂದ ಈ ಗ್ರಂಥದಿಂದ ಆಗುವ ಲೋಕೋಪಕಾರವು ಅಷ್ಟಿಷ್ಟಲ್ಲ

ಈ ಗ್ರಂಥವು ಈ ರೂಪದಲ್ಲಿ ಬರುವುದಕ್ಕೆ ಕಾರಣರು ನಮ್ಮನ್ನಾಳುವ ಶ್ರೀಮನ್ಮಹಾರಾಜರು ಶ್ರೀ ಜಯಚಾಮರಾಜೇಂದ್ರ ಒಡೆಯರು ಬಹದ್ದೂರ್ ಜಿ ಸಿ.ಬಿ.,ಜಿ ಸಿ ಎಸ್.ಐ. ಅವರು. ಈ ಗ್ರಂಥದ ಪಠನ ಪಾಠನಗಳಿಂದ ಲಭಿಸುವ ಶ್ರೇಯಸ್ಸೆಲ್ಲವೂ ಮಹಾಸನ್ನಿಧಾನಕ್ಕೇ ಸೇರಿದುದು.

ಈ ಕಾರ್ಯಕ್ಕೆ ತನ್ನನ್ನು ನಿಯಮಿಸಿದ ಆಳುವ ಮಹಾಸ್ವಾಮಿಯವರಿಗೆ ಅನುವಾದಕನು ಅತ್ಯಂತ ಕೃತಜ್ಞನಾಗಿ ಈ ಗ್ರಂಥದ ಅಧ್ಯಯನದಿಂದ ತನಗೆ ಆದ ಪರಮೋಪಕಾರವನ್ನು ನೆನೆದು ಸಮಸ್ತ ಸನ್ಮಂಗಳಾನಿ ಭವಂತು ಎಂದು ಹರಕೆಹೊರುತ್ತಾನೆ.

ಬೆಂಗಳೂರು ನಗರ.
೧೫-೧-೧೯೫೪.

ದೇವುಡು

# ವಿಷಯ ಸೂಚಿಕೆ


| ಸರ್ಗ | ವಿಷಯ | ಪುಟ |
|---|---|---|
| ೩೯ | ಸುಖಾಭಾವ ವಿಶ್ರಾಂತಿಯೋಗೋಪದೇಶ | ೧-೧೪ |
| ೪೦ | ಆತ್ಮವಿಶ್ರಾಂತಿ ಕಥನ | ೧೫-೧೮ |
| ೪೧ | ಸ್ವರೂಪ ವಿಶ್ರಾಂತ್ಯರ್ಥಮುಪದೇಶಕರಣ | ೧೯-೨೫ |
| ೪೨ | ನಿರ್ವಾಣೋಪದೇಶ | ೨೬-೪೧ |
| ೪೩ | ಬ್ರಹ್ಮೈಕತಾನೋಪದೇಶ | ೪೨-೬೨ |
| ೪೪ | ಮನೋವ್ಯಗವಿಪದ್ವರ್ಣನ | ೬೩-೭೬ |
| ೪೫ | ಮನೋಹರಿಣಕೋಪಾಖ್ಯಾನ | ೭೭-೯೫ |
| ೪೬ | ಸಾಮ್ಯಾವಬೋಧನ | ೯೬-೧೦೧ |
| ೪೭ | ಮುಮುಕ್ಷುಪ್ರಥನೋಪಕ್ರಮ | ೧೦೨-೧೧೪ |
| ೪೮ | ವಿವೇಕಮಹಾತ್ಮ್ಯ | ೧೧೫-೧೨೬ |
| ೪೯ | ಸರ್ವೋಪಶಾಂತಿ | ೧೨೭-೧೪೩ |
| ೫೦ | ಜೀವಸಪ್ತಕಪ್ರಕಾರವರ್ಣನ | ೧೪೪-೧೫೨ |
| ೫೧ | ವಿಶ್ರಾಂತಿಯೋಗೋಪದೇಶ | ೧೫೩-೧೬೬ |
| ೫೨ | ಬ್ರಹ್ಮಸ್ವರೂಪ ವರ್ಣನ | ೧೬೭-೧೭೯ |
| ೫೩ | ನಿರ್ವಾಣ ವರ್ಣನ | ೧೮೦-೧೮೪ |
| ೫೪ | ಅದ್ವೈತೈಕ್ಯಪ್ರತಿಪಾದನ | ೧೮೫-೧೯೨ |
| ೫೫ | ಜಗತ್ತು ಪರಮಾರ್ಥಮಯತ್ವವರ್ಣನ | ೧೯೩-೧೯೮ |
| ೫೬ | ಆಕಾಶಮಂದಿರೀವಸಿಷ್ಠಸಮಾಧಾನ ವರ್ಣನ | ೧೯೯-೨೦೭ |
| ೫೭ | ವಿದಿತವೇದ್ಯಾಹಂಕಾರವಿಚಾರ | ೨೦೮-೨೧೬ |
| ೫೮ | ಸರ್ಗಬ್ರಹ್ಮತ್ವ ಪ್ರತಿಪಾದನ | ೨೧೭-೨೨೩ |
| ೫೯ | ಜಗಜ್ಜಾಲವರ್ಣನ | ೨೨೪-೨೩೭ |
| ೬೦ | ಜಗಜ್ಜಾಲ ವರ್ಣನ | ೨೩೮-೨೫೨ |
| ೬೧ | ಜಗದಾಕಾಶೈಕಬೋಧ | ೨೫೩-೨೬೧ |
| ೬೨ | ಚಿದೈಕ್ಯ | ೨೬೨-೨೭೩ |
| ೬೩ | ಜಗತ್ತ್ರೈವಲ್ಯೈಕ್ಯಪ್ರತಿಪಾದನ | ೨೭೪-೨೮೩ |
| ೬೪ | ವಿದ್ಯಾಧರೀ ವ್ಯಸನ ವರ್ಣನ | ೨೮೪-೩೦೧ |

| | | |
|---|---|---|
| ೬೫ | ವಿದ್ಯಾಧರೀ ಜನ್ಮವ್ಯವಹಾರವರ್ಣನೆ | ೩೦೨–೩೦೭ |
| ೬೬ | ಶಿಲಾಂತರವರ್ಣನ | ೩೦೮–೩೧೪ |
| ೬೭ | ಅಭ್ಯಾಸ ಪ್ರಸಂಶಾ | ೩೧೫–೩೨೬ |
| ೬೮ | ದೃಶ್ಯಾನುಪಪತ್ತಿವರ್ಣನ | ೩೨೭–೩೩೯ |
| ೬೯ | ಸರ್ವವ್ಯಾಪ್ತಿ | ೩೪೦–೩೪೮ |
| ೭೦ | ಶಿಲಾಂತರ್ಜಗತ್ಪಿತಾಮಹವಾಕ್ಯ | ೩೪೯–೩೫೬ |
| ೭೧ | ಕಲ್ಪಕ್ಷೋಭ ವರ್ಣನ | ೩೫೭–೩೭೧ |
| ೭೨ | ನಿರ್ವಾಣ ವರ್ಣನ | ೩೭೨–೩೮೧ |
| ೭೩ | ವಿರಾಡಾತ್ಮ ವರ್ಣನ | ೩೮೨–೪೦೧ |
| ೭೪ | ವಿರಾಡಾತ್ಮ ವರ್ಣನ | ೪೦೨–೪೧೨ |
| ೭೫ | ಮಹಾಕಲ್ಪಾಂತಾಗ್ನಿ ವರ್ಣನ | ೪೧೩–೪೨೮ |
| ೭೬ | ಪುಷ್ಕರಾವರ್ತಡಂಬರ ವರ್ಣನ | ೪೨೯–೪೩೭ |
| ೭೭ | ಪುಷ್ಕರಾವರ್ತವೃಷ್ಟಿವಿಸಂಷ್ಠುಲಜಗದ್ವರ್ಣನ | ೪೩೮–೪೪೯ |
| ೭೮ | ಏಕಾರ್ಣವ ವರ್ಣನ | ೪೫೦–೪೫೬ |
| ೭೯ | ವಾಸನಾಭಾವಪ್ರತಿಪಾದನ | ೪೫೭–೪೭೫ |
| ೮೦ | ಭ್ರಾಂತಿಮಾತ್ರತ್ವಪ್ರತಿಪಾದನ | ೪೭೬–೪೯೪ |
| ೮೧ | ಕಾಲರಾತ್ರಿ ವರ್ಣನ | ೪೯೫–೫೨೧ |
| ೮೨ | ಶಿವಸ್ವರೂಪ ವರ್ಣನ | ೫೨೨–೫೨೮ |

ಶ್ರೀ

# ಯೋಗವಾಸಿಷ್ಠ

## ನಿರ್ವಾಣ ಪ್ರಕರಣ

---

### ಏಕೋನಚತ್ವಾರಿಂಶಃ ಸರ್ಗಃ

**ಶ್ರೀ ವಸಿಷ್ಠ ಉವಾಚ:—**

ಸಂಜಾತಾಕೃತ್ರಿಮಕ್ಷೀಣಸಂಸ್ಮೃತಿಪ್ರತ್ಯಯಃ ಪುಮಾನ್ ।
ಅಸಂಕಲ್ಪೋ ನ ಸಂಕಲ್ಪಂ ವೇತ್ತಿ ತೇನಾಸದೇವ ಸಃ ॥ ೧ ॥

---

### ಮೂವತ್ತೊಂಭತ್ತನೆಯ ಸರ್ಗವು

**ಶ್ರೀ ವಸಿಷ್ಠನು ಹೇಳಿದನು —**

೧. ಯಾವನು ಸಹಜಾವಸ್ಥೆಯನ್ನು ಪಡೆದವನಾಗಿ, ಜಗತ್ತಿನಲ್ಲಿ ನಂಬಿಕೆಯಿಲ್ಲದವನಾಗಿ ಇರುವನೋ ಅವನು ಅಸಂಕಲ್ಪನಾಗುವನು. ಅವನಿಗೆ ಸಂಕಲ್ಪವು ತಿಳಿಯುವುದೂ ಇಲ್ಲ. ಅದರಿಂದ ಅವನು ಪ್ರತ್ಯೇಕನಾಗಿ ಇದ್ದಾನೆಯೆನ್ನುವುದಕ್ಕೂ ಆಗುವುದಿಲ್ಲ.

(ವಿದುಷಃ ಶಾಸ್ತ್ರಾನುಸಾರಿನಿಯಮೇ ತನ್ನಿಯಾಮಕ ಸಂಕಲ್ಪಸ್ಯಾಪಿ ಪ್ರಸಕ್ತಿಮಾಶಂಕ್ಯಾಹ–ಸಂಜಾತೇತಿ । ಸಂಜಾತೋ ಯಥಾ ಭೂತಾರ್ಥಗೋಚರತ್ವಾದಕೃತ್ರಿಮಃ, ಕ್ಷೀಣಾ ಸಂಸೃತಿಃ ಯಸ್ಮಾತ್ ತಥಾವಿಧಃ ಪ್ರತ್ಯಯಃ ಸಾಕ್ಷಾತ್ಕಾರೋ ಯಸ್ಯ ತಥಾವಿಧಃ ಪುಮಾನ್ ಶಾಸ್ತ್ರೀಯ ವ್ಯವಹಾರನಿಯಮೇಽಪ್ಯಸಂಕಲ್ಪ ಏವ ಅವತಿಷ್ಠತೇ । ಯತೋಽಯಂ ತತ್ತದ್ವ್ಯವಹಾರಾಭಾಸ ಹೇತುಸಂಕಲ್ಪಾಭಾಸಂ ಸ್ವಾತ್ಮೈವೇತಿ ಪಶ್ಯನ್ ಸಂಕಲ್ಪಂ ನ ವೇತ್ತಿ । ನಚ ವೇದನಮಂತ

ಶ್ವಾಸಾನ್ ಮ್ಲಾನಿರಿವಾದರ್ಶೇ ಕುತೋಽಪ್ಯಹಮಿತಿ ಸ್ಥಿತಾ ।
ಏದಿ ಸಾಽಕಾರಣಂ ದೃಷ್ಟ್ವಾ ನಶ್ಯ ತ್ಯಾಶು ನ ಲಭ್ಯತೇ ॥ ೨ ॥

ಯಸ್ಯ ಕ್ಷೀಣಾವರಣತಾ ಶಾಂತಸರ್ವೇಹತೋದಿತಾ ।
ಪರಮಾಮೃತಪೂರ್ಣಾತ್ಮಾ ಸತ್ತಯೈವ ಸ ರಾಜತೇ ॥ ೩ ॥

ಸರ್ವ ಸಂದೇಹ ದುರ್ಧ್ವಾಂತ ಮಿಹಿಕಾ ಮಾತರಿಶ್ವನಾ ।
ಭಾತಿ ಭಾಸ್ವದ್ಧಿಯಾ ದೇಶಸ್ತೇನ ಪೂರ್ಣೇಂದುನೇವ ಖಂ ॥ ೪ ॥

---

ರೇಣ ಕಸ್ಯಚಿತ್ಸತ್ತಾ ಪ್ರಸಿದ್ಧೇತಿ ಸಸಂಕಲ್ಪಾಭಾಸೋಽಸದಲೀಕಮೇವೇತ್ಯರ್ಥಃ ॥
—ತಾ. ಪ್ರ.)

೨ (ಬೋಧವು ಲಭಿಸುವುದಕ್ಕೆ ಮೊದಲು,) ಕನ್ನಡಿಯ ಮೇಲೆ ಉಸಿರು ಬಿಟ್ಟಾಗ ಕಾಣುವ ಮ್ಲಾನಿಯಂತೆ, ಅಹಂತೆಯು ಎಲ್ಲೋ ಇರುವುದು. ಆದರೂ ಅದು, ಚಿತ್ತಿನಲ್ಲಿ (ಬ್ರಹ್ಮದಲ್ಲಿ) ಅಕಾರಣವಾಗಿಯೇ ಕಾಣಿಸುವುದು ಹೇಗೆ ಅಕಾರಣ ವಾಗಿ ಕಂಡಿತೋ ಆದರಂತೆಯೇ ಅದೂ ಹಾಗೆಯೇ ಇದ್ದಕ್ಕಿದ್ದಂತೆಯೇ ನಷ್ಟ ವಾಗಿ ಕಾಣಿಸದೆಯೇ ಹೋಗುವುದು. ಹುಡುಕಿದರೂ ಸಿಕ್ಕುವುದಿಲ್ಲ.

೩. ಯಾವನಿಗೆ ಆವರಣ ಶಕ್ತಿಯು ಕ್ಷೀಣವಾಗುವುದೋ, ಈಹಾ ತ್ಯಾಗವು ಸಿದ್ಧಿಸುವುದೋ, ಆತನು ಪರಮಾಮೃತ ಪೂರ್ಣನಾದ ಪೂರ್ಣಕಾಮನು. ಆತನು ಬ್ರಹ್ಮಸಂಸ್ಥಿತನಾಗಿ ವಿರಾಜಿಸುವನು

(ಕಾಮನಯಾ ಹಿ ಸಂಕಲ್ಪಪ್ರಸಕ್ತಿಃ ಸಾಚ ಪೂರ್ಣಕಾಮಸ್ಯ ನಾಸ್ತೀತಿ
—ತಾ. ಪ್ರ.)

೪ ಸರ್ವವಿಧಸಂದೇಹಗಳೆಂಬ ಕೆಟ್ಟ ತಮಸ್ಸನ್ನು ಕೊಡುವ ಮಂಜನ್ನು ಹಾರಿ ಸುವ ವಾಯುವಾಗಿ, ಪ್ರಕಾಶಮಾನವಾದ ಬುದ್ಧಿಯುಳ್ಳ ಆತನು ಆಕಾಶವನ್ನು ಬೆಳಗುವ ಚಂದ್ರನಂತೆ, ತಾನಿರುವ ದೇಶವನ್ನೆಲ್ಲಾ ಬೆಳಗುವನು.

(ಏಕಲಾಭಾದೇವ ಸರ್ವಲಾಭಾತ್, ಲಬ್ಧವ್ಯ ವಿಷಯ ಇವ ಏಕವಿಜ್ಞಾನೇ ನೈವ ಸರ್ವವಿಜ್ಞಾನಾತ್, ಜ್ಞಾತವ್ಯ ವಿಷಯೇಽಪಿ ಭ್ರಮಸಂಶಯಾದ್ಯಭಾವಾತ್, ತದರ್ಥಮಪಿ ತಸ್ಯ ನ ಸಂಕಲ್ಪ ಪ್ರಸಕ್ತರಿತ್ಯಾಶಯೇನಾಹ-ಸರ್ವೇತಿ। ಭಾಸ್ವತೀ ನಿರಾವರಣಾತ್ಮಕ ಪ್ರಕಾಶಾಧೀರ್ಯಸ್ಯ ತೇನಾತ ಏವ ಸರ್ವೇಷಾಂ ದೇಹಲಕ್ಷಣಾ

ವಿಸಂಸ್ಮೃತಿರ್ವಿಸಂದೇಹೋ ಲಬ್ಧಜ್ಯೋತಿರ್ನಿರಾವೃತಿಃ ।
ಶರದಾಕಾಶವಿಶದೋ ಜ್ಞೇಯೋ ವಿಜ್ಞಾಯತೇ ಬುಧಃ ॥ ೫ ॥

ನಿಃಸಂಕಲ್ಪೋ ನಿರಾಧಾರಃ ಶಾಂತಃ ಸ್ಪರ್ಶಾತ್ಪವಿತ್ರತಾಂ ।
ಅಂತಃಶೀತಲ ಆಧತ್ತೇ ಬ್ರಹ್ಮಲೋಕಾದಿವಾನಿಲಃ ॥ ೬ ॥

ಅಸದ್ರೂಪೋಪಲಂಭಾನಾಮಿಯಂ ವಸ್ತುಸ್ವಭಾವತಾ ।
ಯತ್ಸ್ವರ್ಗವೇದನಂ ಸ್ವಪ್ನವಂಧ್ಯಾಪುತ್ರೋಪಲಂಭವತ್ ॥ ೭ ॥

---

ನಾಂ ದುರ್ಧ್ವಾಂತ ನಿಮಿತ್ತ ಮಿಹಿಕಾನಾಂ ಮಾತರಿಶ್ವನಾ। ತದ್ದೇಶಸ್ಥ ಸರ್ವ ಜನ ಭ್ರಮ ಸಂಶಯ ನಿರಾಸ ಸಮರ್ಥಸ್ಯ ತತ್ಪ್ರಸಕ್ತ್ಯಭಾವಾದಿತಿ ಭಾವಃ —ತಾ ಪ್ರ.)

೫. ಆ ವಿದ್ವಾಂಸನು ಬ್ರಹ್ಮಜ್ಞನೆಂಬುದನ್ನು, ಶರದೃತುವಿನ ಆಕಾಶದಂತೆ ಶುದ್ಧನಾಗಿರುವನೆಂಬುದನ್ನು, ನೋಡಿದರೇನೇ ತಿಳಿಯಬಹುದು. ಆತನು ವಿಸಂಸ್ಮೃತಿಯು; ವಿಸಂದೇಹನು; ಲಬ್ಧಜ್ಯೋತಿಯು; ನಿರಾವರಣನು.

(ಯತೋ. ಬುಧಸ್ತತ್ವವಿತ್ "ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ" ಇತ್ಯಾದಿ ಶ್ರುತಿಷು ಜ್ಞೇಯ ಆತ್ಮೈವೇತಿ ವಿಜ್ಞಾಯತ ಇತ್ಯರ್ಥಃ—ತಾ. ಪ್ರ.)

೬. ಆತನು ನಿಸ್ಸಂಕಲ್ಪನು: ನಿರಾಧಾರನು. ಬ್ರಹ್ಮಲೋಕದಿಂದ ಬೀಸುವ ವಾಯುವಿನಂತೆ, ಅಂತಶ್ಶೀತಲನಾಗಿ, ಸ್ಪರ್ಶಮಾತ್ರದಿಂದ ಪವಿತ್ರರನ್ನು ಮಾಡುವನು.

(ಸ್ಪರ್ಶಾತ್ ಪ್ರಣತಿ ಶುಶ್ರೂಷಾದಿನಾ ಸಂಗಮಾತ್ ಜನಾನಾಂ ಪವಿತ್ರ ತಾಂ ನಿಷ್ಪಾಪತಾಂ।—ತಾ. ಪ್ರ.)

೭. ಅಸದ್ರೂಪದಿಂದ ಮಾತ್ರ ಲಭಿಸುವ ವಸ್ತುಗಳ ಸ್ವಭಾವವು ಹೀಗೆ (ಭ್ರಾಂತಿಮಯವಾಗಿರುವುದು.) ಸ್ವರ್ಗವೇದನವು ಕೂಡ ಸ್ವಪ್ನ, ವಂಧ್ಯಾಪುತ್ರರನ್ನು ಪಡೆದಂತೆಯೇ!

(ಇಲ್ಲಿ ಗ್ರಂಥಪಾತವಾಗಿರಬಹುದು)

ಅವಿದ್ಯಮಾನಮೇವೇದಂ ಜಗದ್ಯದನುಭೂಯತೇ ।
ಅಸದ್ರೂಪೋಪಲಂಭಸ್ಯ ಸೈಷಾ ವಸ್ತುಸ್ವಭಾವತಾ ॥ ೮ ॥

ಅಸತ್ಯೇಷ್ವೇವ ಸಂಸಾರೇಷ್ವಾಸ್ತಾಮರ್ಥಃ ಕುತೋ ಭವೇತ್ ।
ಸರ್ಗಾಪವರ್ಗಯೋಃ ಶಬ್ದಾವೇವ ವಂಧ್ಯಾಸುತೋಪಮೌ ॥ ೯ ॥

ಜಗದ್ಬ್ರಹ್ಮತಯಾ ಸತ್ಯಮನಿರ್ಮಿತಮಭಾವಿತಂ ।
ಅನಿಶ್ಚಿತಂ ಚಾನ್ಯಥಾ ತು ನಾಹಂ ನಾವಗತಂ ಚ ತತ್ ॥ ೧೦ ॥

---

(ತಾತ್ಪರ್ಯ ಪ್ರಕಾಶಕಾರರು ಇಲ್ಲಿ "ನ ಸಂಕಲ್ಪಂವೇತ್ತೀತಿ ಏತದ್ವಿಶದೀಕೃತ್ಯ, ತೇನ ಅಸದೇವ ಸ ಇತಿ ತಚ್ಛೇಷಂ ವಿಶದೀಕರ್ತುಂ ಅಸದ್ರೂಪೋಪಲಂಭಸ್ಯ ಸ್ವರೂಪಂ ಪ್ರಪಂಚಯತಿ" ಎಂದಿರುವುದನ್ನು ಗಮನಿಸಿ.)

೮. ಈ ಜಗತ್ತು ನಿಜವಾಗಿಯೂ ಅವಿದ್ಯಮಾನವಾಗಿದ್ದರೂ ಅನುಭವಕ್ಕೆ ಬರುತ್ತಿರುವುದು. ಅಸದ್ರೂಪವಾಗಿ ಲಭಿಸುವ ವಸ್ತುಗಳ ಸ್ವಭಾವವೇ ಹೀಗೆ (ವಸ್ತುತಃ ಇಲ್ಲವಾದರೂ ಅನುಭವತಃ ಉಂಟು.)

೯. ಅಸತ್ಯವೇ ಆಗಿರುವ ಸಂಸಾರಗಳು ಇರಲಿ. ಅದರಿಂದ ಏನು ಪುರುಷಾರ್ಥ? ಸರ್ಗಾಪವರ್ಗಗಳು ಎಂಬುವೂ ಅಷ್ಟೆ! ಅವೂ ಬರಿಯ ಶಬ್ದಗಳೇ! ವಂಧ್ಯಾಪುತ್ರ ಎಂಬಂತೆ ಸತ್ಯಾರ್ಥಹೀನವಾದವು.

೧೦. ಜಗತ್ತು ಬ್ರಹ್ಮವೆಂಬ ದೃಷ್ಟಿಯಿಂದ ಸತ್ಯವು ಆ ದೃಷ್ಟಿಯಿಂದ ಅದು ಅನಿರ್ಮಿತವು, ಅಭಾವಿತವು: ಅನಿಶ್ಚಿತವು: ಅನ್ಯಥಾ ಅದರೆ ಅದು 'ನಾಹಂ' ಅದು ಸಿಕ್ಕುವುದೂ ಇಲ್ಲ.

(ಕುತೋಭವೇತ್ ಕಿಂ ಸತ್ಯಾದುತಾಸತ್ಯಾತ್ । ನ ತಾವತ್ಸತ್ಯಾತ್, ತಸ್ಯ ಕೂಟಸ್ಥತ್ವಾತ್ । ನ ದ್ವಿತೀಯಃ । ಅಸತ್ಯಾದಸತ್ಯಸ್ಯೋತ್ಪತ್ತೇರಪ್ಯಸತ್ತ್ವಾಪತ್ತೇಃ । ಏವಂ ಕ್ವ ಆಸ್ತಾಂ ಸತ್ಯಸ್ಯ ಅಸಂಗಾದ್ವ್ಯಯತ್ವಾತ್ ಅಸತ್ಯಸ್ಯ ಆಧಾರತ್ವಾಯೋಗಾದಿತಿ ಭಾವಃ। ಅತಃ ಅಸತ್ಯೇಷ್ವೇವ ಸಂಸಾರೇಷು ಸರ್ಗಸ್ಯ ಬಂಧಸ್ಯ ತದಪವರ್ಗಸ್ಯ ಚ ಶಬ್ದಾವೇವ ಯತ್ರ ವಂಧ್ಯಾಸುತೋಪಮೌ ತತ್ರ ದೂರೇ ತದರ್ಥಸಿದ್ಧಿರಿತಿ ॥—ತಾ ಪ್ರ )

ಆತ್ಮಸ್ವಭಾವವಿಶ್ರಾಂತೇರಿಯಂ ವಸ್ತುಸ್ವಭಾವತಾ ।
ಯದಹಂತಾದಿಸರ್ಗಾದಿದುಃಖಾದ್ಯನುಪಲಂಭತಾ ॥ ೧೧ ॥

ಕ್ಷಣಾದ್ಯೋಜನಲಕ್ಷಾಂತಂ ಪ್ರಾಪ್ತೇ ದೇಶಾಂತರೇ ಚಿತಃ
ಚೇತನೇಯಸ್ಯ ತದ್ರೂಪಂ ಮಾರ್ಗಮಧ್ಯೇ ನಿರಂಜನಂ ॥ ೧೨ ॥

---

೧೧. ಆತ್ಮನು ವಿಶ್ರಾಂತಿಯೇ ಸ್ವಭಾವವಾಗುಳ್ಳವನು ಅದರಿಂದ ಅಹಂತಾದಿ (ಚೇತನ ಧರ್ಮಗಳು) ಸರ್ಗಾದಿ (ಜಡಧರ್ಮಗಳು) ಮೊದಲಾದ ದುಃಖಗಳಿಗೆ ಸಿಕ್ಕದಿರುವುದೇ ವಸ್ತು ಸ್ವಭಾವವು

೧೨. ಒಂದೇ ಕ್ಷಣದಲ್ಲಿ ಲಕ್ಷಯೋಜನಗಳನ್ನು ದಾಟಿ ದೇಶಾಂತರವನ್ನು ಸೇರುವ ಚೇತನವುಳ್ಳದ್ದು ಚಿತ್ತು. ಚಿತ್ತಿನ ಆ ಚೇತನವು ಆ ದೀರ್ಘಮಾರ್ಗವನ್ನು ಒಂದೇ ಕ್ಷಣದಲ್ಲಿ ದಾಟುವಾಗ ಯಾವ ರೂಪವಾಗಿರುವುದೇ ಅದೇ ನಿರಂಜನವಾದ ಅದರ ರೂಪವು

(ಆವೇದನ (ವಿಷಯ ಗ್ರಹಣ) ವಿಲ್ಲದಿರುವಿಕೆಯೇ ಚಿತ್ತಿನ ಸ್ವಭಾವ ಎಂದು ಮೇಲಿನ ಶ್ಲೋಕದಲ್ಲಿ ಹೇಳಿದೆ. ಈಗ ಆವೇದ ರಹಿತವಾದ ಚಿತ್ಸ್ವರೂಪವನ್ನು ಇನ್ನೂ ವಿಸ್ತರಿಸಿ ದೇಶಕಾಲ ದೃಷ್ಟಿಯಿಂದ ನಿರಂಜನತ್ವವನ್ನು ವಿವರಿಸಲಾಗಿದೆ ಆದಕ್ಕೆ ಉದಾಹರಣೆಯಾಗಿ ಶಾಖಾದಿ ದೇಶಾತ್ ಚಂದ್ರಾದಿ ದೇಶಾಂತರೇ ಯೋಜನಲಕ್ಷಾಂತಂ ಚಕ್ಷುರ್ದ್ವಾರಾ ಪ್ರಾಪ್ತೇ ಚೇತನೇ ಚಾಕ್ಷುಷವೃತ್ತ್ಯವಚ್ಛಿನ್ನ ಚೈತನ್ಯೇ ಮಾರ್ಗಮಧ್ಯೇ ಅಯುತೇ ವ್ಯಾಪ್ನೋತೀತಿ ಅಯಸ್ಯ ಚೈತನ್ಯಸ್ಯ ಯದಚಿಂತ್ಯಂ ಖ ಕೋಶಾಭಾನ ಚಿನ್ಮಯಂ ರೂಪಂ ಸರ್ವಸ್ಯ ಜಂತುಜಾತಸ್ಯ ಪ್ರಸಿದ್ಧಂ ತತ್ಸ್ವಭಾವಂ ವಿದುರಿತಿ ವ್ಯವಹಿತೇನ ಸಂಬಂಧಃ ಎಂದು, ಶಾಖೆಯನ್ನು ನೋಡುತ್ತಿದ್ದ ಕಣ್ಣು ಚಂದ್ರನನ್ನು ನೋಡಿದಾಗ ಆಗುವ ಕ್ರಿಯೆಯುಯನ್ನು ಇಲ್ಲಿ ತಾತ್ಪರ್ಯ ಪ್ರಕಾಶವು ಹೇಳಿದೆ.

ಈಗಿನ ವೈಜ್ಞಾನಿಕರು ಹೇಳುವ ರೀತಿ ಬೇರೆ: "ಚಂದ್ರನಿಂದ ಹೊರಟ ಕಿರಣವು ಬಂದು ಹತ್ತಿರದಲ್ಲಿ ಇರುತ್ತದೆ. ಅದನ್ನು ಕಣ್ಣು ಸಂಧಿಸುತ್ತದೆ ಆಗ ಚಂದ್ರ ದರ್ಶನವಾಗುತ್ತದೆ" ಎನ್ನುತ್ತಾರೆ. ಉದಾಹರಣೆ ಬೇಕಾದರೆ, ರೇಡಿಯೋ ನೋಡಿ. ಎಲ್ಲಿಂದಲೋ ಹೊರಟು ನಿಮ್ಮ ಸುತ್ತಮುತ್ತ ಇರುವ ಶಬ್ದ ತರಂಗಗಳನ್ನು ರೇಡಿಯೋ ಹಿಡಿದು ದೊಡ್ಡದು ಮಾಡಿದಾಗ ಅವು ಧ್ವನಿರೂಪ

ವನ್ನು ತಳೆದು ಶ್ರವಣ ಗೋಚರವಾಗುವುವು. ಹಾಗೆಯೇ ಚಂದ್ರ, ಸೂರ್ಯ, ನಕ್ಷತ್ರಾದಿಗಳಿಂದಲೂ ಹೊರಟ ಪ್ರಕಾಶಕಿರಣಗಳು ಕಣ್ಣನ್ನು ಸಂಧಿಸಿದಾಗ, ಕಿರಣಗಳನ್ನು ಹರಡಿದ ವಸ್ತುವು ಗೋಚರವಾಗುವುದು"

ನಮ್ಮ ಶಾಸ್ತ್ರಜ್ಞರು ಇದನ್ನು ಒಪ್ಪುವುದಿಲ್ಲ. ಆತ್ಮಚೇತನವು ಬುದ್ಧಿಯೆಂಬ ಉಪಾಧಿಯಲ್ಲಿ ಅಹಂಕಾರವಾಗಿ ವೃತ್ತಿಗೆ ಕಾರಣವಾಗುವುದು. ಅಹಂಕಾರದಿಂದ ಹೊರಟ ವೃತ್ತಿಯು ಅಂತಃಕರಣದಿಂದ ಸಂಕಲ್ಪರೂಪವಾಗಿ ಪ್ರವಹಿಸಿ ಮನಸ್ಸು ಇಂದ್ರಿಯಗಳ ಮೂಲಕ ಹೊರಹೊರಟು ತನ್ನಂತೆಯೇ ಇರುವ ವಸ್ತುಗಳನ್ನು ಹಿಡಿಯುವುದು. ಆಗ ಅಲ್ಲಿರುವ ಚಿತ್ಸತ್ತೆಯು ವೃತ್ತಿನಿಹಿತವಾದ ಚಿತ್ಸತ್ತೆಯೂ ಒಂದರಲ್ಲೊಂದು ಐಕ್ಯವಾಗುವುದು ಆಗ ವಸ್ತು ಸತ್ತೈಕ್ಯದಿಂದ ವಸ್ತುಜ್ಞಾನ ವಾಗುವುದು. ಆ ಸತ್ತೈಕ್ಯಪ್ರತಿಪತ್ತಿ ಬರುವವರೆಗೆ ವಸ್ತುಜ್ಞಾನವಾಗುವುದಿಲ್ಲ. ಇದನ್ನೇ ವೃತ್ತಿಸಾರೂಪ್ಯಮಿತರತ್ರ ಎಂಬ ಯೋಗ ಸೂತ್ರವೂ ಹೇಳುವುದು.

ಈ ಸಂದರ್ಭದಲ್ಲಿ ಮೈಕ್ರಾಸ್ಕೋಪ್, ಟೆಲಿಸ್ಕೋಪ್‌ಗಳನ್ನು ಕುರಿತು ಅಷ್ಟು ವಿಚಾರ ಮಾಡುವುದು ಅಪ್ರಸಕ್ತವಲ್ಲ.

ಮೈಕ್ರಾಸ್ಕೋಪಿನಲ್ಲಿ ನೋಡಿದಾಗ ಸಣ್ಣ ವಸ್ತುವು ದೊಡ್ಡದಾಗಿ ಕಾಣು ವುದು. ಇಲ್ಲಿ, ನೋಡುವ ಕಣ್ಣಿನ ಶಕ್ತಿಯು ಹೆಚ್ಚಾಯಿತೋ? ಅಥವಾ ವಸ್ತುವೇ ದೊಡ್ಡದಾಯಿತೋ?

ಹಾಗೆಯೇ ಟೆಲಿಸ್ಕೋಪಿನಲ್ಲಿ ನೋಡುವಾಗ ದೂರದ ವಸ್ತುವು ಹತ್ತಿರ ಬಂದಂತಾಗುವುದು. ಆಗ ಕಣ್ಣಿನ ಶಕ್ತಿಯೇ ದೊಡ್ಡದಾಗಲಿ, ವಸ್ತುವೇ ದೊಡ್ಡ ದಾಗಲಿ, ವಸ್ತುವಿಗೂ ಕಣ್ಣಿಗೂ ನಡುವೆ ಇದ್ದ ದೂರವೇನಾಯಿತು?

(ಈ ಪ್ರಶ್ನವನ್ನು ಮೇಲಿನ ಶ್ಲೋಕದಲ್ಲಿ ವಿವೇಚಿಸಲಾಗಿದೆ. ಈ ಅರ್ಥ ವನ್ನು ಧ್ಯಾನದಿಂದ ಸಾಕ್ಷಾತ್ಕರಿಸಿಕೊಳ್ಳಿ.)

ಅಸ್ಪಂದವಾತಸದೃಶಂ ಸ್ವಕೋಶಾಭಾಸಚಿನ್ಮಯಂ ।
ಅಚೇತ್ಯಂ ಶಾಂತಮುದಿತಂ ಲತಾವಿಕಸನೋಪಮಂ　　॥ ೧೩ ॥

ಸರ್ವಸ್ಯ ಜಂತುಜಾತಸ್ಯ ತತ್ಸ್ವಭಾವಂ ವಿದುರ್ಬುಧಾಃ ।
ಸರ್ಗೋಪಲಂಭೋ ಗಲತಿ ತತ್ರಸ್ಥಸ್ಯ ವಿವೇಕಿನಃ　　॥ ೧೪ ॥

ಸುಷುಪ್ತೇ ಸ್ವಪ್ನಧೀರ್ನಾಸ್ತಿ ಸ್ವಪ್ನೇ ನಾಸ್ತಿ ಸುಷುಪ್ತಧೀಃ ।
ಸರ್ಗನಿರ್ವಾಣಯೋರ್ಭ್ರಾಂತೀ ಸುಷುಪ್ತಸ್ವಪ್ನಯೋರಿವ　　॥ ೧೫ ॥

ಭ್ರಾಂತಿವಸ್ತುಸ್ವಭಾವೋಸೌ ನ ಸ್ವಪ್ನೋ ನ ಸುಷುಪ್ತತಾ ।
ನ ಸರ್ಗೋ ನ ಚ ನಿರ್ವಾಣಂ ಸತ್ಯಂ ಶಾಂತಮಶೇಷತಃ　　॥ ೧೬ ॥

ಭ್ರಾಂತಿಸ್ತ್ವಸನ್ಮಾತ್ರಮಯೀ ಪ್ರೇಕ್ಷಿತಾ ಚೇನ್ನ ಲಭ್ಯತೇ ।
ಶುಕ್ತಿರೂಪ್ಯಮಿವಾಸತ್ಯಂ ಕಿಲ ಸಂಪ್ರಾಪ್ಯತೇ ಕಥಂ　　॥ ೧೭ ॥

---

೧೩–೧೪. ಸ್ಪಂದವಿಲ್ಲದ ವಾಯುವಿಗೆ ಸದೃಶವಾಗಿ, ಸ್ವಕೋಶದಲ್ಲಿ ಪ್ರಕಾಶಿಸುತ್ತಿರುವ ಚಿತ್ತಿನಿಂದ ತುಂಬಿ, ಚೇತ್ಯವಿಲ್ಲದೆ, ಶಾಂತವಾಗಿ, ಯಾವಾಗಲೂ ಉದಿತವಾಗಿರುವ, ಬಳ್ಳಿಯ ಅರಳುವಿಕೆಯಂತಿರುವ, ಸರ್ವ ಜಂತುಗಳಿಗೂ ಸ್ವಭಾವವಾದುದು ಯಾವುದೋ ಅದನ್ನೇ ತತ್ ಎಂದು ವಿದ್ವಾಂಸರು ಹೇಳುವುದು. ಆ 'ತತ್' ಪದವನ್ನು ಸೇರಿದ ವಿವೇಕಿಗೆ ಸರ್ಗವೂ (ಏನೂ) ಇಲ್ಲವಾಗುವುದು.

೧೫. ಸುಷುಪ್ತಿಯಲ್ಲಿ ಸ್ವಪ್ನ ಬುದ್ಧಿಯು ಇರುವುದಿಲ್ಲ ಸ್ವಪ್ನದಲ್ಲಿ ಸುಷುಪ್ತಿ ಬುದ್ಧಿಯು ಇರುವುದಿಲ್ಲ. ಹೀಗೆಯೇ ಸರ್ಗಭ್ರಾಂತಿ, ನಿರ್ವಾಣ ಭ್ರಾಂತಿಗಳೂ ಸ್ವಪ್ನ ಸುಷುಪ್ತಿಗಳಂತೆಯೇ! (ಒಂದಿದ್ದಾಗ ಇನ್ನೊಂದು ಇರುವುದಿಲ್ಲ)

೧೬. ಭ್ರಾಂತಿಯೆಂಬ ವಸ್ತುವೂ ಒಂದು ಇರುವುದಾದರೆ ಅದರ ಸ್ವಭಾವವೇ ಇದು. ಅದು ಸ್ವಪ್ನವೂ ಅಲ್ಲ: ಸುಷುಪ್ತಿಯೂ ಅಲ್ಲ ಸರ್ಗವೂ ಅಲ್ಲ. ನಿರ್ವಾಣವೂ ಅಲ್ಲ. ಇವು ಯಾವವೂ ಅಲ್ಲದ ಸತ್ಯವೂ ಶಾಂತವೂ ಆಗಿ, ಎಳ್ಳಷ್ಟೂ ಶೇಷವಿಲ್ಲದ್ದು ಅದು

೧೭ ಈ ಭ್ರಾಂತಿಯೆಂಬುದು ಅಸತ್ ಆಗಿ, ಅದೇ ತುಂಬಿ, ಇರುವಂತೆ ಕಂಡರೂ ಹುಡುಕಿದರೂ ಸಿಕ್ಕುವದಲ್ಲ ಶುಕ್ತಿಯಲ್ಲಿ ಕಾಣುವ ಬೆಳ್ಳಿಯಂತೆ ಸಅತ್ಯವಾದ ಈ ಭ್ರಾಂತಿಯು ದೊರೆಯುವುದಾದರೂ ಹೇಗೆ?

ಯನ್ನ ಲಬ್ಧಂ ಚ ತನ್ನಾಸ್ತಿ ತೇನ ಭ್ರಾಂತೇರಸಂಭವಃ ।
ಸ್ವಭಾವಾದುಪಲಂಭೋಽನ್ಯೋ ನಾಸ್ತಿ ಕಸ್ಯ ನ ಕಸ್ಯಚಿತ್ ॥ ೧೮ ॥

ಸ್ವಭಾವ ಏವ ಸರ್ವಸ್ಮೈ ಸ್ವದತೇ ಕಿಲ ಸರ್ವದಾ ।
ಅನಾನ್ಯೈವ ಹಿ ನಾನೇವ ಕಿಂ ವಾದೈಃ ಸಂವಿಭಾವ್ಯತಾಂ ॥ ೧೯ ॥

ಅಸ್ವಭಾವೇ ಮಹದ್ದುಃಖಂ ಸ್ವಭಾವೇ ಕೇವಲಂ ಶಮಃ ।
ಇತಿ ಬುದ್ಧ್ವಾ ವಿಚಾರ್ಯಾಂತರ್ಯದಿಷ್ಟಂ ತದ್ವಿಧೀಯತಾಂ ॥ ೨೦ ॥

ಸೂಕ್ಷ್ಮೇ ಬೀಜೇಽಸ್ತ್ಯಗಃ ಸ್ಥೂಲೋ ದೃಷ್ಟಮಿತ್ಯುಪಪದ್ಯತೇ ।
ಶಿವೇ ಮೂರ್ತೇ ಜಗನ್ಮೂರ್ತಮಸ್ತೀತ್ಯುತ್ತಮಸಂಕಥಾ ॥ ೨೧ ॥

---

೧೮. (ಯಾವುದು ಪ್ರತ್ಯೇಕವಾಗಿ ಸಿಕ್ಕುವುದಿಲ್ಲವೋ ಅದು ಇಲ್ಲವೆಂದೇ ಸಿದ್ಧಾಂತವು.) ಆದರಿಂದ ಭ್ರಾಂತಿಯು ಅಸಂಭವವು. ಸ್ವಭಾವದಿಂದಲೇ ಈ ಭ್ರಾಂತಿಯು ತೋರುವುದು. ಬೇರೆಯಾಗಿ ಇಲ್ಲ ಇದನ್ನು ಯಾರೂ ಯಾರಿಗೋಸ್ಕರವೂ ಮಾಡುವುದಿಲ್ಲ.

(ಭ್ರಾಂತಿವಿಷಯೋಽರ್ಥೋ ಭ್ರಾಂತ್ಯಾ ನ ಲಬ್ಧೋಽಪಿ ಉಪಲಂಭಾಂತರೇಣ ಲಭ್ಯತಾಂ, ತತ್ರಾಹ—ಸ್ವಭಾವಾದಿತಿ । ಭ್ರಾಂತೇರನ್ಯ ಉಪಲಂಭಃ ಪ್ರಮಾತ್ಮಕೋ ವಾಚ್ಯಃ ಸಚ ಕಸ್ಯಚಿತ್ ಭ್ರಾಂತಿಗೋಚರಾರ್ಥಸ್ಯ ನಾಕ್ತಿಸ್ವಭಾವಾದನ್ಯೋ ನಾಸ್ತೀತ್ಯರ್ಥಃ।—ತಾ. ಪ್ರ)

೧೯. ಯಾವಾಗಲೂ ಯಾರಿಗೇಆಗಲಿ ಸ್ವಭಾವವೇ ಅಲ್ಲವೇ ರುಚಿಸುವುದು? ಅ—ನಾನಾ ಆಗಿರುವುದೇ ನಾನಾ ಇದ್ದಂತೆ ಕಾಣಿಸುವುದು. (ಅದರಿಂದಲೇ ಭ್ರಾಂತಿಯು ಕಾಣಿಸುವುದು.) ಹೀಗಿರಲು ವಾದಗಳಿಂದ ಏನು ಆದೀತು? ಚೆನ್ನಾಗಿ ವಿಚಾರ ಮಾಡಿ ನೋಡು.

೨೦. "ಅಸ್ವಭಾವದಲ್ಲಿ ಮಹದ್ದುಃಖವು,ಸ್ವಭಾವದಲ್ಲಿ ಕೇವಲವಾದ ಶಮವು" ಎಂಬುದನ್ನು ನಿನ್ನೊಳಗೆ ವಿಚಾರಿಸಿಕೊಂಡು, ನಿನಗೆ ಯಾವುದು ಬೇಕೊ ಅದನ್ನು ಹಿಡಿಯುವವನಾಗು.

೨೧. ಸೂಕ್ಷ್ಮವಾದ ಬೀಜದಲ್ಲಿ ಸ್ಥೂಲವಾದ ಮರವು ಇದ್ದು ದೃಷ್ಟಿಗೋಚರ

ರೂಪಾಲೋಕ ಮನಸ್ಕಾರ-ಬುದ್ಧ್ಯಹಂತಾದಯಃ ಪರೇ ।
ಸ್ವರೂಪಭೂತಾಃ ಸಲಿಲೇ ದ್ರವತ್ವಮಿವ ಸ್ವಾತ್ಮಕಾಃ ॥ ೨೨ ॥

ಮೂರ್ತೋ ಯಥಾ ಸ್ವಸದೃಶೈಃ ಕರೋತ್ಯವಯವೈಃ ಕ್ರಿಯಾಃ ।
ಆತ್ಮಭೂತೈಸ್ತಥಾ ಭೂತೈಶ್ಚಿದಾಕಾಶಮಕರ್ತೃ ಸತ್ ॥ ೨೩ ॥

ಆತ್ಮಸ್ಥಾದಹಮಿತ್ಯಾದಿರಸ್ಮದಾದೇರಸಂಸ್ಕೃತೇಃ ।
ಶಬ್ದೋಽರ್ಥಭಾವಮುಕ್ತೋ ಯಃ ಪಟಹಾದಿಷು ಜಾಯತೇ ॥ ೨೪ ॥

---

ವಾಗುವುದು. ಶಿವವಾದ ಬ್ರಹ್ಮವು ಮೂರ್ತಸ್ವರೂಪವನ್ನು ಪಡೆದಾಗ, ಮೂರ್ತ ವಾದ ಜಗತ್ತಾಗಿ ಇರುವುದು ಎಂಬುದು ಉತ್ತಮರು ಆಡಿಕೊಳ್ಳುವ ಮಾತು.

೨೨. ನೀರಿನಲ್ಲಿ ದ್ರವತ್ವವು ಹೇಗೆ ಅದರ ಸ್ವಭಾವವಲ್ಲದೆ ಬೇರೆಯಿನ್ನೇನೂ ಅಲ್ಲವೋ ಹಾಗೆಯೇ ರೂಪಾಲೋಕ, ಮನಸ್ಕಾರ, ಬುದ್ಧಿ, ಅಹಂತಾದಿಗಳೆಲ್ಲವೂ ಆ ಪರತತ್ವದ ಸ್ವರೂಪಗಳೇ ಎಂದುಕೊ.

೨೩. ಮೂರ್ತವಾಗಿರುವ ಆಕಾರವೊಂದು ಹೇಗೆ ಸ್ವಸದೃಶಗಳಾಗಿ, ಆತು ಭೂತಗಳಾಗಿರುವ, ಅವಯವಗಳಿಂದ ಕ್ರಿಯೆಗಳನ್ನು ಮಾಡುವುದೋ ಹಾಗೆಯೆ ಚಿದಾಕಾಶವು ಅಕರ್ತೃವಾಗಿದ್ದರೂ ಭೂತಗಳಿಂದ ಎಲ್ಲ ಕೆಲಸಗಳನ್ನೂ ಮಾಡಿಸುವುದು,

೨೪. ಆತ್ಮನಲ್ಲಿಯೇ ಇರುವ, (ಒಂದೊಂದೇ ಇರುವಾಗ ಯಾವ ಕಾರ್ಯವನ್ನು ಮಾಡಲಾರದೆ) ಅಸಂಸ್ಕೃತಿಯಾಗಿರುವ ಅಸ್ಮದಾದಿಗಳಿಂದ ಅಹಂತಾದಿಗಳು ಹುಟ್ಟುವುವು. ಪಟಹಾದಿ ವಾದ್ಯಗಳನ್ನು ಬಾರಿಸುವಾಗ ಶಬ್ದವು ಹುಟ್ಟುವುದು ಆ ಶಬ್ದಕ್ಕೆ ಅರ್ಥವೇನಾದರೂ ಉಂಟೇನು ? (ಹಾಗೆಯೇ ಇವೂ ಅರ್ಥಶೂನ್ಯ ಗಳಾದರೂ ಕ್ರಿಯಾಪರಗಳಾದವು.)

(ಅರ್ಥವ್ಯವಹಾರ ಇವ ಶಬ್ದಪ್ರಯೋಗಾದಿ ವ್ಯವಹಾರೋಽಪಿ ಅಪೃಥಕ್ ಸತ್ತಯಾ ಚಿದಧಿಷ್ಠಿತಾದೇವ ದೇಹವಾಗಾದೇರ್ಜಾಯತ–ಆತ್ಮಸ್ಥಾತ್–ಇತಿ। ಅಸಂಸ್ಕೃತೇರ್ಜಡತ್ವೇನ ಸ್ವತೋ ವ್ಯವಹಾರಾಸಮರ್ಥಾತ್ ಅಸ್ಮದಾದೇಃ ವಸಿಷ್ಠ ರಾಮಾದಿ ದೇಹಾತ್, ಯೋಽಹಮಿತ್ಯಾದಿಃ, ಅರ್ಥಪ್ರಕಾಶನಾಭಿಪ್ರಾಯ ಯುಕ್ತಃ

ಯದ್ಭಾತಂ ಪ್ರೇಕ್ಷಯಾ ನಾಸ್ತಿ ತನ್ನಾಸ್ತ್ಯೇವ ನಿರಂತರಂ ।
ಜಗದ್ರೂಪಮರೂಪಾತ್ಮ ಬ್ರಹ್ಮ ಬ್ರಹ್ಮಣಿ ಸಂಸ್ಥಿತಂ ॥ ೨೫ ॥

ಯೇಷಾಮಸ್ತಿ ಜಾಗ್ರತ್ಸ್ವಪ್ನಸ್ತೇ ಸ್ವಪ್ನಪುರುಷಾ ಮಿಥಃ ।
ನ ಸಂತಿ ಹ್ಯಾತ್ಮನಿ ಮಿಥೋ ನಾಸ್ಮಾಸ್ವಂಬರಪುಷ್ಪವತ್ ॥ ೨೬ ॥

---

ಶಬ್ದೋ ಜಿಹ್ವಾದಿ ಕರಣವ್ಯಾಪಾರೇಣ ಜಾಯತೇ ಸ ಆತ್ಮಸ್ಥಾತ್ ಚಿದಾತ್ಮಾಧಿಷ್ಠಿತಾದೇವ ಜಾಯತೇ । ನಟೇಪದಕ್ರಮತಾಲಾಭಿಜ್ಞವಾದಕ ಪುರುಷಾಧಿಷ್ಠಿತೇಷು ಪಟಹಾದಿಷು ಯಥಾ ತದಭಿಪ್ರಾಯಾನುಸಾರಿ ವಿಚಿತ್ರ ಶಬ್ದೋ ಜಾಯತೇ ತಥೇತಿ ಶೇಷಃ—ತಾ ಪ್ರ.

೨೫. ಯಾವುದು ಭಾತವಾಗಿದ್ದರೂ ವಿಚಾರ ಮಾಡಿ ನೋಡಿದಾಗ ಇಲ್ಲವಾಗುವುದೊ, ಅದು ಯಾವಾಗಲೂ ಇಲ್ಲವೇ ಇಲ್ಲ. ಅದರಿಂದ ಜಗದ್ರೂಪವಾಗಿ ಕಾಣುವುದು ಯಾವುದುಂಟೋ ಅದು ಅರೂಪವಾದ ಆತ್ಮವು: ಬ್ರಹ್ಮದಲ್ಲಿಯೇ ಇರುವಿಕೆಯು

(ಆಪಾತತೋ ಭೂತಂ। ಪ್ರೇಕ್ಷಯಾ ವಿಚಾರಜನ್ಯತತ್ವಜ್ಞಾನೇನ। —ತಾ ಪ್ರ.)

೨೬. ಯಾರಿಗೆ ಜಗತ್ಸ್ವಪ್ನವುಂಟೋ ಅವರು ಸ್ವಪ್ನಪುರುಷರು ಅವರು ಆಕಾಶ ಪುಷ್ಪದಂತೆ ಆತ್ಮನಲ್ಲಿ ಸುತರಾಂ ಇಲ್ಲದವರು. ಪುರುಷಾರ್ಥಹೀನರಾದ ಅವರು ನಮ್ಮ ದೃಷ್ಟಿಯಲ್ಲೂ ಇಲ್ಲ.

(ನತ್ವಸಂಸಾರಿ ಬ್ರಹ್ಮ ಬ್ರಹ್ಮಸ್ವಭಾವೇ ತಿಷ್ಠತು ನಾಮ, ತೇನ ಸಂಸಾರಿಣಾಂ ಕೋ ಲಾಭ ಇತ್ಯಾಶಂಕ್ಯ ತೇಷಾಂ ಪುರುಷಾರ್ಥಚಿಂತಾ ವಂಧ್ಯಾಯಾಃ 'ಸ್ವಪುತ್ರ ರಾಜ್ಯಾದಿಲಾಭ ಚಿಂತಾವದ್ವ್ಯರ್ಥೈವೇತ್ಯಾಶಯೇನಾಹ–ಯೇಷಾಮಿತಿ । ಮಿಥಃ ಅನ್ಯೋನ್ಯಂ ಭ್ರಾಂತಿದೃಷ್ಟ್ಯಾಪಿ ಜಾಗರೇ ಸ್ವಪ್ನಾಂತರೇ ಚ ತತ್ತದಾತ್ಮನಿ ಬ್ರಹ್ಮಭೂತೇಷ್ವಸ್ಮಾಸು ಖಪುಷ್ಪವನ್ನತರಾಂ ಸಂತೀತ್ಯರ್ಥಃ ॥—ತಾ.ಪ್ರ.)

ಮಯಿ ಬ್ರಹ್ಮೈಕರೂಪಂ ತೇ ಶಾಂತಮಾಕಾಶಕೋಶವತ್ ।
ವಾಯೋಃ ಸ್ಪಂದೈರಿವಾಭಿನ್ನೈರ್ವ್ಯವಹಾರೈಶ್ಚ ತನ್ಮಯಿ ॥ ೩೭ ॥

ಅಹಂ ತು ಸನ್ಮಯಸ್ತೇಷಾಂ ಸ್ವಪ್ನಃ ಸ್ವಪ್ನವತಾಮಿವ ।
ತೇ ತು ನೂನಮಸಂತೋ ಮೇ ಸುಷುಪ್ತಸ್ವಪ್ನಕಾ ಇವ ॥ ೩೮ ॥

ತೈಸ್ತು ಯೋ ವ್ಯವಹಾರೋ ಮೇ ತದ್ಬ್ರಹ್ಮ ಬ್ರಹ್ಮಣಿ ಸ್ಥಿತಂ ।
ತೇ ಯತ್ಪಶ್ಯಂತು ಪಶ್ಯಂತಿ ತತ್ತೈರಲಮಲಂ ಮಮ ॥ ೩೯ ॥

---

೩೭ ತನ್ಮಯನಾಗಿರುವ ಎಂದರೆ ಬ್ರಹ್ಮರೂಪವಾಗಿರುವ ನನ್ನಲ್ಲಿ ಆ ಪುರುಷಾರ್ಥಹೀನರಾದ ಪುರುಷರೂ, ವಾಯುವಿನ ಸ್ಪಂದದಂತೆ ಅಭಿನ್ನವಾದ ವ್ಯವಹಾರಗಳಿಂದ ಕೂಡಿದವರಾಗಿ ಇರುವರಾದರೂ ಎಲ್ಲವೂ ಬ್ರಹ್ಮರೂಪವಾದುದೇ! ಶಾಂತವಾಗಿ, ಆಕಾಶಕೋಶದಂತೆ ಇರುವುದು.

(ಅಸ್ಮಾಸು ಜಡಾಂಶೇ ಏವ ತೇ ತದ್ವ್ಯವಹಾರಾಶ್ಚ ಖಪುಷ್ಪವತ್, ಸಚ್ಚಿದಂಶೇತು ಮಯಿ ಬ್ರಹ್ಮೈಕರೂಪತ್ವಾತ್ಸಂತ್ಯೇವೇತ್ಯಾಹ—ಮಯಿ ತೇ ಪುರುಷಾಃ ವಾಯುಸ್ಪಂದವತ್ ಸ್ವಾಭಿನ್ನೈಸ್ತೈಸ್ತೈಃ ಸ್ವವ್ಯವಹಾರೈಸ್ಸಹ ಮಯಿ ಸಂತ್ಯೇವ ಯತಸ್ತದುಭಯಂ ಶಾಂತಂ ಸದ್ಬ್ರಹ್ಮಾತ್ಮೈಕರೂಪಂ ತಚ್ಚ ಬ್ರಹ್ಮ ಮಯಿ ಪ್ರತ್ಯಗಾತ್ಮಸ್ವಭಾವೇಽಸ್ಮೀತ್ಯರ್ಥಃ॥—ತಾ. ಪ್ರ.

೩೮. ಅಹಂ ಎಂಬುದು ಯಾವುದುಂಟೋ ಅದು ಸನ್ಮಯವಾಗಿರುವುದು. ಆದರೆ ಆ ಪುರುಷಪದಾರ್ಥಹೀನರಿಗೆ ಈ ಅಹಂ ಎಂಬುದು ಸ್ವಪ್ನದಂತಿರುವುದು. ಏಕೆಂದರೆ ಅವರು ಸ್ವಪ್ನಪುರುಷರು. ಅವರು ನನ್ನ ದೃಷ್ಟಿಯಲ್ಲಿ ಇಲ್ಲವೇ ಇಲ್ಲ. ನಾನು ಅವರಿಗೆ ಸ್ವಪ್ನಪುರುಷ. ನನಗೆ ಅವರು ಸ್ವಪ್ನಪುರುಷರು.

೩೯. ಅವರೊಡನೆ ನಾನು ಮಾಡುವ ವ್ಯವಹಾರವು ಯಾವುದುಂಟೋ ಅದು ಬ್ರಹ್ಮವು: ಬ್ರಹ್ಮದಲ್ಲಿ ಸ್ಥಿತವಾಗಿರುವಿಕೆಯು. ಆದರೆ ಅವರು ಯಾವುದನ್ನು ಭಿನ್ನವೆಂದು, ಬೇರೆಬೇರೆಯೆಂದು, ಕಾಣುವರೋ ಅವರು ಅದನ್ನು ಕಂಡುಕೊಳ್ಳಲಿ. ಅವರು ಕಂಡಿರುವುದು ಅವರಿಗೆ ಸಾಕು: ನಾನು ಕಂಡಿರುವುದು ನನಗೆ ಸಾಕು.

(ಅನುಗ್ರಹಹೋಪದೇಶಾದಿ ವ್ಯವಹಾರಃ ತೈಃ ತದ್ದೃಷ್ಟಿ ಸಿದ್ಧ ಸತ್ತ್ವಾಭಾವೈಃ ಮದ್ವ್ಯವಹಾರೈರ್ಮಮ। ಅಲಮಲಮಿತಿ ವೀಪ್ಸಾ ಅತ್ಯಂತಿಕ ನಿಸ್ಪ್ರಯೋಜನತಾ ದ್ಯೋತನಾಯ ॥—ತಾ. ಪ್ರ.)

ಅಹಮಾತ್ಮನಿ ನೈವಾಸ್ಮಿ ಬ್ರಹ್ಮಸತ್ತೇಯಮಾತತಾ ।
ತ್ವದರ್ಥಂ ಸಮುದೇತೀವ ತಥಾರೂಪೈವ ವಾಗಿಯಂ ॥ ೩೦ ॥

ಅವಿರುದ್ಧ ವಿರುದ್ಧಸ್ಯ ಶುದ್ಧಸಂವಿನ್ಮಯಾತ್ಮನಃ ।
ನ ಭೋಗೇಚ್ಛಾ ನ ಮೋಕ್ಷೇಚ್ಛಾ ಹೃದಿ ಸ್ಫುರತಿ ತದ್ವಿದಃ ॥ ೩೧ ॥

ಸ್ವಭಾವಮಾತ್ರಾಯತ್ತೇಽಸ್ಮಿನ್ಬಂಧಮೋಕ್ಷಕ್ರಮೋ ನೃಣಾಂ ।
ಕದರ್ಥನೇತ್ಯಹೋ ಮೋಹಾದ್ಗೋಷ್ಪದೇಽವ್ಯುದಧಿಭ್ರಮಃ ॥ ೩೨ ॥

ಸ್ವಭಾವಸಾಧನೇ ಮೋಕ್ಷೋಽಭಾವೋಪಶಮರೂಪಿಣಿ ।
ನ ಧನಾನ್ಯುಪಕುರ್ವಂತಿ ನ ಮಿತ್ರಾಣಿ ನ ಚ ಕ್ರಿಯಾಃ ॥ ೩೩ ॥

---

೩೦. ಆತ್ಮನಲ್ಲಿ "ನಾನು" (ಪ್ರತ್ಯೇಕವಾಗಿ) ಇಲ್ಲ ಬ್ರಹ್ಮಸತ್ತೆಯೊಂದೇ ಎಲ್ಲೆಲ್ಲೂ ಹರಡಿರುವುದು: ನಿನಗಾಗಿ ಈ ರೂಪದಿಂದ ಇರುವುದೆಂಬಂತೆ ಇರುವುದು. ಹಾಗೆಯೇ ಬ್ರಹ್ಮವೇ ಈ ವಾಗ್ರೂಪವಾಗಿ ಪ್ರಕಟವಾಗುತ್ತಿರುವುದು

೩೧. ಪರಸ್ಪರ ವಿರುದ್ಧವಾದ ನಾನಾ ರೂಪವಾಗಿ ಕಂಡರೂ, ಅಧಿಷ್ಠಾನ ಸತ್ತಾ ಸಾಮಾನ್ಯರೂಪದಿಂದ ಅವಿರುದ್ಧವಾಗಿರುವ ಶುದ್ಧ ಸಂವಿನ್ಮಯವಾದ ಆತ್ಮನಿಗಾಗಲಿ, ಅದನ್ನು ತಿಳಿದವರಿಗಾಗಲಿ, ಅದನ್ನು ತಿಳಿದವರಿಗಾಗಲಿ, ಭೋಗೇಚ್ಛೆಯೂ ಇಲ್ಲ: ಮೋಕ್ಷೇಚ್ಛೆಯೂ ಇಲ್ಲ.

೩೨. ಸ್ವಭಾವ ಮಾತ್ರವಾಗಿ ಹರಡಿಕೊಂಡಿರುವ ಈ ಬ್ರಹ್ಮದಲ್ಲಿ ಮನುಷ್ಯರಿಗೆ ಬಂಧ ಮೋಕ್ಷ ಕ್ರಮಗಳು ಎಲ್ಲಿಯವು? ನಿಜವಾಗಿ ಇದೊಂದು ಕುಸಂಕಲ್ಪವು ಅಹಹಾ! ಮೋಹದಿಂದ ಗೋಷ್ಪದದಲ್ಲಿ ಸಮುದ್ರವನ್ನು ಕಾಣುವ ಭ್ರಮಕ್ಕೆ ಸಮಾನವು ಇದು.

೩೩. ಮೋಕ್ಷವೆಂಬುದು ಸ್ವಭಾವಸಾಧನದಿಂದ ಸಾಧ್ಯವಾದುದು. ಅದು ಅಭಾವೋಪಶಮರೂಪವಾದುದು. ಅದನ್ನು ಸಾಧಿಸಲು ಐಶ್ವರ್ಯಗಳಿಂದ ಸಾಧ್ಯವಿಲ್ಲ. ಮಿತ್ರರು ಅಲ್ಲಿ ಉಪಯೋಗವಿಲ್ಲ: ಯಾವ ಕಾರ್ಯಗಳೂ ಬೇಕಿಲ್ಲ.

(ಅಭಾವಸ್ಯ ಅಸತಾ ಏವ ದುಃಖಸ್ಯ ಉಪಶಮರೂಪೇಣ—ತಾ. ಪ್ರ.)

ತೈಲಬಿಂದುರ್ಭವತ್ಯುಚ್ಚೈಶ್ಚಕ್ರಮಪ್ಪತಿತೋ ಯಥಾ ।
ತಥಾಶು ಚೇತ್ಯಸಂಕಲ್ಪೇ ಸ್ಥಿತಾ ಭವತಿ ಚಿಜ್ಜಗತ್ ॥ ೩೪ ॥

ಜಾಗ್ರತಿ ಸ್ವಪ್ನವೃತ್ತಾಂತಸ್ಥಿತಿರ್ಯಾದೃಗ್ರಸಾ ಸ್ಮೃತೌ ।
ತಾದೃಗ್ರಸಾಹಂತ್ವ ಜಗಜ್ಜಾಲಸಂಸ್ಥಾ ವಿವೇಕಿನಃ ॥ ೩೫ ॥

ತೇನೈವಾಭ್ಯಾಸಯೋಗೇನ ಯಾತಿ ತತ್ತನುತಾಂ ತಥಾ ।
ಯಥಾ ನಾಹಂ ನ ಸಂಸಾರಃ ಶಾಂತಮೇವಾವಶಿಷ್ಯತೇ ॥ ೩೬ ॥

ಯದಾ ಯದಾ ಸ್ವಭಾವಾರ್ಕಃ ಸ್ಥಿತಿಮೇತಿ ತದಾ ತದಾ ।
ಭೋಗಾಂಧಕಾರೋ ಗಲತಿ ನ ಸನ್ನಪ್ಯನುಭೂಯತೇ ॥ ೩೭ ॥

---

೩೪. ನೀರಿನಲ್ಲಿ ಬಿದ್ದ ಎಣ್ಣೆಯ ತೊಟ್ಟು ದೊಡ್ಡ ಚಕ್ರವಾಗಿ ಹರಡುವುದು. ಅದರಂತೆಯೇ ಚೇತ್ಯ ಸಂಕಲ್ಪವನ್ನು ವಹಿಸಿಕೊಂಡ ಚಿತ್ತೇ ಜಗತ್ತಾಗುವುದು.

೩೫. ಸ್ವಪ್ನ ವೃತ್ತಾಂತ ಸ್ಥಿತಿಯು ಜಾಗ್ರತ್ತಿನಲ್ಲಿ ಹೇಗೆ ಬರಿಯ ಸ್ಮೃತಿ ಮಾತ್ರವೇ ಆಗಿರುವುದೋ ಹಾಗೆಯೇ ವಿವೇಕಿಗೂ ಈ ಜಗಜ್ಜಾಲ ಸಂಸ್ಥೆಯೂ ಹಾಗೆಯೇ ಸ್ವಪ್ನ ಸ್ಮೃತಿ ಮಾತ್ರವಾಗಿರುವುದು. (ಪ್ರಾತಿಭಾಸಿಕವಾಗಿರುವುದು)

೩೬. ಅದೂ ಕೂಡ ಅಭ್ಯಾಸಯೋಗದಿಂದ ಕೃಶವಾಗುತ್ತ ಬಂದು ನಾಹಂ ನ ಸಂಸಾರಃ ಎಂದು ಶಾಂತವಾಗಿ ನಾಮಾವಶೇಷವಾಗುವುದು.

೩೭. ಯಾವಾಗ ಯಾವಾಗ ಸ್ವಭಾವವೆಂಬ ಸೂರ್ಯನು ಸ್ಥಿತಿಯನ್ನು ಹೊಂದುವನೋ ಆಗಾಗಲೆಲ್ಲ ಭೋಗಾಂಧಕಾರವು ಶಿಥಿಲವಾಗುವುದು. ಈ ಜಗತ್ತು ಯಾವಾಗಲೂ ಇರಲಿಲ್ಲ ಎನ್ನುವುದು ಅನುಭವಕ್ಕೆ ಬರುವುದು

ಮೋಹಮಹತ್ತಾ ರಹಿತಃ
ಸ್ಫುರತಿ ಮೃತೌ ಭವತಿ ಭಾಸತೇ ಚ ತಥಾ ।
ಬುದ್ಧ್ಯಾದಿಕರಣನಿಕರೋ
ಯಸ್ಮಾದ್ದೀಪಾದಿವಾಲೋಕಃ ॥ ೩೮ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಸುಖಭಾವವಿಶ್ರಾಂತಿಯೋಗೋಪದೇಶೋ" ನಾಮ ಏಕೋನಚತ್ವಾರಿಂಶಃ ಸರ್ಗಃ

---

೩೮. ಹೀಗೇ ಭೋಗಾಪೇಕ್ಷೆಯೆಂಬ ಅಂಧಕಾರವು ಕ್ಷಯವಾಗಲು, ದೇಹೋಽಹಂ ಎಂಬ ಮೋಹವು ಮಹತ್ತಾಗಿದ್ದುದು ಇಲ್ಲವಾಗುವುದು; ಬುದ್ಧಿ ಮೊದಲಾದ ಕರಣಗಳೆಲ್ಲವೂ ಮರಣದಲ್ಲಿ ಪರಿಣಮಿಸಿ ಇಲ್ಲವಾಗುವುವು. ಆಗ ತತ್ವವು ತಾನಾಗಿ ಭಾಸವಾಗುವುದು. ಆಗ ದೀಪದಿಂದ-ಬೆಳಕು ಹೊರಡುವಂತೆ (ಸಹಜಾನಂದವು ತಾನೇ ತಾನಾಗುವುದು )

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಸುಖಾಭಾವವಿಶ್ರಾಂತಿಯೋಗೋಪದೇಶ" ಎಂಬ ಮೂವತ್ತೊಂಭತ್ತನೆಯ ಸರ್ಗವು.

## ಚತ್ವಾರಿಂಶಃ ಸರ್ಗಃ

**ಶ್ರೀ ವಸಿಷ್ಠ ಉವಾಚ :—**

**ರೂಪಾಲೋಕ ಮನಸ್ಕಾರ ಬುದ್ಧ್ಯಾದೀಂದ್ರಿಯವೇದನಂ ।**
**ಸ್ವರೂಪಂ ವಿದುರಮ್ಲಾನಮಸ್ವಭಾವಸ್ಯ ವಸ್ತುನಃ ॥ ೧ ॥**

**ಅಸ್ವಭಾವ ತನುತ್ವೇನ ಸ್ವಭಾವ ಸ್ಥಿತಿರಾತತಾ ।**
**ಯದೋದೇತಿ ತದಾ ಸರ್ಗೋ ಭ್ರಮಾಭಃ ಪ್ರತಿಭಾಸತೇ ॥ ೨ ॥**

**ಯದಾ ಸ್ವಭಾವವಿಶ್ರಾಂತಿಃ ಸ್ಥಿತಿಮೇತಿ ಶಮಾತ್ಮಿಕಾ ।**
**ಜಗದ್ದೃಶ್ಯಂ ತದಾ ಸ್ವಪ್ನಃ ಸುಷುಪ್ತ ಇವ ಶಾಮ್ಯತಿ ॥ ೩ ॥**

---

## ನಲವತ್ತನೆಯ ಸರ್ಗವು

**ಶ್ರೀ ವಸಿಷ್ಠನು ಹೇಳಿದನು :—**

೧. ರೂಪಾಲೋಕ, ಮನಸ್ಕಾರಗಳಿಂದ ಕೂಡಿರುವ ಬುದ್ಧೀಂದ್ರಿಯ ಕರ್ಮೇಂದ್ರಿಯಗಳಿಂದ ವೇದನವಾಗುವ ಸ್ವರೂಪವು ಯಾವುದುಂಟೋ ಅದನ್ನೇ ಸ್ವಭಾವದಿಂದ ಆಚೆ ಇರುವ ಬ್ರಹ್ಮವಸ್ತುವಿನ ಅಮ್ಲಾನರೂಪವೆನ್ನುವರು

ರೂಪಾಲೋಕ–ಬಾಹ್ಯ, ಮನಸ್ಕಾರ–ಆಂತರ

೨. ಅಸ್ವಭಾವವು ಬಹು ಸೂಕ್ಷ್ಮವಾದುದು. ಆದರಿಂದಲೇ ಸ್ವಭಾವ ಸ್ಥಿತಿಯು ಹರಡುವುದು. ಆ ಸ್ವಭಾವವು ಉದಯವಾದಾಗ ಸೃಷ್ಟಿಯು ಭ್ರಾಂತಿ ರೂಪವಾಗಿ ಅದು ಗೋಚರವಾಗುವುದು

೩. ಯಾವಾಗ ಸ್ವ–ಭಾವವು ವಿಶ್ರಾಂತಿಯನ್ನು ಪಡೆದು ಶಮಾತ್ಮಕವಾದ ಸ್ಥಿತಿಯು ಬರುವುದೋ ಆಗ ಜಗದ್ದೃಶ್ಯವೆಲ್ಲವೂ ಸ್ವಪ್ನವು ಸುಷುಪ್ತಿಯಲ್ಲಿ ಶಮನ ವಾಗುವ ಹಾಗೆ ಶಾಂತವಾಗುವುದು.

ಭೋಗಾ ಭವಮಹಾರೋಗಾ ಬಂಧವೋ ದೃಢಬಂಧನಂ ।
ಅನರ್ಥಾಯಾರ್ಥಸಂಪತ್ತಿರಾತ್ಮನಾತ್ಮನಿ ಶಾಮ್ಯತಾಂ ॥ ೪ ॥

ಅಸ್ವಭಾವಾತ್ಮತಾ ಸರ್ಗಃ ಸ್ವಭಾವೈಕಾತ್ಮತಾ ಶಿವಃ ।
ಭೂಯತಾಂ ಪರಮವ್ಯೋಮ್ನಾ ಶಾಮ್ಯತಾಂ ಮೇಹ ತಾಮ್ಯತಾಂ ॥ ೫ ॥

ನಾತ್ಮಾನಮವಗಚ್ಛಾಮಿ ನ ದೃಶ್ಯಂ ಚ ಜಗದ್ಭ್ರಮಂ ।
ಬ್ರಹ್ಮ ಶಾಂತಂ ಪ್ರವಿಷ್ಟೋಽಸ್ಮಿ ಬ್ರಹ್ಮೈವಾಸ್ಮಿ ನಿರಾಮಯಃ ॥ ೬ ॥

ತ್ವಮೇವ ಪಶ್ಯಸಿ ತ್ವತ್ತ್ವಂ ಸತ್ವಂ ಶಬ್ದಾರ್ಥಜೃಂಭಿತಂ ।
ಪಶ್ಯಾಮಿ ಶಾಂತಮೇವಾಹಂ ಕೇವಲಂ ಪರಮಂ ನಭಃ ॥ ೭ ॥

---

(ಸ್ವ-ಭಾವ ಎನ್ನುವುದನ್ನು ಇಂಗ್ಲೀಷ್‌ನ ಡೈನಮಿಕ್ ಎಂಬ ಸ್ಥಿತಿಗೆ ಹೋಲಿಸ ಬಹುದು. ಇಲ್ಲಿ “ಡೈನಮಿಕ್, ಸ್ಟಾಟಿಕ್, ಈ ಎರಡರಲ್ಲಿ ಸಹಜಾವಸ್ಥೆ ಯಾವುದು ?” ಎಂಬುದು ಪ್ರಶ್ನೆ. ಆಧುನಿಕರಿಗೆ ಡೈನಮಿಕ್ ಸಹಜಾವಸ್ಥೆ: ನಮಗೆ ಸ್ಟಾಟಿಕ್ ಸಹಜಾವಸ್ಥೆ)

೪. ಭೋಗಗಳು ಭವಮಹಾರೋಗಗಳು: ಬಂಧುಗಳೇ ದೃಢಬಂಧನಗಳು: ಅರ್ಥ ಸಂಪತ್ತಿಯು ಅನರ್ಥಕಾರಿಯು: ಆದರಿಂದ ಆತ್ಮನಲ್ಲಿ ಆತ್ಮನಿಂದಲೇ ಶಾಂತಿ ಯನ್ನು ಪಡೆಯಬೇಕು.

೫. ಈ ಸರ್ಗವೆಂಬುದು ಸಹಜವಲ್ಲ: (ಸ್ವಭಾವ) ಶಿವನೇ ಸಹಜವಾದವನು. ಆದರಿಂದ ಚಿದಾಕಾಶವಾಗು: ಶಾಂತಿಯನ್ನು ಪಡೆ. ಇಲ್ಲಿ ಒದ್ದಾಡಬೇಡ.

೬. ತ್ರಿಪುಟೀ ಸಹಿತವಾದ ನಾನು ಎಂಬುದರಲ್ಲಿ ನಿಲ್ಲುವುದಿಲ್ಲ. ದೃಶ್ಯ ವಾಗಲಿ, ಭ್ರಮಾತ್ಮಕವಾದ ಜಗತ್ತಾಗಲಿ, ನನಗೆ ಇಲ್ಲ. ನಾನು ಬ್ರಹ್ಮದಲ್ಲಿ ಸೇರಿಹೋಗಿರುವೆನು ನಿರಾಮಯವಾದ ಬ್ರಹ್ಮವೇ ಆಗಿರುವೆನು.

೭. (ವಸಿಷ್ಠನು ನೀನು ಎಂಬ) ತತ್ತ್ವವು ಶಬ್ದಾರ್ಥಗಳಿಂದ ಕೂಡಿ ಪೃಥ ಕ್ಕಾದ ಸತ್ವದಂತಿದೆಯೆಂದು ನಿನಗೆ ಕಾಣುತ್ತಿರುವುದು. ನನಗಾದರೋ ಶಾಂತವೂ ಕೇವಲವೂ ಆದ ಪರಮಾಕಾಶವೇ ಕಾಣುತ್ತಿರುವುದು.

ಬ್ರಹ್ಮಣ್ಯೇವ ಪರಾಕಾಶೇ ರೂಪಾಲೋಕಮನೋಮಯಾಃ ।
ವಿಭ್ರಮಾಸ್ತವ ಸಂಜಾತಕಲ್ಪಾಃ ಸ್ಪಂದಾ ಇವಾನಿಲೇ　　॥ ೮ ॥

ಬ್ರಹ್ಮಾತ್ಮಾ ವೇತ್ತಿ ನೋ ಸರ್ಗಂ ಸರ್ಗಾತ್ಮಾ ಬ್ರಹ್ಮ ವೆ ತ್ತಿ ನೊ ।
ಸುಷುಪ್ತೋ ವೇತ್ತಿ ನೋ ಸ್ವಪ್ನಂ ಸ್ವಪ್ನಸ್ಥೋ ನ ಸುಷುಪ್ತಕಂ　　॥ ೯ ॥

ಪ್ರಬುದ್ಧೋ ಬ್ರಹ್ಮಜಗತೋರ್ಜಾಗ್ರತ್ಸ್ವಪ್ನದೃಶೋರಿವ ।
ರೂಪಂ ಜಾನಾತಿ ಭಾರೂಪಂ ಜೀವನ್ಮುಕ್ತಃ ಪ್ರಶಾಂತಧೀಃ　　॥ ೧೦ ॥

ಯಥಾಭೂತಮಿದಂ ಸರ್ವಂ ಪರಿಜಾನಾತಿ ಬೋಧವಾನ್ ।
ಸಂಶಾಮ್ಯತಿ ಚ ಶುದ್ಧಾತ್ಮಾ ಶರದೀವ ಪಯೋಧರಃ　　॥ ೧೧ ॥

---

೮. ಪರಮಾಕಾಶವಾದ ಬ್ರಹ್ಮದಲ್ಲಿ ರೂಪಾಲೋಕಮನಸ್ಕಾರಗಳು, ಗಾಳಿಯಲ್ಲಿ ಕಾಣುವ ಬೀಸುವಿಕೆಯಂತೆ ತೋರಿ ತೋರಿ ಅಡಗುವ ವಿಭ್ರಾಂತಿಗಳು.

೯. ಬ್ರಹ್ಮಾತ್ಮನಾಗಿರುವವನಿಗೆ ಸರ್ಗವು ಕಾಣಿಸುವುದೇ ಇಲ್ಲ ಸರ್ಗಾತ್ಮನಾಗಿರುವವನಿಗೆ ಬ್ರಹ್ಮವು ತಿಳಿಯುವುದಿಲ್ಲ. ಸುಷುಪ್ತಿಯಲ್ಲಿರುವವನಿಗೆ ಕನಸು ಕಾಣಿಸುವುದಿಲ್ಲ; ಕನಸಿನಲ್ಲಿರುವವನಿಗೆ ಸುಷುಪ್ತಿಯಿಲ್ಲ

(ಮಮ ದ್ವೈತಾದರ್ಶನಂ ನ ದ್ವೈತಪ್ರದ್ವೇಷಾತ್ ಕಿಂತು ದ್ವೈತಾದ್ವೈತಯೋಃ ಯುಗಪದ್ದರ್ಶನಾಸಂಭವಾತ್—ತಾ ಪ್ರ.)

೧೦. ಪ್ರಬುದ್ಧನಾಗಿ ಜೀವನ್ಮುಕ್ತನಾದವನು ಬ್ರಹ್ಮ ಜಗತ್ತುಗಳನ್ನು ಜಾಗ್ರತ್ತು ಸ್ವಪ್ನಗಳಂತೆ ಅನುಭವಿಸುತ್ತಾ ಇದ್ದರೂ ರೂಪ ರೂಪವೂ ಅವನಿಗೆ ಭಾರೂಪವಾಗಿಯೇ ಕಂಡು ಅವನು ಪ್ರಶಾಂತನಾಗಿಯೇ ಇರುವನು.

೧೧. ಬೋಧವನ್ನು ಪಡೆದವನು ಸರ್ವವನ್ನೂ ಯಥಾಭೂತವಾಗಿ (ಅದರ ನಿಜಸ್ಥಿತಿಯೇನು ಎಂದು) ತಿಳಿಯುವನು ಶುದ್ಧಾತ್ಮನಾಗುವನು. ಶರತ್ತಿನಲ್ಲಿ ಮೋಡವು ಅಡಗುವ ಹಾಗೆ ಅವನಿಗೆ ದೃಶ್ಯಾದಿ ಭ್ರಾಂತಿಗಳೆಲ್ಲವೂ ಅಡಗಲು ಅವನು ಸಂಪೂರ್ಣವಾಗಿ ಶಾಂತನಾಗುವನು.

ಸ್ಮೃತಿಸ್ಥಃ ಕಲ್ಪನಸ್ಥೋ ವಾ ಯಥಾಖ್ಯಾತಶ್ಚ ಸಂಗರಃ ।
ಸದಸದ್ಭ್ರಾಂತತಾಮಾತ್ರಸ್ತಥಾಹಂತ್ವ ಜಗದ್ಭ್ರಮಃ ॥ ೧೨ ॥

ಆತ್ಮನ್ಯಪಿ ನಾಸ್ತಿ ಹಿ ಯಾ
ದ್ರಷ್ಟ್ರಾ ಯಸ್ಯಾ ನ ವಿದ್ಯತೇ ಕಶ್ಚಿತ್ ।
ನ ಚ ಶೂನ್ಯಂ ನಾಶೂನ್ಯಂ
ಭ್ರಾಂತಿರಿಯಂ ಭಾಸತೇ ಸೇತಿ ॥ ೧೩ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೆ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಆತ್ಮವಿಶ್ರಾಂತಿಕಥನಂ" ನಾಮ
ಚತ್ವಾರಿಂಶಃ ಸರ್ಗಃ

---

೧೨. ಯುದ್ಧವನ್ನು ಕುರಿತು ಹೇಳಿದ ಕಥೆಯು ಸ್ಮೃತಿಸ್ಥವಾಗಿರಲಿ, ಕಲ್ಪನಸ್ಥವಾಗಿರಲಿ, ಅದು ಸದಸದ್ಭ್ರಾಂತತಾ ಮಾತ್ರವು ಹೇಗೋ ಹಾಗೆ ಅಹಂತ್ವವೆಂಬ ಜಗದ್ಭ್ರಮವೂ ಸದಸದ್ಭ್ರಾಂತಮಾತ್ರವು.

೧೩. ಆತ್ಮನಲ್ಲಿಯೂ ಯಾವುದು ಇಲ್ಲವೇ ಇಲ್ಲವೋ, ಯಾವುದನ್ನು ಕಾಣುವೆನು ಎನ್ನುವ ದ್ರಷ್ಟೃವೂ. ಇಲ್ಲವೋ ಅದು ಶೂನ್ಯವೂ ಅಶೂನ್ಯವೂ ಅಲ್ಲದ ಭ್ರಾಂತಿಯು. ಅದು ಇಲ್ಲದಿದ್ದರೂ ಇದ್ದಂತೆ ಕಾಣುವುದು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಆತ್ಮವಿಶ್ರಾಂತಿಕಥನ" ಎಂಬ
ನಲವತ್ತನೆಯ ಸರ್ಗವು.

# ಏಕಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಅಸ್ವಭಾವಸ್ವಭಾವೋಽಯಂ ಸರ್ವೋಽಹಂತಾದಿವೇದನಃ ।
ಸ್ವಭಾವೈಕಸ್ವಭಾವೇನ ನಿರ್ವಾಣೀಕ್ರಿಯತಾಂ ಸ್ವಯಂ ॥ ೧ ॥

ಯತ್ರಾದಿತ್ಯೋ ಭವೇತ್ತತ್ರ ಯಥಾಲೋಕಸ್ತಥಾ ಭವೇತ್ ।
ಪರಂ ವಿಷಯವೈರಸ್ಯಂ ತತ್ರ ಯತ್ರ ಪ್ರಬುದ್ಧಧೀಃ ॥ ೨ ॥

---

# ನಲವತ್ತೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಈ ಅಹಂತಾದಿವೇದನಗಳೆಲ್ಲವೂ ಅಸ್ವಭಾವವೇ ಸ್ವಭಾವವಾಗಿ ಉಳ್ಳವು. ಸ್ವಭಾವವೇ ಸ್ವಭಾವವಾಗುಳ್ಳದನ್ನು ಹಿಡಿದು ಇವೆಲ್ಲವನ್ನು ನಿರ್ವಾಣೀಕರಣ ಮಾಡು. ಇದನ್ನು ನೀನೇ ಮಾಡಿಕೊಳ್ಳಬೇಕಲ್ಲದೆ ಇನ್ನು ಯಾರೂ ಮಾಡುವಂತಿಲ್ಲ.

(ಅಸ್ವಭಾವೋಽವಿದ್ಯಾ ತತ್ಸ್ವಭಾವೋಽಯಮಾತ್ಮಾ ಸರ್ವ ಜಗದ್ರೂಪಃ ಸನ್ನಹಂತಾದಿವಕ್ಷ್ಯಮಾಣ ತ್ರಿಜಗತ್ಪ್ರತ್ರಿಕಾನ್ಯತ್ಯಂ ವೇತ್ತೀತ್ಯಹಂಕಾರಾದಿವೇದನಃ ಸಂಪನ್ನಃ । ಏವಮನಿರ್ವಾಣೋಽಯಮಾತ್ಮಾ ಸ್ವಯಂ ಶಾಸ್ತ್ರೀಯೋಪಾಯ ಪ್ರಭವ ವಿದ್ಯಾವಿರ್ಭೂತೇನ-ಅದ್ವಿತೀಯ ಸ್ವಪ್ರಕಾಶಪೂರ್ಣಾನಂದ ಲಕ್ಷಣ ಸ್ವಭಾವೇನ ಸ್ವೇನೈವ ನಿರ್ವಾಣೀಕ್ರಿಯತಾಂ ॥—ತಾ. ಪ್ರ.)

೨. ಆದಿತ್ಯನು ಎಲ್ಲಿದ್ದರೆ ಅಲ್ಲಿ ಬಿಸಿಲು ಇರುವಂತೆ, ಎಲ್ಲಿ ಪ್ರಬುದ್ಧವಾದ ಬುದ್ಧಿಯು ಇರುವುದೋ ಅಲ್ಲಿ ವಿಷಯಗಳಲ್ಲಿ ವೈರಸ್ಯವು ಇದ್ದೇ ಇರುವುದು

(ಸಾಚ ವಿದ್ಯಾ ವಿದ್ವತ್ಸಮಾಗಮವಿವೇಕ ಜನ್ಯಾದ್ವೈರಾಗ್ಯಾದೇವ ಸಿದ್ಧ್ಯತೀತ್ಯಾಶಯೇನಾಹ—ತಾ ಪ್ರ)

ಅಕರ್ತೃಕರ್ಮಕರಣಮದೃಶ್ಯದ್ರಷ್ಟೃದರ್ಶನಂ ।
ಜಗದಗ್ರಾಹ್ಯಸಂಭಾರಮಭಿತ್ತೌ ಚಿತ್ರಮುತ್ಥಿತಂ ॥ ೩ ॥

ನರ್ಚೋತ್ಥಿತಂ ಕಿಂಚ ನ ವಾ ಶಾಂತೇ ಶಾಂತಂ ಯಥಾಸ್ಥಿತಂ ।
ಅನಾಮಯಂ ಪರ ಬ್ರಹ್ಮ ಸತ್ಯಮವ್ಯಯಮೇವ ತತ್ ॥ ೪ ॥

ಚಿಚ್ಚಮತ್ಕಾರಮಾತ್ರಾತ್ಮಕಲ್ಪನಾರಂಗರಂಜನಾಃ ।
ಸಂಖ್ಯಾತುಂ ಕೇನ ಶಕ್ಯಂತೇ ಖೇ ಜಗಚ್ಚಿತ್ರಪುತ್ರಿಕಾಃ ॥ ೫ ॥

ರಸಭಾವ ವಿಕಾರಾಢ್ಯಂ ನೃತ್ಯಂತ್ಯಭಿನಯೈರ್ನವೈಃ ।
ಪರಮಾಣುಪ್ರತಿ ಪ್ರಾಯಃ ಖೇ ಸ್ಫುರಂತ್ಯಂಬರಾತ್ಮಿಕಾಃ ॥ ೬ ॥

ಸರ್ವರ್ತುಶೇಖರಧರಾ ದಿಗ್ಬಾಹುಲತಿಕಾಕುಲಾಃ ।
ಪಾತಾಲಪಾದಲತಿಕಾ ಬ್ರಹ್ಮಲೋಕಶಿರೋಧರಾಃ ॥ ೭ ॥

---

೩. ಈ ಜಗತ್ತು ಎಂಬುದು ಕರ್ತೃ ಕರ್ಮ ಕರಣಗಳಿಲ್ಲದ್ದು: ದೃಶ್ಯದ್ರಷ್ಟೃ ದರ್ಶನಗಳಿಲ್ಲದ್ದು: ಅದರಲ್ಲಿರುವ ಸಂಭಾರಗಳನ್ನು ಗ್ರಹಿಸುವುದಕ್ಕಾಗದು. ಇಂತಹ ಜಗತ್ತು ಎಂಬುದು ಭಿತ್ತಿಯಿಲ್ಲದ ಕಂಡಿರುವ ಚಿತ್ರವು.

೪. ಈ ಜಗತ್ತು ಎಂಬ ಚಿತ್ರವು ಕಂಡಿದೆಯೆಂಬುದೂ ಇಲ್ಲ. ಶಾಂತವಾದ ಬ್ರಹ್ಮದಲ್ಲಿ ಯಥಾಸ್ಥಿತವಾಗಿದ್ದರೂ ಅದು ಶಾಂತವಾಗಿಲ್ಲ. (ದೃಶ್ಯವಾಗಿರುವವರೆಗೂ ಬೇರೆಯಾಗಿರುವಂತೆ ಕಂಡರೂ ನಿಜವಾಗಿ) ಅನಾಮಯವೂ ಪರವೂ ಸತ್ಯವೂ ಆಗಿರುವ ಬ್ರಹ್ಮವೇ ಅದು: ಇನ್ನೇನೂ ಅಲ್ಲ.

೫. ಚಿತ್ತಿನ ಚಮತ್ಕಾರವಾಗಿ ಹುಟ್ಟಿದ ಜೀವನು ಮಾಡುವ ಸಂಕಲ್ಪಗಳೆಂಬ ರಂಗಮಂಟಪದ ಅಲಂಕಾರವಾಗಿರುವ ಜಗತ್ತುಗಳೆಂಬ ಚಿತ್ರ ಪುತ್ರಿಕೆಗಳನ್ನು (ಅವೆಲ್ಲವೂ ಆಕಾಶದಲ್ಲಿರುವವು) ಲೆಕ್ಕಿಸಲು ಯಾರಿಗೆ ತಾನೇ ಸಾಧ್ಯ ?

೬. ಈ ಚಿತ್ರ ಪುತ್ರಿಕೆಗಳು ರಸಭಾವಗಳೆಂಬ ವಿಕಾರಗಳಿಂದ ಕೂಡಿರುವ ಹೊಸ ಹೊಸ ಅಭಿನಯಗಳಿಂದ ಕುಣಿಯುವರು. ಅವರೆಲ್ಲರೂ ಪರಮಾಣುವಿನಂತೆ ಇರುವರು. ಆಕಾಶಾತ್ಮಿಕೆಯರಾಗಿ ಆಕಾಶದಲ್ಲಿಯೇ ಇವರು ಮೆರೆಯುವರು.

೭. ಸರ್ವರ್ತುಗಳಲ್ಲಿಯೂ ಅಲಂಕಾರ ಮಾಡಿಕೊಂಡಿರುವ, ದಿಕ್ಕುಗಳೆಂಬ

ಚಂದ್ರಾರ್ಕಲೋಲನಯನಾಸ್ತಾರೋತ್ಕರತನೂರುಹಾಃ ।
ಸಪ್ತಲೋಕಾಂಗಲತಿಕಾಃ ಪರಿತೋಽಚ್ಛಾಂಬರಾಂಬರಾಃ ॥ ೮ ॥

ದ್ವೀಪಾಂಬುರಾಶಿವಲಯಾ ಲೋಕಾಲೋಕಾದ್ರಿಮೇಖಲಾಃ ।
ಭೂತಭಾರಚಲಜ್ಜೀವಪ್ರವಹತ್ಪ್ರಾಣಮಾರುತಾಃ ॥ ೯ ॥

ವನೋಪವನವಿನ್ಯಾಸಹಾರಕೇಯೂರಭೂಷಿತಾಃ ।
ಪುರಾಣವೇದವಚನಾಃ ಕ್ರಿಯಾಫಲವಿನೋದನಾಃ ॥ ೧೦ ॥

ತ್ರಿಜಗತ್ಪುತ್ರಿಕಾನೃತ್ಯಂ ಯದಿದಂ ದೃಶ್ಯತೇ ಪುರಃ ।
ಬ್ರಹ್ಮವಾರಿದ್ರವತ್ವಂ ತತ್ತದ್ಬ್ರಹ್ಮಾನಿಲವೇಪನಂ ॥ ೧೧ ॥

---

ಬಾಹುಲತೆಗಳಿಂದ ಕೂಡಿರುವ, ಪಾತಾಲವೆಂಬ ಪಾದಗಳೂ ಬ್ರಹ್ಮಲೋಕಗಳೆಂಬ ಕತ್ತುಗಳೂ ಉಳ್ಳವರು ಅವರು.

೮. ಸೂರ್ಯಚಂದ್ರರೆಂಬ ಲೋಲನಯನಗಳೂ, ತಾರೆಗಳ ಗುಂಪುಗಳೆಂಬ ಕೂದಲುಗಳೂ, ಸಪ್ತಲೋಕಗಳೆಂಬ ದೇಹಲತೆಗಳೂ, ಶುಭ್ರವಾದ ಆಕಾಶವೆಂಬ ವಸ್ತ್ರಗಳೂ ಉಳ್ಳವರು ಅವರು.

೯. ದ್ವೀಪಗಳನ್ನು ಬಳಸಿರುವ ಸಮುದ್ರಗಳೆಂಬ ವಲಯಗಳೂ ಲೋಕಾಲೋಕ ಪರ್ವತವೆಂಬ ಒಡ್ಯಾಣವೂ ಪ್ರಾಣಿಗಳನ್ನು ಕಾಪಾಡುವ ವ್ಯಾಪಾರವನ್ನು ನಿರ್ವಹಿಸುವ ಪ್ರಾಣವಾಯುವೂ ಉಳ್ಳವರು ಅವರು.

೧೦ ವನ, ಉಪವನಗಳೆಂಬ ಹಾರ, ಕೇಯೂರ, ಭೂಷಣಗಳನ್ನುಳ್ಳವರು ಅವರು. ಪುರಾಣಗಳು ವೇದಗಳು ಎಂಬ ಮಾತುಗಳೂ ಕ್ರಿಯಾ ಫಲಗಳೆಂಬ ವಿನೋದಗಳೂ ಉಳ್ಳವರು ಅವರು

೧೧. ಈ ಎದುರಿಗೆ ಕಾಣುತ್ತಿರುವ ತ್ರಿಜಗತ್ಪುತ್ರಿಕೆಯ [illegible]ನೃತ್ಯವು ಯಾವುದುಂಟೋ ಅದು ಬ್ರಹ್ಮ ಜಲದ ದ್ರವತ್ವವು. ಬ್ರಹ್ಮವಾಯುವಿ[illegible]

ಅಸ್ವಭಾವಸ್ಥಿತೈವಾಸ್ಯ ಕಾರಣಂ ಕಾರಣಾತ್ಮಕಂ ।
ಅಸುಷುಪ್ತಸ್ಥಿತಾ ಸ್ವಾಪೇ ಸ್ವಪ್ನಸ್ಯೇವ ಸತೀವ ಸಾ ॥ ೧೨ ॥

ಅಸುಷುಪ್ತಸುಷುಪ್ತಸ್ಥಃ ಸ್ವಭಾವಂ ಭಾವಯನ್ಭವ ।
ಜಾಗ್ರತ್ಯಪಿ ಗತವ್ಯಗ್ರೋ ಮಾ ಸ್ವಪ್ನಮಿದಮಾಶ್ರಯ ॥ ೧೩ ॥

ಯಜ್ಜಾಗ್ರತಿ ಸುಷುಪ್ತತ್ವಂ ಬೋಧಾದರಸವಾಸನಂ ।
ತಂ ಸ್ವಭಾವಂ ವಿದುಸ್ತಜ್ಜ್ಞಾ ಮುಕ್ತಿಸ್ತತ್ಪರಿಣಾಮಿತಾ ॥ ೧೪ ॥

ಅಕರ್ತೃಕರ್ಮಕರಣಮದೃಶ್ಯದ್ರಷ್ಟೃದರ್ಶನಂ ।
ಅರೂಪಾಲೋಕಮನನಂ ಸ್ಥಿತಂ ಬ್ರಹ್ಮ ಜಗತ್ತಯಾ ॥ ೧೫ ॥

---

೧೨. ಈ ನರ್ತನಕ್ಕೆ ಅಸ್ವಭಾವದಲ್ಲಿರುವ ಚಿತ್ತೇ ಕಾರಣವು. ಇದೇ ಕಾರಣವೆಂದು ಶ್ರುತಿಗಳಲ್ಲಿಯೂ ಪ್ರಸಿದ್ಧವಾಗಿರುವುದು. ನಿದ್ರೆಯು ಬರದಿರುವಾಗ ಕನಸಾಗುವುದಿಲ್ಲವೆ ಹಾಗೆ ಇದು (ತನ್ನ ಸ್ವಭಾವವಾದ ಶಾಂತಿಗೆ ವಿರುದ್ಧವಾದ ವರ್ತನವು ಇದು )

(ಶ್ರೀ ಶಂಕರರು 'ಸುಷುಪ್ತ್ಯಾಖ್ಯಂತಮೋ ಜ್ಞಾನಂ। ಬೀಜಂ ಸ್ವಪ್ನ ಪ್ರಬೋಧಯೋಃ ॥' ಎಂದಿರುವುದನ್ನು ಗಮನಿಸಿ.)

೧೩. ಸ್ವಭಾವವಾದ (ನಿರ್ವ್ಯಾಪಾರವಾದ) ಚಿತ್ತನ್ನು ಭಾವಿಸುತ್ತ ಸುಷುಪ್ತಿಯಲ್ಲದ ಸುಷುಪ್ತಿ (ತುರೀಯ)ಯನ್ನು ಹೊಂದು. ಆಗ ಜಾಗ್ರತ್ತಿನಲ್ಲಿಯೂ ಸಮಾಧಾನವುಳ್ಳವನಾಗಿ ಈ ಜಗತ್ಸ್ವಪ್ನವನ್ನು ಆಶ್ರಯಿಸದವನಾಗು (ಬಿಡುವವನಾಗು.)

೧೪ "ಜಾಗ್ರತ್ತಿನಲ್ಲಿಯೇ ಸುಷುಪ್ತನಾಗುವುದು ಎಂದರೆ ಜ್ಞಾನ ಬಲದಿಂದ ವಾಸನಾ ನಾಶಮಾಡಿಕೊಳ್ಳುವುದು. "ಅದೇ ಸ್ವಭಾವವೆನ್ನುವುದು. ಅದರ ಪರಿಣಾಮವೇ ಮುಕ್ತಿ" ಎಂದು ಬಲ್ಲವರು ಹೇಳುವರು

೧೫. ಕರ್ತೃ ಕರ್ಮ ಕರಣಗಳಿಲ್ಲ. ದ್ರಷ್ಟೃ ದೃಶ್ಯದರ್ಶನಗಳಿಲ್ಲದ, ರೂಪಾಲೋಕ ಮನಸ್ಕಾರಗಳಿಲ್ಲದ, ಸ್ವಭಾವವೇ ಬ್ರಹ್ಮವು. ಅದೇ ಜಗತ್ತಾಗಿ ಭಾಸವಾಗುವುದು.

ಶಾಂತೇ ಶಾಂತಂ ಪ್ರಕಚತಿ ಪೂರ್ಣೇ ಪೂರ್ಣಂ ವ್ಯವಸ್ಥಿತಂ ।
ದ್ವಿತ್ವೈಕ್ಯರಹಿತೇ ಭಾತಿ ದ್ವಿತ್ವೈಕ್ಯಪರಿವರ್ಜಿತಂ ॥ ೧೬ ॥

ಸತ್ಯಂ ಸತ್ಯೇ ಸ್ಥಿತಂ ಶಾಂತಂ ಸರ್ಗಾತ್ಮನ್ಯಾತ್ಮನಿ ಸ್ವಯಂ ।
ಆಕಾಶಕೋಶಸದೃಶಂ ಶಿಲಾಜಠರಸನ್ನಿಭಂ ॥ ೧೭ ॥

ಸುರತ್ನಜಠರಾಕಾರಂ ಘನಮಪ್ಯಂಬರೋಪಮಂ ।
ಪ್ರತಿಬಿಂಬಮಿವ ಕ್ಷುಬ್ಧಮಪ್ಯಕ್ಷುಬ್ಧಮಸಚ್ಚ ಸತ್ ॥ ೧೮ ॥

ಭವಿಷ್ಯನ್ನವನಿರ್ಮಾಣಂ ಚೇತಸೀವ ಸ್ಥಿತಂ ಪುರಂ ।
ಬ್ರಹ್ಮಬೃಹಂತಭಾರೂಪಮಭೇದೀಕೃತಮಾನಸಂ ॥ ೧೯ ॥

---

೧೬. (ಇದನ್ನು ಹೀಗೆ ತಿಳಿದದ್ದೇ ಆದರೆ) ಬ್ರಹ್ಮವನ್ನು ಶಾಂತವೆಂದು ತಿಳಿದರೆ ಜಗತ್ತೆಲ್ಲವೂ ಶಾಂತವೇ ಆಗುವುದು: ಪೂರ್ಣವೆಂದು ತಿಳಿದರೆ ಪೂರ್ಣವಾಗಿಯೇ ವ್ಯವಸ್ಥಿತವಾಗುವುದು : ದ್ವಿತ್ವ-ಐಕ್ಯ ಎಂಬುದೇನೂ ಇಲ್ಲದುದು ಎಂದು ತಿಳಿದರೆ ದ್ವಿತ್ವ-ಐಕ್ಯ ಏನೂ ಇಲ್ಲದುದಾಗಿಯೇ ಗೋಚರವಾಗುವುದು.

೧೭ ಸತ್ಯವಾಗಿಯೇ ತೋರುತ್ತಿದ್ದರೂ ಸರ್ಗಾತ್ಮಕವಾಗಿ ಇದ್ದರೂ ಸತ್ಯವಾದ ಆತ್ಮನಲ್ಲಿ ಶಾಂತವಾಗಿ ಸ್ಥಿತವಾಗಿಯೇ ಇರುವುದು. ಸರ್ಗಾತ್ಮಕವಾಗಿ ತೋರಿದರೂ ಆಕಾಶಕೋಶ ಸದೃಶವಾಗಿ ಶಿಲಾಜಠರ ಸನ್ನಿಭವಾಗಿ ತನ್ನ ಪಾಡಿಗೆ ತಾನು ನಿರ್ವಿಕಾರವಾಗಿರುವುದು.

೧೮. ಒಳ್ಳೆಯ ಕಾಂತಿಯುಕ್ತವಾದ ರತ್ನದ ಒಳಗಿನಂತೆ, ತಾನು ಸದ್ಘನವಾಗಿದ್ದರೂ ಆಕಾಶದಂತೆ ಸ್ವಚ್ಛವಾಗಿದ್ದು, (ಜಲದಲ್ಲಿ ಕಾಣುವ) ಪ್ರತಿಬಿಂಬದಂತೆ ಕ್ಷುಬ್ಧವಾಗಿದ್ದರೂ ತಾನು ಅಕ್ಷುಬ್ಧವಾಗಿಯೇ ಇದ್ದುಕೊಂಡು ಅಸತ್ತೇ ಆಗಿ ತೋರುತ್ತಿದ್ದರೂ ಸತ್ ಆಗಿಯೇ ಇದ್ದುಕೊಂಡು ಇರುವುದು.

೧೯. ಮುಂದೆ ಮಾಡಬೇಕೆಂದಿರುವ ಕೆಲಸವು ಸಂಕಲ್ಪರೂಪವಾಗಿ ಮನಸ್ಸಿ

ಯಥಾ ಸಂಕಲ್ಪನಗರಂ ಸಂಕಲ್ಪಾನ್ನೈವ ಭಿದ್ಯತೇ ।
ತಥಾಯಂ ಜಗದಾಭಾಸಃ ಪರಮಾರ್ಥಾನ್ನ ಭಿದ್ಯತೇ ॥ ೨೦ ॥

ಹೇಮಪೀಠಮಿವಾನೇಕಭವಿಷ್ಯತ್ಸಂನಿವೇಶವತ್ ।
ಲಕ್ಷ್ಯಮಾಣಮಪಿ ಸ್ಫಾರಂ ಶಾಂತಮವ್ಯಯಮಾಸ್ಥಿತಂ ॥ ೨೧ ॥

ಅಜಸ್ರನಾಶೋತ್ಪಾದಾಢ್ಯಮೇಕರೂಪಮನಾಮಯಂ ।
ಅನಾಶೋತ್ಪಾದಮಜರಮನೇಕಮಿವ ಕಾಂತಿಮತ್ ॥ ೨೨ ॥

---

ನಲ್ಲಿರುವಾಗ ಇರುವಂತೆ, ಮನಸ್ಸು ಎಂಬ ಭೇದವನ್ನು ಪಡೆಯದೆ ಇರುವ ಆ ಬ್ರಹ್ಮವು ಊರ್ಜಿತವಾದ ಕಾಂತಿರೂಪವಾಗಿ, ಇರುವುದು.

೨೦. ಸಂಕಲ್ಪನಗರವು .ಸಂಕಲ್ಪದಿಂದ ಬೇರೆ ಹೇಗೆ ಅಲ್ಲವೋ, ಹಾಗೆಯೇ ಜಗತ್ತಾಗಿ ತೋರುತ್ತಿರುವ ಈ ಬ್ರಹ್ಮಾಭಾಸವು ಪರಮಾರ್ಥದಿಂದ ಕಿಂಚಿತ್ತೂ ಬೇರೆಯಲ್ಲ.

(ಅಭೇದೀಕೃತಂ ಏಕೀಕೃತಂ ಮಾನಸಂ ಯತ್ರ—ತಾ. ಪ್ರ )

೨೧. ಅನೇಕ ಸಂನಿವೇಶಗಳಿಂದ ಬೇರೆಬೇರೆಯಾಗಿ ನಾನಾ ಭೂಷಣಗಳಾಗಿ ಮಾರ್ಪಡುವ ಚಿನ್ನದ ಮುದ್ದೆಯಂತೆ, ಜಗತ್ತಾಗಿ ತೋರುತ್ತಿದ್ದರೂ ಆ ಬ್ರಹ್ಮವು ಶಾಂತವೂ ಅವ್ಯಯವೂ ಆಗಿ ಇರುವುದು.

೨೨. ಒಂದೇ ಸಮನಾಗಿ ನಾಶ, ಜನ್ಮಗಳಿಂದ ಕೂಡಿ ವಿಕಾರಮಯವಾಗಿರುವಂತೆ ತೋರುತ್ತಿದ್ದರೂ ಅದು ಅವಿಕಾರವಾಗಿ ಅನಾಮಯವಾಗಿ ಇರುವುದು. ಅದು ನಾಶವೂ ಜನ್ಮವೂ ಇಲ್ಲದ್ದು. ಅನೇಕದಂತೆ ತೋರುತ್ತಿರುವುದು ಅಷ್ಟೇ !

ಬ್ರಹ್ಮೈವ ಶಾಂತಿಘನಭಾವಗತಂ ವಿಭಾತಿ ।
ಸರ್ಗೋದಯೇನ ವಿಗತಾಸ್ತಮಯೋದಯೇನ
ವ್ಯೋಮೇವ ಶೂನ್ಯವಿಭವೇನ ಗಲತ್ಸ್ವಭಾವ—
ಲಾಭಂ ಪ್ರತಿ ಪ್ರಸಭಮೇವ ನನು ಪ್ರಬುದ್ಧೇ ॥ ೨೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಸ್ವರೂಪವಿಶ್ರಾಂತ್ಯರ್ಥಮುಪದೇಶಕರಣಂ" ನಾಮ ಏಕಚತ್ವಾರಿಂಶಃ ಸರ್ಗಃ**

---

೨೩. ಬ್ರಹ್ಮವೇ ಶಾಂತಿ ಘನ ಭಾವವನ್ನು ಹೊಂದಿದಂತೆ ಮೆರೆಯುವುದು. ಸರ್ಗ ಉದಯಗಳೆಂಬುದು ಇಲ್ಲದೆ, ಅಸ್ತ ಉದಯಗಳಿಲ್ಲದ ಆಕಾಶದಂತೆ ಶೂನ್ಯ ವಿಭವವಾಗಿ, ಸ್ವಭಾವವಾಗಿ, ತೋರುವ ಜಗದಾದಿ ರೂಪಗಳು ಒಂದೂ ಇಲ್ಲದೆ, ಪ್ರಬೋಧ ಸಮಯದಲ್ಲಿ ಬೆಳಗುವುದು

(ಪ್ರಬುದ್ಧೇ ಸತಿ ಶಾಂತಿಘನಭಾವಗತಂ ಬ್ರಹ್ಮೈವ ಪ್ರಸಭಮುದ್ಭೈತ ಸ್ವಭಾವ ಬಲಾದೇವ ವಿಗತಾಸ್ತಮಯೋದಯೇನ ಸರ್ಗಲಕ್ಷಣೇನ ಉದಯೇನ ಸ್ವಾರಾಜ್ಯವಿಭವೇನ ಭಾತಿ। ಯಥಾ ವ್ಯೋಮ ಗಲತ್ಸ್ವಭಾವಲಾಭಂ ಬಾಧಿತ ಸ್ವರೂಪಲಾಭಂ ಕೇಶೋಂಡ್ರುಕ ಗಂಧರ್ವನಗರ ತಲಮಲಿನತಾದಿಕಂ ಪ್ರತಿ ಪ್ರಸಭಂ ಬಲಾದೇವ ಸ್ಫೂರ್ತಿನಿರಾಸೋ ಭಯಪ್ರದೇನ ಸ್ವೀಯಶೂನ್ಯವಿಭವೇನ ವಿಭಾತಿ। ತದ್ವದಿತ್ಯರ್ಥಃ—ತಾ ಪ್ರ.)

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಸ್ವರೂಪವಿಶ್ರಾಂತ್ಯರ್ಥಮುಪದೇಶಕರಣ" ಎಂಬ ನಲವತ್ತೊಂದನೆಯ ಸರ್ಗವು.**

# ದ್ವಿಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಚಿತ್ಕವತ್ಕಚನಂ ಶಾಂತೇ ಯತ್ತತ್ತಸ್ಮಾನ್ನ ಭಿದ್ಯತೇ ।
ಅವ್ಯಾಕೃತಾಮಲತಯಾ ಕ್ವಾತಃ ಸರ್ಗಾದಿಸಂಭವಃ ॥ ೧ ॥

---

# ನಲವತ್ತೆರಡನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ಶಾಂತವಾಗಿರುವ ಬ್ರಹ್ಮದಲ್ಲಿ ಚಿತ್ತದಂತೆ ಆಗುವ ಹೊಳಹು ಯಾವುದುಂಟೋ, ಅದು ಬ್ರಹ್ಮದಿಂದ ಬೇರೆಯಲ್ಲ. ಏಕೆಂದರೆ ಆ ಹೊಳಹು ಕೂಡ ಅವ್ಯಾಕೃತವೂ ಅಮಲವೂ ಆಗಿರುವುದು. ಅದರಿಂದ ಸರ್ಗಾದಿಗಳು ಪ್ರತ್ಯೇಕವಾಗಿ ಹುಟ್ಟಿದುವು ಎನ್ನುವುದು ಹೇಗೆ?

(ಪ್ರಾಗುಕ್ತಾಂ ಜಗತೋ ಬ್ರಹ್ಮಮಾತ್ರತಾಂ ಅನುಭಾವಯಿತುಂ ಜಗದ್ಭೇದ ಕಚನ ಹೇತೋಃ ಚಿತ್ತಸ್ಯ ಚಿದ್ಭೇದಂ ನಿರಸ್ಯತಿ। ಶಾಂತೇ ಕೂಟಸ್ಥ ಆತ್ಮನಿ ಪ್ರಥಮಂ ಯತ್ ಚಿತ್ತವತ್ಕಚನಂ ತತ್ತಸ್ಮಾತ್ಕಚನರೂಪಾತ್ ಚಿದಾತ್ಮನೋ ನ ಭಿಧ್ಯತೇ। ಕುತಃ, ಅವ್ಯಾಕೃತತ್ವಾತ್, ಅಮಲತ್ವಾಚ್ಚ। ನಾಮರೂಪಭೇದಾದ್ಧಿ ಲೋಕೇ ಭೇದೋ ಪ್ರಸಿದ್ಧಃ। ಸಚ ನಾಮ ರೂಪವ್ಯಾಕರಣಾತ್ಪೂರ್ವ ಭೂತ ಜೀವಭಾವಾನುಪ್ರವೇಶೋಪಾಧೌ ಚಿತ್ತೇ ನ ಸಂಭವತಿ। ತಸ್ಯಾವ್ಯಾಕೃತ ತ್ವಾತ್। ಸೂಕ್ಷ್ಮ ತೇಜೋಽನ್ನಾತ್ಮಕ ಲಿಂಗ ಸೃಷ್ಟ್ಯನಂತರಂ ಹಿ "ಸೇಯಂ ದೇವತೈಕ್ಷತಂ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನ ಆತ್ಮನಾನು ಪ್ರವಿಶ್ಯ ನಾಮ ರೂಪೇವ್ಯಾಕರವಾಣಿ" ತದ್ವ್ಯಾಕರಣಂ ಶ್ರೂಯತೇ। ತಥಾ ಅಮಲತ್ವಾಚ್ಚ ಚಿತೋ ನ ಬಿಧ್ಯತೇ। ಚಿದಪ್ಯಮಲಾಚಿತ್ತಮಪಿ। ನ ಚ ತಾದೃಶ ಯೋಃ ಪ್ರಭಾಕಾಶಯೋರಿವ ಭೇದಃ ಕೇನಚಿಲ್ಲಕ್ಷಯಿತುಂ ಶಕ್ಯತೇ। ಚಿತ್ತಸ್ಯ ಚಿದ್ಭೇದ ನಿರಾಸಾದೇವ ತದಧೀನೋ ಜಗದ್ಭೇದಃ ಸುತರಾಂ ನಿರಸ್ತ ಇತ್ಯಾಹ ಕ್ವಾತ ಇತಿ—ತಾ. ಪ್ರ.)

ಚಿತ್ತದೀಪೇ ಗತೇ ಯಾಂತಿ ಭ್ರಾಂತಿವದ್ಭ್ರಾಂತಿಖೇ ಸ್ಥಿತೇ ।
ರೂಪಾಲೋಕಮನಸ್ಕಾರಸಂವಿದೋಽಂಬುದ್ರವೋರ್ಮಯಃ ॥ ೨ ॥

ನಿರಸ್ತಕರಣಾಪೇಕ್ಷಂ ಮರುತಃ ಸ್ಪಂದನಂ ಯಥಾ ।
ಯಥಾ ವಿಸರಣಂ ಭಾಸಸ್ತಥಾ ಜಗದಿದಂ ಪರೇ ॥ ೩ ॥

ದ್ರವತ್ವಮಿವ ಕೀಲಾಲೇ ಶೂನ್ಯತ್ವಮಿವ ಚಾಂಬರೇ ।
ಸ್ಪಂದತ್ವಂ ಮರುತೀವೇದಂ ಕಿಮಪ್ಯಾತ್ಮಮಯಂ ಪರೇ ॥ ೪ ॥

ಮಹಾಚಿತಿ ಮಹಾಕಾಶೇ ಯದಿದಂ ಭಾಸತೇ ಜಗತ್ ।
ತಚ್ಚಿತ್ತ್ವಮೇವ ಕಚತಿ ನಿರ್ಮಲತ್ವಂ ಮಣಾವಿವ ॥ ೫ ॥

ಯಥಾ ದ್ರವತ್ವಂ ಪಯಸಿ ಯಥಾ ಶೂನ್ಯತ್ವಮಂಬರೇ ।
ಯಥಾ ಪ್ರಸ್ಪದನಂ ವಾಯೌ ಮಹಾಚಿತಿ ತಥಾ ಜಗತ್ ॥ ೬ ॥

---

೨. ಭ್ರಾಂತ್ಯಾಕಾಶವು ಇರುವವರೆಗೂ ಇರುವ ರೂಪಾಲೋಕ ಮನಸ್ಕಾರ ಸಂವಿತ್ತುಗಳು ನೀರು ಇರುವವರೆಗೂ ಇರುವ ದ್ರವತ್ವ, ತರಂಗತ್ವಗಳಂತೆ ಇದ್ದು, ಚಿತ್ತದೀಪವು ಅಳಿಸಿ ಹೋಗುವ ಭ್ರಾಂತಿಯಂತೆ ಚಿತ್ತದೀಪವು ಅಳಿಸಿ ಹೋಗಲು, ತಾವೂ ಅಳಿಸಿ ಹೋಗುವುವು

೩. ವಾಯು ಸ್ಪಂದ ಮಾಡಲು ಬೇರೊಂದು ಕರಣವನ್ನು ಅಪೇಕ್ಷಿಸುವುದೇನು ? ಪ್ರಕಾಶವು ಹರಡಲು ಅದಕ್ಕೆ ಮತ್ತೊಂದು ಕರಣವು ಬೇಕೇನು ? ಹಾಗೆಯೇ ಈ ಪರವಸ್ತುವಿನಲ್ಲಿ ನಿರಸ್ತಕರಣಾಪೇಕ್ಷವಾಗಿ ಈ ಜಗತ್ತು ಇರುವುದು

೪. ಜಲದಲ್ಲಿರುವ ದ್ರವತ್ವದಂತೆ, ಆಕಾಶದಲ್ಲಿರುವ ಶೂನ್ಯತ್ವದಂತೆ, ವಾಯುವಿನ ವ್ಯಾಪಾರದಂತೆ, ಪರವಸ್ತುವಿನಲ್ಲಿರುವ ಸರ್ವವೂ ಅನಿರ್ವಚನೀಯವಾದರೂ ಆತ್ಮಮಯವೇ!

೫. ಮಹಾಚಿತ್ತಿನಲ್ಲಿ, ಮಹಾಕಾಶದಲ್ಲಿ, ಭಾಸವಾಗುವ ಈ ಜಗತ್ತು ಎನ್ನುವುದು ಯಾವುದುಂಟೋ ಅದೂ ಚಿತ್ತ್ವವೇ! ನಿರ್ಮಲವಾದ ಮಣಿಯಲ್ಲಿ ಇರುವ ನಿರ್ಮಲತ್ವವೇ ಹೊಳೆಯುವ ಹಾಗೆ ಇದು.

೬. ಜಲದಲ್ಲಿ ದ್ರವತ್ವವಿರುವಂತೆ, ಆಕಾಶದಲ್ಲಿ ಶೂನ್ಯತ್ವವಿರುವಂತೆ, ವಾಯುವಿನಲ್ಲಿ ಸ್ಪಂದವಿರುವಂತೆ ಮಹಾಚಿತಿಯಲ್ಲಿ ಜಗತ್ತು ಇರುವುದು.

ವೇತ್ತಿ ವಾಯುರ್ಯಥಾ ಸ್ಪಂದಂ ತಥಾ ವೇತ್ತಿ ಜಗಚ್ಚಿತಿಃ ।
ನ ದ್ವೈತೈಕ್ಯಾದಿಭೇದಾನಾಂ ಮನಾಗಪ್ಯತ್ರ ಸಂಭವಃ ॥ ೭ ॥

ಅವಿವೇಕವಿವೇಕಾಭ್ಯಾಂ ಭಾಸುರಂ ಭಂಗುರಂ ಜಗತ್ ।
ಬೋಧೇ ಸದೈವ ಸದ್ರೂಪಮಭಾಸುರಮಭಂಗುರಂ ॥ ೮ ॥

ಜ್ಞಪ್ತಿಮಾತ್ರಾದೃತೇ ಶುದ್ಧಾದಾದಿಮಧ್ಯಾಂತವರ್ಜಿತಾತ್ ।
ನಾನ್ಯದಸ್ತೀಹ ನಿರ್ಣೀತಂ ಮಹಾಚಿನ್ಮಾತ್ರರೂಪಿಣಃ ॥ ೯ ॥

ತತ್ಕಸ್ಯಚಿಚ್ಛಿವಂ ಶಾಂತಂ ಕಸ್ಯಚಿದ್ಬ್ರಹ್ಮ ಶಾಶ್ವತಂ ।
ಕಸ್ಯಚಿಚ್ಛೂನ್ಯತಾಮಾತ್ರಂ ಕಸ್ಯಚಿಜ್ಜ್ಞಪ್ತಿಮಾತ್ರಕಂ ॥ ೧೦ ॥

---

೭. ವಾಯುವು ತನ್ನ ಸ್ಪಂದವನ್ನು ಅರಿಯುವಂತೆ ಜಗತ್ತನ್ನು ಚಿತಿಯು ಅರಿತುಕೊಳ್ಳುವುದು ಆ ಅರಿವಿನಲ್ಲಿ ದ್ವೈತ, ಐಕ್ಯ, ಎಂಬ ಭೇದಗಳ ಸಂಭವವು ಹೇಗೆ ಹೇಗೂ ಇಲ್ಲ.

೮. ಅವಿವೇಕದಿಂದ ಜಗತ್ತು ಭಾಸುರವಾಗುವುದು. ವಿವೇಕದಿಂದ ಭಂಗುರ ವಾಗುವುದು. ಬೋಧವು ಜನಿಸಿದರೆ ಆ ಕೂಡಲೇ ಅದು ಸದ್ರೂಪವಾಗುವುದು. ಆಗ ಅದು ಭಾಸುರವೂ ಅಲ್ಲ· ಭಂಗುರವೂ ಅಲ್ಲ ಎನ್ನುವಂತಾಗುವುದು.

೯. ಆದಿ ಮಧ್ಯಾಂತ ವಿವರ್ಜಿತವಾಗಿ, ಶುದ್ಧವಾಗಿ, ಜ್ಞಪ್ತಿಮಾತ್ರವಾಗಿರುವ ಮಹಾಚಿನ್ಮಾತ್ರ ರೂಪಿಯಾದ ಬ್ರಹ್ಮಕ್ಕಿಂತಲೂ ಅನ್ಯವಾದ ಮತ್ತೇನೂ ಇಲ್ಲ ವೆಂಬುದೇ ನಿರ್ಣಯವು.

೧೦. ಆ ಬ್ರಹ್ಮವು ಕೆಲವರಿಗೆ ಶಿವವು: ಶಾಂತವು: ಇನ್ನು ಕೆಲವರಿಗೆ ಶಾಶ್ವತ ವಾದ ಬ್ರಹ್ಮವು. ಇನ್ನು ಕೆಲವರಿಗೆ ಶೂನ್ಯತಾ ಮಾತ್ರವು: ಮತ್ತೆ ಕೆಲವರಿಗೆ ಜ್ಞಪ್ತಿಮಾತ್ರವು.

(ತತ್ರೈವ ವೇದಾನುಸಾರಿಣಾಮವೇದಾನುಸಾರಿಣಾಂ ಚ ವಿಚಾರಯತಾಂ ವಾದಿನಾಂ ಯಥಾರ್ಥ-ಅಯಥಾರ್ಥ-ರೂಪೈಃ ಕಲ್ಪನಾ ಭೇದಾಃ ಪ್ರವೃತ್ತಾಃ— ಇತ್ಯಾಹ—ತಾ. ಪ್ರ)

ತದನಂತಾತ್ಮ ಚಿದ್ರೂಪಂ ಚೇತ್ಯತಾಮಿವ ಭಾವಯುತ್ ।
ಸ್ವಸಂಸ್ಥಮೇವ ಜ್ಞೇಯತ್ವಮಜ್ಞತ್ವಮಿವ ಗಚ್ಛತಿ ॥ ೧೧ ॥

ಚಿತ್ತಯಾ ನಾಸ್ತಿ ಸತ್ತಾ ಚ ಚಿತ್ತತಾ ನಾಸ್ತಿ ತಾಂ ವಿನಾ ।
ವಿನಾವಿನಾ ಯಥಾ ವಾಯೋರ್ಯಥಾ ಸ್ಪಂದೇಷು ಕಾರಣಂ ॥ ೧೨ ॥

ತಥಾ ಮಹಾಚಿತೋಽಚ್ಛಾಯಾಃ ಸರ್ಗಸಂವಿತ್ತಿವೃತ್ತಿಷು ।
ನಿತ್ಯಂ ಸತ್ವಮಸತ್ವಂ ವಾ ಹೇತೋರನ್ಯಾನಪೇಕ್ಷಣಾತ್ ॥ ೧೩ ॥

---

೧೧. ಆ ಬ್ರಹ್ಮವು ಅನಂತಾತ್ಮವು. ಚಿದ್ರೂಪವು. ಭಾವಪೂರ್ಣವಾಗಿರುವುದರಿಂದ ವ್ಯಾಪಾರಸಂಪನ್ನವಾಗಿ ಕಾಣುವುದು: ಆದರೂ, ಸ್ವಸಂಥವಾಗಿಯೇ ಇರುವುದು. ಜ್ಞೇಯವು ತಾನಾಗಿದ್ದರೂ ಅಜ್ಞವಾಗಿ ಕಾಣುವುದು.

(ತತ್ರೈವ ಅನಾದ್ಯವಿದ್ಯಾದಿ ದೃಶ್ಯಾಕಾರತಾಧ್ಯಾಸ ಇತ್ಯಾಹ—ತಾ. ಪ್ರ.)

೧೨. ಚಿತ್ತತಾ ಇಲ್ಲದೆ ಸತ್ತಾ ಇಲ್ಲ: ಸತ್ತಾ ಇಲ್ಲದೆ ಚಿತ್ತತಾ ಇಲ್ಲ. ಹೀಗೆ ಚಿತ್ತತಾ, ಸತ್ತಾ ಎರಡೂ ವಿನಾ–ಅವಿನಾ ಆಗಿ, ವಾಯುವು ಸ್ಪಂದಗಳಿಗೆ ಕಾರಣವಾಗಿರುವಂತೆ ಇರುವುವು.

(ತತ್ರ ಚಿತ್ತ್ವಬಲಾದೇವಾಧ್ಯಸ್ಯ ಸ್ಫೂರ್ತೇಶ್ಚಿತ್ತಯಾ ವಿನಾ ಜ್ಞೇಯಸ್ಯ ಸತ್ತಾ ನಾಸ್ತಿ, ತಾಂ ಸತ್ತಾಂ ವಿನಾ ಚ ತಸ್ಯ ಚಿತ್ತತಾ ಚಿತ್ತಸ್ಯ ನಾಸ್ತಿ । ಯಥಾ ವಿನಾಶೂನ್ಯಾತ್ಮನಾ ಕೂಟಸ್ಥೇನ ಆಕಾಶೇನ ವಿನಾ ವಾಯೋಃ ಕಾರಣಂ ನಾಸ್ತಿ । ವಾಯುಂ ಚ ವಿನಾ ಸ್ಪಂದೇಷು ಕಾರಣಂ ನಾಸ್ತಿ ತದ್ವದಿತ್ಯರ್ಥಃ—ತಾ. ಪ್ರ.)

೧೩. ಮೇಲೆ ಹೇಳಿದಂತೆ, ಶುದ್ಧವಾಗಿರುವ ಮಹಾಚಿತ್ತಿನ ಸರ್ಗ ಸಂವಿತ್ತಿ ವೃತ್ತಿಗಳಲ್ಲಿ ·ಯಾವಾಗಲೂ ಸತ್ತ್ವ ಅಸತ್ತ್ವಗಳು ಇದ್ದೇ ಇರುವುವು. ಹಾಗೆ ಇರಲು ಅನ್ಯವಾದ ಕಾರಣವು ಯಾವುದೂ ಬೇಕಾಗಿಲ್ಲ.

(ತಥಾ ನಿತ್ಯ ಬ್ರಹ್ಮ ಸತ್ತಾಧೀನ ಸತ್ತಾಕಾಸು ಸರ್ಗಭ್ರಾಂತಿಷು ಅಧಿಷ್ಠಾನಮಪೇಕ್ಷ್ಯ ನಿತ್ಯಂ ಸತ್ವಂ ಸ್ವರೂಪತಸ್ತು ನಿತ್ಯಮಸತ್ವಂ ಚೇತಿ ದ್ವೇಧಾಪಿ ಶಾಸ್ತ್ರೇ "ಸದೇವ ಸೋಮ್ಯೇದಂ ನೇಹನಾನಾ" ಇತಿ ಚ ವ್ಯಪದೇಶ ಇತ್ಯರ್ಥಃ ॥ "ಅನ್ಯಸ್ಯ ಹೇತೋರನಪೇಕ್ಷಣಾತ್" —ತಾ ಪ್ರ.)

ಇತ್ಯತ್ರಾರ್ಥೋಽಭವಿಷ್ಯತ್ಸದ್ವಿತ್ವೈಕತ್ವಾಸ್ತಿತಾವಶಾತ್ ।
ಕೋಽತ್ರ ಕಲ್ಪಯಿತಾ ದ್ವಿತ್ವಮೇಕತ್ವಂ ವಾ ಮಹಾಂಬರೇ ॥ ೧೪ ॥

ವಿಷ್ವಗ್ವಿಶ್ವಮಪಾರೈಕಪರಮಾಕಾಶಕೋಶತಾ ।
ಯಥಾ ಸ್ಪಂದನಿಲದ್ವಿತ್ವಂ ಶಾಬ್ದಮೇವ ನ ವಾಸ್ತವಂ ॥ ೧೫ ॥

ವಿಶ್ವವಿಶ್ವೇಶ್ವರದ್ವಿತ್ವಂ ತಥೈವಾಸನ್ಮಯಾತ್ಮಕಂ ।
ಸದೇವಾಸಂಭವದ್ದ್ವಿತ್ವಂ ಮಹಾಚಿನ್ಮಾತ್ರಕಂ ಚ ಯತ್ ॥ ೧೬ ॥

ವಿಶ್ವಭಾಸಂ ತದೇವೇದಂ ನ ವಿಶ್ವಂ ಸನ್ನ ವಿಶ್ವತಾ ।
ದೇಶಕಾಲಾದಿಮತ್ತ್ವೇನ ಕದಾಚಿದ್ಧೇವ್ನಿ ಸತ್ಯತಾ ॥ ೧೭ ॥

---

೧೪. ಆದರಿಂದ, ಚಿಜ್ಜಡಗಳೆಂಬ ದ್ವಿತ್ವಗಳೂ ಸತ್ ಎಂಬ ಏಕತ್ವವೂ ಕೂಡ ಅಸ್ತಿತಾವಶವಾಗಿಯೇ ಆಗುವುದರಿಂದ ಸತ್ವ-ಅಸತ್ತ್ವ ಎಂಬ ಅರ್ಥವು ಇಲ್ಲವೇ ಇಲ್ಲವು. ಮಹಾಕಾಶದಲ್ಲಿ ಏಕತ್ವ ದ್ವಿತ್ವಗಳನ್ನು ಕಲ್ಪಿಸಲು ಯಾರಿಗೆ ತಾನೇ ಸಾಧ್ಯ ?

೧೫ ವಾಯು-ಸ್ಪಂದಗಳೆಂಬಲ್ಲಿ ದ್ವಿತ್ವವು ಹೇಗೆ ಶಬ್ದವಾಗಿದ್ದರೂ ವಾಸ್ತವ ವಲ್ಲವೋ ಹಾಗೆಯೇ ವಿಷ್ವಕ್, ವಿಶ್ವ ಎಂಬ ಎರಡೂ ಕೂಡ ಅಪಾರವೂ ಏಕವೂ ಆಗಿರುವ ಆಕಾಶದ ಕೋಶವೇ ಸರಿ.

೧೬. ಹಾಗೆಯೇ ವಿಶ್ವ-ವಿಶ್ವೇಶ್ವರವೆಂಬ ದ್ವಿತ್ವವೂ ಕೂಡ ಅಸ್ಮನಯವು. ಸತ್ ಯಾವಾಗಲೂ ಮಹಾಚಿತ್ಮಾತ್ರವು ಅದರಲ್ಲಿ ದ್ವಿತ್ವವು ಯಾವಾಗಲೂ ಸಂಭವವೇ ಇಲ್ಲ

೧೭. ಅದೇ ವಿಶ್ವವಾಗಿ ಆ ಭಾಸವಾಗುವುದು. ಅದರಿಂದ ದೃಶ್ಯವಾಗಿ ಕಾಣುವ ವಿಶ್ವವು ಸತ್ ಅಲ್ಲ: ವಿಶ್ವತೆಯೂ ಪ್ರತ್ಯೇಕವಾಗಿಲ್ಲ. ದೇಶಕಾಲಾದಿ ಗಳಿಂದ ಕೂಡಿರುವುದರಿಂದ ಅದನ್ನು ನಂಬಿದವರಿಗೆ ಹೇಮದಲ್ಲಿರುವ ಸತ್ಯತೆಯಂತೆ ಆಗಾಗ ಸತ್ಯವಾಗಿ ಕಾಣುವುದು

(ಅಥವಾ ಬ್ರಹ್ಮದೃಷ್ಟ್ಯಾ ಅನೃತಸ್ಯಾಪಿ ವಿಶ್ವಸ್ಯ ಖನ್ಯೂನ ದೇಶಕಾಲ ಸ್ವಕಾರ್ಯಪ್ರೇಕ್ಷಯಾಽಧಿಕ ದೇಶಕಾಲ ವ್ಯಾಪ್ತ್ಯಾ ಸತ್ಯತಾಮಾಶಂಕ್ಯ ಪರಿ ಹರತಿ—ತಾ. ಪ್ರ.)

ಕಟಕತ್ವಸ್ಯ ಭಿನ್ನಸ್ಯ ವಿಶ್ವಸ್ಯ ಚ ತಥಾ ಪರೇ ।
ದ್ವಿತ್ವೈಕ್ಯಾಸಂಭವೇ ಚಾತ್ರ ಕಾರ್ಯಕಾರಣತಾ ಕುತಃ ॥ ೧೮ ॥

ಸ್ಯಾಚ್ಚೇತ್ತತ್ಕಲ್ಪನಾಮಾತ್ರಮೇವೈತನ್ನಾನ್ಯವಸ್ತುತಾ ।
ಶೂನ್ಯತಾ ನಭಸೀವಾತ್ರ ದ್ರವತ್ವಮಿವ ಚಾಂಭಸಿ ॥ ೧೯ ॥

ಖೇ ಖಲೇಖಾಪ್ಯಭಿನ್ನೇವ ಕಿಲಾಸ್ತಿ ಜಗದಾದಿತಾ ।
ಯದ್ರೂಪಂ ಬ್ರಹ್ಮ ತದ್ರೂಪಂ ಜಗತ್ಕ್ವಾತ್ರ ದ್ವಿತೈಕತೇ ॥ ೨೦ ॥

ಯದ್ರೂಪಂ ವ್ಯೋಮ ತದ್ರೂಪಮೇವಂ ಶೂನ್ಯಂ ಕಿಲಾಖಿಲಂ ।
ಏಕಾತ್ಮನಿ ತತೇ ಸ್ವಚ್ಛೇ ಚಿನ್ಮಾತ್ರೇ ಸರ್ವರೂಪಿಣಿ ॥ ೨೧ ॥

---

೧೮. (ದೇಶಕಾಲಾದಿಗಳನ್ನೊಪ್ಪಿಕೊಂಡಾಗ ಮಾತ್ರ ಕಾಣುವ) ಕಾರ್ಯ ಕಾರಣತೆಯೇ ಇಲ್ಲವಾಗಿರಲು, ಚಿನ್ನದಿಂದ ಭಿನ್ನವಾದ ಕಟಕತ್ವವಾಗಲಿ, ಬ್ರಹ್ಮ ದಿಂದ ಭಿನ್ನವಾದ ವಿಶ್ವವಾಗಲಿ, ದ್ವಿತ್ವ, ಐಕ್ಯ, ಸಂಭವವೇ ಇಲ್ಲದ ಪರವಸ್ತು ವಿನಲ್ಲಿ ಕಾಣುವುದು ಹೇಗೆ ?

೧೯. ಆ ಕಾರ್ಯಕಾರಣತೆಯನ್ನು ಕಲ್ಪನಾ ಮಾತ್ರವೆಂದಾದರೂ ಒಪ್ಪಿಕೊಳ್ಳಿ ಎನ್ನುವುದಾದರೆ, ಅದಕ್ಕೆ ಅನ್ಯವಸ್ತುತ್ವವಿಲ್ಲವಾಗುವುದು. ಆಗ ಅದು ಆಕಾಶದಲ್ಲಿ ರುವ ಶೂನ್ಯತೆಯಂತೆ, ನೀರಿನಲ್ಲಿರುವ ದ್ರವತ್ವದಂತೆ ಅನನ್ಯವಾಗುವುದು.

೨೦. ಆಕಾಶವು ಬೇರೆ, ಆಕಾಶದಲ್ಲಿರುವ ಲೇಖೆಯು ಬೇರೆ ಎಂಬುದೂ ಉಂಟೇನು ? ಅದರಂತೆಯೇ ಜಗದಾದಿಗಳೆಲ್ಲವೂ! ಬ್ರಹ್ಮವು ಯಾವ ರೂಪವಾಗಿ ದ್ದರೆ ಜಗತ್ತೂ ತದ್ರೂಪವಾಗಿಯೇ ಇರುವುದು. ಹೀಗಿರಲು ದ್ವಿತಾ, ಏಕತಾ, ಎನ್ನುವುದೂ ಉಂಟೇನು ?

೨೧. ಸ್ವಚ್ಛವೂ ಚಿನ್ಮಾತ್ರವೂ ಸರ್ವರೂಪಿಯೂ ಆದ ಆತ್ಮನು ತಾನೊಬ್ಬನೇ ಒಬ್ಬನು. ಎಲ್ಲೆಲ್ಲಿಯೂ ತುಂಬಿರಲು, ಅಖಿಲವೂ ಅವನೇ ಅಲ್ಲದೆ ಮತ್ತೇನಾದೀತು ? ವ್ಯೋಮವು ಯಾವ ರೂಪವಾಗಿದ್ದರೆ ಶೂನ್ಯತೆಯೂ ಅದೇ ರೂಪವಾಗಿರುವುದ ರಲ್ಲವೆ ?

ಶಿಲಾಪುತ್ರಕಸೇನಾಯಾಂ ಪಾಷಾಣತ್ವ ಇವಾಸ್ಥಿತೇ ।
ಕಾರ್ಯಕಾರಣವೈಚಿತ್ರ್ಯಂ ಕಥಂ ಸಂಭವತಿ ಕ್ವ ವಾ ॥ ೨೨ ॥

ಕಥಮವ್ಯೋಮತಾ ವ್ಯೋಮ್ನಿ ದ್ವಿತೀಯಾಸಂಭವಾದ್ಭವೇತ್ ।
ಪ್ರತಿಭಾತ್ಮೈವ ಭಾರೂಪೋ ಭಾತಿ ಸರ್ಗೋ ಮಹಾಚಿತಿ ॥ ೨೩ ॥

ಪುತ್ರಿಕೇವೋಪಲೋತ್ಕೀರ್ಣಾ ತನ್ಮಯತ್ವಾತ್ತದಾತ್ಮಿಕಾ ।
ಸಾಧೋ ಯಥಾಸ್ಥಿತಸ್ಯೈವಂ ಬುದ್ಧ್ವಾ ವಿಶ್ವಂ ಪ್ರಲೀಯತೇ ॥ ೨೪ ॥

ಕಾಷ್ಠಮೌನದಶಾಭಾಸಂ ಸಂಸಾರಮವಶಿಷ್ಯತೇ ।
ಯಥಾ ನಿಮೀಲಿತಾಕ್ಷಸ್ಯ ರೂಪಾಲೋಕಮನೋಭ್ರಮಃ ॥ ೨೫ ॥

---

೨೨. ಶಿಲಾಪುತ್ರಕ ಸೇನೆಯಲ್ಲಿ ಪಾಷಾಣತ್ವ ಇರುವಂತೆ, ಅಖಿಲಕ್ಕೂ ಅಧಿಷ್ಠಾನವಾಗಿ ಆತ್ಮನಿರಲು ಕಾರ್ಯಕಾರಣತ್ವವೆಂಬ ವೈಚಿತ್ರ್ಯವು ಹೇಗೆ ಎಲ್ಲಿಂದ ಸಂಭವಿಸೀತು ?

೨೩. ವ್ಯೋಮದಲ್ಲಿ ಅವ್ಯೋಮತೆಯು ಸಂಭವಿಸುವುದು ಎಂದರೆ, ಅದು ಹೇಗೆ ಸಾಧ್ಯ ? ಎರಡನೆಯದು ಸಾಧ್ಯವಿಲ್ಲದೆಡೆ ಎರಡನೆಯದು ಹುಟ್ಟುವುದಾದರೂ ಎಂತು? ಹಾಗೆಯೇ ಮಹಾಚಿತ್ತಿನಲ್ಲಿ ಅಚಿತ್ತಾದ ಇನ್ನೇನೂ ಇರಲು ಸಾಧ್ಯವಿಲ್ಲ. ಅದರಿಂದ ಮಹಾಚಿತ್ತಿನಲ್ಲಿ ಈ ಸರ್ಗವು ಪ್ರತಿಭಾಸ್ವರೂಪನಾದ ಆತ್ಮನ ಭಾಸರೂಪವಾಗಿ ಕಾಣುವುದು ಎನ್ನಬೇಕು.

೨೪. ಕಲ್ಲಿನಲ್ಲಿ ಕೆತ್ತಿರುವ ಬೊಂಬೆಯು, ತನ್ಮಯವಾದ್ದರಿಂದ ತದಾತ್ಮಕವು ಹೇಗೋ ಹಾಗೆಯೇ ಈ ವಿಶ್ವವೆಲ್ಲವೂ ಬ್ರಹ್ಮವೇ ಎಂದು ತಿಳಿದರೆ, ಎಲೈ ಸಾಧುವೇ, ವಿಶ್ವವೆಲ್ಲವೂ ಪ್ರಲೀನವಾಗುವುದು.

೨೫. ಆಗ ಸಂಸಾರವೆಲ್ಲವೂ ಕಾಷ್ಠಮೌನದಶಾಭಾಸವಾಗುವುದು. ಕಣ್ಣು ಮುಚ್ಚಿಕೊಂಡವನಿಗೆ ರೂಪಾಲೋಕ ಮನೋಭ್ರಮಗಳು ಹೇಗೋ ಹಾಗಾಗುವುದು.

ಸ್ವಪ್ನೇ ಜಾಗ್ರತ್ಯನಗ್ರಸ್ಥೋಽಪ್ಯಸನ್ನೇವಾಸ್ತಿ ಭಾವನಾತ್ ।
ತಥೈವೋನ್ಮೀಲಿತಾಕ್ಷಸ್ಯ ರೂಪಾಲೋಕಮನೋಭ್ರಮಃ　　॥ ೨೬ ॥

ಸ್ವಪ್ನೇ ಜಾಗ್ರತ್ಯನಗ್ರಸ್ಥೋಽಪ್ಯಸನ್ನೇವಾಸ್ತಿ ಭಾವನಾತ್ ।
ಭಾವನೋಪಶಮಂ ಕೃತ್ವಾ ಶಿಲೀಭೂಯ ಯಥಾಸ್ಥಿತಂ　　॥ ೨೭ ॥

ಅಶಿಲೀಭೂತಮೇವಾಂತಃ ಸ್ವಭಾವಂ ಸಮಮಾಸ್ಯತಾಂ ।
ಆವಿವೇಕೋಪಹಾರೇಣ ಯಥಾಪ್ರಾಪ್ತಾರ್ಥಪೂಜನೈಃ　　॥ ೨೮ ॥

---

(ಕಾಷ್ಠಮೌನಂ ಬಾಹ್ಯಮಾನಸ ಸರ್ವಚೇಷ್ಟಾಶೂನ್ಯತ್ವಂ ತಾದೃಶಯಾ ದಶಯಾ ಆಭಾಸಂ ಸ್ಫುರ್ತಿ ಬ್ರಹ್ಮ ಸಂಸಾರಮವಧೂಯ ಶಿಷ್ಯತೇ । ಭಾವನಾ ತ್ಯಾಗಾದಸ್ಪಂದಾವಸ್ಥಿತಿಮಾತ್ರೇಣ ವಿಧೂಯತೇ ಇತ್ಯಾಹ—ತಾ. ಪ್ರ)

೨೬ ಎದುರಿಗೆ ಇಲ್ಲದಿದ್ದರೂ, ಅಸತ್ತೇ ಆಗಿದ್ದರೂ, (ದೃಶ್ಯವು ಉಂಟು) ಎಂದು ಅಸ್ತಿ ಭಾವನ ಮಾಡುವುದರಿಂದ ಕಣ್ಣು ಬಿಟ್ಟುಕೊಂಡಿರುವವನಿಗೆ ಸ್ವಪ್ನ ದಲ್ಲಿಯಾದರೂ ಜಾಗ್ರತ್ತಿನಲ್ಲಿಯಾದರೂ ರೂಪಾಲೋಕ, ಮನೋಭ್ರಮಗಳು ಉಂಟಾಗುವುವು.

೨೭ ಸ್ವಪ್ನದಲ್ಲಿಯಾದರೂ ಜಾಗ್ರತ್ತಿನಲ್ಲಿಯಾದರೂ ಎದುರಿಗೆ ಇಲ್ಲದಿ ರುವುದೇ ಆಗಿರಲಿ, ಅಸತ್ತೇ ಆಗಿರಲಿ, ಅಸ್ತಿಭಾವನೆಯಿಂದ (ಉಂಟು ಎಂದು ಭಾವಿಸುವುದರಿಂದ) ಭಾವನೋಪಶಮವನ್ನು ಮಾಡಿ, ಶಿಲೆಯಂತಾಗಿ, ಯಥಾ ಸ್ಥಿತವಾಗಿರಲಾಗುವುದು.

೨೮ ಅಂತಃ ಸ್ವಭಾವವು ಶಿಲೆಯಾಗದಂದೆ ಸಮವಾಗಿರಲಿ; ಅದನ್ನು ಸಾಧಿಸುವುದಕ್ಕೆ ವಿವೇಕವೆಂಬ ಉಪಹಾರವನ್ನು ಒಪ್ಪಿಸಬೇಕು. ಯಥಾ ಪ್ರಾಪ್ತ ವಾಗಿ ಬರುವ ಅರ್ಥವನ್ನು ಅಂಗೀಕರಿಸಿ ಗೌರವಿಸಬೇಕು.

(ಚಿದೇಕರಸತ್ವೇನ ಶಿಲಾವೈಲಕ್ಷಣ್ಯಾದಂತಃ ಅಶಿಲೀಭೂತಂ ಸ್ವಭಾವಮವ ಲಂಬ್ಯ ಆಸ್ಯತಾಂ । ತಾದೃಶಸ್ಥಿತ್ಯನುಕೂಲ ವಿವೇಕ ವೈರಾಗ್ಯಾದಿ ಸಾಧನಾಭ್ಯಾಸ ಏವ ಪರಮೇಶ್ವರಸ್ಯ ಆತ್ಮನಃ ಪರಮೋತ್ಕೃಷ್ಟಾ ಪೂಜಾ—ಇತ್ಯಾಹ—। ಆ ಸಮಂ ತಾತ್ ಸರ್ವತೋಯೋ ವಿವೇಕಸ್ತಲ್ಲಕ್ಷಣೇನೋಪಹಾರೇಣ ಉಪಚಾರೇಣ ॥ —ತಾ. ಪ್ರ.)

ಬೋಧಾಯ ಪೂಜ್ಯತಾಂ ಬುದ್ಧ್ಯಾ ಸ್ವಭಾವಃ ಪರಮೇಶ್ವರಃ ।
ವಿವೇಕಪೂಜಿತಃ ಸ್ವಾತ್ಮಾ ಸದ್ಯಃ ಸ್ಫಾರವರಪ್ರದಃ ॥ ೨೯ ॥

ರುದ್ರೋಪೇಂದ್ರಾದಿಪೂಜಾತ್ರ ಜರತ್ತೃಣಲವಾಯತೇ ।
ವಿಚಾರಶಮಸತ್ಸಂಗ ಬಲಿಪುಷ್ಪೈಕಪೂಜಿತಃ ॥ ೩೦ ॥

ಸದ್ಯೋ ಮೋಕ್ಷಫಲಂ ಸಾಧೋ ಸ್ವಾತ್ಮೈವ ಪರಮೇಶ್ವರಃ ।
ಸತ್ಯಾಲೋಕನಮಾತ್ರೈಕ ಪೂಜಿತೋಽನುತ್ತಮಾರ್ಥದಃ ॥ ೩೧ ॥

ಯತ್ರಾಸ್ತ್ಯಾತ್ಮೇಶ್ವರಸ್ತತ್ರ ಮೂಢಃ ಕೋಽನ್ಯಂ ಸಮಾಶ್ರಯೇತ್ ॥ ೩೨ ॥

---

೨೯. ಸ್ವಭಾವನಾಗಿರುವ ಪರಮೇಶ್ವರನನ್ನು ಬುದ್ಧಿಪೂರ್ವಕವಾಗಿ ಬೋಧವು ಲಭಿಸಲೆಂದು ಪೂಜೆಮಾಡು. ವಿವೇಕದಿಂದ ಪೂಜಿತನಾದ ಆತ್ಮನು ಸದ್ಯಃ ಕೂಡಲೇ, ಸುಂದರವಾದ ವರಗಳನ್ನು ಕೊಡುವನು.

(ಸ್ಫಾರಂ ನಿರತಿಶಯಾನಂದ ಲಕ್ಷಣಂ ವರಂ—ತಾ. ಪ್ರ )

೩೦–೩೧. ರುದ್ರ, ಉಪೇಂದ್ರ, ಮೊದಲಾದವರ ಪೂಜೆಯು ಆತ್ಮಪೂಜೆಗೆ ಹೋಲಿಸಿದರೆ, ಕುಳಿತು ಹೋಗಿರುವ ಹುಲ್ಲಿನ ಚೂರಿಗೆ ಸಮವು. ವಿಚಾರ, ಶಮ, ಸತ್ಸಂಗ, ಬಲಿ, ಪುಷ್ಪ, ಇವುಗಳಿಂದ ಪೂಜಿತನಾದರೆ, ಎಲೈ ಸಾಧುವೆ, ಸ್ವಾತ್ಮನೇ ಆಗಿರುವ ಪರಮೇಶ್ವರನು ಸದ್ಯದಲ್ಲಿಯೇ ಮೋಕ್ಷಫಲವನ್ನು ಕೊಡುವನು. ಆ ಪರಮೇಶ್ವರನಿಗೆ ಬೇಕಾದುದು ಸತ್ಯಾಲೋಕನವೆಂಬ ಪೂಜೆಯೊಂದೇ ! ಆ ಪೂಜೆಯನ್ನು ಒಪ್ಪಿಸಿದರೆ ಅನುತ್ತಮವಾದ ಅರ್ಥವನ್ನು ಆತನು ಕರುಣಿಸುವನು

೩೨. ಎಲ್ಲಿ ಆತ್ಮೇಶ್ವರನು ಇರುವನೋ ಅಲ್ಲಿ ಯಾವ ಮೂಢನು ತಾನೇ ಮತ್ತೊಬ್ಬರನ್ನು ಸಮಾಶ್ರಯಿಸುವನು ?

(ಅನ್ಯಮನಾತ್ಮಭೂತಂ ತಟಸ್ಥಮೀಶ್ವರಂ । 'ಅಥಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸೌ ಅನ್ಯೋಽಹಮಸ್ಮೀತಿ ನ ಸವೇದ ಯಥಾ ಪಶುರೇವ ಸ ದೇವಾನಾಂ" ಇತಿ ಶ್ರುತೇರಿತಿ ಭಾವಃ। ನನು ತಟಸ್ಥೇಶ್ವರಃ ಪೂಜನೇನ ಪ್ರಸನ್ನ ಏನಂ ಶಸ್ತ್ರಾಹಿ ವಿಷವಹ್ನಿ ಪ್ರಭೃತಿಭ್ಯ ಉಪಘಾತಕೇಭ್ಯಃ ಸರ್ವತೋ ರಕ್ಷಿಷ್ಯತಿ ಕೂಟಸ್ಥಾತ್ಮಾ ಕಿಂ ಕರಿಷ್ಯತಿ ತತ್ರಾಹ–ಸತ್ಸಂಗೇತಿ ।—ತಾ. ಪ್ರ.)

ಸತ್ಸಂಗಶಮಸಂತೋಷವಿವೇಕಾಪೂಜಿತಾತ್ಮನಃ ।
ಶಿರೀಷಕುಸುಮಾಯಂತೇ ಶಸ್ತ್ರಾಹಿವಿಷವಹ್ನಯಃ ॥ ೩೩ ॥

ದೇವಾರ್ಚನತಪಸ್ತೀರ್ಥದಾನಾನ್ಯತಿಕೃತಾನ್ಯಪಿ ।
ಭಸ್ಮಾಯಂತೇ ನಿರರ್ಥತ್ವಾದವಿವೇಕಾಮಹಾತ್ಮನಾಂ ॥ ೩೪ ॥

ಏತಾನ್ಯಪಿ ವಿವೇಕೇನ ಕ್ರಿಯಂತೇ ಸಫಲಾನಿ ಚೇತ್ ।
ವಿವೇಕ ಏವ ತತ್ಕಸ್ಮಾತ್ಕುತ್ಸ್ಫುಟಮಂತರ್ನ ಸಾಧ್ಯತೇ ॥ ೩೫ ॥

ಯಥಾಭೂತಾರ್ಥವಿಜ್ಞಾನಾದ್ವಾಸನೋಪರಮೋ ಪರೇ ।
ಯತ್ನೋ ವಿವೇಕಶಬ್ದಾಖ್ಯೋ ಭವತ್ಯಾತ್ಮಪ್ರಸಾದತಃ ॥ ೩೬ ॥

---

೩೩. ಸತ್ಸಂಗ, ಶಮ, ಸಂತೋಷ, ವಿವೇಕಗಳಿಂದ ಚೆನ್ನಾಗಿ ಆತ್ಮಪೂಜೆಯನ್ನು ಮಾಡಿದವನಿಗೆ ಶಸ್ತ್ರ, ಅಹಿ, ವಿಷ, ವಹ್ನಿ, ಇವು ಶರೀಷ ಕುಸುಮದಂತಾಗುವುವು.

೩೪. ದೇವಾರ್ಚನ, ತಪಸ್ಸು, ತೀರ್ಥಯಾತ್ರೆ, ದಾನ, ಮೊದಲಾದವುಗಳನ್ನು ಎಷ್ಟು ಮಾಡಿದರೂ ವಿವೇಕವಿಲ್ಲದ ಅಮಹಾತ್ಮರಿಗೆ, ಅವುಗಳೆಲ್ಲವೂ ವ್ಯರ್ಥವಾಗಿ ಭಸ್ಮವಾಗಿ ಹೋಗುವುವು.

(ಕಿಂಚ ಅವಿವೇಕಿಭಿಃ ಕೃತೇಷು ದೇವತಾರ್ಚನಾದಿಷ್ವ ಪರಾಧಾವಶ್ಯಂ ಭಾವೇನ ಸ್ವೈಷ್ಫಲ್ಯಾನರ್ಥಯೋರವಶ್ಯಂ ಭಾವಾತ್ ತತ್ರಾಪಿ ದೇಶಕಾಲದ್ರವ್ಯ ಪಾತ್ರಕರ್ತ್ರಾದಿ ವಿಶುದ್ಧಿ ವಿವೇಕಃ ಶ್ರದ್ಧಾ ಭಕ್ತಿ ಶಾಂತಿದಾಂತ್ಯಾದಯೋ ಯದ್ಯಾವಶ್ಯಕಾಸ್ತರ್ಹ್ಯಕ್ಲೇಶೇ ಮಹಾಫಲೇ ಆತ್ಮದರ್ಶನೇ ಏವ ತೇ ಕುತೋ ನೋಪಯೋಜ್ಯಂತೇ ಇತ್ಯಾಹ—ತಾ. ಪ್ರ)

೩೫ ಇವುಗಳನ್ನು ವಿವೇಕದಿಂದ ಮಾಡಿದ್ದಾದರೆ ಅವೂ ಸಫಲವಾಗುವುವು. ಅದರಿಂದ ಏತಕ್ಕಾಗಿ ವಿವೇಕವನ್ನು ತನ್ನೊಳಗೆಯೇಕೆ ಮೊದಲು ಸಾಧಿಸುವುದಿಲ್ಲ?

೩೬. ಯಥಾ ಭೂತಾರ್ಥವನ್ನು ಚೆನ್ನಾಗಿ ತಿಳಿದು ಪರವಸ್ತುವಿನಲ್ಲಿ ವಾಸನೆಯು ಉಪರಮಿಸುವಂತೆಮಾಡುವ ಯತ್ನವು ಯಾವುದುಂಟೋ ಅದೇ ವಿವೇಕವು. ಅದು ಆತ್ಮ (ಚಿತ್ತ) ಪ್ರಸಾದದಿಂದ ಲಭಿಸುವುದು.

ತಥಾತಥಾ ವಿವೇಕೋಽಂತರ್ವೃದ್ಧಿಂ ನೇಯಃ ಶಮಾಮೃತೈಃ ।
ಯಥಾಯಥಾ ಪುನಃ ಶೋಷಮುಪಯಾತಿ ನ ವಿಭ್ರಮೈಃ ॥ ೩೭ ॥

ದೇಹಸತ್ತಾಮನಾದೃತ್ಯ ಯಥಾಭೂತಾರ್ಥದರ್ಶನಾತ್
ಲಜ್ಜಾಂ ಭಯಂ ವಿಷಾದೇರ್ಷ್ಯೇ ಸುಖಂ ದುಃಖಂ ಜಯೇತ್ಸಮಂ ।
ಜಗದಾದಿಶರೀರಾದಿ ನಾಸ್ತ್ಯೇವಾದೌ ಕುತೋಽದ್ಯ ತತ್ ॥ ೩೮ ॥

ಕಾರ್ಯಂ ಚೇತ್ಕಾರಣಸ್ಯೈತತ್ತಥಾಪಿ ಬ್ರಹ್ಮಮಾತ್ರಕಂ ।
ಪ್ರತಿಭಾಮಾತ್ರಮೇವಾಚ್ಛಂ ನತು ಜ್ಞಪ್ತೇರ್ಘಟಾದಿ ಸತ್ ॥ ೩೯ ॥

---

(ಆತ್ಮ ಪ್ರಸಾದತಃ, ನಿಷ್ಕಾಮಾನುಷ್ಠಿತ ಯಜ್ಞದಾನಾದಿ ಸಾಧ್ಯಚಿತ್ತ ಪ್ರಸಾದಾತ್—ತಾ ಪ್ರ.)

೩೭. ಶಮವೆಂಬ ಅಮೃತವನ್ನು ಎರೆದು, ಅದು ಭ್ರಾಂತಿ ವಿಭ್ರಾಂತಿಗಳಿಂದ ಶೋಷವನ್ನು ಹೊಂದದಿರುವಂತೆ ನೋಡಿಕೊಳ್ಳುತ್ತ, ತನ್ನೊಳಗೆ ವಿವೇಕವು ವೃದ್ಧಿಯಾಗುವಂತೆ ನೋಡಿಕೊಳ್ಳಬೇಕು.

೩೮. ದೇಹಸತ್ತೆಯನ್ನು ಲಕ್ಷಿಸದೆ, ಯಥಾ ಭೂತವಾಗಿರುವ ಅರ್ಥವನ್ನು ಸಾಕ್ಷಾತ್ಕರಿಸಿಕೊಂಡು, ಲಜ್ಜ, ಭಯ, ವಿಷಾದ, ಈರ್ಷ್ಯ, ಸುಖ, ದುಃಖ, ಇವುಗಳನ್ನು ಸಮಭಾವನೆಯಿಂದ ಗೆಲ್ಲಬೇಕು. ಜಗದಾದಿಯು ಶರೀರಾದಿಯೂ ಮೊದಲಲ್ಲೇ ಇರಲಿಲ್ಲವೆಂದ ಮೇಲೆ ಈಗೆಲ್ಲಿಯದು ?

(ದೇಹಸತ್ತಾನಾದರೇ ಉಪಯಂ ವಿಚಾರಂ ದರ್ಶಯತಿ—ಜಗದಾದೀತಿ । ಶರೀರಸ್ಯ ಆದಿಕಾರಣಭೂತಂ ಜಗತ್ ಆದಿಪದಾತ್ತತ್ಕಾರಣಂ ಚ ಆದೌ ನಾಸ್ತ್ಯೇವ। ಯಚ್ಚಾದೌನಾಸ್ತಿ ತದದ್ಯಕುತೋ ಭವೇತ್ । "ನಾಸತೋ ವಿದ್ಯತೇ ಭಾವಃ ಇತಿ ನ್ಯಾಯಾತ್ ॥—ತಾ ಪ್ರ )

೩೯. ಜಗದಾದಿಗಳು ಕಾರಣದಿಂದ ಆದ ಕಾರ್ಯವೆನ್ನುವುದಾದರೂ ಕಾರಣವಾದ ಬ್ರಹ್ಮಕ್ಕೂ ಕಾರ್ಯವಾದ ಜಗದಾದಿಗಳಿಗೂ ಭೇದವನ್ನು ಹೇಳಲಾಗುವುದಿಲ್ಲವಾದ್ದರಿಂದ ಜಗದಾದಿಗಳು ಕೇವಲ ಪ್ರಾತಿಭಾಸಿಕವೆಂದೇ ಹೇಳಬೇಕು. ಜ್ಞಪ್ತಿಯಿಂದ ಭಿನ್ನವಾಗಿ ಪ್ರತ್ಯೇಕ ಸತ್ತಾ ಇರುವ ಘಟಾದಿಗಳೂ ಉಂಟೇನು ?

ಜ್ಞಾನಾತ್ಮಿಕೈವ ಪ್ರತಿಭಾ ಜ್ಞಪ್ತಿರೇವಾಖಿಲಂ ಜಗತ್ ।
ಜ್ಞಪ್ತಿರಪ್ಯಾತ್ಮತತ್ತ್ವಶ್ರೀಃ ಪರಿಜ್ಞಾತೋಪಶಾಮ್ಯತಿ ॥ ೪೦ ॥

ಜ್ಞೇಯಾಭಾವೇ ತ್ವನಿರ್ವಾಚ್ಯಾ ಶಿಷ್ಯತೇ ಶಾಶ್ವತಂ ಶಿವಂ ।
ಅಶರೀರಾದ್ಯವಿಶ್ವಾತ್ಮ ಸರ್ವಂ ಶಾಂತಮಿದಂ ತತಂ ॥ ೪೧ ॥

---

("ನನು ಸದೇವ ಸೌಮ್ಯೇದಮಗ್ರ ಆಸೀತ್" ಇತಿ ಬ್ರಹ್ಮಾತ್ಮನಾ ಆದೌ ಸದೇವ ಕಾರಣಸ್ಯ ಬ್ರಹ್ಮಣಃ ಕಾರ್ಯಮಸ್ತು, ತತ್ರಾಹ-ಕಾರ್ಯಂ ಚೇದಿತಿ । ತಥಾಪಿ ಬ್ರಹ್ಮಮಾತ್ರಕಮೇವ ನ ಸತೋಽಭಿದ್ಯತೇ । ಸದ್ಭೇದೇ ಅಸತಾಪತ್ತೇಃ । ಅದ್ವಯು ಕಾರ್ಯಸ್ಯ ಕಾರಣೇ ಅದ್ವಯತ್ವಾ ವಿಘಾತಕತ್ವೇನ ಭೇದ ಪ್ರತಿಭಾಸಸ್ಯ ವಿಕಲ್ಪ ಮಾತ್ರತ್ವಾದಿತ್ಯಾಹ ಪ್ರತಿಭಾವಮಾತ್ರಮೇವೇತಿ । ಜ್ಞಪ್ತೇಃ ಪ್ರಥಗಿತಿಶೇಷಃ ॥ —ತಾ. ಪ್ರ)

೪೦. ಪ್ರತಿಭಾ ಎನ್ನುವುದು ಜ್ಞಾನಾತ್ಮಕವು ಜಗತ್ತೆಲ್ಲವೂ ಜ್ಞಪ್ತಿಯು ಜ್ಞಪ್ತಿಯೆಂಬುದೂ ಆತ್ಮ ತತ್ವದ ವೈಭವವೇ! ಅದೂ ಹಾಗೆಂದು ತಿಳಿದು ಕೂಡಲೇ ಉಪಶಾಂತವಾಗುವುದು.

(ವಿಕಲ್ಪಪ್ರತಿಭಾಪಿ ಚಿದಾಭಾಸ ಜ್ಞಾನಾತ್ಮಿಕೈವೇತಿ, ನೈವಾಖಿಲಂ ಜಗದಿ ತ್ಯರ್ಥಃ । ನಾಚಿದಾಭಾಸಲಕ್ಷಣಾ ಜ್ಞಪ್ತಿರಪ್ಯಜ್ಞಾತಾತ್ಮ ತತ್ವಸ್ಯೇವ ದರ್ಪಣ ದೃಷ್ಟ್ವಾ ಮುಖಶ್ರೀರಿವ ಪ್ರತ್ಯಗಾತ್ಮಮಾತ್ರತ್ವೇನ ದೃಷ್ಟಮಾತ್ರಾ ಭೇದ ಕೋಪಾದಿ-ಅಪಗಮೇನ ಉಪಶಾಮ್ಯತಿ—ತಾ. ಪ್ರ.)

೪೧. ಜ್ಞೇಯವು ಪ್ರತ್ಯೇಕವಾಗಿ ಒಂದಿದೆಯೆಂಬುದು ಇಲ್ಲವಾದ ಮೇಲೆ, ಅನಿರ್ವಾಚ್ಯವಾದ ಸ್ಥಿತಿಯು ಒಂದೇ ಉಳಿಯುವುದು. ಅದೇ ಶಾಶ್ವತವೂ ಶಿವವೂ ಆದ ಅಶರೀರಿಯೂ, ಅವಿಶ್ವಾತ್ಮ (ಅಖಂಡ)ವೂ ಆದ ಬ್ರಹ್ಮವು. ಅದು ಸರ್ವವು ಶಾಂತವು: ಇದಂ ಆಗಿ ಹರಡಿಕೊಂಡಿರುವುದೆಲ್ಲ ಅದೇ!

ಜ್ಞಾನಜ್ಞೇಯಜ್ಞಪ್ತಿಮುಕ್ತಂ ದೃಷನ್ಮೌನಮಿವ ಸ್ಥಿತಂ ।
ಶಾಂತಾಂತಃಕರಣಾಃ ಸ್ವಸ್ಥಾಃ ಶಿಲಾಪುತ್ರಕಕೋಶವತ್ ॥ ೪೨ ॥

ಚಲಂತಶ್ಚಾಲಯಂತಶ್ಚ ಜ್ಞರೂಪಾ ಏವ ತಿಷ್ಠತ ।
ಅಜ್ಞೇಯಜ್ಞಾತೃಸದ್ರೂಪಾಃ ಸದಸತ್ಸಾರ ರೂಪಿಣಃ ॥ ೪೩ ॥

ಆಕಾಶಕೋಶವಿಶದಾ ಭವತಾ ಭವಭೂಮಯಃ ।
ಯಥಾಸ್ಥಿತಂ ಚ ತಿಷ್ಠಂತಿ ಗಚ್ಛಂತಶ್ಚ ಯಥಾಗತಂ ॥ ೪೪ ॥

ಯಥಾಪ್ರಾಪ್ತೈಕ ಕರ್ಮಾಣಃ ಸಂಪದ್ಯಂತೇ ಬುಧಾಃ ವರಂ ।
ಅಥವಾ ಸರ್ವಸಂತ್ಯಾಗ ಶಾಂತಾಂತಃಕರಣೋಜ್ಜ್ವಲಾಃ ।
ಏಕಾಂತೇಷ್ವೇವ ತಿಷ್ಠಂತು ಚಿತ್ರಕರ್ಮಾರ್ಪಿತಾ ಇವ ॥ ೪೫ ॥

ಸಂಕಲ್ಪಶಾಂತೌ ಸಂಕಲ್ಪಪುರವತ್ಸರ್ವದಾಖಿಲಂ ।
ಸ್ವಪ್ನವಚ್ಚ ಪ್ರಬುದ್ಧಸ್ಯ ಸದೈವಾಸ್ತಂ ಗತಂ ಜಗತ್ ॥ ೪೬ ॥

---

೪೨-೪೩. ಜ್ಞಾನ, ಜ್ಞೇಯ, ಜ್ಞಪ್ತಿ ಎಂಬ ಭೇದಗಳಿಲ್ಲದೆ ಶಿಲಾಮೌನದಂತಿರುವ ಸ್ಥಿತಿಯು ಅದು. ಶಾಂತಾಂತಃಕರಣರಾಗಿ, ಸ್ವಸ್ಥರಾಗಿ, ಶಿಲಾಪುತ್ರಿಕೆಯ ಕೋಶದಂತೆ ಇದ್ದುಕೊಂಡು ಚಲಿಸುವವರೂ ಆಗಿ ಕೇವಲ ಜ್ಞಾನರೂಪರಾಗಿ ಇರಿರಿ, ಜ್ಞೇಯವೂ ಜ್ಞಾತೃತ್ವವೂ ಅಲ್ಲದ ಸದ್ರೂಪರಾಗಿ, ಸತ್-ಅಸತ್ ಇವೆರಡಕ್ಕೂ ಸಾರವಾದುದು ಯಾವುದೋ ಆ ರೂಪವಾಗಿ ಇರಿರಿ.

೪೪. ಆ ಕೋಶದಂತೆ ಕಿಂಚಿತ್ತೂ ಅಂಟದೆ ಇರುವ ನಿನಗೆ ಸಂಸಾರ ಚಕ್ರಗಳು, ಇದ್ದರೆ ಇರಲಿ, ಹೋದರೆ ಹೋಗಲಿ (ಹೇಗಾದರೂ ನಷ್ಟವಿಲ್ಲ)

೪೫. ತಿಳಿದವರು ಯಥಾ ಪ್ರಾಪ್ತವಾದ ಕರ್ಮವನ್ನು ಮಾಡುವವರಾಗಿ ಇರುವರು. ಅಥವಾ ಸರ್ವವನ್ನೂ ಚೆನ್ನಾಗಿ ತ್ಯಾಗ ಮಾಡಿ ಶಾಂತವಾಗಿರುವ ಅಂತಃಕರಣದಿಂದ ಉಜ್ವಲವಾಗಿ ಏಕಾಂತದಲ್ಲಿ ಚಿತ್ರಾರ್ಪಿತ ಪ್ರತಿಮೆಗಳಂತೆ ಕುಳಿತಿರಲಿ.

೪೬. ಸಂಕಲ್ಪಪುರವು ತನಗೆ ಕಾರಣವಾದ ಸಂಕಲ್ಪವು ಶಾಂತವಾದಾಗ ತಾನೂ ಶಾಂತವಾಗುವಂತೆ, ಎಚ್ಚರವಾದವನಿಗೆ ಸ್ವಪ್ನವು ಇಲ್ಲವಾಗುವಂತೆ, ಅಖಿಲವಾದ ಜಗತ್ತೂ ಅಸ್ತಂಗತವಾಗಿ, ಯಾವಾಗಲೂ ಹಾಗೆಯೇ ಅಸ್ತಂಗತವಾಗಿಯೇ ಇರುವುದು.

ಸನೇತ್ರರೂಪಾನುಭವಂ ಜಾತಿತೋಽಂಧ ಇವ ಭ್ರಮೈಃ ।
ನಿರ್ವಾಣಂ ವರ್ಣಯನ್ನಜ್ಞಸ್ತಾಪತೇಽಂತರ್ನ ಶಾಮ್ಯತಿ ॥ ೪೭ ॥

ಕಲ್ಪನಾಂಶೋಪದೇಶೇನ ಲೋಕೋಽವಿದ್ಯಾಮಯಾತ್ಮನಾ ।
ಯೇನ ಕೇನಚಿದಜ್ಞತ್ವಾತ್ಕೃತಾರ್ಥೋಽಸ್ಮೀತಿ ಮನ್ಯತೇ ॥ ೪೮ ॥

---

(ಸರ್ವದಾ ಸಮಾಧಿಕಾಲೇ ವ್ಯವಹಾರ ಕಾಲೇಚ ಪ್ರಬುದ್ಧಸ್ಯ ಅವಿಚ್ಛಿನ್ನ ಪ್ರಬೋಧಸ್ಯ ಪುರಿಸಃ ಸಂಕಲ್ಪಪುರವತ್ ಸ್ವಪ್ನವಚ್ಚ ಸದೈವ ತುಚ್ಛತ್ವಾದಸ್ತಂ ಗತಃ ॥—ತಾ ಪ್ರ)

೪೭ ಸನೇತ್ರನಿಗೆ ಲಭಿಸುವ ರೂಪಾನುಭವವನ್ನು ಜಾತ್ಯಂಧನು ವರ್ಣಿಸಿದರೆ ಅದು ಭ್ರಮವೇ ಅಲ್ಲದೆ ಸತ್ಯವು ಹೇಗಾದೀತು ? ಅದರಂತೆ ಅಜ್ಞನು ನಿರ್ವಾಣವನ್ನು ವರ್ಣಿಸುವುದು, ಹಾಗೆ ಅವನು ವರ್ಣಿಸಿದರೂ ಅದರಿಂದ ಅವನಿಗೆ ತಾಪವು ತಪ್ಪುವುದಿಲ್ಲ: ಶಾಂತಿಯಾಗುವುದಿಲ್ಲ

(ಪ್ರಬೋಧಶ್ಚ ಸನೇತ್ರಸ್ಯ ರೂಪಾನುಭವವತ್ ಪರಿನಿಶ್ಚಿತಃ ಪೂರ್ಣಾನಂದಾನುಭವಪರ್ಯಂತಃ ನಿರ್ವಾಣೇ ಉಪಯುಜ್ಯತೇ। ನ ಜಾತ್ಯಂಧರೂಪಕಲ್ಪನಾ ತುಲ್ಯಃ ಪರೋಕ್ಷ ಕಲ್ಪ ಇತ್ಯಾಶಯನೇನಾಹ—ತಾ ಪ್ರ)

೪೮. ಮನಸ್ಸಿಗೆ ತೋರಿದಂತೆ ಕಲ್ಪನೆಗಳನ್ನು ಮಾಡಿಕೊಂಡು ಉಪದೇಶ ಮಾಡುತ್ತಾ ತನ್ನೊಳಗೆ ಬೇಕಾದ ಹಾಗೆ ಅವಿದ್ಯೆಯನ್ನು ತುಂಬಿಕೊಂಡು, ಅಜ್ಞಾನಾಗಿರುವುದರಿಂದ ಯೇನಕೇನಚಿತ್ ಎಷ್ಟಾದರೆ ಅಷ್ಟೇ ಸಾಕು ಎಂದುಕೊಂಡು ಕೃತಾರ್ಥನಾದೆನೆಂದು ಲೋಕವು ತಿಳಿದುಕೊಳ್ಳುವುದು.

(ಅಜ್ಞಃ ಕತಿಪಯ ವಾಕ್ಯಶ್ರವಣೇನೈವ ತತ್ವಜ್ಞೋಽಹಂ ಸಂಪನ್ನ ಇತಿ ಭ್ರಮೇ ನಿರ್ವಾಣಂ ವರ್ಣಯರ್ನ ಸನೇತ್ರಸ್ಯ ರೂಪಾನುಭವಂ ವರ್ಣಯರ್ನ ಜಾತ್ಯಂಧ ಇವಾಂತರ್ಮಾನಾಪಮಾನಾದಿ ಭಿ ಸ್ತಾಪ್ಯತೇ ನತು ತತ್ವಜ್ಞವತ್ ಶಾಮ್ಯತಿ । ಶಾಂತಿ ಸುಖಮನು ಭವತಿ—ಇತ್ಯರ್ಥಃ । ಅಂಧಗೋಲಾಂಗೂಲ ನ್ಯಾಯೇನ ಅಸದುಪದೇಶ ಪ್ರತಾರಿತಾನಾಮಪಿ ಕೃತಾರ್ಥತಾ ಭ್ರಾಂತಿರ್ಲೋಕೇ ಪ್ರಸಿದ್ಧಾ-ಇತ್ಯಾಹ—ತಾ. ಪ್ರ)

ಅಕೃತಾರ್ಥಃ ಕೃತಾರ್ಥತ್ವಂ ಜಾನನ್ಮೌರ್ಖ್ಯವಿಮೋಹಿತಃ ।
ವಿಜ್ಞಾಸ್ಯತ್ಯಕೃತಾರ್ಥತ್ವಂ ಕ್ಷಣಾಂತರಕದರ್ಥನೈಃ ॥ ೪೯ ॥

ಉಪಾಯಂ ಕಲ್ಪನಾತ್ಮಾನಮನುಪಾಯಂ ವಿದುರ್ಬುಧಾಃ ।
ದುಃಖದತ್ವಾನ್ನಿಮೇಷೇಣ ಭಾವಾಭಾವೈಷಣಭ್ರಮೈಃ ॥ ೫೦ ॥

ಜಗದ್ಭ್ರಮಂ ಪರಿಜ್ಞಾಯ ಯದವಾಸನಮಾಸಿತಂ ।
ವಿರಸಾಶೇಷವಿಷಯಂ ತದ್ಧಿ ನಿರ್ವಾಣಮುಚ್ಯತೇ ॥ ೫೧ ॥

ಆಖ್ಯಾಯಿಕಾರ್ಥಪ್ರತಿಭಾನಮೇತ್ಯ
ಸಂವೇತ್ಸ್ಯಚಿದ್ವಾರಿಭರಾದ್ದ್ರವಾತ್ಮಾ ।
ಅವೇದ್ಯಚಿದ್ರೂಪಮಶೇಷಮಚ್ಛಂ
ಪಶ್ಯನ್ನಿನಿರ್ವಾಸಿ ಜಗತ್ಸ್ವರೂಪಂ ॥ ೫೨ ॥

---

೪೯. ಅಕೃತಾರ್ಥನಾದರೂ ಮೌರ್ಖ್ಯದಿಂದ ವಿಮೂಢನಾಗಿ ಕೃತಾರ್ಥನೆಂದುಕೊಂಡರೂ ಕ್ಷಣಾಂತರದಲ್ಲಿ ಲಭಿಸುವ ಕದರ್ಥನ (ದುಃಖ)ಗಳಿಂದ ತನ್ನ ಅಕೃತಾರ್ಥತ್ವವನ್ನು ತಿಳಿಯುವವನಾಗುವನು.

೫೦. ಕಲ್ಪನಾರೂಪವಾಗಿರುವ ಈ ಉಪಾಯವನ್ನು ಬ್ರಹ್ಮಜ್ಞಾನಕ್ಕೆ ಉಪಾಯವಲ್ಲವೆಂದೇ ತಿಳಿದವರು ಹೇಳುವರು: ಏಕೆಂದರೆ, ಮರುಕ್ಷಣದಲ್ಲಿಯೇ ದುಃಖವನ್ನು ಕೊಡುವುದು: ಆ ದುಃಖವು ಭಾವ, ಅಭಾವ, ಈಷಣ, ರೂಪವಾಗಿರುವ ಭ್ರಮಗಳಿಂದ ಉತ್ಪನ್ನವಾಗುವುದು.

೫೧. (ಆದರಿಂದ) ಜಗತ್ತು ಭ್ರಮವೆಂಬುದನ್ನು ಚೆನ್ನಾಗಿ ತಿಳಿದುಕೊಂಡು, ವಾಸನಾರಾಹಿತ್ಯವನ್ನು ಸಂಪಾದಿಸಿಕೊಂಡು ಎಲ್ಲ ವಿಷಯಗಳಲ್ಲಿಯೂ ವಿರಸನು ಎಂದರೆ ಆಶೆಯಿಲ್ಲದವನಾಗಿರುವುದೇ ನಿರ್ವಾಣವು.

(ತಸ್ಮಾತ್ ಪ್ರಾಗುಕ್ತಂ ಸಮ್ಯಗ್ಜ್ಞಾನಮೇವ ವಾಸನಾ ನಾಶಪರ್ಯಂತಂ ದೃಢೀಕಾರ್ಯಂ ತದೇವ ನಿರ್ವಾಣಂ ಪರ್ಯವಸ್ಯತೀತ್ಯಾಶಯೇನಾಹ....ವಿರಸಾ ಅಶೇಷಾ ಹೈರಣ್ಯಗರ್ಭಪದಾಂತಾ ವಿಷಯಾಯತ್ರ—ತಾ. ಪ್ರ.)

೫೨. (ಎಲೈ ರಾಮನೆ, ನಾನು ಹೇಳಿರುವ ನಾನಾ) ಆಖ್ಯಾಯಿಕೆಗಳ ಅರ್ಥವನ್ನು ನೀನು ಪ್ರತಿಭಾನವಾಗಿ (ಎಂದರೆ ಬಹಿರ್ಮುಖವಾಗಿ ತಿಳಿದೆಕೊಂಡೆಯಾದರೆ, (ಜಗತ್) ನೀರಿನ ಪ್ರವಾಹದಲ್ಲಿ ಬಿದ್ದು ದ್ರವಾತ್ಮನಾಗಿ

ಜಾತ್ಯಂಧರೂಪಾನುಭವಾನುರೂಪಂ
　　ಯಥಾಗಮೈರ್ಬುದ್ಧಮಬೋಧರೂಪಂ ।
ಅಧಸ್ಪದೀಕೃತ್ಯ ತದಂತರೇಽಸ್ಮಿ-
　　ನ್ಪ್ರೋಥೇ ನಿಪತ್ಯಾನುಭವೋ ಭವಾಭೂಃ　　॥ ೫೩. ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ನಿರ್ವಾಣೋಪದೇಶೋ" ನಾಮ
ದ್ವಿಚತ್ವಾರಿಂಶಃ ಸರ್ಗಃ

---

ಅದರಲ್ಲಿ ಬೆರೆತು ಹೋಗುವೆ. ಅಂತರ್ಮುಖವಾಗಿ ತಿಳಿದುಕೊಂಡರೆ ಅವೇದ್ಯ ವಾದ ಚಿದ್ರೂಪವೇ ಈ ಎಲ್ಲವೂ ಆಗಿರುವುದು: ಅದು ಅಚ್ಛವು (ನಿರಂಜನವು) ಎಂಬುದನ್ನು ಕಂಡು ಜಗತ್ಸ್ವರೂಪವನ್ನು ಅಸತ್ತೆಂದು ಕಳೆದು ನಿರ್ವಾಣವನ್ನು ಪಡೆಯುವೆ.

೫೩. ಯಾವುದನ್ನು ಆಗಮಗಳಿಂದ ಮಾತ್ರ ತಿಳಿದುಕೊಳ್ಳುವೆಯೋ ಅದು ಅಬೋಧರೂಪವು: ಜಾತ್ಯಂಧನು ಪಡೆಯುವ ರೂಪಾನುಭವಕ್ಕೆ ಸಮವಾದುದು. ಅದರಿಂದ (ಅಪರೋಕ್ಷ ವಸ್ತುವಿನಲ್ಲಿ ಪರೋಕ್ಷ ಜ್ಞಾನವು ಭ್ರಾಂತಿಮಾತ್ರವಾದುದ ರಿಂದ) ಅನುಭವ ಶೂನ್ಯವಾದ ಉಪದೇಶವಾಕ್ಯಗಳಿಂದ ಕೃತಾರ್ಥನಾಗುವೆನೆಂಬ ಭಾವವನ್ನು ತುಳಿದು, ಆಂತರವಾದ ಪ್ರತ್ಯಗಾತ್ಮವಸ್ತುವನ್ನು ನಿತ್ಯವೂ ಅನುಭವಿ ಸುತ್ತಿರುವೆನು ಎಂಬ ಜ್ಞಾನವನ್ನು ಪಡೆದು, ಜನ್ಮಾದಿ ಶೂನ್ಯನಾಗು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ನಿರ್ವಾಣೋಪದೇಶ" ಎಂಬ
ನಲವತ್ತೆರಡನೆಯ ಸರ್ಗವು.

# ತ್ರಿಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಅಹಂತಾದಿಜಗಚ್ಚೇದಂ ಪರಿಜ್ಞಾನಾದಸತ್ಯತಾಂ ।
ಯಾತಿ ಸಾನುಭವೋ ಮೋಹಾತ್ಸತ್ಯಮೇವಾನ್ಯಥಾಧಿಯಾಂ ॥ ೧ ॥

ಅಜ್ಞಾನಜ್ವರಮುಕ್ತಸ್ಯ ಬೋಧಶೀತಲಿತಾತ್ಮನಃ ।
ಏತದೇವ ಭವೇಚ್ಚಿಹ್ನಂ ಯದ್ಭೋಗಾಂಬು ನ ರೋಚತೇ ॥ ೨ ॥

---

# ನಲವತ್ಮೂರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ಅಹಂತಾದಿಯಾಗಿರುವ ಈ ಜಗತ್ತೆಲ್ಲವೂ ಪರಿಜ್ಞಾನದಿಂದ ಅಸತ್ಯವಾಗುವುದು. ಮೋಹದಿಂದ, ಬೇರೆದಾರಿಯನ್ನು ಹಿಡಿಯುವವರಿಗೆ ಆತ್ಮಸ್ವರೂಪವು ಭೋಗ್ಯಾನುಭವರೂಪವಾಗಿ ಕಾಣುವುದರಿಂದ,ಆ ಭೋಗ ಭೋಗ್ಯಗಳ ರೂಪವಾಗಿರುವ ಜಗತ್ತು ಸತ್ಯವಾಗಿ ಕಾಣುವುದು

(ಆಂತರಮಹಂತಾದಿ, ಬಾಹ್ಯಮಿದಂ ಜಗಚ್ಚ, ಭೋಕ್ತೃ ಭೋಗ್ಯರೂಪಂ ಸರ್ವಂ ತದನುಭವರೂಪ ಭೋಗ ತತ್ವಪರಿಜ್ಞಾನಾದ ಸತ್ಯತಾಂ ಯಾತಿ । ಚಿದವಸಾನೋಹಿ ಭೋಗಃ, ಸಹಿ ಭೋಕ್ತೃಭೋಗ್ಯ ಸಂಬಂಧಾನು ಭವಃ, ತೇನ ಅನುಭವೇನ ಹಿ ಮೋಹಾದಾತ್ಮ ವಿನಿಮಯೇನಾನ್ಯಥಾಧಿಯಾಂ ಭೋಕ್ತರ್ಯೇವಾತ್ಮಬುದ್ಧಿಮತಾಂ ಮೂಢಾನಾಮಾತ್ಮಾನಾನುಭವೋ ನ ಸ್ವತಃ, ಇತಿ ಸತ್ಯಂ ಬ್ರಹ್ಮೈವ ಸ, ಇತ್ಯರ್ಥಃ—ತಾ. ಪ್ರ.)

೨ ಅಜ್ಞಾನವೆಂಬ ಜ್ವರವು ಬಿಟ್ಟಿತು ಎನ್ನುವುದಕ್ಕೆ ಬೋಧವನ್ನು ಪಡೆದು ತಂಪಾಯಿತು ಎನ್ನುವುದಕ್ಕೆ ಗುರುತು ಏನು ಎಂದರೆ ಭೋಗವೆಂಬ ಜಲವು ರುಚಿಸದಿರುವುದು

(ತತ್ವವಿದಾಂ ಭೋಗ್ಯವರ್ಗೇಷು ಅರುಚಿರಿತ್ಯಾಹ—ತಾ ಪ್ರ.)

ಅಲಮನ್ಯೈಃ ಪರಿಜ್ಞಾನೈರ್ವಾಚ್ಯವಾಚಕವಿಭ್ರಮೈಃ ।
ಅನಹಂವೇದನಾಮಾತ್ರಂ ನಿರ್ವಾಣಂ ತದ್ವಿಭಾವ್ಯತಾಂ　　　　　　॥ ೩ ॥

ಪರಿಜ್ಞಾತಾ ಯಥಾ ಸ್ವಪ್ನೇ ಪದಾರ್ಥಾ ರಸಯಂತಿ ನೋ ।
ನಚ ಸಂತಿ ತಥೈವಾಸ್ಮಿನ್ನಹಂ ಜಗದಿದಂಭ್ರಮೇ　　　　　　॥ ೪ ॥

ಯಥಾ ಸ್ವಭಾವನಾದ್ಯಕ್ಷಸ್ತರೌ ಸಸ್ವಜನಂ ಪುರಂ ।
ಪಶ್ಯತ್ಯಸತ್ಯಮೇವೈವಂ ಜೀವಃ ಪಶ್ಯತಿ ಸಂಸೃತಿಂ　　　　　　॥ ೫

ವಿಭ್ರಮಾತ್ಮಾ ಯಥಾ ಯಕ್ಷೋ ಯಕ್ಷಲೋಕಶ್ಚ ತೇ ಮಿಥಃ ।
ಸದ್ರೂಪೌ ಸುಸ್ಥಿತೌ ಮಿಥ್ಯಾ ತಥಾಹಂತ್ವಜಗದ್ಭ್ರಮೌ　　　　　　॥ ೬ ॥

---

೩. (ಪರಿಜ್ಞಾನವೆಂಬುದು ಭೋಗವಿರಸವೆಂಬ ಗುರುತುಳ್ಳ ಬ್ರಹ್ಮಜ್ಞಾನವು) ಆದನ್ನು ಬಿಟ್ಟು ಮಿಕ್ಕ, ಇದು ವಾಚ್ಯ, ಇದು ವಾಚಕ, ಎಂಬ ಭ್ರಾಂತಿಗಳಿಂದ ಕೂಡಿದ ಇತರ ಪರಿಜ್ಞಾನಗಳಿಗಾಗಿ ಒದ್ದಾಡುವಿಕೆಯು ಸಾಕು. (ನಿಜವಾದ ಪರಿಜ್ಞಾನವು) ನಿರ್ವಾಣವು: ಅದು ಅನಹಂ ವೇದನಾಮಾತ್ರವು: ಅಹಂ ಎಂಬುದು ಇಲ್ಲ ಎಂದು ತಿಳಿಯುವಿಕೆಯು ಅದನ್ನು ಕುರಿತು ಚಿಂತಿಸುವುದಾಗಲಿ.

(ಏವಂ ಭೋಗ್ಯೇಷು ವಿರಕ್ತಾನಾಂ ಭೋಕ್ತರಿ ಅಹಂಕಾರಾಂಶ ತ್ಯಾಗ ಮಾತ್ರೇಣ ಚಿನ್ಮಾತ್ರ ಪರಿಶೇಷಾತ್ಮಕಂ ನಿರ್ವಾಣಂ ಸಿದ್ಧಮಿತ್ಯಾಹ ।—ತಾ ಪ್ರ)

೪ ಸ್ವಪ್ನದಲ್ಲಿ ಕಂಡ ಪದಾರ್ಥಗಳೆಲ್ಲವೂ ಹೇಗೆ ಎಚ್ಚರವಾದ ಮೇಲೆ ಮನಸ್ಸಿಗೆ ಹಿಡಿಯುವುದಿಲ್ಲವೋ ಹಾಗೆಯೇ ಸತ್ಯವಾಗಿದ್ದು ಸಿಕ್ಕುವುದೂ ಇಲ್ಲವೋ, ಹಾಗೆಯೇ ಜಗತ್ತಿನ ಇದಂ ಭ್ರಮದಲ್ಲಿ ಅಹಂ ಎಂಬುದೂ ಕೂಡ (ಕೇವಲ ಪ್ರಾತಿಭಾಸಿಕವು).

೫ ಯಕ್ಷನು ಹೇಗೆ ತನ್ನ ಭಾವನೆಯಿಂದಲೇ ಮರದಲ್ಲಿ ಸ್ವಜನರನ್ನೂ ಪುರವನ್ನೂ ಇಲ್ಲದಿದ್ದರೂ ಕಾಣುವನೋ ಹಾಗೆಯೇ ಜೀವನೂ ಸಂಸಾರವನ್ನು ಕಲ್ಪಿಸಿಕೊಂಡು ಕಾಣುವನು.

೬ ಯಕ್ಷನೂ ಭ್ರಾಂತಿಯಿಂದ ಕಲ್ಪಿತನಾದವನು. ಯಕ್ಷಲೋಕವೂ ಭ್ರಾಂತಿಯಿಂದಲೇ ಕಲ್ಪಿತವಾದುದು. ಅವೆರಡೂ ಹೇಗೆ ಕಣ್ಣಿಗೆ ಕಾಣಿಸುತ್ತಿದ್ದರೂ

ಅನಾವರಣತೋಽರಣ್ಯೇ ಯಕ್ಷಾ ವಿಭ್ರಮರೂಪಿಣಃ ।
ಯಥಾ ಸ್ಫುರಂತಿ ಭೂತಾನಿ ತಥೇಮಾನಿ ಚತುರ್ದಶ ॥ ೭ ॥

ಭ್ರಮಮಾತ್ರಮಹಂ ಮಿಥ್ಯೈವೇತಿ ಬುದ್ಧ್ವಾ ವಿಭಾವಯನ್ ।
ಯಕ್ಷೋಽಯಕ್ಷತ್ವಮಾಯಾತಿ ಚಿತ್ತಂ ಚಿತ್ತತ್ವತಾಮಿದಂ ॥ ೮ ॥

ನಿರಸ್ತಕಲನಾಶಂಕಂ ತ್ಯಾಗಗ್ರಹಣವರ್ಜಿತಂ ।
ಅವಿನಾರಿಸಮಸ್ತೇಚ್ಛಂ ಶಾಂತಮಾಸ್ಸ್ವ ಯಥಾಸ್ಥಿತಂ ॥ ೯ ॥

---

ಸುಸ್ಥಿತವಾಗಿದ್ದರೂ ಹೇಗೆ ಮಿಥ್ಯೆಯೋ ಹಾಗೆಯೇ ಅಹಂತ್ವ-ಜಗದ್ಭ್ರಮಗಳೂ ಮಿಥ್ಯೆಯೇ !

(ತತ್ರ ಯಕ್ಷೋ ವಿಭ್ರಮಾತ್ಮಾ ಭ್ರಾಂತಿಕಲಿತ ಭೋಕ್ತೃ ಸ್ವರೂಪಃ, ಯಕ್ಷಲೋಕಸ್ತನ್ನಗರಂ ಚ ಭ್ರಾಂತಿಕಲ್ಪಿತ ಭೋಗ್ಯರೂಪ ಮಿತ್ಯುಭಯಂ ನಾಸ್ತ್ಯೇವ, ತಥಾಪಿ ತಾಮಿಧ ಉಪಭೋಗ ಲಕ್ಷಣಾರ್ಥ ಕ್ರಿಯಾಕಾರಿತಯಾ ಯಥಾ ಸದ್ರೂಪಾವಿದಸ್ಥಿತೌ ತಥೈತ್ಯರ್ಥಃ—ತಾ. ಪ್ರ )

೭. ವಿಕ್ಷೇಪ ಶಕ್ತಿಯ ಬಲದಿಂದ ಅರಣ್ಯದಲ್ಲಿ ಭ್ರಾಂತಿಯೇ ರೂಪವಾಗುಳ್ಳ ಯಕ್ಷರು ಕಾಣಿಸಿಕೊಳ್ಳುವಂತೆ, ಚತುರ್ದಶ (ಭುವನಗಳೂ ಅವುಗಳಲ್ಲಿರುವ) ಪ್ರಾಣಿಗಳೂ ಕಾಣಿಸಿಕೊಳ್ಳುವುವು.

೮. ಅಹಂ ಎಂಬುದು ಭ್ರಮಮಾತ್ರವು: ಕೇವಲ ಮಿಥ್ಯೆಯೇ ಹೊರತು ಇನ್ನೇನೂ ಅಲ್ಲ ಎಂಬುದನ್ನು ತಿಳಿದು ಹಾಗೆಯೇ ವಿಭಾವನ ಮಾಡುತ್ತಿದ್ದರೆ, ಯಕ್ಷನೂ ಅಯಕ್ಷನಾಗುವನು ಚಿತ್ತವು ಚಿತ್ತತ್ವವನ್ನು ಕಳೆದುಕೊಂಡು ಚಿತ್ ತತ್ತ್ವವಾಗುವುದು.

(ಚಿತ್ತತ್ವತಾಂ ಚಿದ್ರೂಪತಾತ್ವಿಕ ಭಾವಂ—ತಾ. ಪ್ರ )

೯. ಸಂಕಲ್ಪಗಳೆಂಬ ಶಂಕೆಗಳೆಲ್ಲವೂ ಚೆನ್ನಾಗಿ ಅಸ್ತವಾಗಿ, ತ್ಯಾಗ, ಗ್ರಹಣ ಎಂಬವುಗಳಿಲ್ಲದೆ, ಸಮಸ್ತ ಇಚ್ಛೆಗಳೂ ಶಾಂತವಾಗಿರಲು, ಇದ್ದದ್ದು ಇದ್ದಂತೆ ಶಾಂತನಾಗಿರು.

(ಚತ್ವಾರಿ ಕ್ರಿಯಾ ವಿಶೇಷಾನಿ—ತಾ. ಪ್ರ.)

ಅಸತ್ತಾಸಂಭವಂ ದೃಶ್ಯಂ ದ್ರಷ್ಟ್ರಾತ್ಮಕಮಿದಂ ತತಂ ।
ಅಥವಾ ನೈವ ದ್ರಷ್ಟ್ರಾತ್ಮ ಸದವಾಚ್ಯಂ ಕಿಮಾಸ್ಯತೇ		೧೦ ॥

ವಸಂತರಸಪೂರಸ್ಯ ಯಥಾ ವಿಟಪಗುಲ್ಮತಾ ।
ಸ್ವರೂಪಮಾತ್ರಭರಿತಸಂವಿದಃ ಸರ್ಗತಾ ತಥಾ		॥ ೧೧ ॥

ಯದಿದಂ ಜಗದಾಭಾಸಂ ಶುದ್ಧಂ ಚಿನ್ಮಾತ್ರವೇದನಂ ।
ಕಾತ್ರೈಕತಾ ದ್ವಿತಾ ಕಾ ವಾ ನಿರ್ವಾಣಮಲಮಾಸ್ಯತಾಂ		॥ ೧೨ ॥

ಭೂಯತಾಂ ಚಿನ್ಮಯವ್ಯೋಮ್ನಾ ಪೀಯತಾಂ ಪರಮೋ ರಸಃ ।
ಸ್ಥೀಯತಾಂ ವಿಗತಾಶಂಕಂ ನಿರ್ವಾಣಾನಂದನಂದನೇ		॥ ೧೩ ॥

ಕಿಮೇತಾಸ್ವತಿಶೂನ್ಯಾಸು ಸಂಸಾರಾರಣ್ಯಭೂಮಿಷು ।
ಮಾನವಾ ವಾತಹರಿಣಾ ಭ್ರಮಥೋ ಭ್ರಾಂತಬುದ್ಧಯಃ		॥ ೧೪ ॥

---

೧೦. ಈ ದೃಶ್ಯವು ಅಸತ್ತಾ ಸಂಭವವು. ದೃಷ್ಟ್ರುವೇ ಹೀಗೆ ಈ ರೂಪವಾಗಿ ಹರಡಿರುವನು. ಅಥವಾ ಈ ದೃಶ್ಯವು ದ್ರಷ್ಟ್ರಾತ್ಮನಲ್ಲ. ಸತ್ತು ಅವಾಚ್ಯವಾದ ಅಸತ್ತಾಗುವುದೆಂದರೇನು ?

೧೧ ವಸಂತದಲ್ಲಿ ಹೊರಹೊಮ್ಮುವ ರಸವು ತುಂಬಿ ಹೊರಬಿದ್ದು ಮರ, ಪೊದೆಗಳು ಆಗುವಂತೆ, ಸ್ವರೂಪಮಾತ್ರದಿಂದ ಭರಿತವಾಗಿರುವ ಸಂವಿತ್ತಿನಿಂದಲೇ ಈ ಸರ್ಗವೆಲ್ಲವೂ ಆಗುವುದು

೧೨. ಇದಂ ರೂಪವಾದ ಜಗತ್ತೆಲ್ಲವೂ ಶುದ್ಧವಾದ ಚಿನ್ಮಾತ್ರವೇದನವೇ ಆಭಾಸವಾಗಿರುವುದು ಎಂದ ಮೇಲೆ, ಇದರಲ್ಲಿ ಏಕತಾ, ದ್ವಿತಾ, ಮೊದಲಾದವುಗಳೆಲ್ಲ ಎಲ್ಲಿ ? ಅದರಿಂದ ನಿರ್ವಾಣದಲ್ಲಿ ಇರುವವನಾಗು.

೧೩. ಚಿದಾಕಾಶಮಯನಾಗು. ಪರಮಾನಂದ ರಸವನ್ನು ಹೀರು. ಯಾವ ಶಂಕೆಯೂ ಇಲ್ಲದೆ ಇರುವವನಾಗು. ನಿರ್ವಾಣಾನಂದವೆಂಬ ನಂದನದಲ್ಲಿ ಸುಖವಾಗಿರು

೧೪. ಅತಿಶೂನ್ಯಗಳಾದ ಸಂಸಾರಗಳೆಂಬ ಅರಣ್ಯ ಭೂಮಿಗಳಲ್ಲಿ ಮಾನವರೆಂಬ ವಾತಹರಿಣಗಳು ಭ್ರಾಂತಬುದ್ಧಿಗಳಾಗಿ ಏಕೆ ಅಲೆಯುವುದು ?

(ವಾತಹರಿಣಗಳು ಎಂದರೆ ಗಾಳಿಯು ಬೀಸಿದತ್ತ ಹೋಗುವ ಜಿಂಕೆಗಳು )

ಜಗತ್ತ್ರಯಮರೀಚ್ಯಂಬು ವಿಪ್ರಲಬ್ಧಾಂಧಬುದ್ಧಯಃ ।
ಮಾಧಾವತ ಗತವ್ಯಗ್ರಮಾಶಯೋಪಹತಾಶಯಾಃ ॥ ೧೫ ॥

ರೂಪಾಲೋಕಮನಸ್ಕಾರ ಮೃಗತೃಷ್ಣಾಂಬುಪಾಯಿನಃ ।
ವ್ಯರ್ಥಮಾಯಾಸಮಾಯೂಂಷಿ ಮಾಮಾ ಕ್ಷಪಯತೈಣಕಾಃ ॥ ೧೬ ॥

ಜಗದ್ಗಂಧರ್ವನಗರಗುರುಗರ್ವೇಣ ನಶ್ಯಥ ।
ಸುಖರೂಪಾಣಿ ದುಃಖಾನಿ ನಾಶನಾಯೈವ ಪಶ್ಯಥ ॥ ೧೭ ॥

ಜಗತ್ಕೋಶೋಂಡ್ರಕಭ್ರಾಂತ್ಯೈ ಮಾ ಮಹಾಂಬರಮಧ್ಯಗಂ ।
ಅವಲೋಕಯತಾಭ್ರಾಂತೇ ಸ್ವರೂಪೇ ಪರಿಣಮ್ಯತಾಂ ॥ ೧೮ ॥

ಮಾನವಾ ವಾತಲೋಲೋಚ್ಚಪತ್ರಪ್ರಾಪ್ತಾಂಬುಭಂಗುರಾ ।
ಮಾನವಾಸು ನ ಚಾಸ್ವಂಧಗರ್ಭಶಯ್ಯಾಸು ಸುಪ್ಯತಾಂ ॥ ೧೯ ॥

---

೧೫. ಜಗತ್ತ್ರಯವೆಂಬ ಮರೀಚಿಕಾ ಜಲವನ್ನು ನೋಡಿ ವಂಚಿತರಾಗಿರುವ ಅಂಧಬುದ್ಧಿಯುಳ್ಳವರೇ, ಆಶೆಯಿಂದ ಉಪಹತವಾಗಿರುವ ಮನಸ್ಸುಳ್ಳವರಾಗಿ ಏಕ ದೃಷ್ಟಿಯಿಂದ ಓಡುತ್ತಿರುವಿರೇಕೆ?

೧೬. ರೂಪಾಲೋಕ (ಬಾಹ್ಯಭೋಗ) ಮನಸ್ಕಾರ (ಅಭಿಮಾನಿಕ ಭೋಗ) ಗಳೆಂಬ ಮೃಗತೃಷ್ಣೆಯ ನೀರಿನ ಕುಡಿಯುವುದಕ್ಕೆಂದು, ಎಲೈ (ಮಾನವ) ಜಿಂಕೆಗಳಿರಾ! ವ್ಯರ್ಥವಾಗಿ ನಿಮ್ಮ ಆಯುಸ್ಸುಗಳನ್ನೆಲ್ಲ ಆಯಾಸದಲ್ಲಿ ಕಳೆದುಕೊಳ್ಳಬೇಡಿ.

೧೭. ಜಗತ್ತೆಂಬ ಗಂಧರ್ವನಗರವನ್ನು ಕಂಡು ಆ ಭಾರಿಯ ಗರ್ವದಲ್ಲಿ ಹಾಳಾಗಬೇಡಿ. ಸುಖರೂಪಗಳಾಗಿರುವ ಈ ದುಃಖಗಳೆಲ್ಲವೂ ನಾಶನಕ್ಕಾಗಿಯೇ ಎಂಬುದನ್ನು ಕಾಣಿರಿ.

೧೮. ಬ್ರಹ್ಮವೆಂಬ ಮಹಾಕಾಶವನ್ನು ನೋಡದೆ, ಅದರ ಮಧ್ಯದಲ್ಲಿರುವ ಕೋಶೋಂಡ್ರಕಗಳಂತಿರುವ ಜಗತ್ತನ್ನೇಕೆ ನೋಡುವಿರಿ? ಆ ಮಹಾಕಾಶವನ್ನು ನೋಡಿ ಭ್ರಾಂತವಲ್ಲದ ಸ್ವರೂಪದಲ್ಲಿ ಸೇರಿಕೊಳ್ಳಿರಿ.

೧೯. ಗಾಳಿಯಿಂದ ಅಲ್ಲಾಡುತ್ತಿರುವ, ಎತ್ತರವಾದ ಕೊಂಬೆಯಲ್ಲಿರುವ,

ಅವಿರಾಮಮನಾದ್ಯಂತೇ ಸ್ವಭಾವೇ ಶಾಂತಮಾಸ್ಯತಾಂ ।
ದ್ರಷ್ಟೃದೃಶ್ಯದಶಾದೋಷಾದಸ್ವಭಾವಾದ್ವಿನಶ್ಯತಾಂ　　॥ ೨೦ ॥

ಅಜ್ಞಾವಬುದ್ಧಃ ಸಂಸಾರಃ ಸ ಹಿ ನಾಸ್ತಿ ಮನಾಗಪಿ ।
ಅವಶಿಷ್ಟಂ ಚ ಯತ್ಸತ್ಯಂ ತಸ್ಯ ನಾಮ ನ ವಿದ್ಯತೇ　　॥ ೨೧ ॥

ತ್ರೋಟಯಿತ್ವಾ ತು ತೃಷ್ಣಾಯಃ ಶೃಂಖಲಾವಲಿಕಂ ಬಲಾತ್ ।
ಸಂಸಾರಪಂಜರಂ ತಿಷ್ಠ ಸರ್ವಸ್ಯೋರ್ಧ್ವಂ ಮೃಗೇಂದ್ರವತ್　　॥ ೨೨ ॥

ಆತ್ಮಾತ್ಮೀಯಗ್ರಹಭ್ರಾಂತಿಶಾಂತಿಮಾತ್ರಾ ವಿಮುಕ್ತತಾ ।
ಯಥಾತಥಾ ಸ್ಥಿತಸ್ಯಾಪಿ ಸಾ ಸ್ವಸತ್ತೈವ ಯೋಗಿನಃ　　॥ ೨೩ ॥

---

ಎಲೆಯ ಮೇಲೆ ಇರುವ ನೀರಿನಂತೆ ಭಂಗುರವಾದ ಮಾನವರೇ ! ಸಂಸಾರವೆಂಬ ಈ ಕತ್ತಲಿನ ಗುಹೆಗಳಲ್ಲಿರುವ ಮಾನವ ಗರ್ಭಗಳಲ್ಲಿ ಮತ್ತೆ ಶಯನಮಾಡಬೇಡಿ.

೨೦. ಅನಾದ್ಯಂತವಾದ, (ಆದಿ ಅಂತಗಳಿಲ್ಲದ) ಸ್ವಭಾವದಲ್ಲಿ ಶಾಶ್ವತವಾಗಿ ಶಾಂತವಾಗಿ ಇದ್ದು ಬಿಡಿ. ದ್ರಷ್ಟೃ ದೃಶ್ಯದಶಾದೋಷದಿಂದ ಕೂಡಿರುವ ಅಸ್ವಭಾವಕ್ಕೆ ಸಿಕ್ಕಿ ವಿನಾಶವಾಗಬೇಡಿರಿ.

೨೧ ಈ ಸಂಸಾರವೆಂಬುದು ಅಜ್ಞರಿಗೆ ಮಾತ್ರ ಸತ್ಯವೆಂದು ತೋರುವುದು. ಅದು ನಿಜವಾಗಿಯೂ ಇಲ್ಲ. ಇದನ್ನು ಕಳೆದ ಮೇಲೆ ಉಳಿಯುವುದು ಯಾವುದೋ ಅದೇ ಸತ್ಯವು ಆ ಸತ್ಯಕ್ಕೆ ನಾಮ(ವೂ ರೂಪ)ವೂ ಇಲ್ಲ.

೨೨. ತೃಷ್ಣಾ ಎಂಬ ಉಕ್ಕಿನ ಸಂಕಲೆಯಿಂದ ಬದ್ಧವಾಗಿರುವ ಈ ಸಂಸಾರ ಪಂಜರವನ್ನು ಬಲಪ್ರಯೋಗಮಾಡಿ ಮುರಿದು, ಸಿಂಹದ ಹಾಗೆ ಎಲ್ಲರಗಿಂತ ಮೇಲೆ ಕುಳಿತುಕೊ.

೨೩. ತಾನು, ತನ್ನವರು ಎಂಬ ಗ್ರಹಕ್ಕೆ ಸಿಕ್ಕಿರುವುದೇ ಭ್ರಾಂತಿಯು. ಇದು ಶಾಂತವಾಗುವುದೇ ವಿಮುಕ್ತಿಯು. ಇದ್ದ ಹಾಗೆ ಇದ್ದುಬಿಟ್ಟರೆ ಸಾಕು, ಅದೇ ಯೋಗಿಯ ಸ್ವಸತ್ತೆಯು.

ನಿರ್ವಾಣತಾಽವಾಸನತಾ ಪರಾವತಾವತಾಜ್ಞತಾ ।
ಸಂಸಾರಾಧ್ವನಿ ಖಿನ್ನಸ್ಯ ಶಾಂತಾ ವಿಶ್ರಾಮಭೂಮಯಃ ॥ ೨೪ ॥

ತಜ್ಜ್ಞಜ್ಞಾತೋ ನ ಮೂರ್ಖಾಣಾಂ ಮೂರ್ಖಜ್ಞಾತೋ ನ ತದ್ವಿದಾಂ ।
ವಿದ್ಯತೇ ಜಗದರ್ಥೋಽಸಾವವಾಚ್ಯಾರ್ಥಮಯೋ ಮಿಥಃ ॥ ೨೫ ॥

ವಿಶ್ವತಾಭ್ರಾಂತಿಸಂಶಾಂತೌ ಸಂಸ್ಥಿತ್ಯೈವ ನ ಲಭ್ಯತೇ ।
ಮಹಾರ್ಣವಾಂಬುವಲಿತಾ ಪುತ್ರಿಕೇವ ಪಯೋಮಯೀ ॥ ೨೬ ॥

ಭ್ರಾಂತಿಶಾಂತೌ ಪ್ರಬುದ್ಧಸ್ಯ ವಿನಿರ್ವಾಣಸ್ಯ ವಿಶ್ವತಾ ।
ಯಥಾಸ್ಥಿತ್ಯೈವ ಗಲಿತಾ ವಿದ್ಯತೇ ಚ ಯಥಾಸ್ಥಿತಂ ॥ ೨೭ ॥

---

೨೪ ನಿರ್ವಾಣತೆ, ಅವಾಸನತೆ, ಪರರಿಂದ ಆದ ಅಪತಾಪವನ್ನು ತಿಳಿಯದಿರುವಿಕೆ, ಇವು ಸಂಸಾರ ಮಾರ್ಗದಲ್ಲಿ ಖಿನ್ನರಾಗಿ ಆಯಾಸಪಟ್ಟಿರುವವರ ಆಯಾಸ ಪರಿಹಾರಕವಾದ ಶಾಂತವಿಶ್ರಾಮಭೂಮಿಗಳು

೨೫. ಈ ಜಗತ್ತು ಎಂಬುದು ಬ್ರಹ್ಮಜ್ಞನಿಗೆ ಒಂದು ವಿಧವಾಗಿ, ಮೂರ್ಖನಿಗೆ ಇನ್ನೊಂದು ಬಗೆಯಾಗಿ ಅರ್ಥವಾಗುವುದು. ಇವನಿಗೆ ಅರ್ಥವಾಗುವಂತೆ ಅವನಿಗೆ ಇಲ್ಲ: ಅವನಿಗೆ ಆಗುವಂತೆ ಇವನಿಗೆ ಇಲ್ಲ. ಅವನು ತಿಳಿಯುವುದು ಇವನಿಗೆ ಅವಾಚ್ಯ : ಇವನಿಗೆ ತಿಳಿಯುವುದು ಅವನಿಗೆ ಅವಾಚ್ಯ.

(ಮಿಥಃ ಪರಸ್ಪರಮವಾಚ್ಯಾ ವಕ್ತುಮಯೋಗ್ಯಾಯೇಽರ್ಥಾಃ, ತನ್ಮಯಸ್ತತ್ಪ್ರಚುರಃ । ತಚ್ಚ ಅಜ್ಞಸ್ಯದುಃಖೌಘಮಯಂ, ಜ್ಞಸ್ಯ ಆನಂದಮಯಂ ಜಗದಿತಿ ಪ್ರಾಗುಕ್ತಮೇವೇತಿ—ತಾ. ಪ್ರ)

೨೬ ಮಹಾಸಾಗರದಲ್ಲಿ ಹಾಕಿದ ನೀರಿನ ಬೊಂಬೆಯು ಮತ್ತೆ ಸಿಕ್ಕುವುದೇ? ಹಾಗೆಯೇ ವಿಶ್ವತಾ ಭ್ರಾಂತಿಯು ಸಂಶಾಂತವಾದ ಮೇಲೆ ಸಂಸ್ಥಿತಿಯೇ ಇರುವುದಿಲ್ಲ.

೨೭. ಪ್ರಬೋಧವನ್ನು ಪಡೆದು ನಿರ್ವಾಣವನ್ನು ಹೊಂದಿದವನಿಗೆ ಭ್ರಾಂತಿಯು ಶಾಂತವಾಗುವುದು. ಆಗ ವಿಶ್ವತೆಯು ಇದ್ದಕ್ಕಿದ್ದ ಹಾಗೆಯೇ ಗಲಿತವಾಗಿ ಹೋಗುವುದು. ಯಥಾಸ್ಥಿತವಾಗಿ (ಎಂದರೆ ಪೂರ್ವರೂಪವಾದ ಬ್ರಹ್ಮವಾಗಿ) ಇರುವುದು.

ನಿರ್ದಗ್ಧತೃಣಭಸ್ಮಾಲೀ ಕ್ವಾಪಿ ಯಾತಿ ಯಥಾನಿಲೈಃ ।
ಸತಾಂ ಸ್ವಭಾವವಿಶ್ರಾಮ್ಯೈಃ ಕ್ವಾಪಿ ಯಾತಿ ತಥಾ ಜಗತ್ ॥ ೨೮ ॥

ಜಗದ್ಬ್ರಹ್ಮಪದಾರ್ಥಸ್ಯ ಸಂನಿವೇಶಃ ಸತೂತ್ತಮಃ ।
ಬ್ರಹ್ಮಶಬ್ದಾರ್ಥರೂಪಾತ್ಮಾ ನ ಜಗಚ್ಛಬ್ದಕಾರ್ಯಭಾಕ್ ॥ ೨೯ ॥

ಅವಿಜ್ಞಾತಸ್ಯ ಬಾಲಸ್ಯ ಪದಾರ್ಥಾ ಯಾದೃಶಾ ಇಮೇ ।
ವಿ ದುಷಸ್ತಾದೃಶಾ ಏವ ತಿಷ್ಠತಃ ಕ್ಷೀಣವಾಸನಂ ॥ ೩೦ ॥

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೩೧ ॥

---

೨೮. ಚೆನ್ನಾಗಿ ಸುಟ್ಟುಹೋದ ಹುಲ್ಲಿನ ಬೂದಿಯು ಗಾಳಿಗೆ ಸಿಕ್ಕಿ ಎಲ್ಲಿಯೋ ಹಾರಿ ಹೋಗುವಂತೆ, ಸತ್ಪುರುಷರು ಸ್ವಭಾವದಲ್ಲಿ ವಿಶ್ರಾಂತಿಯನ್ನು ಪಡೆಯಲು ಜಗತ್ತು ಎಲ್ಲಿಯೋ ಹಾರಿ ಹೋಗುವುದು.

೨೯. ಬ್ರಹ್ಮ ಪದಕ್ಕೆ ಬೃಂಹಣವೆಂದು ಅರ್ಥವು. ಆ ಬೃಂಹಣವೇ ಜಗತ್ತು ಎಂದು ಅರ್ಥಮಾಡಿದರೆ ಅದು ಉತ್ತಮಾರ್ಥವು. ಹಾಗಿಲ್ಲದೆ ಜಗತ್ತು ಎಂದರೆ (ಆ ಶಬ್ದದ ಪ್ರವೃತ್ತಿ ನಿಮಿತ್ತವಾದ) ವಿಕಾರಭಾಗಿ ಎಂದು ಅರ್ಥಮಾಡಿದರೆ ಅದು ಉತ್ತಮವಲ್ಲ.

೩೦. ವಿಶೇಷವಾಗಿ ತಿಳಿವಳಿಕೆಯಿಲ್ಲದ ಹುಡುಗನಿಗೆ ಈ ಪದಾರ್ಥಗಳೆಲ್ಲವೂ ಹೇಗೆ ಇರುವುವೋ ಕ್ಷೀಣವಾಸನನಾದ ವಿದ್ವಾಂಸನಿಗೂ ಹಾಗೆಯೇ ಇರುವುವು.

೩೧ ಸರ್ವಭೂತಗಳೂ ಯಾವಾಗ ನಿದ್ದೆಯನ್ನು ಮಾಡುತ್ತ ನಿಶಾಕಾಲವನ್ನು ಅನುಭವಿಸುವುವೋ ಆಗ ಸಂಯಮಿಯು ಜಾಗ್ರತನಾಗಿರುವನು. ಯಾವಾಗ ಭೂತಗಳು ಎಚ್ಚರವಾಗಿರುವುವೋ ಆವಾಗ ಮುನಿಯಾದವನಿಗೆ ನಿಶೆಯು.

(ಈ ಶ್ಲೋಕ ಗೀತೆಯಲ್ಲೂ ಇವೆ.)

ಈಗಿನ ಸಿದ್ಧಾಂತದಂತೆ ಭೂಮಿಯು ಸೂರ್ಯನ ಸುತ್ತಲೂ ಸುತ್ತುತ್ತಿದೆ: ಈ ಸುತ್ತುವಿಕೆಯಿಂದ ಭೂಮಿಗೆ ಹಗಲು ಇರುಳು ಆಗುತ್ತಿವೆ. ಜರ್ಮನಿನಲ್ಲಿ

ಸೂರ್ಯೋದಯವಾಗಿ ಹಗಲಿಗೆ ಆರಂಭವಾದಾಗ ಇಂಡಿಯಾದಲ್ಲಿ ಮಧ್ಯರಾತ್ರಿ. ಇಂಡಿಯಾದಲ್ಲಿ ಸೂರ್ಯೋದಯವಾದಾಗ ಆಫ್ರಿಕಾದಲ್ಲಿ ರಾತ್ರಿ, ಆಫ್ರಿಕದಲ್ಲಿ ಸೂರ್ಯೋದಯವಾದಾಗ ಅಮೇರಿಕದಲ್ಲಿ ರಾತ್ರಿ. ಅಮೇರಿಕದಲ್ಲಿ ಸೂರ್ಯೋದಯ ವಾದಾಗ ಜಪಾನಿನಲ್ಲಿ ರಾತ್ರಿ, ಹೀಗೆ ಆಗುವುದರಿಂದ ದಿವಾರಾತ್ರಿಗಳು ನಿಖರವಾಗಿ ನಿಶ್ಚಿತವಾಗಿಲ್ಲವಾಯಿತು. ಇದರಿಂದ ಭೂಮಂಡಲದಲ್ಲಿ ದಿವಾರಾತ್ರಿ ಪ್ರದೇಶಗಳು ಇಲ್ಲದೆ ದಿವಾಚರ ನಿಶಾಚರ ವ್ಯವಸ್ಥೆ ಇಲ್ಲವಾಗುವುದು ನಮ್ಮ ಶಾಸ್ತ್ರಗಳು ಇದನ್ನು ಒಪ್ಪುವುದಿಲ್ಲ ದಿವಾಖಂಡ, ನಿಶಾಖಂಡಗಳು ಭೂಮಿಯಲ್ಲಿಯೂ ಇವೆಯೆಂದು ನಮ್ಮ ಸಿದ್ಧಾಂತ ಅದರ ಸಮನ್ವಯ ಹೀಗೆ

ಸೂರ್ಯನಲ್ಲಿ ದಿವಾಕಿರಣ ನಿಶಾಕಿರಣ ಎಂದು ಎರಡು ಗುಂಪಿನ ಕಿರಣಗಳಿವೆ ಅದರಲ್ಲಿ ದಿವಾಕಿರಣವು ಮೊದಲು ಅದರ ಹಿಂದೆ ನಿಶಾಕಿರಣ ಹೀಗೆ ಅಲ್ಲಿಂದ ಹೊರಡುತ್ತವೆ ಭೂಗತಿ ಸೂರ್ಯಗತಿಗಳಿಂದ ದಿವಾಕಿರಣವು ಭೂಮಿಯನ್ನು ಸೇರುವ ಸ್ಥಳವೂ ನಿಶಾಕಿರಣವು ಭೂಮಿಯನ್ನು ಸೇರುವ ಸ್ಥಳವೂ ಬೇರೆ ಬೇರೆಯಾಗುತ್ತವೆ. ದಿವಾಕಿರಣವು ಮೊದಲು ಮುಟ್ಟಿದ ಪ್ರದೇಶವು ದಿವಾಖಂಡ: ನಿಶಾಕಿರಣವು ಮೊದಲು ಮುಟ್ಟಿದ ಖಂಡವು ನಿಶಾಖಂಡ. ದಿವಾಖಂಡದಲ್ಲಿರುವವರು ದಿವಾಚರರು ನಿಶಾಖಂಡದಲ್ಲಿರುವವರು ನಿಶಾಚರರು

ಇದು ಭೂಖಂಡ ವ್ಯವಸ್ಥೆ: ಇದರಂತೆಯೇ ಪಿಂಡಾಂಡ ವ್ಯವಸ್ಥೆಯೂ ಉಂಟು ಅದರಂತೆ ಪಿಂಡಾಂಡದಲ್ಲಿ ನಿಶಾಕಿರಣ ವ್ಯಾಪ್ತಿಯಾದಾಗ ಪ್ರಾಣಿಯು ನಿದ್ದೆ ಹೋಗುವುದು ದಿವಾಕಿರಣವ್ಯಾಪ್ತಿಯಾದಾಗ ಇಂದ್ರಿಯಗಳು ಜಾಗ್ರತ್ತಿಗೆ ಬರುವುವು. ಅಭ್ಯಾಸ ಬಲದಿಂದ ಈ ಕಿರಣಗಳ ವ್ಯಾಪ್ತಿಯನ್ನು ತಡೆಯಬಹುದು ಈ ವ್ಯಾಪ್ತಿಯು ಇಂದ್ರಿಯ, ಮನೋ ಬುದ್ಧಿಗಳಲ್ಲಿ ಎಂದರೆ ಸ್ಥೂಲ ಸೂಕ್ಷ್ಮ ದೇಹಗಳಲ್ಲಿ ಮಾತ್ರ ಕಾರಣದಲ್ಲಿಲ್ಲ.

ಸ್ಥೂಲ ಸೂಕ್ಷ್ಮಗಳು ಕೆಲಸಮಾಡುವ ಅವಸ್ಥೆಯು ಜಾಗ್ರತ್ ಸ್ವಪ್ನಗಳು. ಆಗ ಕಾರಣವು ಕೆಲಸಮಾಡುವುದಿಲ್ಲ. ಸ್ಥೂಲಸೂಕ್ಷ್ಮಗಳು ಸುಮ್ಮನಾದಾಗ ಕಾರಣವು ಅರ್ಥಾತ್ ಆನಂದಮಯಕೋಶವು ಕೆಲಸವನ್ನು ಆರಂಭಿಸಿ ಆನಂದ ವನ್ನು ಸೋನೆಗರೆಯುವುದು. ಆ ಸೋನೆಯು ಹೃದಯದ ಸುತ್ತಲೂ ಇರುವ ನೂರೊಂದು ಪ್ರಧಾನ ನಾಡಿಗಳಲ್ಲಿ ಸಂಗ್ರಹವಾಗುವುದು. ಆ ಆನಂದ ಸ್ಮೃತಿಯು ಉತ್ಸಾಹ ಶ್ರದ್ಧೆ ಸಂತೋಷ ಮೊದಲಾದವುಗಳನ್ನು ಕೊಡುವುದು. ಇಂದ್ರಿಯ ಮನೋಬುದ್ಧಿಗಳಿಂದ ಕೆಲಸಮಾಡುವಾಗ ಈ ಆನಂದವು ವ್ಯಯವಾಗುವುದು. ಆದರಿಂದ ಆಯಾಸವೂ ದುಃಖವೂ ಆಗುವುದು.

(ಈಚೆಗೆ ಫಿಜಿಯಾಲಜಿಯು ರಕ್ತವನ್ನು ಪರೀಕ್ಷಿಸಿ, ಆಯಾಸಪಟ್ಟಿರುವವನ ರಕ್ತಕ್ಕೂ ನಿದ್ದೆಯಿಂದ ಎದ್ದಿರುವವನ ರಕ್ತಕ್ಕೂ ಇರುವ ವ್ಯತ್ಯಾಸವನ್ನು ಕಂಡು ಹಿಡಿದಿದೆ. ಕೆನೆತ್‌ವಾಕರ್ ಅವರ ಹ್ಯೂಮನ್ ಫಿಜಿಯಾಲಜಿ ಎಂಬ ಪುಸ್ತಕವನ್ನು ನೋಡಿ)

ಹೀಗೆ ಪಿಂಡಾಂಡ ಬ್ರಹ್ಮಾಂಡಗಳ ಸಂಬಂಧವಿರುವುದರಿಂದಲೇ ಸೂರ್ಯೋದಯವಾಗುತ್ತಿದ್ದ ಹಾಗೆಯೇ ಪ್ರಾಣಿಗಳೆಲ್ಲ ಎಚ್ಚರಗೊಳ್ಳುವುದು.

ನಿಶಾಕಿರಣವು ವ್ಯಾಪ್ತವಾಗುವ ಕಾಲವು ತಾಮಸವೇಳೆಯು. ನಿಶಾಕಿರಣದ ವ್ಯಾಪ್ತಿಯು ಕಳೆಯುವ ಕಾಲವು ಸಾತ್ವಿಕವೇಳೆಯು ದಿವಾಕಿರಣದ ವ್ಯಾಪ್ತಿ ಇರುವ ವೇಳೆಯು ರಾಜಸವೇಳೆಯು ಇದು ದಿವಾನಿಶಾ ಕಿರಣಗಳಿಂದ ಆಗುವ ಗುಣ ವ್ಯಾಪ್ತಿವಿಭಾಗವು. ಇದರಿಂದಲೇ ಉಷಃಕಾಲವನ್ನು ಬ್ರಾಹ್ಮೀಮುಹೂರ್ತವೆನ್ನುವುದು. ಆಗಲೇ ಅಖಂಡಧ್ಯಾನವು ಸುಲಭವಾಗಿ ಮೈಗೂಡುವುದು. ಆಗ ಭೂತಗಳೆಲ್ಲವೂ ಸಾತ್ವಿಕವಾಗಿ ಉಬ್ಬುವುವು. ಅದರಿಂದ ಅಗ್ನೀಷೋಮ ಮಂಡಲದ ವರೆಗೂ ವ್ಯಾಪ್ತಿಯು ಸಿಕ್ಕುವುದು. ಅಲ್ಲಿರುವ ಸಾವಿತ್ರತೇಜಃಪುಂಜದ ದರ್ಶನವು ಆಗ ಸುಲಭವೆಂದು ಆ ಕಾಲದಲ್ಲಿ ಗಾಯತ್ರೀ ಜಪಕ್ಕೆ ಅಷ್ಟು ಪ್ರಾಧಾನ್ಯವು. ಸಂಜೆಯು ತಾಮಸವೇಳೆಯಲ್ಲಿ ಪಿಂಡಾಂಡಗತ ಜಪ: ಬೆಳಗಿನ ಝಾವದಲ್ಲಿ ಬ್ರಹ್ಮಾಂಡಗತ ಜಪ: ಮಧ್ಯಾಹ್ನದಲ್ಲಿ •ಸೂರ್ಯಮಂಡಲವನ್ನು ನೋಡುತ್ತ ಜಪ, ಆಯುಸ್ಸು ಮುಗಿಯುತ್ತ ಬಂದುದನ್ನು ಸೂರ್ಯ ಮಂಡಲ ದರ್ಶನದಿಂದ ತಿಳಿದು ಕೊಳ್ಳಬಹುದು ಎಂಬ ಕಾಲಜ್ಞ ಸಮಯವನ್ನು ಚಿಂತಿಸಿ. ಸೂರ್ಯನನ್ನು ಆತ್ಮಾ, ಕಾಲಕರ್ತೃ, ಮೊದಲಾಗಿ ಸಂಬೋಧಿಸುವುದನ್ನು ಅರ್ಥಮಾಡಿಕೊಳ್ಳಿ.

ಈ ನಿಶಾದಿವಾಕಿರಣ ವ್ಯಾಪ್ತಿಯು ಬ್ರಹ್ಮಜ್ಞನಿಗೂ ಉಂಟು ಆದರೆ ಪ್ರಾಣಿ ಪ್ರಾಣಿಗಳಂತೆ ಆತನು ಇವುಗಳ ಪ್ರಭಾವಕ್ಕೆ ಒಳಪಡುವುದಿಲ್ಲವಾಗಿ ಆತನು ಸ್ವತಂತ್ರನು. ಆತನು ಬೇಕೆಂದುಕೊಂಡಹಾಗೆ ನಿಶಾದಿವಾಕಿರಣಗಳ ವ್ಯಾಪ್ತಿಯು ಆಗುವುದರಿಂದ ಆನಂದಮಯ ಕೋಶವು ಆತನಲ್ಲಿ ಯಾವಾಗಲೂ ಕೆಲಸಮಾಡುತ್ತಲೇ ಇರುವುದು. ಅದರಿಂದ ಆತನು ಆನಂದಮಯನಾಗಿಯೇ [illegible] ಇದೇ ಆರೂಢನ ಸ್ಥಿತಿ. ಇಲ್ಲಿಂದಲೂ ಪತಿತನಾಗುವಿಕೆಯುಂ[illegible]ತ್ತಾರೆ. ಈ ರೀತಿಯಾಗಿ ಆರೂಢನಾದವನಿಗೇ ಉಪದೇಶಾಧಿಕಾರ. [illegible] ಬ್ರಹ್ಮಾಂಡವನ್ನು ದಾಟಿದವನು. ಇತಿ ಹಿಂ.)

ಸ್ಥಿತಮೇವಾಽವಿರಾಮಿಾ ಯಜ್ಞಾಗ್ರದಸ್ಯ ಸುಷುಪ್ತವತ್ ।
ಚಿತ್ರಾವಲೋಕಿತ ಇವ ಜಾಗ್ರತ್ಯೋಽಸ್ಯ ರಸೈಷಣಾಃ ॥ ೩೨ ॥

ಜಾತ್ಯಂಧರೂಪಾನುಭವಸಮಂ ಭುವನವೇದನಂ ।
ಭ್ರಾಂತಪ್ರಾಯಮಸದ್ರೂಪಂ ಜ್ಞಸ್ಯ ಭಾತಿ ನ ಭಾತಿ ಚ ॥ ೩೩ ॥

ವಿಮೂಢದುಃಖಂ ತ್ರಿಜಗದ್ವಿಮೂಢವಿಷಯಂ ನ ಸತ್ ।
ಸ್ವಪ್ನೇ ಸ್ವಪ್ನತಯಾ ಜ್ಞಾತೇ ರೂಪಾಲೋಕಮನಃ ಕ್ರಿಯಾಃ ।
ನ ಸ್ಪದಂತೇ ಯಥಾ ತದ್ವಜಾಗ್ರತ್ಸ್ವಪ್ನೇ ಸ್ಫುರಂತು ಮಾ ॥ ೩೪ ॥

---

೩೨. ಇತರರ ಕಣ್ಣಿಗೆ ಇವನು ಸುಷುಪ್ತಿಯುಲ್ಲಿರುವಂತೆ ಕಾಣುತ್ತಿದ್ದರೂ ಈತನ ಆತ್ಮ ತತ್ವವು ಒಂದೇ ಸಮನಾಗಿ ಜಾಗ್ರತವಾಗಿರುವುದು ಇವನು ಜಾಗ್ರತ್ತಿನಲ್ಲಿರುವನೆಂದು ಇತರರು ಎಂದು ಕೊಳ್ಳುವಾಗ ಈತನ ಇಂದ್ರಿಯ ಭೋಗವೃತ್ತಿ ರೂಪವಾದ ರಸೈಷಣಗಳು ಚಿತ್ರಾರ್ಪಿತವಾದವುಗಳಂತೆ (ಕೇವಲ ನಾಮರೂಪಾವಶಿಷ್ಟಗಳಾಗಿ ವಾಸನಾರಹಿತವಾಗಿ) ಇರುವುವು.

(ಯದ್ಯಸ್ಮಾದ್ಧೇತೋಃ ಸರ್ವಜನಾನಾ ಮಜ್ಞಾನಾಂಧಕಾರಾವೃತತ್ವಾತ್ ಸುಷುಪ್ತವತ್ ಸ್ಥಿತಮೇವಾತ್ಮ ತತ್ವಮಸ್ಯ ತತ್ವವಿದಃ ಅವಿರಾಮೀ ವಿರಾವಶೂನ್ಯೋ ಜಾಗ್ರಜ್ಞಾಗರಸ್ತಸ್ಮಾತ್॥ ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗ್ರತಿ ॥ ಇತ್ಯುಚ್ಯತ ಇತ್ಯರ್ಥಃ । ಯಸ್ಮಾಚ್ಚಾಸ್ಯ ಜಾಗ್ರತ್ಯೋ ಮೂಢಜನಜಾಗ್ರತ್ತ್ವೇನ ಪ್ರಸಿದ್ಧಾ ರಸೈಷಣಾ ಇಂದ್ರಿಯೈಃ ಶಬ್ದಾದಿ ವಿಷಯಾ ಸ್ವಾದಶ್ಚಿತ್ರಾವಲೋಕಿತ ನೃತ್ಯಯುದ್ಧಾದಿರಿವ ಪುರೋಗತಾ ಅಪಿ ನ ಸಂತಿ ತಸ್ಮಾತ್ "ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾಪಶ್ಯತೋ ಮುನೇಃ" ಇತ್ಯುಚ್ಯತ ಇತ್ಯರ್ಥಃ ॥—ತಾ. ಪ್ರ )

೩೩ ತಿಳಿದವನಿಗೆ ಈ ದೃಶ್ಯರೂಪವಾದ ಜಗದ್ವೇದನವು ಜಾತ್ಯಂಧನಿಗೆ ಆಗುವ ರೂಪಾನುಭವದಂತೆ ಕೇವಲ ಅಸದ್ರೂಪವು. ಭ್ರಾಂತಪ್ರಾಯವು . ಆತನಿಗೆ ಲೋಕವು ಕಂಡರೂ ಕಾಣಬಹುದು: ಕಾಣದಿದ್ದರೂ ಇಲ್ಲ.

(ಭಾತಿ ಚೇನ್ನಿಶಾಸ್ವಪ್ನವನ್ನ ಭಾತಿ ಚೇನ್ನಿಶಾಸುಷುಪ್ತವದಿತಿ—ತಾ. ಪ್ರ.)

೩೪. ವಿಮೂಢರಿಗೆ ದುಃಖವನ್ನು ಉಂಟುಮಾಡುವ ಜಗತ್ತು ವಿಮೂಢರಿಗೆ

ನಿರ್ವಿಭಾಗಃ ಸಮಾಶ್ವಸ್ತೋಽವಿರೋಧಂ ಪರಮಾಗತಃ ।
ಆಶೀತಲಾಂತಃಕರಣೋ ನಿರ್ವಾಣೋ ಜ್ಞೋಽವತಿಷ್ಠತೇ ॥ ೩೫ ॥

ತಜ್ಞಸ್ಯಾಕೃಷ್ಟಮುಕ್ತಸ್ಯ ಸಮಂ ಧ್ಯಾನಂ ವಿನಾ ಸ್ಥಿತಿಃ ।
ನಿಮ್ನಂ ವಿನೈವ ತೋಯಸ್ಯ ನ ಸಂಭವತಿ ಕಾಚನ ॥ ೩೬ ॥

ಅರ್ಥ ಏವ ಮನಸ್ಕಾರೋ ಮನ ಏವಾರ್ಥರಂಜನಂ ।
ಏಷ ಏವೈಷ ಆಭಾಸಃ ಸಬಾಹ್ಯಾಭ್ಯಂತರಾತ್ಮಕಃ ॥ ೩೭ ॥

---

ಮಾತ್ರ ಇರುವಂತೆ ತೋರುವುದು. ಆದರೂ ಅದು ಸತ್ ಅಲ್ಲ. ಸ್ವಪ್ನವನ್ನು ಸ್ವಪ್ನವೆಂದು ತಿಳಿದುಕೊಂಡಮೇಲೆ ರೂಪಾಲೋಕ ಮನಸ್ಕಾರಗಳು ರುಚಿಸುವುದಿಲ್ಲ ಅದರಂತೆಯೇ ಅವುಗಳು ಜಾಗ್ರತ್ಸ್ವಪ್ನದಲ್ಲಿಯೂ ಸ್ಫುರಿಸದೆಯೇ ಇರಲಿ

೩೫. (ಬ್ರಹ್ಮ)ಜ್ಞನಾದವನು ನಿರ್ವಿಭಾಗವಾಗಿರುವ ಅಖಂಡದಲ್ಲಿ ಸಮಾಶ್ವಸ್ತನಾಗಿ (ಸಮಸಮವಾಗಿ ನಿಂತು ಸಮಾಧಾನವನ್ನು ಹೊಂದಿ) ಉತ್ತಮವಾದ ಅವಿರೋಧವನ್ನು ಪಡೆದವನಾಗಿ, ಅಂತಃಕರಣದಲ್ಲಿ ಪೂರ್ಣವಾಗಿ ಶಾಂತಿಯನ್ನು ಹೊಂದಿದವನಾಗಿ, ನಿರ್ವಾಣವನ್ನು ಪಡೆದು ಇರುವನು.

೩೬ ತಜ್ಞನಾಗಿ, ಬಹಿರಾಕರ್ಷಣಗಳಿಂದ ಮುಕ್ತನಾದವನಿಗೆ ಧ್ಯಾನವಿಲ್ಲದೆ ಸ್ಥಿತಿಯೇ ಇರುವುದಿಲ್ಲ. ನೀರು ಹಳ್ಳವಿದ್ದರಲ್ಲವೆ ಅತ್ತಕಡೆಗೆ ಓಡುವುದು ?

(ಆಕೃಷ್ಟಾನಿ ಭೋಗವಾಸನಾಭಿಶ್ಚಿತ್ತಸ್ಯ ಬಹಿರಾಕರ್ಷಣಾನಿ ತೈರ್ಮುಕ್ತಸ್ಯ ವರ್ಜಿತಸ್ಯ ತಜ್ಞಸ್ಯ ಧ್ಯಾನಂ ಚಿತ್ತ ನಿರೋಧಯತ್ನಂ ವಿನೈವ ಸಮಂ ಸ್ಥಿತಿರ್ಭವತಿ। ತದ್ದೃಷ್ಟಾಂತೇನೋಪಪಾದಯತಿ ।—ಯಥಾ ತಡಾಗಾದಿತೋಯಸ್ಯ ಕುಲ್ಯಾದಿ ನಿಮ್ನಮಾರ್ಗಂ ವಿನಾ ಕಾಚನ ಪ್ರವಾಹಾದಿ ಕ್ರಿಯಾ ನ ಸಂಭವತಿ। ತದ್ವದಿತ್ಯರ್ಥಃ —ತಾ ಪ್ರ.)

೩೭. ಅರ್ಥವೇ ಮನಸ್ಕಾರವು: ಮನವೇ ಅರ್ಥವಾಗಿ ರಂಜಿಸುವುದು. ಅರ್ಥ ಎಂಬ ಈ ಆಭಾಸವೇ ಬಾಹ್ಯವಾದಾಗ ಅರ್ಥವಾಗಿ ಅಂತರವಾದಾಗ ಮನಸ್ಸಾಗುವುದು

ಆಸಮುದ್ರಂ ನದೀವಾಹಶತಸಂಘೈಮಯಾತ್ಮಕಂ ।
ಯಥೈಕಶ್ಲೇಷಪಿಂಡಾತ್ಮ ವಹತ್ಯಂಬುತರಂಗಿಣಾಂ ॥ ೩೮ ॥

ಸಬಾಹ್ಯಾಭ್ಯಂತರಾಕಾರಮರ್ಥಾನರ್ಥಮಯಾತ್ಮಕಂ ।
ಮನ ಏವ ಸ್ಫುರತ್ಯರ್ಥನಿರ್ಭಾಸಂ ವ್ಯಾತತಂ ತಥಾ ॥ ೩೯ ॥

ನಾಸ್ತ್ಯರ್ಥಮನಸೋರ್ದ್ವಿತ್ವಂ ಯಥಾ ಜಲತರಂಗಯೋಃ ।
ಏಕಾಭಾವೇ ದ್ವಯೋಃ ಶಾಂತಿಃ ಪವನಸ್ಪಂದಯೋರಿವ ॥ ೪೦ ॥

ನೂನಮೇಕೋಪಶಾಂತ್ಯೈವ ನಿಃಸಾರೇ ಪರಮಾರ್ಥತಃ ।
ಏಕತ್ವಾದರ್ಥಮನಸೀ ಸಮಮೇವಾಶು ಶಾಮ್ಯತಃ ॥ ೪೧ ॥

---

(ನನು ತತ್ವಜ್ಞಾನೇನ ಬಾಹ್ಯಾರ್ಥಬಾಧೇ ಬಹಿರಿಂದ್ರಿಯಾಣಿ ನ ಪ್ರವರ್ತತಾಂ ಮನಸ್ಕಾರ ನಿರೋಧಸ್ತು ಕಥಂ ಸಿದ್ಧ್ಯೇತ್? ತತ್ರಾಹ . ಏಷ ಮನಸ್ಕಾರ ಏವ ಏಷೋಽರ್ಥಾಭಾನಃ ॥—ತಾ. ಪ್ರ.)

೩೮ ಸಮುದ್ರವನ್ನು ನೇರುವವರೆಗೂ ನೂರಾರು ನದಿಗಳಾಗಿ ಹರಿದ ನೀರು ಸಮುದ್ರವನ್ನು ನೇರಿದ ಮೇಲೆ, ನದಿಗಳ ನೀರೆಲ್ಲ ನೇರಿ ಒಂದೇ ಪಿಂಡವಾಗುವುದಲ್ಲವೆ?

೩೯. (ಹಾಗೆಯೇ) ಅರ್ಥವು ಬಾಹ್ಯವಾಗಿರಲಿ ಆಭ್ಯಂತರವಾಗಿರಲಿ, ಅರ್ಥವಾಗಿರಲಿ ಅನರ್ಥವಾಗಿರಲಿ, ಅದೆಲ್ಲವೂ ಮನಸ್ಸಿನ ಆಭಾಸವೇ! ಮನಸ್ಸೇ ಅರ್ಥರೂಪವಾಗಿ ಕಾಣಿಸಿಕೊಳ್ಳುತ್ತ ಎಲ್ಲೆಲ್ಲೂ ಹರಡಿರುವುದು.

೪೦. ಅರ್ಥ–ಮನಸ್ಸು ಎಂಬ ದ್ವಿತ್ವವು ಯಾವಾಗಲೂ ಇಲ್ಲ. ಜಲವು ಬೇರೆ, ತರಂಗವು ಬೇರೆ, ಎಂಬುದು ಯಾವಾಗಲಾದರೂ ಉಂಟೇನು? ಅದರಿಂದ ಒಂದು ಇಲ್ಲವಾದರೆ ಎರಡೂ ಇಲ್ಲವಾಗುವುದು ಗಾಳಿಯು ನಿಂತಮೇಲೆ ಅದರ ವ್ಯಾಪಾರವು ಇರುವುದೇನು?

೪೧. ನಿಜವಾಗಿಯೂ ಯಾವುದಾದರೊಂದು ಶಾಂತವಾದರೆ ಎರಡೂ ನಿಃಸಾರವಾಗುವುವು ಏಕೆಂದರೆ ಪಾರಮಾರ್ಥಿಕವಾಗಿ ನೋಡಿದರೆ ಅರ್ಥ–ಮನಸ್ಸುಗಳು ಒಂದೇ ಹೊರತು ಎರಡಲ್ಲ. ಅದರಿಂದ ಒಂದೇ ಕಾಲದಲ್ಲಿಯೇ ಎರಡೂ ಶಾಂತವಾಗುವುವು.

ಅರ್ಥಃ ಸಂಕಲ್ಪರೂಪಾತ್ಮಾ ನೇಹಿತವ್ಯೋ ವಿಜಾನತಾ ।
ಮನಶ್ಚ ಸಮ್ಯಗ್ಜ್ಞಾನೇನ ಶಾಂತಿರೇವಂ ಭವೇತ್ತಯೋಃ ॥ ೪೨ ॥

ಅನಷ್ಟೇ ನಶ್ಯತಶ್ಚೈತೇ ಜ್ಞಸ್ಯಾರ್ಥಮನಸೀ ಸ್ವತಃ ।
ಮೃನ್ಮಯೇ ದ್ವಿಷತಿ ಜ್ಞಾನಾದ್ವಿಷದ್ಭಾವಭಯೇ ಯಥಾ ॥ ೪೩ ॥

ಯಥಾಸಂಸ್ಥಂ ಸ್ಥಿತೇ ಏವ ಜ್ಞಸ್ಯಾರ್ಥಮನಸೀ ಸದಾ ।
ಕಿಮಪ್ಯಪೂರ್ವಮೇವಾನ್ಯತ್ಸಂಪನ್ನೇ ಭಾವರೂಪಿಣೀ ॥ ೪೪ ॥

---

೪೨. ಅರ್ಥವು ಸಂಕಲ್ಪರೂಪವಾದುದು. ಬಲ್ಲವನು ಅದನ್ನು ಕೋರಬಾರದು. (ಆ ಸಂಕಲ್ಪವನ್ನು ಮಾಡುವುದು) ಮನಸ್ಸು. ಸಮ್ಯಗ್ ಜ್ಞಾನವನ್ನು ಪಡೆದರೆ ಈ ಎರಡೂ ಶಾಂತವಾಗುವುವು

೪೩. ಹೀಗೆ, ತಿಳಿದವನಿಗೆ ಈ ಅರ್ಥ ಮನಸ್ಸುಗಳೆರಡೂ ತಾವಾಗಿ ನಾಶವಾಗುವುವು. (ತಿಳಿಯದವನನ್ನು ಗೋಳುಗುಟ್ಟಿಸುವುವು.) ಶತ್ರುವಿನ ಆಕಾರದಿಂದಿರುವ ಮಣ್ಣಿನ ಪ್ರತಿಮೆಯು ಎದುರಿಗೆ ಇರುವಾಗ ದಿಗಿಲಾಗುವುದು. ಇದು ಮಣ್ಣಿನದು ಎಂದು ತಿಳಿದ ಮೇಲೆ ಆ ಶತ್ರುಭಾವವೂ ಅದರಿಂದ ಆಗುವ ಭಯವೂ ಎರಡೂ ಇಲ್ಲವಾಗುವುವು. ಹಾಗೆಯೇ ಇದು.

೪೪. ತಿಳಿದವನಿಗೆ ಅರ್ಥ–ಮನಸ್ಸು ಎರಡೂ ಯಾವಾಗಲೂ ಬ್ರಹ್ಮರೂಪವಾಗಿಯೇ ಇರುವುದು. (ಅಜ್ಞನಿಗಾದರೋ) ಭಾವನಾಬಲದಿಂದ ಉಂಟಾದ (ಸಂಸಾರವೆಂಬ–ಬ್ರಹ್ಮೇತರವಾದ) ಮತ್ತೊಂದು ಉಂಟು ಎನ್ನಿಸುವುದು. ಹಾಗೆನ್ನಿಸಿದರೂ ಅದು ಅ–ಪೂರ್ವವು (ಮೊದಲಿಲ್ಲದ್ದು–ಅಸತ್ಯವು.)

(ಯಥಾಸಂಸ್ಥಂ ಪಾರಮಾರ್ಥಿಕ ಬ್ರಹ್ಮಭಾವೇನ-ಅನ್ಯತ್ ಸಾಂಸಾರಿಕ ದಶಾಪ್ರಸಿದ್ಧರೂಪಾದನ್ಯತ್, ಪೂರ್ಣಾನಂದರೂಪಸಂಪನ್ನೇ ಭಾವರೂಪಿಣಿ ಪರಮಾರ್ಥಸದ್ರೂಪಿಣಿ ಸಂಹಿತೇ ಹೇತು ಫಲಭಾವೇನ ಘಟಿತೇ ಅರ್ಥಃ ಸುಖದುಃಖಭೋಗಃ, ತತ್ಸಾಧನಂ ಜಗತ್ ತ್ರೈಲೋಕ್ಯಂ ಚ ಯೇನ ತಥಾವಿಧಃ ಸಂಸಾರಕಾಲಃ ಅಪಿ ಶಬ್ದಾತ್ ಕಾಲಕೃತಾಃ ಪದಾರ್ಥಾನಾಂ ಜನ್ಮಾದಿ ವಿಕಾರಾಃ, ತದ್ಭೋಕ್ತಾ ಅಜ್ಞಃ, ತದ್ವಿಷಯಃ ಶಬ್ದಾದಿ ವಿಷಯೋಽಪೀತಿ ಸರ್ವಂ ತತ್ವಜ್ಞದೃಷ್ಟ್ಯಾ ಅಸತ್॥—ತಾ. ಪ್ರ.)

ಸಂಹಿತಾರ್ಥಜಗತಾ ಲೋಽಪ್ಯಜ್ಞೋ ಜ್ಞವಿಷಯೋಽಪ್ಯಸತ್ ॥ ೬೫ ॥

ಪಾರ್ಶ್ವಸುಪ್ತನರಸ್ವಪ್ನ ಇವ ಕ್ಲೀಬಾಗ್ರ್ಯಯಕ್ಷವತ್ ।
ಜ್ಞಸ್ಯ ಸಾಜ್ಞಂ ಜಗನ್ನಾಸ್ತಿ ವೀರಸ್ಯೇವ ಪಿಶಾಚಧೀಃ ॥ ೬೬ ॥

ಜ್ಞಮಜ್ಞೋ ಭಾವಯತ್ಯಜ್ಞಂ ಚಿರಂ ವಂಧ್ಯಾಪಿ ವರ್ಧತೇ ।
ವಿನೈವ ಜ್ಞಾತಶಬ್ದಾರ್ಥಮರ್ಥಭಾವಮಿವಾಗತಂ ॥ ೬೭ ॥

ಸ್ಥಿತಂ ಬೋಧಮನಾದ್ಯಂತಂ ಸ್ವಭಾವಂ ಸರ್ಗಗಂ ವಿದುಃ ।
ಮನಃಶಬ್ದಾರ್ಥರಹಿತಂ ವಿಭಾಗಾಂತವಿವರ್ಜಿತಂ ॥ ೬೮ ॥

---

೬೫ ಜಗತ್ತು ಕಾಲಗಳೆರಡೂ ಸಂಹಿತಾರ್ಥಗಳು ಎಂದರೆ ಹೇತು–ಫಲ ಭಾವಗಳಿಂದಲೂ ಅರ್ಥದಿಂದಲೂ ಕೂಡಿದವು. ಇವು ಅಜ್ಞನಿಗೆ ಸತ್ಯವೆಂದು ತೋರುವ ವಿಷಯಗಳು. ಇವನ್ನು ಸತ್ಯವೆಂದು ಭೋಗಿಸಬೇಕೆನ್ನುವವನು ಅಜ್ಞನು. ನಿಜವಾಗಿಯೂ ಇವೆಲ್ಲವೂ ಅಸತ್ !

೬೬. ಮಗ್ಗುಲಲ್ಲಿ ಮಲಗಿರುವವನು ಕಾಣುವ ಕನಸು ನಮಗೆ ಕಾಣಿಸುವುದಿಲ್ಲ: ಅಧೀರನಾದವನ ಕಾಣಿಸುವ ಯಕ್ಷವು ಧೀರನಿಗೆ ಕಾಣಿಸುವುದಿಲ್ಲ. ಹಾಗೆಯೇ ತಿಳಿದವನಿಗೆ, ಜಗತ್ತೂ ತದ್ಭೋಕ್ತನಾದ ಅಜ್ಞ ಇಬ್ಬರೂ ಅಸತ್ತೆ ! ಇರುವುದಿಲ್ಲ.

೬೭ ಅಜ್ಞ ವಿಷಯವೂ ಹಾಗೆಯೇ! ಅಜ್ಞನು ಜ್ಞನನ್ನು ಅಜ್ಞನೆನ್ನುವನು. ಅವನಿಗೆ ವಂಧ್ಯೆಯೂ ಪುತ್ರಪೌತ್ರಾದಿಗಳಿಂದ ವರ್ಧಿಸುವಳು ಎನ್ನಿಸುವುದು. ಅವನಿಗೆ ಶಬ್ದದ ಅರ್ಥವು ತಿಳಿಯದಿದ್ದರೂ, ಅರ್ಥವನ್ನು ಬಲ್ಲವನಂತೆಯೇ ವ್ಯವಹರಿಸುವನು.

(ವಂಧ್ಯಾಪಿ ಪುತ್ರ ಪೌತ್ರಾದಿ ವಿಸ್ತಾರೇಣ ವರ್ಧತೇ ತದ್ವೃಷ್ಟ್ಯಾ ಇತಿ ಶೇಷಃ। ತತ್ವಜ್ಞಾಸ್ತರ್ಹಿ ಜಗತ್ಸ್ವಭಾವಂ ಕೀದೃಶಂ ವಿದುಃ ತಮಾಹ—ವಿನೈವೇತಿ। ಜ್ಞಾತಶಬ್ದಸ್ಯ ಅರ್ಥೋಽಜ್ಞಾನ ವಿಷಯತ್ವಂ, ತಂ ವಿನೈವ, ಸ್ವಪ್ರಕಾಶಕತ್ವಾದೇವ, ಅರ್ಥಾಭಾಸಮಿವ ಸ್ಥಿತಂ ಭಾಸಮಾನಮನಾದ್ಯಂತಂ ಬೋಧಂ ಬ್ರಹ್ಮೈವೇತಿವಿದುಃ–ಇತ್ಯರ್ಥಃ—ತಾ. ಪ್ರ.)

೬೮. ತಿಳಿದವರು ಜ್ಞಾನಸ್ವರೂಪವಾದ ಬ್ರಹ್ಮವು ಆದಿ ಅಂತಗಳಿಲ್ಲದೆ, ಸ್ವ–ಭಾವದಲ್ಲಿ, ಸರ್ಗಗವಾಗಿ, ಸರ್ವಗವಾಗಿ, ಮನಸ್ ಎಂಬ ಶಬ್ದಕ್ಕೆ ಅರ್ಥ

ಬೋಧವಾರಿಮನೋಬುದ್ಧಿತರಂಗಮಿವ ನಿರ್ಮಲಂ ।
ಕ್ವ ಸಂಭವತ ಏವಾಂತಃ ಕೇ ವಾರ್ಥಮನಸೀ ಕಿಲ ॥ ೪೯ ॥

ನಿರರ್ಥಿಕೈವ ವಿಭ್ರಾಂತಿಃ ಸ್ವಭಾವಮಯಮಾಸ್ಯತಾಂ ॥ ೫೦ ॥

ಶುದ್ಧಬೋಧಸ್ವಭಾವಸ್ಥೈರಾಕಾಶಮಿವ ಶಾರದೈಃ ।
ಜಾಗ್ರತ್ಸ್ವಪ್ನಸುಷುಪ್ತಾಂತೈರ್ಮನಸ್ತ್ವಂ ನಾನುಭೂಯತೇ ॥ ೫೧ ॥

ವಿಧೂಯಾನಂತನಾನಾತ್ವಮಸದ್ಭಾವನಾಮಯೇ ।
ಜ್ಞೇಯಂ ರಜ್ಜುರಿವಾಶೇಷಂ ಸ್ವಭಾವೇ ತಿಷ್ಠ ಚಿದ್ಘನೇ ॥ ೫೨ ॥

ವಾದದ್ದು ಅಲ್ಲವಾಗಿ, ಕೊನೆಯಲ್ಲಿಯೂ ಯಾವ ವಿಭಾಗವೂ (ಸಿದ್ಧಾಂತ ಎಂಬಂತೆ ವಿಭಾಗಾಂತ) ಇಲ್ಲದ್ದಾಗಿ ಇರುವುದು ಎಂದು ಹೇಳುವರು.

೪೯. ಬೋಧವೆಂಬ ನಿರ್ಮಲೋದಕದಲ್ಲಿ ಮನೋಬುದ್ಧಿಗಳೆಂಬ ತರಂಗಗಳು ಕಾಣುವುವು. ಇವು ನಿಬಿಡವಾಗಿ ತುಂಬಿರುವ ನೀರಿನ ಒಳಗೆಂತು ಕಂಡಾವು? ಅದರಿಂದ ಅರ್ಥ–ಮನಸ್ಸು ಎನ್ನುವವು ಎಲ್ಲಿಯವು?

೫೦ ಈ ಮನಸ್ಸು ಅರ್ಥಗಳು ಉಂಟು ಎಂಬ ವಿಭ್ರಾಂತಿಯು ಮಿಥ್ಯೆಯು– ಏನೂ ಪ್ರಯೋಜನವಿಲ್ಲದ್ದು. ಅದರಿಂದ, ಸ್ವಭಾವಪೂರ್ಣನಾಗಿ ಇರು.

೫೧ ಶರದೃತುವಿನ ಆಕಾಶದಂತೆ ನಿರ್ಮಲವಾದ ಶುದ್ಧ ಬೋಧವೇ ಸ್ವಭಾವವಾದ ಬ್ರಹ್ಮದಲ್ಲಿ ಸ್ಥಿತರಾಗಿರುವವರಿಗೆ, ಜಾಗ್ರತಿನಲ್ಲಿರಲಿ, ಸ್ವಪ್ನದಲ್ಲಿರಲಿ, ಸುಷುಪ್ತಿಯಲ್ಲಿರಲಿ, ಮನಸ್ಸು ಎನ್ನುವುದು ಒಂದುಂಟು ಎಂಬುದೇ ಅನುಭವಕ್ಕೆ ಬರುವುದಿಲ್ಲ

(ಸ್ವಭಾವಸ್ಥಿತೌ ನಿರೂಢಾಯಾಂ, ಅವಸ್ಥಾತ್ರಯಸ್ಯ ತುರೀಯ ಬೋಧಮಾತ್ರತಾ ಸಂಪತ್ತೇರ್ಮಂತವ್ಯಾಭಾವಾನ್ಮನಸಃ, ಮನಸ್ತ್ವಮಪ್ಯಪೈತೀತ್ಯಾಹ —ತಾ. ಪ್ರ.)

೫೨. ಜಾಗ್ರತ್ಸ್ವಪ್ನಗಳಲ್ಲಿ ಕಂಡು ಬರುವ ಅನಂತ*ನಾನಾತ್ವ ರೂಪವಾಗಿ

ಜ್ಞಪ್ತಿರೇವಾಂತರಂ ಬಾಹ್ಯಂ ಚಾರ್ಥತ್ವಮಧಿತಿಷ್ಠತಿ ।
ಬೀಜಂ ಶಾಖಾಫಲಾನೀವ ಕ್ವಾತೋಽರ್ಥಮನಸೀ ವದ ॥ ೫೩ ॥

ಜ್ಞೇಯಾಸಂಭವತೋ ಜ್ಞಪ್ತಿರಪ್ಯನಾಖ್ಯಂ ಪದಂ ಗತಾ ।
ಶಾಂತಾಶೇಷವಿಶೇಷಾತ್ಮಾ ತೇನ ಶೇಷೋಽಸ್ತಿ ಸತ್ಸ್ವಭಾಃ ॥ ೫೪ ॥

ಅರ್ಥ ಏವ ಮನಸ್ಕಾರಃ ಸ ಚಾಭಾವಾತ್ಮಕೋ ಭ್ರಮಃ ।
ಮನ ಏವಾರ್ಥಸಂಸ್ಕಾರಃ ಸ ಚಾಭಾವಾತ್ಮಕೋ ಭ್ರಮಃ ॥ ೫೫ ॥

---

ರುವ ಅಸ್ಸದ್ಭಾವ ಜ್ಞೇಯವನ್ನು ಬೀಡು. ಸರ್ಪಬುದ್ಧಿಯಳಿದ ಮೇಲಿನ ರಜ್ಜುವಿನಂತಾಗು ಅನಾಮಯವಾದ, ಸ್ವಭಾವವಾದ, ಚಿದ್ಘನದಲ್ಲಿ ನಿಲ್ಲು.

೫೩. ಜ್ಞಪ್ತಿಯೇ ಆಂತರದಲ್ಲಿಯೂ ಬಾಹ್ಯದಲ್ಲಿಯೂ ಅರ್ಥತ್ವ ತಳೆಯುವುದು. ಬೀಜವೇ ತಾನೇ ಶಾಖಾಪಲ್ಲವಗಳಲ್ಲೆಲ್ಲಾ ಇರುವುದು? ಹೀಗಿರಲು, ಅರ್ಥ–ಮನಸ್ಸು ಎಂಬ ಎರಡು ಎಲ್ಲಿಯದು ?

೫೪. ಅದರಿಂದ, (ಜ್ಞಾನವಲ್ಲದ) ಜ್ಞೇಯವಿನ್ನೊಂದು ಅಸಂಭವವಾದ್ದರಿಂದ ಜ್ಞಪ್ತಿಯು ಅನಾಖ್ಯವೆಂದು ಕರೆಸಿಕೊಂಡಿತು. ಅಶೇಷ ವಿಶೇಷಗಳೂ ಶಾಂತವಾಗಿ ಹೋದ ಮೇಲೆ ಶೇಷವಾಗಿ ಉಳಿಯುವುದು ಯಾವುದೋ ಅದು ಸತ್-ಸ್ವ-ಭಾ ಆಗಿರುವುದು

(ಜ್ಞಪ್ತಿರ್ಬುದ್ಧಿವೃತ್ತಿಃ। ಸ್ವಭಾಃ–ಸ್ವಪ್ರಕಾಶಂ—ತಾ. ಪ್ರ.)

೫೫. ಅರ್ಥವೆಂಬುದು ಮನಸ್ಕಾರವು. ಅದೂ ಅಭಾವಾತ್ಮಕವಾದ ಭ್ರಮವು. ಮನಸ್ಸೆಂಬುದೂ ಅರ್ಥ ಸಂಸ್ಕಾರವು. ಅದೂ ಅಭಾವಾತ್ಮಕವಾದ ಭ್ರಮವು.

(ಅರ್ಥಮನಸೋಃ ಪರಸ್ಪರಾಧೀನ ನಿರೂಪಣತ್ವಾದ ಭೇದೇದ್ವಯೋಽಪಿ ಭ್ರಾಂತಿಮಾತ್ರತಾ ಪರ್ಯವಸ್ಯತೀತ್ಯಾಹ ಬಾಹ್ಯಸ್ಯಾಂತರ ಭಾವಾತ್ಮ ಕತ್ವಾದಾಂತರಸ್ಯ ಬಹಿರಭಾವಾತ್ಮಕತ್ವಾಚ್ಚೇತಿ ಭಾವಃ ॥–ಅರ್ಥ ಇವ ಸಂಸ್ಕ್ರಿಯತ ಇತ್ಯರ್ಥಸಂಸ್ಕಾರಃ—ತಾ. ಪ್ರ.)

ಸರ್ವಾತ್ಮತ್ವಾದಜಸ್ಯೈತದಸ್ಯ ಕಾರಣಕಂ ಮನಃ ।
ಭ್ರಮಾನುಭವತೋರ್ಥಶ್ಚ ಮಿಥ್ಯೈವಾಸ್ತೀವ ಭಾಸತೇ ॥ ೫೬ ॥

ಅಕಾರಣಕಮೇವಾರ್ಥನಿರ್ಭಾಸಂ ಭಾಸತೇ ಮನಃ ।
ವಿದ್ಯುದ್ವಿಲಸಿತಾಕಾರಮಸ್ಥಿರಂ ತರಲಾಯತೇ ॥ ೫೭ ॥

ತ್ವಂ ಮನಸ್ಕಾರಮಾತ್ರಾತ್ಮಾ ಸಂಸೃತೌ ವಿಭ್ರಮಾಯಸೇ ।
ಸ್ವಭಾವೈಕಪರಿಜ್ಞಾನಾನ್ನಾಸಿ ನಾಪಿ ಭ್ರಮಾಯಸೇ ॥ ೫೮ ॥

ಮನಸ್ಯೈವ ಹಿ ಸಂಸಾರ ಆತ್ಮಬೋಧೇನ ಶಾಮ್ಯತಿ ।
ಶುಕ್ತಿರೂಪ್ಯಭ್ರಮಾಕಾರೋ ಜನೋ ಮಿಥ್ಯೈವ ತಾಮ್ಯತಿ ॥ ೫೯ ॥

---

೫೬. ಅಜವಾದ ಬ್ರಹ್ಮವು ಸರ್ವಾತ್ಮಕವು: ಅದರಿಂದ (ಮನವೂ ಅಲ್ಲಿಯೇ ಇರುವುದಾಗಿ) ಅದು ಪ್ರತ್ಯೇಕವಾಗಿದೆಯೆನ್ನಲು ಕಾರಣವಿಲ್ಲ. ಅದರಂತೆಯೇ ಅರ್ಥವೂ ಪ್ರತ್ಯೇಕವಾಗಿಲ್ಲವಾಗಿ ಅದೂ ಭ್ರಮಾತ್ಮಕವು.

೫೭. ಮನಸ್ಸು ಅಕಾರಣವಾಗಿಯೇ ಅರ್ಥ ಸ್ವರೂಪವಾಗಿ ಕಾಣಿಸಿಕೊಳ್ಳುವುದು ಹಾಗಾಗುವುದು ಮನಸ್ಸು ಮಿಂಚು ಹೊಳೆದಂತೆ ಹೊಳೆದು ಅಸ್ಥಿರವಾಗಿ ಚಂಚಲವಾಗಿರುವುದರಿಂದ ಆಗುವುದು

೫೮. ನೀನು ಮನಸ್ಕಾರ ಮಾತ್ರ, ಸ್ವರೂಪನು. ನಿನ್ನ ಸ್ವರೂಪವು ಮನಸ್ಕಾರವಲ್ಲದೆ ಮತ್ತೇನೂ ಅಲ್ಲ. ಅದೇ ಸಂಸಾರರೂಪವಾದ ಭ್ರಮವು. ಸ್ವಭಾವವನ್ನು ತಿಳಿದುಕೊಳ್ಳುವುದರಿಂದ ನಿನ್ನ ಭ್ರಮೆಯೂ ಇಲ್ಲವಾಗುವುದು. ನೀನೂ ಇಲ್ಲವಾಗುವೆ.

೫೯. ಮನಸ್ಸಿನಿಂದಲೇ ಸಂಸಾರವು. ಅದು (ಆ ಮನಸ್ಸು) ಆತ್ಮಜ್ಞಾನದಿಂದ ಶಮನವಾಗುವುದು. ಆ ಸಂಸಾರವು ಶುಕ್ತಿಯನ್ನು ಕಂಡು ಇದು ಬೆಳ್ಳಿಯೆನ್ನುವಂತೆ ಇದನ್ನರಿಯದೆ ಜನವು ಬರಿಬರಿದೆ ತಾಪಪಡುವುದು.

ಅಭಾವಭಾವಸ್ತು ಪರಂ ಬೋಧರೂಪಮಸಂಸ್ಕೃತಿಃ ।
ನಿರ್ವಾಣಾದಿತರಾ ಸತ್ತಾ ದುಃಖಾಯಾಹಮಿತಿ ಭ್ರಮಃ ॥ ೬೦ ॥

ಮೃಗತೃಷ್ಣಾಂಬುರೂಪೋಽಹಮಸಚ್ಛೂನ್ಯಸ್ವರೂಪಕಃ ।
ಇತ್ಯೇವಾತ್ಮಪರಿಜ್ಞಾನಾದಹಮಿತ್ಯೇವ ಶಾಮ್ಯತಿ ॥ ೬೧ ॥

ಜ್ಞಾತ್ವಾ ಜ್ಞಾನಮಯೋ ಭೂತ್ವಾ ಸಬಾಹ್ಯಾಭ್ಯಂತರಾರ್ಥತಾಂ।
ಗತಂ ಸ್ವಮತ್ಯಜದ್ರೂಪಂ ತರಂಗತ್ವಂ ಯಥಾ ಪಯಃ ॥ ೬೨ ॥

ಮೂಲಶಾಖಾಗ್ರಪರ್ಯಂತಾ ಸತ್ತಾ ವಿಟಪಿನೋ ಯಥಾ ।
ನಿರ್ವಿಕಾರಮಲಂ ಜ್ಞಪ್ತೇರ್ಜ್ಞೇಯಾಂತ್ಯೈಕೈಕ ಭಾಸತೇ ॥ ೬೩ ॥

---

೬೦ ದೃಶ್ಯದ ಅಭಾವವೇ ಬ್ರಹ್ಮಭಾವವು ಅದು ಪರಮ ಬೋಧವು ಅದೇ ಅಸಂಸ್ಕೃತಿಯು ಇದೇ ನಿರ್ವಾಣವು ಈ ನಿರ್ವಾಣಕ್ಕಿಂತ ಬೇರೆಯಾದ ಅಹಂ ಎಂಬ ಭ್ರಮೆಯು ದುಃಖಪ್ರದವು.

೬೧. ಈ ಅಹಂ ಎಂಬುದು ಮೃಗತೃಷ್ಣೆಯಲ್ಲಿ ಕಾಣುವ ಜಲದಂತೆ ಅಸತ್ ಆದುದುಃ ಶೂನ್ಯರೂಪವು. ಹೀಗೆ ಅರಿತುಕೊಳ್ಳುವುದೇ ಆತ್ಮ ಪರಿಜ್ಞಾನವು ಇದರಿಂದ ಅಹಂ ಎನ್ನುವುದು ಶಮನವಾಗುವುದು.

೬೨ ತಿಳಿದುಕೊ ತಿಳಿದು ಜ್ಞಾನಮಯನಾಗು. ತನ್ನ ಮೂಲರೂಪವನ್ನು ಬಿಡದೆ ಬಾಹ್ಯ-ಅಭ್ಯಂತರ ಅರ್ಥಗಳಾಗಿರುವ ಆ ಬ್ರಹ್ಮವೇ (ನೀನಾಗು). ಆ ಬ್ರಹ್ಮವೆಂತು ಮೂಲರೂಪವನ್ನು ಬಿಡದೆ ಬಾಹ್ಯಾಂತರಾರ್ಥತೆಯನ್ನು ಪಡೆಯು ವುದು ಎಂದರೆ ನೀರು ತರಂಗವಾಪಂತೆ, (ತರಂಗವೆಂಬ ಚಂಚಲವಾದ ಸ್ವರೂಪ ದಿಂದ ಅಲ್ಲೋಲಕಲ್ಲೋಲವಾಗಿರುವ ನೀರೇ ಸುಮಾರು ಸಾವಿರ ಅಡಿಗಳ ಕೆಳಗೆ ಜಲಫೆನವಾಗಿರುವುದಿಲ್ಲವೇನು ? (ಅದರಂತೆ)

(ಯತ್ತದ್ಬ್ರಹ್ಮ ಸರ್ಗಾದೌ ಸರ್ವಜ್ಞತಯಾ ಸ್ವಾತ್ಮಭೂತಮೇವ.ಸ್ರಷ್ಟವ್ಯ ಪದಾರ್ಥಂ ಜ್ಞಾತ್ವಾ ತಾದೃಶಜ್ಞಾನಮಯೋ ಹಿರಣ್ಯಗರ್ಭಃ ಸ್ವಯಂ ಭೂತ್ವಾ ತತ್ಸಂಕಲ್ಪಾನುಸಾರೇಣ ಸ್ವಯಮೇವ ಸಬಾಹ್ಯಾಂತರಾರ್ಥತಾಂ ಸ್ವರೂಪಮತ್ಯಜ ದೇವ ಗತಂ ಇತ್ಯರ್ಥಃ—ತಾ. ಪ್ರ.)

೬೩. ಮರದ ಬುಡದಿಂದ ಕೊನೆಗಳವರೆಗೂ ಒಂದೇ ಸತ್ತೆಯು ಹೇಗೆ

ಯಥಾ ಯೋಜನಲಕ್ಷಾಢ್ಯಮೇಕಮೇವಾಮಲಂ ನಭಃ ।
ಏಕಮೇವ ತಥಾ ಜ್ಞಾನಂ ಜ್ಞೇಯಾಂತಂ ಭಾತ್ಯಖಂಡಿತಂ ॥ ೬೪ ॥

ಶೂನ್ಯತ್ವಾದೇಕಮಮಲಂ ಯಥಾ ಸರ್ವಗಮೇವ ಖಂ ।
ತಥೈಕಮಮಲಂ ಜ್ಞಾತ್ವಾ ಜ್ಞಾನಜ್ಞೇಯದಶಾಸ್ವಪಿ ॥ ೬೫ ॥

ಘೃತೇನಾತ್ಮಾ ಘನೀಭೂಯ ಪಾಷಾಣೀಕ್ರಿಯತೇ ಯಥಾ ।
ಚಿತಾ ಚೇತ್ಯತಯಾತ್ಮೈವ ಸ್ವಚಿತ್ತೀಕ್ರಿಯತೇ ತಥಾ ॥ ೬೬ ॥

ದೇಶಕಾಲಂ ವಿನೈವಾತ್ಮಾ ಬೋಧಾಬೋಧೇನ ಚಿತ್ತತಾಂ ।
ಅಬುದ್ಧೋ ನೀಯತೇ ನ್ಯಾಯ್ಯೈರೇಕಮೇವೈಷ ಸುಸ್ಥಿತಃ ॥ ೬೭ ॥

---

ವ್ಯಾಪಿಸಿರುವುದೋ ಹಾಗೆ, ಜ್ಞಪ್ತಿಯು ನಿರ್ವಿಕಾರವಾಗಿ ಜ್ಞಾತೃ ಜ್ಞಾನ ಜ್ಞೇಯವಾಗಿರುವ ಈ ಜಗತ್ತಿನಲ್ಲಿ ಜ್ಞೇಯಾಂತವಾಗಿ ಹರಡಿರುವುದು

೬೪. ಹೇಗೆ ಅಮಲವಾದ ಆಕಾಶವು ಲಕ್ಷಾಂತರ ಯೋಜನ ವಿಸ್ತಾರವಾಗಿದ್ದರೂ ಏಕಸತ್ತೆಯು ಹೇಗೋ ಹಾಗೆ, ಜ್ಞಾನವು ಒಂದೇ ಆಗಿ ಅಖಂಡವಾಗಿ ಜ್ಞೇಯಾಂತದವರೆಗೂ ಹೋಗುವುದು.

೬೫. ತಿಳಿದು ನೋಡಿದರೆ, ಶೂನ್ಯವಾಗಿರುವುದರಿಂದ ಆಕಾಶವು ಏಕವೂ ನಿರ್ಮಲವೂ ಆಗಿ ಎಲ್ಲೆಲ್ಲಿಯೂ ತಾನೇ ಆಗಿರುವುದು (ಕಂಡುಬರುವಂತೆ) ಜ್ಞಾನವೂ ಅಮಲವಾಗಿರುವಾಗ ಏಕವೇ ಆಗಿ ಜ್ಞಾನ, ಜ್ಞೇಯುದಶೆಗಳಲ್ಲಿಲ್ಲಾ ಬ್ರಹ್ಮವು ಒಂದೇ ಆಗಿರುವುದು.

೬೬ ತುಪ್ಪವು ಹೆತ್ತು ಘನವಾಗಿ ಕಲ್ಲಿನಂತಾಗುವಂತೆ, ಚೇತ್ಯದ ಕಡೆಗೆ ತಿರುಗಿರುವ ಚಿತ್ತೇ ಚಿತ್ತವಾಗುವುದು.

೬೭ ಆತ್ಮನು ದೇಶಕಾಲಗಳ ಕಟ್ಟಿಗೆ ಒಳಪಡದೆಯೋ ತಾನು ಬೋಧಸ್ವರೂಪನೆಂಬುದನ್ನು ಮರೆತು ಚಿತ್ತವಾಗುವನು. ಆಗ, ತಾನು ಏಕಮೇವ ಆಗಿದ್ದರೂ ನ್ಯಾಯುಗಳನ್ನು ಹಿಡಿದು ಅದು ಹಾಗಲ್ಲ ಎಂದು ವಾದಿಸುವನು.

ಅತ್ರ ಯದ್ಯಪ್ಯಬೋಧಾದೇಃ ಸಂಭವೋ ನಾಸ್ತಿ ಕಶ್ಚನ ।
ತಥಾಪಿ ಕಲ್ಪ್ಯತೇಽತ್ರೈವ ಬೋಧನಾಯ ಪರಸ್ಪರಂ ॥ ೬೮ ॥

ಮಹಾನುಭಾವಾ ವಿಗತಾಭಿಮಾನಾ
ವಮೂಢಭಾವೋಪಶಮೇ ಗಲಂತಿ ।
ನಿರ್ಭ್ರಾಂತಯೋಽನಂತತಯೈವ ಶಾಂತಾ
ನಿತ್ಯಂ ಸಮಾಧಾನಮಯಾ ಭವಂತಿ ॥ ೬೯ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಬ್ರಹ್ಮೈಕತಾನತೋಪದೇಶೋ" ನಾಮ
ತ್ರಿಚತ್ವಾರಿಂಶಃ ಸರ್ಗಃ

---

೬೮. ಆದರೆ ಈ ವಿಚಾರದಲ್ಲಿ ಅಬೋಧವೆಂಬ ಪ್ರತ್ಯೇಕ ಸತ್ತೆಯು ಯಾವುದೂ ಇರುವ ಸಂಭವವೇ ಇಲ್ಲವಾದರೂ, (ನ್ಯಾಯವು ಅದನ್ನು) ಕಲ್ಪಿಸವುದು ಪರಸ್ಪರ ಬೋಧನಕ್ಕಾಗಿ

೬೯. ವಿಗತಾಭಿಮಾನವುಳ್ಳವರು ಮಹಾನುಭಾವರು. ಅಂಥವರು ವಿಮೂಢ ಭಾವವು ಶಾಂತವಾಗಲು, ಅಲ್ಲಿಯೇ ಕರಗಿ ಹೋಗುವರು. ಅವರು ಆಗ ನಿಭ್ರಾಂತರಾಗುವರು ಆಗ ಬ್ರಹ್ಮದ ಅನಂತತ್ವವು ಅವರಿಗೂ ಲಭಿಸಿ ಅವರು ಶಾಂತರಾಗುವರು. ಯಾವಾಗಲೂ ಸಮಾಧಾನ ಸಮ+ಆಧಾನವುಳ್ಳವರಾಗುವರು.

(ಮಹಾನುಭಾವಾ ಅಧಿಕಾರಿ ದೇಹಾದಿ ಸಂಘಾತಾಃ ತತ್ವಜ್ಞಾನೇನ ವಿಮೂಢಭಾವಸ್ಯ ಮೂಲಾಜ್ಞಾನಸ್ಯ ಜ್ಞಾನೇನ ಉಪಶಮೇ ಘೃತಕಾರಿನ್ಯವತ್ ಸ್ವಾತ್ಮನ್ಯೇವ ಗಲಂತಿ। ತದ್ಗಲನಾಜ್ಞಾನಂತತಯಾ ನಿರತಿಶಯಾನಂದ ಪೂರ್ಣ ಭಾವೇನ ಶಾಂತಾಸ್ಸಂತೋ ನಿಭ್ರಾಂತಯೋ ನಿರ್ವಿಕ್ಷೇಪಾ. ನಿತ್ಯಮನವರತಮೇವ ಸಮಾಧಾನಂ ನಮಾಧಿ ವಿಶ್ರಾಂತಿಸ್ತತ್ಪರಾಭವಂತೀ—ತಾ. ಪ್ರ.)

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಬ್ರಹ್ಮೈಕತಾನೋಪದೇಶ" ಎಂಬ
ನಲವತ್ಮೂರನೆಯ ಸರ್ಗವು.

## ಚತುಶ್ಚತ್ವಾರಿಂಶಃ ಸರ್ಗಃ

ಶ್ರೀ ರಾಮ ಉವಾಚ.—

ಕ್ರಮಾತ್ಸಮಾಧಾನತರೋರಾಜೀವಫಲಶಾಲಿನೀಂ ।
ಸಲತಾಕುಸುಮಾಂ ಬ್ರೂಹಿ ಸತ್ತಾಂ ವಿಶ್ರಾಂತಿದಾಂ ಮುನೇ ॥ ೧ ॥

ಶ್ರೀ ವಸಿಷ್ಠ ಉವಾಚ:—

ಆಜೀವಮುದ್ಯದುತ್ಸೇಧಂ ವಿವೇಕಿಜನಕಾನನೇ ।
ಪತ್ರಪುಷ್ಪಫಲೋಪೇತಂ ಸಮಾಧಾನತರುಂ ಶೃಣು ॥ ೨

---

## ನಲವತ್ತನಾಲ್ಕನೆಯ ಸರ್ಗವು

ಶ್ರೀ ರಾಮನು ಕೇಳಿದನು :—

೧ ಎಲೈ ಮುನೀಂದ್ರನೆ, ಸರ್ವ ವಿವೇಕಿ ಜೀವಿಗಳಿಗೂ ಬೇಕಾಗುವ ಫಲವನ್ನೂ ಹೂವಿನ ಗೊಂಚಲುಗಳನ್ನೂ ಕೊಡುವ, ವಿಶ್ರಾಂತಿಯನ್ನು ನೀಡುವ ಸಮಾಧಾನವೆಂಬ ತರುವಿನ ಸ್ಥಿತಿಯನ್ನು ಕುರಿತು (ವಿಸ್ತಾರವಾಗಿ) ಕ್ರಮವಾಗಿ ಹೇಳು.

(ಕ್ರಮಾದ್ಬೀಜಕ್ಷೇತ್ರಸೇಕ ಅಂಕುರೀಭಾವ ಪತ್ರ ಕಾಂಡ ಶಾಖಾ ಪುಷ್ಪ ಫಲ ಚ್ಛಾಯಾ ವಿಸ್ತಾರಾದಿ ವರ್ಣನ ಕ್ರಮಾತ್ । ತಾ ಪ್ರ)

ಶ್ರೀ ವಸಿಷ್ಠನು ಹೇಳಿದನು.—

೨. ವಿವೇಕಿ ಜನವೆಂಬ
ವೆಂಬ ಒಂದು ವೃಕ್ಷವಿರುವುದು. ಅದು ಎತ್ತರವಾಗಿ ಬೆಳೆದಿರುವುದು. ಇನ್ನೂ ಬೆಳೆಯುತ್ತಿರುವುದು. ಅದರ ವಿಚಾರವನ್ನು ಹೇಳುವೆನು ಕೇಳು.

ಯಥಾಕಥಂಚಿದುದಿತಂ ದುಃಖೇನ ಸ್ವಯಮೇವ ಚ ।
ಸಂಸಾರವನನಿರ್ವೇದಂ ಬೀಜಮಸ್ಯ ವಿದುರ್ಬುಧಾಃ ॥ ೩ ॥

ಶುಭಜಾಲಹಲಾಕೃಷ್ಟಂ ರಸಾಸಿಕ್ತಮಹರ್ನಿಶಂ ।
ಪ್ರವಹಚ್ಛ್ವಸನಾಕುಲ್ಯಂ ಕ್ಷೇತ್ರಮಸ್ಯ ವಿದುರ್ಬುಧಾಃ ॥ ೪ ॥

ಸಮಾಧಿಬೀಜಂ ಸಂಸಾರನಿರ್ವೇದಃ ಪತತಿ ಸ್ವಯಂ ।
ಚಿತ್ತಭೂಮೌ ವಿವಿಕ್ತಾಯಾಂ ವಿವೇಕಿಜನಕಾನನೇ ॥ ೫ ॥

ಸ್ವಚಿತ್ತಭೂಮೌ ಪತಿತಂ ಧ್ಯಾನಬೀಜಂ ಮಹಾಧಿಯಾ ।
ಸೇಕೈರಮೀಭಿರ್ಯತ್ನೇನ ಸಂಸೇಕ್ತವ್ಯಮಖೇದಿನಾ ॥ ೬ ॥

---

೩. ದುಃಖದಿಂದಲೋ, ತಾನಾಗಿಯೋ, ಅಂತೂ ಏನೋ ಎಂತೋ, ಅಂತೂ ಸಂಸಾರದಲ್ಲಿ ಜಿಹಾಸೆಯನ್ನು ಪಡುವುದೇ ಈ ಸಮಾಧಿ ವೃಕ್ಷಕ್ಕೆ ಬೀಜವೆಂದು ಬಲ್ಲವರು ಹೇಳುವರು

೪. ಶುಭ ಪರಂಪರೆಯೆಂಬ ನೇಗಿಲಿನಿಂದ ಉತ್ತು, ಆಸಕ್ತಿಯೆಂಬ ಜಲದಿಂದ ಅಹರ್ನಿಶಿಯೂ ಸೇಚನಮಾಡಿ, ಹರಿಯುತ್ತಿರುವ ಶ್ವಾಸಗಳೆಂಬ ಕಾಲುವೆಗಳು ಇರುವ ಕ್ಷೇತ್ರವು ಇದಕ್ಕೆ ಉತ್ತಮವಾದ ನೆಲವೆಂದು ಬಲ್ಲವರು ಹೇಳುವರು.

(ಶಿವಸಂಕಲ್ಪಮಯವಾಗಿ ಶ್ರದ್ಧಾಯುಕ್ತವಾಗಿರುವ ಮನಸ್ಸು ಪ್ರಾಣಾಯಾಮದಿಂದ ಶುದ್ಧವಾಗಿರುವ ದೇಹ ಇವು ಇದು ಬೆಳೆಯಲು ಬೇಕಾದ ಅನುಕೂಲಗಳು.)

೫. ಸಂಸಾರದಲ್ಲಿ ಜಿಹಾಸೆ ಹುಟ್ಟುವುದೇ ಸಮಾಧಿಯ ಬೀಜವು. ಅದು ತಾನಾಗಿ ಹುಟ್ಟುವುದು. ಆ ಬೀಜವನ್ನು ಸ್ವೀಕರಿಸಲು, ಬೇರೆ ವಾಸನಾ ಬೀಜಗಳಿಲ್ಲದ ಚಿತ್ತವೇ ಭೂಮಿಯು. ಆ ಭೂಮಿಯಿರುವುದು ವಿವೇಕಿ ಜನರೆಂಬ ಕಾನನದಲ್ಲಿ.

(ವಿವಿಕ್ತಾಯಾಂ ವಿವೇಪ ಪರಿಷ್ಕೃತಾಯಾಂ—ತಾ. ಪ್ರ.)

೬. ತನ್ನ ಚಿತ್ತಭೂಮಿಯಲ್ಲಿ ಬಿದ್ದ ಧ್ಯಾನ (ಸಮಾಧಿ) ಬೀಜವನ್ನು, ಅದು ಬೆಳೆಯಲೆಂಬ ಮಹಾಬುದ್ಧಿಯಿಂದ. ಅದಕ್ಕೆ ಬೇಕಾದ ಉಪಚಾರಗಳನ್ನು ಪ್ರಯತ್ನಪೂರ್ವಕವಾಗಿ ಮಾಡುತ್ತ, ಖೇದರಹಿತನಾಗಿ, ಬೆಳಸತಕ್ಕದ್ದು.

ಶುದ್ಧೈಃ ಸ್ನಿಗ್ಧೈಃ ಪವಿತ್ರೈಶ್ಚ ಮಧುರೈರಾತ್ಮನೋಹಿತೈಃ ।
ಸತ್ಸಂಗಮನವಕ್ಷೀರೈರೈಂದವೈರಮೃತೈರಿವ || ೭ ||

ಅಂತಃಶೂನ್ಯ ಪ್ರದೈಃ ಪೂರ್ಣೈಃ ಸ್ವಚ್ಛೈರಮೃತಶೀತಲೈಃ ।
ವಿಸೃತೈರಮೃತಾಕುಲ್ಯಾ ಶಾಸ್ತ್ರಾರ್ಥವರವಾರಿಭಿಃ || ೮ ||

ಸ್ವಚಿತ್ತಭೂಮೌ ಪತಿತಂ ಪರಿಜ್ಞಾಯ ಮಹಾಧಿಯಾ ।
ಬೀಜಂ ಸಂಸಾರನಿರ್ವೇದೋ ರಕ್ಷ್ಯಂ ಧ್ಯಾನಸ್ಯ ಯತ್ನತಃ || ೯ ||

---

(ಅಮೀಭಿಃ ವಕ್ಷ್ಯಮಾಣಲಕ್ಷಣೈಃ ಸೇಕೈಃ ಸಂಸೇಕ್ತವ್ಯಂ ನ ಪ್ರಸೂತಿ ವೈರಾಗ್ಯವತ್ ಪುನರ್ಭೋಗಾಸಕ್ತ್ಯಾ ನಾಶನೀಯಂ। ಅಖೇದಿನಾ ಕಾಮಕ್ರೋಧಾದಿ ವೇಗಃ ಖೇದಃ, ತತ್ಸಹಿಷ್ಣುನಾ—ತಾ. ಪ್ರ.)

೭. ಶುದ್ಧವಾಗಿ, ಸ್ನಿಗ್ಧವಾಗಿ, ಪವಿತ್ರವಾಗಿ, ಮಧುರವಾಗಿ ಚಂದ್ರನ ಅಮೃತಗಳಂತೆ ಆತ್ಮಹಿತವನ್ನು ಸಾಧಿಸುವವಾಗಿರುವ ಸಾಧುಸಂಗಮವೆಂಬ ಹೊಸ ಹಾಲಿನಿಂದ ಅದಕ್ಕೆ ಅಭಿಷೇಕಮಾಡಬೇಕು.

೮. (ಹೃದಯದಲ್ಲಿ ತುಂಬಿರುವ ವಾಸನಾ ಜಾಲಗಳನ್ನೆಲ್ಲ ನಿರ್ಮೂಲ ಮಾಡಿ) ಅಂತಶ್ಶೂನ್ಯವನ್ನು ಸಂಪಾದಿಸಿಕೊಡುವ, ಪೂರ್ಣವನ್ನೇ ಲಕ್ಷ್ಯವಾಗಿಟ್ಟು ಕೊಂಡಿರುವುದರಿಂದ ಅಮೃತಕ್ಕಿಂತಲೂ ಶೀತಲವಾಗಿರುವ, (ಗುರುಕೃಪೆಯಿಂದ ಹರಿಯುತ್ತಿರುವ, ಅಮೃತದಿಂದ ಪೂರ್ಣವಾಗಿರುವ, ಶಾಸ್ತ್ರಾರ್ಥವೆಂಬ ಉತ್ತಮ ವಾದ ನೀರು ಹರಿಯುವ ಕಾಲುವೆಗಳನ್ನು ಕಟ್ಟಬೇಕು.

(ನೇತಿನೇತೀತಿ ಸರ್ವದ್ವೈತ ನಿಷೇಧಾದಂತಃ ಸರ್ವ ಸಂಸಾರ ಶೂನ್ಯಾತ್ಮ ಪ್ರದೈಃ ಅತಏವ ಪೂರ್ಣೈಃ ಸರ್ವತಾಪೋಪಶಮನಾದಮೃತವತ್ ಸ್ವಾದು ಶೀತಲೈಃ। ಗುರು ಹೃದಯಸ್ಥಸ್ಯ ಬ್ರಹ್ಮಸರಸಃ ವ್ಯಾಖ್ಯಾದ್ವಾರೈಃ ಪ್ರಸೃತೈಃ। ಅಮೃತ ಪ್ರವಾಹಸ್ಯಾ ಸಮಂತಾತ್ ಕುಲ್ಯಾವದ್ದ್ವಾರಭೂತ ಶ್ರವಣಮನನಾದಿ ಶಾಸ್ತ್ರಾರ್ಥವರವಾರಿಭಿಃ ||—ತಾ ಪ್ರ.)

೯. ಮಹಾ ಬುದ್ಧಿಯಾದವನು ಸ್ವಚಿತ್ತ ಭೂಮಿಯಲ್ಲಿ ಬಿದ್ದಿರುವ ಸಂಸಾರ

ತಪಃಪ್ರಕಾರದಾನೇನ ಪದಾರ್ಥಘಟನೇಶಿತ್ರೈ ।
ತೀರ್ಥಾಯತನವಿಶ್ರಾಂತಿವೃತಿವಿಸ್ತಾರಕಲ್ಪನೈಃ ॥ ೧೦ ॥

ಕರ್ತವ್ಯೋಽಂಕುರಿತಸ್ಯಾಸ್ಯ ರಕ್ಷಿತಾ ಶಿಕ್ಷಿತಾಶಯಃ ।
ಸಂತೋಷನಾಮಾ ಪ್ರಿಯಯಾ ನಿತ್ಯಂ ಮುನಿತಯಾನ್ವಿತಃ ॥ ೧೧ ॥

ಪಶ್ಚಾತ್ಸ್ನಿಗ್ಧಾಶಾವಿಹಗಾನ್ಪರ ಪ್ರಣಯವಕ್ಷಿಣಃ ।
ಅಸ್ಮಾದಾಪತತಃ ಕಾಮಗರ್ವಗೃಧ್ರಾನ್ನಿವಾರಯೇತ್ ॥ ೧೨ ॥

---

ವಿರಕ್ತಿಯೆಂಬ ಬೀಜವನ್ನು ತಿಳಿದು, (ಗುರುತಿಸಿ) ಪ್ರಯತ್ನಪೂರ್ವಕವಾಗಿ ಧ್ಯಾನ ಮಾಡುತ್ತ ಕಾಪಾಡಬೇಕು

(ಧ್ಯಾನಸ್ಯಬೀಜಂ ಸಂಸಾರ ನಿರ್ವೇದರೂಪಂ ರಕ್ಷ್ಯಂ—ತಾ. ಪ್ರ)

೧೦ (ಆ ಯತ್ನಗಳು ಹೇಗಿರಬೇಕು ಎಂದರೆ) ಸಾತ್ವಿಕವಾಗಿರುವ ಕಾಯಿಕ ವಾಚಿಕ ಮಾನಸ ತಪಸ್ಸುಗಳಿಂದಲೂ, (ಕ್ಷೇತ್ರ ದೋಹದಕ್ಕೆ ಜೀವ) ದಾನಗಳಿಂದಲೂ, ಅಮಾನಿತ್ವಾದಿ ಪದಾರ್ಥಗಳನ್ನು ಸಂಪಾದಿಸಿಕೊಡುವ ಸಾಮರ್ಥ್ಯವಿರುವ, ತೀರ್ಥಯಾತ್ರಾ, ಆಯತನ ದರ್ಶನ, ಮೊದಲಾದ ವಿಶ್ರಾಂತಿಯನ್ನು ಕೊಡುವ ವೃತ್ತಿಯನ್ನು ಬೆಳೆಸುವ ಸಾಧನಗಳಿಂದಲೂ (ಆ ಬೀಜವನ್ನು ಬೆಳೆಸಬೇಕು)

೧೧. ಅದು ಅಂಕುರಿಸಿದಾಗ ಅದನ್ನು ಹೇಗೆ ಕಾಪಾಡಬೇಕೆಂಬುದನ್ನು ಬಲ್ಲವನಾಗಿ ಕಾಪಾಡಬೇಕು. ಸಂತೋಷವೆಂಬ ಹೆಸರುಳ್ಳ ನಿಜವಾಗಿಯೂ ಸಂತೋಷವಾಗಿರುವ ಪ್ರಿಯೆಯೊಡನೆ ಕೂಡಿ ಅದರ ರಕ್ಷಣೆಯಲ್ಲಿ ನಿರತನಾಗಬೇಕು.

೧೨ ಅನಂತರ ಅದನ್ನು ತಿನ್ನುವುದಕ್ಕೆ ಬರುವ ಕಾಮ, ಗರ್ವ ಮೊದಲಾದ ಹದ್ದುಗಳನ್ನೂ, ಆಶೆಯೆಂಬ ಸಣ್ಣ ಹಕ್ಕಿಗಳನ್ನೂ, ಅನಾತ್ಮದಲ್ಲಿ ಪ್ರಣಯವೆಂಬ ದೊಡ್ಡ ಹಕ್ಕಿಗಳನ್ನೂ ಓಡಿಸಬೇಕು.

(ಧ್ಯಾನಾಂಕುರ ವಿಘಾತಾರ್ಥಮಾಪತತೋ ನಿವಾರಯೇತ್—ತಾ.ಪ್ರ.)

ಮೃದುಭಿಃ ಸತ್ಕ್ರಿಯಾಕುಂತೈರ್ವಿವೇಕಾರ್ಕಾತಪೈರಪಿ ।
ಅಚಿಂತ್ಯಾಲೋಕದೈರಸ್ಮಾನ್ಮಾರ್ಜಿತವ್ಯಂ ರಜಸ್ತಮಃ　　॥ ೧೩ ॥

ಸಂಪದಃ ಪ್ರಮದಾಶ್ಚೈವ ತರಂಗಾ ಭೋಗಭಂಗುರಾಃ ।
ಪತಂತ್ಯಶನಯಸ್ತಸ್ಮಿನ್ದುಷ್ಕೃತಾಭ್ರಸಮೀರಿತಾಃ　　॥ ೧೪ ॥

ಧೈರ್ಯೌದಾರ್ಯದಯಾಮಂತ್ರೈರ್ಜಪಸ್ನಾನತಪೋದಮೈಃ ।
ವಿನಿವಾರಯಿತವ್ಯಾಸ್ತಾಃ ಪ್ರಣವಾರ್ಥತ್ರಿಶೂಲಿನಾ　　॥ ೧೫ ॥

---

೧೩ ಮೃದುಗಳಾದ ಸತ್ಕ್ರಿಯೆಗಳೆಂಬ ಕುಂತಗಳಿಂದಲೂ, ವಿವೇಕವೆಂಬ ಬಿಸಿಲು ಬೀಳುವಂತೆಮಾಡಿ ಅಚಿಂತ್ಯವಾದ ಬಲವಾದ ಆ ಲೋಕಗಳೂ ರಜಸ್ಸು (ಧೂಳು) ತಮಸ್ಸು (ಕತ್ತಲೂ) ಈ ಕ್ಷೇತ್ರದಲ್ಲಿ ಇಲ್ಲದಂತೆ ಮಾಡಬೇಕು

(ಅಹಿಂಸಾ ಪ್ರಧಾನಗಳಾದ್ದರಿಂದ ಮೃದುಗಳಾದ ಯಮನಿಯಮಾಸನ ಪ್ರಾಣಾಯಾಮ ಈಶ್ವರೋಪಾಸನಾದಿ ಸತ್ಕ್ರಿಯಾ ಲಕ್ಷಣೈಃ ಕುಂತೈರ್ಮಾರ್ಜನಿ ಪೂಲೈಃ ಅಸ್ಮಾದಂಕುರ ಕ್ಷೇತ್ರಾದ್ರಜೋ ಮಾರ್ಜಿತವ್ಯಂ। ಏವಮಚಿಂತ್ಯ ಬ್ರಹ್ಮ ಲೋಕದೈರ್ವಿವೇಕಾಪೈಸ್ತಮೋಽಜ್ಞಾನತಿಮಿರಮಪಿ ಮಾರ್ಜಿತವ್ಯಂ ॥—ತಾ ಪ್ರ)

೧೪ ಇದು ಇನ್ನೂ ಅಂಕುರಾವಸ್ಥೆಯಲ್ಲಿರುವಾಗ ಭೋಗ ಭಂಗುರಗಳಾಗಿ ತರಂಗಗಳಂತಿರುವ ಸಂಪತ್ತುಗಳು, ಪ್ರಮದೆಯರು, ಎಂಬ ಸಿಡಿಲುಗಳು, ದುಷ್ಕೃತ ವೆಂಬ ಆಕಾಶದಿಂದ ಬೀಳುವುವು

೧೫ ಧೈರ್ಯ, ಔದಾರ್ಯ, ದಯಾ, ಮಂತ್ರ, ಜಪ, ಸ್ನಾನ, ತಪ, ದಮ, ಇವುಗಳನ್ನು ಆಚರಿಸುತ್ತಾ ಪ್ರಣವಾರ್ಥವನ್ನು ಧ್ಯಾನಮಾಡುವುದೆಂಬ.ಶೂಲವುಳ್ಳವ ನಾಗಿ ಆ ಸಿಡಿಲುಗಳನ್ನು ನಿವಾರಿಸಬೇಕು

(ಪ್ರಣವಮಾತ್ರಾಭಿಃ ವಿರಾಡಾದಿಭಿಃ ಸ್ಥೂಲ ಸೂಕ್ಷ್ಮ ಪ್ರಪಂಚ ವಿಲಾಪ ನೇನ। ತದ್ಬೋಧೇನೇತಿ ಯಾವತ್॥—ತಾ ಪ್ರ.)

ಇತಿ ಸಂರಕ್ಷಿತಾದಸ್ಮಾದ್ಧ್ಯಾನಬೀಜಾತ್ಪ್ರವರ್ತತೇ ।
ಅಭಿಜಾತ್ಯೋನ್ನತಃ ಶ್ರೀಮಾನ್ವಿವೇಕಾಖ್ಯೋ ನವಾಂಕುರಃ ॥ ೧೬ ॥

ತೇನ ಸಾ ಚಿತ್ತಭೂರ್ಭಾತಿ ಸಪ್ರಕಾಶಾ ವಿಕಾಸಿನೀ ।
ಭವಿತ್ಯಾಲೋಕರಮ್ಯಾ ಚ ಖಂ ಯಥಾಭಿನವೇಂದುನಾ ॥ ೧೭ ॥

ತಸ್ಮಾದಂಕುರತಃ ಪತ್ರೇ ಉಭೌ ವಿಕಸತಃ ಸ್ವಯಂ ।
ಏಕಂ ಶಾಸ್ತ್ರಾಭಿಗಮನಂ ದ್ವಿತೀಯಂ ಸಾಧುಸಂಗಮಃ ॥ ೧೮ ॥

ಸ್ತಂಭಮೇಷ ನಿಬಧ್ನಾತಿ ಸ್ಥೈರ್ಯಂ ನಾಮ ಸಮುನ್ನತಿಂ ।
ಸಂತೋಷತ್ವಗ್ವಿವಲಿತಂ ವೈರಾಗ್ಯರಸರಂಜಿತಂ ॥ ೧೯ ॥

ವೈರಾಗ್ಯರಸಪುಷ್ಟಾತ್ಮಾ ಶಾಸ್ತ್ರಾರ್ಥವ್ರಾವೃಷಾನ್ವಿತಃ ।
ಸ್ವಲ್ಪೇನೈವ ಸ್ವಕಾಲೇನ ವರಾಮೇತಿ ಸಮುನ್ನತಿಂ ॥ ೨೦ ॥

---

೧೬. ಹೀಗೆ ಸಂರಕ್ಷಿಸಿದ ಈ ಧ್ಯಾನ ಬೀಜದಿಂದ, ಒಳ್ಳೆಯ ಜಾತಿಯ, ಎತ್ತರವಾದ, ಸೊಗಸಾದ ವಿವೇಕವೆಂಬ ಹೆಸರಿನ ಹೊಸ ಅಂಕುರವು ಹೊರಡುವುದು.

೧೭. ಅದು ಹುಟ್ಟಿದರೆ ಚಿತ್ತಭೂಮಿಯು ವಿರಾಜಿಸುವುದು: ಪ್ರಕಾಶಮಯವಾಗುವುದು: ವಿಕಾಸಗೊಳ್ಳುವುದು: ನೋಡುವುದಕ್ಕೆ ಚೆನ್ನಾಗುವುದು: ಹೊಸದಾಗಿ ಹುಟ್ಟಿಬಂದ ಚಂದ್ರನಿಂದ ಆಕಾಶವು ಮೆರೆಯುವಂತೆ ಮೆರೆಯುವುದು.

೧೮. ಆ ಅಂಕುರದಿಂದ ಪತ್ರಗಳು ಎರಡು ತಾವಾಗಿ ಹುಟ್ಟುವುವು. ಅವುಗಳಲ್ಲಿ ಒಂದು ಪತ್ರದ ಹೆಸರು ಶಾಸ್ತ್ರಾಭಿಗಮನವು. ಇನ್ನೊಂದರ ಹೆಸರು ಸಾಧು ಸಂಗಮವು.

೧೯. ಇದು ಕಾಂಡವನ್ನಿಟ್ಟು ಕಂಭವನ್ನು ಕಟ್ಟುವುದು. ಆ ಕಂಭವು ಎತ್ತರವಾಗಿರುವುದು: ಅದರ ಹೆಸರು ಸ್ಥೈರ್ಯವೆಂದು. ಅದಕ್ಕೆ ಸಂತೋಷವೆಂಬ ತೊಗಟೆಯಿರುವುದು. ಆದರಲ್ಲಿ ವೈರಾಗ್ಯವೆಂಬ ರಸವು ತುಂಬಿರುವುದು.

೨೦. ವೈರಾಗ್ಯ ರಸ ಪೋಷಿತವಾಗಿ, ಶಾಸ್ತ್ರಾರ್ಥವೆಂಬ ಮಳೆಗಾಲದಿಂದ ಕೂಡಿ, ಕೇವಲ ಕೊಂಚ ಕಾಲದಲ್ಲಿಯೇ, ಬಲು ಎತ್ತರವಾಗಿ ಬೆಳೆಯುವುದು.

ಶಾಸ್ತ್ರಾರ್ಥಸಾಧುಸಂಪರ್ಕವೈರಾಗ್ಯರಸಪೀವರಃ ।
ರಾಗದ್ವೇಷಕಪಿಕ್ಷೋಭೈರ್ನ ಮನಾಗಪಿ ಕಂಪತೇ ॥ ೨೧ ॥

ಅಥ ತಸ್ಮಾತ್ಪ್ರಜಾಯಂತೇ ವಿಜ್ಞಾನಾಲಂಕೃತಾಕೃತೇಃ ।
ಲತಾ ರಸವಿಲಾಸಿನ್ಯ ಇಮಾ ವಿತತದೇಶಗಾಃ ॥ ೨೨ ॥

ಸ್ಫುಟತಾ ಸತ್ಯತಾ ಸತ್ತಾ ಧೀರತಾ ನಿರ್ವಿಕಲ್ಪತಾ ।
ಸಮತಾ! ಶಾಂತತಾ ಮೈತ್ರೀ ಕರುಣಾ ಕೀರ್ತಿರಾರ್ಯತಾ ॥ ೨೩ ॥

ಲತಾಭಿರ್ಗುಣಪತ್ರಾಭಿಃ ಸ ಧ್ಯಾನತರುರೂರ್ಜಿತಃ ।
ಯಶಃಪುಷ್ಪಾಭಿರೇತಾಭಿಃ ಪಾರಿಜಾತಾಯತೇ ಯತೇಃ ॥ ೨೪ ॥

---

೨೧. ಶಾಸ್ತ್ರಾರ್ಥ, ಸಾಧು ಸಂಗಮ, ವೈರಾಗ್ಯಗಳೆಂಬ ರಸಗಳಿಂದ ಕೊಬ್ಬಿ ಬೆಳೆದರೆ ರಾಗ ದ್ವೇಷಗಳೆಂಬ ಕಪಿಗಳು ಬಂದು ಚೇಷ್ಟೆಮಾಡಿದರೂ ಕೊಂಚವೂ ಅವಕ್ಕೆ ಜಗ್ಗುವುದಿಲ್ಲ

೨೨. ಹಾಗೆ ವಿಜ್ಞಾನಾಲಂಕಾರದಿಂದ ಕೂಡಿ ಬೆಳೆದ ಆ ಗಿಡವು ರಸದಿಂದ ತುಂಬಿ ಮೆರೆಯುವ ಕೊಂಬೆಗಳು ಹರಡಿ ಸುತ್ತಮುತ್ತಲೂ ತಾವೇ ತಾವಾಗುವುವು.

(ವಿಜ್ಞಾನಂ ಶ್ರವಣಾವರ್ತನಜಂ ಜ್ಞಾನಂ.... ವಿತತದೇಶಗಾಃ ಪ್ರತಾನವಿಸ್ತೀರ್ಣಾ ಅಪರಿಚ್ಛಿನ್ನಾತ್ಮಪ್ರದೇಶಗತಾಶ್ಚ।—ತಾ. ಪ್ರ.)

೨೩. (ಹಾಗೆ ಹರಡುವ ಆ ಕೊಂಬೆಗಳು ಯಾವವು ಎಂದರೆ) ಸ್ಫುಟತಾ, ಸತ್ಯತಾ, ಸತ್ತಾ, ಧೀರತಾ, ನಿರ್ವಿಕಲ್ಪತಾ, ಸಮತಾ, ಶೂನ್ಯತಾ, ಮೈತ್ರೀ, ಕರುಣಾ, ಕೀರ್ತಿ, ಆರ್ಯತಾ, ಎಂಬಿವು.

(ಸ್ಫುಟತಾ ಸ್ವಾತ್ಮತತ್ವಸ್ಯ ಸ್ಫುಟೇ ಭಾವತಾ, ತದೇಕಸತ್ಯತಾ। ಸತ್ತಾ ತದಾತ್ಮನಾಸ್ಥಿತಿಃ॥ ಧೀರತಾ ತತ್ರಾಪ್ಯಕಂಪ್ಯತಾ। ಸಮತಾ ಸರ್ವವೈಷಮ್ಯನಿವೃತ್ತಿಃ ॥—ತಾ. ಪ್ರ.)

೨೪. ಇಂತಹ ಕೊಂಬೆಗಳಿಂದಲೂ, ಶಾಂತ್ಯಾದಿ ಗುಣಗಳೆಂಬ ಪತ್ರಗಳಿಂದಲೂ ಕೂಡಿ, ಈ ಧ್ಯಾನವೃಕ್ಷವು ಊರ್ಜಿತವಾಗುವುದು. ಯಶಸ್ಸೆಂಬ ಪುಷ್ಪಗಳಿಂದ ಕೂಡಿ, ಇದು ಯತಿಗೆ ಪಾರಿಜಾತವಾಗುವುದು.

ಇತ್ಯಸೌ ಜ್ಞಾನವಿಟಪೀ ಲತಾಪಲ್ಲವಪುಷ್ಪವಾನ್ ।
ಭವಿಷ್ಯಜ್ಜ್ಞಾನಫಲದೋ ದಿನಾನುದಿನಮುತ್ತಮಃ ॥ ೨೫ ॥

ಯಶಃಕುಸುಮಗುಚ್ಛಾಢ್ಯೋ ಗುಣಪಲ್ಲವಲಾಸವಾನ್ ।
ವೈರಾಗ್ಯರಸವಿಸ್ತಾರೀ ಪ್ರಜ್ಞಾಮಂಜರಿತಾಕೃತಿಃ ॥ ೨೬ ॥

ಸರ್ವಾಃ ಶೀತಲಯತ್ಯಾಶಾಃ ಪ್ರಾವೃಷೀವ ಪಯೋಧರಃ ।
ಸರ್ಗಾತಪಂ ಶಮಯತಿ ಸೂರ್ಯತಾಪಮಿವೋಡುಪಃ ॥ ೨೭ ॥

ಪ್ರತನೋತಿ ಶಮಚ್ಛಾಯಾಂ ಛಾಯಾಮಿವ ಘನಾಗಮಃ ।
ನಿರೋಧಮಾಸ್ಫಾರಯತಿ ಶಮೋಽನಿಲ ಇವಾಂಬುದಂ ॥ ೨೮ ॥

---

೨೫. ಇಂತಹ ಈ ಜ್ಞಾನವೃಕ್ಷವು ಲತಾ, ಪಲ್ಲವ, ಪುಷ್ಪಗಳಿಂದ ಕೂಡಿ, ಭವಿಷ್ಯತ್ತಿನಲ್ಲಿ ಜ್ಞಾನಫಲವನ್ನು ಕೊಡುವುದಾಗಿ, ದಿನದಿನವೂ ಉತ್ತಮೋತ್ತಮವಾಗಿ ಬೆಳೆಯುವುದು.

(ಭವಿಷ್ಯಜ್ಜ್ಞಾನಂ ಮೂಲಾಜ್ಞಾನೋಚ್ಛೇದಕ್ಷಮೋ ಬ್ರಹ್ಮಸಾಕ್ಷಾತ್ಕಾರಃ ಸಪ್ತಮ ಭೂಮಿಕಾವಿಶ್ರಾಂತಿ ಪರ್ಯಂತಃ—ತಾ. ಪ್ರ)

೨೬. ಯಶಸ್ಸೆಂಬ ಕುಸುಮ ಗುಚ್ಛಗಳುಂಟು ಈ ಮರಕ್ಕೆ. ಗುಣಗಳೆಂಬ ಪಲ್ಲವಗಳಿಂದ ಇದು ಲಾಸ್ಯವಾಡುವುದು ವೈರಾಗ್ಯವೆಂಬ ರಸದಿಂದ ಹರಡುವುದು. ಪ್ರಜ್ಞಾ ಎಂಬ ಮಂಜರಿಗಳಿಂದ ಮನೋಹರವಾಗಿರುವುದು.

೨೭. ಮೇಘವು ಮಳೆಗಾಲದಲ್ಲಿ ಎಲ್ಲಾ ಆಶೆ (ದಿಕ್ಕು)ಗಳನ್ನೂ ತಣಿಸುವಂತೆ, ಎಲ್ಲಾ ಆಶೆಗಳನ್ನೂ ತಣ್ಣಗೆ ಮಾಡುವುದು. ಚಂದ್ರನು ಸೂರ್ಯನ ತಾಪವನ್ನು ಶಾಂತಗೊಳಿಸುವ ಹಾಗೆ ಸರ್ಗವೆಂಬ ಬಿಸಿಲನ್ನು ತಂಪಿಸುವುದು.

(ಸರ್ಗಾತಪಂ ಸಾಂಸಾರಿಕತಾಪಂ—ತಾ. ಪ್ರ.)

೨೮. ಮಳೆಗಾಲವು ನೆರಳನ್ನು ಹರಡುವಂತೆ, ತಣ್ಣಗಿರುವ ನೆಳಲನ್ನು ಹರಡುವುದು. ಗಾಳಿಯು ಮೋಡಗಳನ್ನು ಕೂಡಿಸುವಂತೆ, ಶಾಂತಿಯು (ಶಮವು) ನಿರೋಧವನ್ನು (ಚಿತ್ತಸ್ಥೈರ್ಯವನ್ನು) ವಿಶಾಲಗೊಳಿಸುವುದು.

ನಿಬಧ್ನಾತ್ಯಾತ್ಮನಾ ಪೀಠಂ ಕುಲಾಚಲ ಇವ ಸ್ಥಿತಂ ।
ಫಲಸ್ಯ ರಚಯತ್ಯೂರ್ಧ್ವಂ ಘಟಿಕಾಮಂಗಲಾದಿತಾಂ　　॥ ೬೯ ॥

ವಿವೇಕಕಲ್ಪವೃಕ್ಷೇ ತು ವರ್ಧಮಾನೇ ದಿನೇದಿನೇ ।
ಛಾಯಾವಿತಾನವಲಿತೇ ಪುಂಸೋ ಹೃದಯಕಾನನೇ　　॥ ೭೦ ॥

ಪ್ರವರ್ತತೇ ಶೀತಲತಾ ತಲತಾಪಾಪಹಾರಿಣೀ ।
ಅಭ್ಯುಲ್ಲಸನ್ಮತಿಲತಾ ತುಷಾರೋದರಸುಂದರೀ　　॥ ೭೧ ॥

ಯಸ್ಯಾಮವಾಂತರಶ್ರಾಂತೋ ವಿಶ್ರಾಮ್ಯತಿ ಮನೋಮೃಗಃ ।
ಆಜನ್ಮಜೀರ್ಣಪಥಿಕಃ ಪಥಿ ಕೋಲಾಹಲಾಕುಲಃ　　॥ ೭೨ ॥

---

೬೯. ಆತ್ಮನಾ (ತಾನಾಗಿ) (ಮೂಲಬಂಧ) ಪೀಠವನ್ನು ಕುಲಾಚಲದಂತೆ ಸ್ಥಿರವಾಗಿರುವ ಹಾಗೆ ಮಾಡುವುದು. (ಕೈವಲ್ಯವೆಂಬ) ಫಲವನ್ನು ಘಟಿಸುವ (ಶಾಂತ್ಯಾದಿ) ಗುಣಶ್ರೀಯನ್ನು ಬೆಳೆಸುವುದು.

೭೦. ವಿವೇಕವೆಂಬ ಈ ಕಲ್ಪವೃಕ್ಷವು ದಿನದಿನದಲ್ಲಿಯೂ ಬೆಳೆಯುತ್ತಿರಲು, ಮನುಷ್ಯರ ಹೃದಯ ಕಾನನದಲ್ಲಿ ದಟ್ಟವಾದ ನೆರಳನ್ನು ಕೊಡುವಷ್ಟು ವಿಸ್ತಾರವಾಗಿ ಬೆಳೆಯಲು,

೭೧. ಹೃದಯತಲದಲ್ಲಿ ನೆಲೆಸಿರುವ (ತ್ರಿವಿಧ) ತಾಪವನ್ನೆಲ್ಲ ಅಪಹಾರ ಮಾಡುವ ಶೀತಲತೆಯು ಲಭಿಸುವುದು; ಹಿಮದಂತೆ ತಂಪಾಗಿರುವುದರಿಂದ ಸುಂದರವಾಗಿರುವ ಬುದ್ಧಿಯು ಲತೆಯಂತೆ ಎಲ್ಲೆಲ್ಲೂ ವಿಸ್ತರಗೊಳ್ಳುವುದು.

೭೨. ಸಂಸಾರ ತಾಪತ್ರಯಗಳಲ್ಲಿ ಸಿಕ್ಕಿ ಬಳಲಿರುವ ಮನೋ ಮೃಗವು ಆ ನೆರಳಿನಲ್ಲಿ ವಿಶ್ರಾಂತಿಯನ್ನು ಪಡೆಯುವುದು ಸ್ವಭಾವವಾಗಿ ಒಂದೇ ಸಮನಾಗಿ ತೀರದ ಹಾದಿಯನ್ನು ನಡೆಯುವುದೇ ಹೋಗಿರುವ ಆ ಮೃಗವು ದೈವ ವಶವಾಗಿ ಸನ್ಮಾರ್ಗವನ್ನು ಹೊಂದಿದರೂ ಅಲ್ಲಿ (ವಾದಿಗಳ) ಕೋಲಾಹಲದಿಂದ ಬಹಳ ವ್ಯಾಕುಲವನ್ನು ಪಡೆಯುವುದು.

ಸತ್ತಾಮಾತ್ರಾತ್ಮಶಾರೀರಚರ್ಮಾರ್ಥಂ ಪ್ರೇಕ್ಷಿತೋಽರಿಭಿಃ ।
ನಾನಾತಾಸಾರಸಾಕಾರಂಗೋಪಯಜ್ಜರ್ಜರೋನ್ಮುಖಃ ॥ ೩೩ ॥

ಸಂಸಾರಾರಣ್ಯವಿಸರದ್ವಾಸನಾಪವನೇರಿತಃ ।
ಅಹಂತಾತಾಪಸರಿತಾ ಸರ್ವದಾ ವಿಪ್ರದಾರದೀ ॥ ೩೪ ॥

ದೀರ್ಘಾದರೀ ದೂರಚಿತಸಾರಸಂಚಾರಜರ್ಜರಃ ।
ಪುತ್ರಪೌತ್ರಪರಾಮರ್ಶಪ್ರತಾಪಾತ್ಪತಿತೋಽವಟೇ ॥ ೩೫ ॥

ಲಕ್ಷ್ಮೀಲತಾವಿಲುಠನಾತ್ಸಂಕಟ್ಟೈಃ ಕುಂಠಿತಾಂಗಕಃ ।
ತೃಷ್ಣಾಸ್ರೋತಸರಿತಂ ಗೃಹ್ಣನ್ಕಲ್ಲೋಲೈರ್ದೂರಮಾಹತಃ ॥ ೩೬ ॥

---

೩೩. (ಆ ಮೃಗವು ಸಾರ ಭೂತವಾದ ತನ್ನ ಶರೀರದ ಚರ್ಮ (ವಿವೇಕ) ವನ್ನು ಹಾರಿಸಿಬೇಕೆಂದು ಹಿಂಬಾಲಿಸುತ್ತಿರುವ ಅರಿ (ಕಾಮಾದಿ ಷಡ್ವೈರಿ)ಗಳು ಅದನ್ನು ಓಡಿಸುತ್ತಿರುವರು. ನಾನಾ ಎಂಬ ಅಸಾರವಾದ ಸಾಕಾರ ಶರೀರಗಳೆಂಬ ಮುಳ್ಳುಪೊದೆಗಳಲ್ಲಿ ತನ್ನನ್ನು ಮರೆಸಿಕೊಳ್ಳುತ್ತ, ಆ ಮುಳ್ಳುಗಳಿಂದ ಜರ್ಜರಿತ ವಾಗಿ ಹೋಗಿರುವುದು

೩೪ (ಆ ಮೃಗವು) ಸಂಸಾರವೆಂಬ ಅರಣ್ಯದಲ್ಲಿ ಬೀಸುತ್ತಿರುವ ವಾಸನಾ ಎಂಬ ವಾತದಿಂದ ಪ್ರೇರಿತವಾಗಿ, ಅಹಂತಾ ಎಂಬ ಮೃಗತೃಷ್ಣಾ ನದಿಯನ್ನು ನೋಡಿಕೊಂಡು ಯಾವಾಗಲೂ ಓಡುತ್ತ, ದಾರದವೆಂಬ ವಿಷವನ್ನು ತಿಂದಂತೆ ಆಗಿರುವುದು

೩೫. ವಿಸ್ತಾರವಾಗಿ ಹರಡಿರುವ ಭೋಗಗಳಲ್ಲಿ ಆದರವುಳ್ಳುದಾಗಿ, (ಆ ಮೃಗವು) ಎಲ್ಲೆಲ್ಲಿಯೋ ಇರುವ ಹಸಿಯ ಹುಲ್ಲನ್ನು ಹುಡುಕಿಕೊಂಡು ತಿರುಗುತ್ತ ಆಯಾಸಪಟ್ಟು, ಪುತ್ರ ಪೌತ್ರರು ಮೊದಲಾದವರನ್ನು ಕಾಪಾಡುವುದೆಂಬ ಪ್ರತಾಪ ದಿಂದ ಹಾರುವಾಗ ಅನರ್ಥವೆಂಬ ಹಳ್ಳದಲ್ಲಿ ಬಿದ್ದು ಹೋಗುವುದು.

೩೬. ಸಂಪತ್ತುಗಳೆಂಬ ಬಳ್ಳಿಗಳಲ್ಲಿ ಸಿಕ್ಕಿಕೊಂಡು ಒದ್ದಾಡುತ್ತ ಸಂಕಟ ಪಡುವ (ಆ ಮೃಗವು) ಅಂಗಾಂಗಗಳಲ್ಲಿಯೂ ಕುಂಠಿತವಾಗಿರುವುದು ತೃಷ್ಣಾ ಎಂಬ ನದಿಯನ್ನು ದಾಟಲು ಹೋಗಿ ಅಲ್ಲಿ (ಹಸಿವು ಬಾಯಾರಿಕೆ ಶೋಕ ಮೋಹ ಮೊದಲಾದ) ತರಂಗಗಳಿಂದ ನೋಯುವುದು.

ವ್ಯಾಧಿದುರ್ವ್ಯಾಧವೈಧುರ್ಯಪಲಾಯನಪರಾಯಣಃ ।
ಅಶಂಕಿತವಿಧಿವ್ಯಾಧಪಾತಾದಿವ ಕೃತಾಕೃತಿಃ ॥ ೩೭ ॥

ಜ್ಞೇಯಾಸ್ಪದಸಮಾಯಾತದುಃಖಸಾಯಕಶಂಕಿತಃ
ವೈರಿವಿದ್ರವಣವ್ಯಗ್ರೋ ದೃಷದಾಹರಣಾಂಕಿತಃ ॥ ೩೮ ॥

ಉನ್ನತಾನತಸಂಪಾತನಿಪಾತೇನಾತಿಘೋರ್ಣಿತಃ ।
ವಿಕಾರೋಪಲನಿರ್ಘಾತೈಃ ಪಾರಂಪರ್ಯೇಣ ಚೂರ್ಣಿತಃ ॥ ೩೯ ॥

ತೃಷ್ಣಾಚಾರುಲತಾಜಾಲಪ್ರವೇಶವಶವಿಕ್ಷತಃ ।
ಸ್ವಪ್ರಜ್ಞಾರಚಿತಾಚಾರಃ ಪರಮಾಯಾಸ್ವಶಿಕ್ಷಿತಃ ॥ ೪೦ ॥

---

೩೭ (ಆ ಮೃಗವು) ವ್ಯಾಧಿಯೆಂಬ ದುಷ್ಟವ್ಯಾಧನ ಏಟು ತಪ್ಪಿಸಿಕೊಳ್ಳ ಬೇಕೆಂದು ಯಾವಾಗಲೂ ಪಲಾಯನವನ್ನೇ ಮಾಡುತ್ತಿರುವುದು. ಮುಂದೇನಾಗು ವುದು ಎಂಬುದನ್ನು ಕುರಿತು ಯೋಚನೆಯೂ ಮಾಡದೆ, ವ್ಯಾಧನ ಏಟು ಬಿದ್ದೀ ತೆಂದು ಯಾವಾಗಲೂ ಹೆದರಿ ಸಂಕುಚಿತವಾದ ದೇಹವುಳ್ಳದ್ದಾಗಿಯೇ ಇರುವುದು.

೩೮. (ತನ್ನ ಭೋಗಗಳೆಂದು ತಿಳಿದು ಕೊಂಡಿರುವ) ಜ್ಞೇಯಗಳು ಇರುವೆ ಡೆಗೆ ಹೋಗಿ, ಅಲ್ಲಿ ದೊರೆಯುವ ದುಃಖಸಾಯಕಗಳಿಂದ ಹೆದರಿ, ಅಲ್ಲಿ ಬೀಳುವ ಕಲ್ಲಿನೇಟುತಿಂದು ನೋಯುತ್ತ, ಆ ವೈರಿಗಳಿಂದ ತಪ್ಪಿಸಿಕೊಳ್ಳಲು (ಆ ಮೃಗವು) ಓಡುತ್ತಲೇ ಇರುವುದು.

೩೯. ಎತ್ತರವಾಗಿ, ಹಳ್ಳವಾಗಿ, ಇರುವ ಕಲ್ಲುಗಳ ನಡುವೆ ತಾನಾಗಿ ಬಿದ್ದು, ಬೀಳಿಸಿಕೊಂಡು, ಬಹಳವಾಗಿ ಬಳಲಿ, (ಆ ಮೃಗವು) ನಾನಾ ವಿಧವಾದ ವಿಕಾರ ಗಳೆಂಬ ಕಲ್ಲುಗಳ ಏಟು ತಿಂದು ಒಂದೇ ಸಮನಾಗಿ ಪುಡಿಪುಡಿಯಾಗಿ ಹೋಗುವುದು.

೪೦. ತೃಷ್ಣೆಯೆಂಬ ಗಟ್ಟಿಯಾದ ಬಳ್ಳಿಯ ಬಲೆಯಲ್ಲಿ ಸಿಕ್ಕಿಕೊಂಡು (ಆ ಮೃಗವು) ತನ್ನ ಬುದ್ಧಿಗೆ ತೋರಿದಂತೆ ನಡೆಯುತ್ತ, ಇತರರ ಮಾಯೆಗಳನ್ನು ತಿಳಿಯದೆ ಒದ್ದಾಡುವುದು

ಇಂದ್ರಿಯಗ್ರಾಮಮಾಗತ್ಯ ಪ್ರಪಲಾಯನತತ್ಪರಃ ।
ಸುದುರ್ಗ್ರಹಗಜೇಂದ್ರೋಗ್ರವಿಸ್ಫೂರ್ಜನವಿಮರ್ದಿತಃ ॥ ೪೧ ॥

ವಿಷಯಾಜಗರೋದಾರವಿಷಫೂತ್ಕಾರಮೂರ್ಛಿತಃ ।
ಕಾಮುಕಃ ಕಾಮಿನೀಭೂಮೌ ರಸಾತ್ಪ್ರಾಯೋ ವಿಪೋಥಿತಃ ॥ ೪೨ ॥

ಕೋಪದಾವಾನಲಪ್ಲುಷ್ಟಪೃಷ್ಠವಿಸ್ಫೋಟದಾಹವಾನ್ ।
ಸದಾ ಗತಾಗತಾನೇಕದೀರ್ಘದುಃಖಪ್ರದಾಹವಾನ್ ॥ ೪೩ ॥

ಸ್ವಾತ್ಮಲಗ್ನಾಭಿಲಾಷಾಂಶದಂಶದೋಷೈರುಪದ್ರುತಃ ।
ಭೋಗಲೋಭಲಸನ್ಮೋದಶೃಗಾಲಚಿರವಿದ್ರುತಃ ॥ ೪೪

ಸ್ವಕರ್ಮಕರ್ತೃತೋದ್ಭ್ರಾಂತದಾರಿದ್ರ್ಯದ್ವಿಪೇಪ್ಸ್ಯನುದ್ರುತಃ ।
ವ್ಯಾಮೋಹಮಿಹಿಕಾಂಧತ್ವ ಕೂಟಾವಟಲುರತ್ತನುಃ ॥ ೪೫ ॥

---

೪೧. ಒಂದೇ ಸಮನಾಗಿ ಓಡೋಡಿ ಇಂದ್ರಿಯಗಳೆಂಬ ಗ್ರಾಮಕ್ಕೆ ಬಂದು, ಹಿಡಿಯುವುದಕ್ಕೆ ಸಿಕ್ಕದ ಗಜೇಂದ್ರನ ಉಗ್ರವಾದ ಆಘಾತಗಳಿಗೆ ಸಿಕ್ಕಿ (ಆ ಮೃಗವು) ಚೆನ್ನಾಗಿ ಏಟು ತಿನ್ನುವುದು.

೪೨. ವಿಷಯಿಗಳೆಂಬ ಅಜಗರಗಳ ವಿಷಮಯವಾದ ಫೂತ್ಕಾರಕ್ಕೆ ಸಿಕ್ಕಿ ಮೂರ್ಛೆಗೊಂಡು (ಆ ಮೃಗವು) ಕಾಮುಕನಾಗಿ ಕಾಮಿನೀ ಎಂಬ ಭೂಮಿಯಲ್ಲಿ ಭೋಗಗಳ ಹಂಬಲದಿಂದ (ರಸ–ಚಾಪಲ್ಯ) ಬಹುವಾಗಿ ಒದ್ದಾಡುವುದು.

೪೩. ಕೋಪವೆಂಬ ಕಾಡುಕಿಚ್ಚಿಗೆ ಸಿಕ್ಕಿ ತಪ್ಪಿಸಿಕೊಳ್ಳಲು ಓಡುತ್ತ ಬೆನ್ನೆಲ್ಲವೂ ಬೆಂದು ಗುಳ್ಳೆಗಳಾಗಿ ಹೋಗಲು, (ಆ ಮೃಗವು) ಯಾವಾಗಲೂ, ಬಂದ, ಹೋದ, ಅನೇಕಾನೇಕ ದೀರ್ಘದುಃಖಗಳಿಂದ ಸಂತಾಪ ಪಡುತ್ತಿರುವುದು.

೪೪. ತನ್ನಲ್ಲಿಯೇ ಇರುವ ಅಭಿಲಾಷೆ ಎಂಬ (ಹಾವು) ಕಚ್ಚಿರಲು ಅದರಿಂದ ಬಹುಬಾಧೆ ಪಡುತ್ತ, ಭೋಗದ ಹಂಬಲವೆಂಬ, ಸುಖವು ಬೇಕೆಂಬ, ನರಿಗಳು ಓಡಿಸಿಕೊಂಡು ಬರುತ್ತಿರಲು (ಆ ಮೃಗವು ಬಹು ಸಂಕಟ ಪಡುವುದು.)

೪೫. ನಾನು ಕರ್ತೃವು, ಕರ್ಮಮಾಡುವವನು, ಎಂಬ ಹುಚ್ಚಿನಿಂದ ಕೂಡಿ, ದಾರಿದ್ರ್ಯವೆಂಬ ಆನೆಯು ಓಡಿಸಿಕೊಂಡು ಬರುತ್ತಿರಲು, ವ್ಯಾಮೋಹವೆಂಬ ಕಾವಳದಿಂದ ಕುರುಡಾಗಿ, ಹಳ್ಳದಲ್ಲಿ ಬಿದ್ದು (ಆ ಮೃಗವು) ಒದ್ದಾಡುವುದು.

ಮಾನಸಿಂಹಸಮುಲ್ಲಾಸಹೃದಯೋತ್ಕಂಪನಾತುರಃ |
ಮರಣೇನ ರಣೇ ಯೇನ ವೃಕಪುಷ್ಪಮಿವೇಕ್ಷಿತಃ || ೪೬ ||

ಗರ್ವೇಣ ಗಿರಾಣಾಯಾಶು ದೂರತೋ ಜನಸೇವಿತಃ |
ಕಾಮ್ಯೈಃ ಸಮಂತತೋದಂತವಿತಾನಿತಯುವಾಂಕುರಃ || ೪೭ ||

ತಾರುಣ್ಯನಾರೀಸುಹೃದಾ ಕ್ಷಣಮಾಲಿಂಗ್ಯ ವರ್ಜಿತಃ |
ದುಃಸಂಚಾರೇಷೂಪವನ್ಯೈಃ ಕುಪಿತ್ಯೈರಿವ ವರ್ಜಿತಃ || ೪೮ ||

ಕದಾಚಿನ್ನಿರ್ವೃತಿಂ ಯಾತಿ ಸ ಶಮಂ ಚ ತರೌ ಕ್ವಚಿತ್ |
ಮನೋಹರಿಣಕೋ ರಾಜನ್ನಾಜೀವವಿ:ವ ಭಾಸ್ವತಿ || ೪೯ ||

---

೪೬. ಮಾನವೆಂಬ ಸಿಂಹವು ವಿಜೃಂಭಣಮಾಡಲು, ಹೃದಯವು ಅಲ್ಲಾಡಿ ಹೋಗಿ ಆತುರಪಡುತ್ತ, (ಆ ಮೃಗವು ಒದ್ದಾಡುತ್ತಿರಲು) ಮರಣವೆಂಬ (ಹುಲಿಯು) ಅದನ್ನು ಹೊಡೆದು ಹೂವನ್ನು ಹಿಸುಕುವಂತೆ ಹಿಸುಕಿ ಎಸೆದು ಬಿಡುವುದು

೪೭. ಗರ್ವ (ವೆಂಬ ಅಜಗರ)ವು ದೂರತೋಜನವಾದ ಅರಣ್ಯಕ್ಕೆ ಈ ಮೃಗವನ್ನು ಸೆಳೆದುಕೊಂಡು ಹೋಗಿ ತಿನ್ನಬೇಕೆಂದು ಇಟ್ಟುಕೊಂಡಿರುವುದು. ಕಾಮಗಳು ಇದನ್ನು ಹಿಡಿಯಬೇಕೆಂದು ಸುತ್ತಲೂ ಬಲೆಗಳನ್ನು ಹರಡಿ ಅವುಗಳ ಮೇಲೆ ಯುವಾಂಕುರಗಳನ್ನು ಚೆಲ್ಲಿರುವುವು

೪೮ ತಾರುಣ್ಯದಲ್ಲಿ ನಾರಿಯೆಂಬ ಸ್ನೇಹಿತನು ಒಂದು ಗಳಿಗೆ ಆಲಿಂಗಿಸಿ ನೂಕಲು, (ಇಂದ್ರಿಯಗಳೆಂಬ) ಝುಂಝೂವಾತಗಳು ರೇಗಿರುವಂತೆ ರೇಗಿ ಇದನ್ನು ಎಳೆದುಕೊಂಡು ಹೋಗಿ, ದುಃಸಂಚಾರಗಳಾದ (ಹೋಗಿಬರಲು ಸಾಧ್ಯವಿಲ್ಲದ) ಸ್ಥಾವರಾದಿ ಜನ್ಮಗಳಲ್ಲಿ ಹಾಕುವುವು.

೪೯ ಹೀಗೆ ಒದ್ದಾಡುತ್ತ ಆ ಮನವೆಂಬ ಮೃಗವು ಎಲೈ ರಾಜ (ಪುತ್ರ)ನೆ, ಯಾವಾಗಲೋ ಒಂದು ಸಲ ನಿರ್ವೃತಿಯನ್ನು ಹೊಂದುವುದು· ಎಲ್ಲಿಯೋ ಯಾವಾಗಲೋ ಶಾಂತಿಯನ್ನು (ಧ್ಯಾನ)ತರುವಿನ ನೆರಳಿನಲ್ಲಿ ಪಡೆಯುವುದು ಆಗ ಜೀವಲೋಕವು ರಾತ್ರಿಯನ್ನು ಕಳೆದು ಸೂರ್ಯೋದಯವಾದಾಗ ಭಯರಹಿತವಾಗಿ ಸಮಾಧಾನಪಡುವ ಹಾಗೆ ಸಮಾಧಾನವನ್ನು ಹೊಂದುವುದು

ತಾಲೀತಮಾಲಬಕುಲಾದಿವೃಕ್ಷಗುಲ್ಮ-
ವಿಶ್ರಾಂತಿಷು ಪ್ರಚುರಪುಷ್ಪವಿಲಾಸಹಾಸ್ಯೈಃ ||
ನಾಮಾಪಿ ಯಸ್ಯ ನ ವಿದಂತಿ ಸುಖಸ್ಯ ಮೂಢಾಃ |
ಪ್ರಾಪ್ನೋತಿ ತಚ್ಛಮತರೋಃ ಸ್ವಮನೋಮೃಗೋ ವಃ || ೫೦ ||

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಮನೋಮೃಗವಿಪದ್ವರ್ಣನಂ"ನಾಮ
ಚತುಶ್ಚತ್ವಾರಿಂಶಃ ಸರ್ಗಃ

---

(ಈದೃಶೋಽಯಂ ಮನೋಹರಿಣಕಃ ಕದಾಚಿದ್ಬಹುಜನ್ಮ ಸಂಚಿತ ಸುಕೃತ ಪರಿಪಾಕ ಭಾಗ್ಯೋದಯಕಾಲೇ ಕ್ವಚಿದಧಿಕಾರಜನ್ಮನಿ ಶಮಾದಿ ಸಾಧನ ಸಹಿತಂ ಯಥಾ ಸ್ಯಾತ್ತಥಾ ವರ್ಣಿತಲಕ್ಷಣೇ ಧ್ಯಾನತರೌ ನಿರ್ವೃತಿಂ ವಿಶ್ರಾಂತಿ ಸುಖಂ ಯಾತಿ |—ತಾ ಪ್ರ.)

೫೦ ತಾಲ, ತಮಾಲ, ಬಕುಲ, ಮೊದಲಾದ ವೃಕ್ಷ, ಗುಲ್ಮಗಳಲ್ಲಿ ನೆಲಸಿ ಬೇಕಾದಷ್ಟು ಹೂಗಳು ತುಂಬಿ ಸಂತೋಷದಿಂದ ನಗುತ್ತಿರುವಾಗ, ಯಾವ ವಿಶ್ರಾಂತಿಯನ್ನು ಮೂಢರು ಪಡೆಯಬಹುದೋ ಆ ಸುಖವೆಲ್ಲ. ಆ ಶಮವೃಕ್ಷದಿಂದ ನಿಮ್ಮ ಮನೋಮೃಗಗಳು ಪಡೆಯುವ ಸುಖಕ್ಕೆ ಹೋಲಿಸಿದರೆ ಹೆಸರು ಹೇಳಲ್ ಕೂಡ ಯೋಗ್ಯಗಳಲ್ಲ.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಮನೋಮೃಗವಿಪದ್ವರ್ಣನ" ಎಂಬ
ನಲವತ್ತನಾಲ್ಕನೆಯ ಸರ್ಗವು.

## ಪಂಚಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚಃ—

ಇತಿ ವಿಶ್ರಾಂತವಾನೇಷ ಮನೋಹರಿಣಕೋಽರಿಹನ್ ।
ತತ್ರೈವ ರತಿಮಾಯಾತಿ ನ ಯಾತಿ ವಿಟಪಾಂತರಂ ॥ ೧ ॥

ಏತಾವತಾಥ ಕಾಲೇನ ಸ ವಿವೇಕದ್ರುಮಃ ಫಲಂ ।
ಅಂತಸ್ಥಂ ಪರಮಾರ್ಥಾತ್ಮ ಶನೈಃ ಪ್ರಕಟಯತ್ಯಲಂ ॥ ೨ ॥

ಧ್ಯಾನದ್ರುಮಫಲಂ ಪುಣ್ಯಂ ತದಸೌ ಸ್ವಮನೋಮೃಗಃ ।
ಅಧಃಸ್ಥಿತಃ ಪ್ರಾಂತಗತಂ ತಸ್ಯ ಪಶ್ಯತಿ ಸತ್ತರೋಃ ॥ ೩ ॥

---

## ನಲವತ್ತೈದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ಎಲೈ ಶತ್ರುಂಜಯನೇ, ಹೀಗೆ ಧ್ಯಾನ ಕಲ್ಪತರುವನ್ನು ಸೇರಿ ವಿಶ್ರಾಂತಿಯನ್ನು ಪಡೆದ ಮನೋಮೃಗವು, ಅಲ್ಲಿಯೇ ಇರಬೇಕು ಎಂದುಕೊಂಡು, ಅಲ್ಲಿಯೇ ಇರಲು ಆಸೆಪಡುವುದು. ಅಲ್ಲಿ ಬಿಟ್ಟು ಇನ್ನೆಲ್ಲಿಯೂ ಹೋಗುವುದಿಲ್ಲ.

೨. ಇಷ್ಟಾಗುವುದರೊಳಗೆ, ಆ ವಿವೇಕ ವೃಕ್ಷವು ತನ್ನೊಳಗೆ ಇರುವ ಪರಮಾರ್ಥವಾದ ಆತ್ಮವೆಂಬ ಫಲವನ್ನು ಕ್ರಮವಾಗಿ ಪ್ರಕಟಿಸುವುದು.

(ಸ ವರ್ಣಿತೋ ವಿವೇಕ ಸಹಿತ ಧ್ಯಾನದ್ರುಮೋಽಂತಸ್ಥಂ ಪಂಚಕೋಶಾಂತಸ್ಥಂ ಗುಹ್ಯಾಂತಸ್ಥಂ ಚ ಪರಮಾರ್ಥಾತ್ಮ ಪಾರಮಾರ್ಥಿಕ ಸ್ವಸ್ವರೂಪಂ ಕೈವಲ್ಯಫಲಂ ಶನೈರ್ವಕ್ಷ್ಯಮಾಣ ಭೂಮಿಕಾರೋಹಣ ಕ್ರಮೇಣ ಪರಿಪಚ್ಯಮಾನಂ ಪ್ರಕಟಯತಿ ಸಾಕ್ಷಾದನುಭಾವಯತಿ—ತಾ. ಪ್ರ.)

೩. ಆ ಧ್ಯಾನಕಲ್ಪವೃಕ್ಷದ ಪುಣ್ಯ ಫಲವನ್ನು ಅಲ್ಲಿಯೇ ಇರುವ ಮನೋಮೃಗವು ತನ್ನ ಪಕ್ಕದಲ್ಲಿಯೇ ಇರುವುದೆಂದು ನೋಡುವುದು.

ಆರೋಹತಿ ನರೋ ವೃಕ್ಷಂ ತದಾಸ್ವಾದಯಿತುಂ ಫಲಂ ।
ಅನ್ಯವರ್ಗಪರಿತ್ಯಾಗೋ ವಿತತಾಧ್ಯವಸಾಯವಾನ್ ॥ ೪ ॥

ವಿವೇಕ ವೃಕ್ಷಪಾನ್ನಾಮ ವೃತ್ತೀಸ್ತ್ಯಜತಿ ಭೂಗತಾಃ ।
ಉನ್ನತಂ ಪದಮಾಸಾದ್ಯ ಭೂಯೋ ನಾಧಃ ಸಮೀಹತೇ ॥ ೫ ॥

ತೇನೋತ್ತಮಫಲಾರ್ಥೇನ ಸಂಸ್ಕಾರಾನ್ಪ್ರಾಕ್ತನಾನಸೌ ।
ವಿವೇಕಪಾದಪಾರೂಢಸ್ತ್ಯಜತ್ಯಹಿರಿವ ತ್ವಚಂ ॥ ೬ ॥

---

(ತತ್ರಾದೌ ಅಸಂಭಾವನಾದೋಷಸ್ಯ ಈಷತ್ಕ್ಷಯಾನ್ಮಂದಾಂಧಕಾರೇ ಘಟಾದೇರಿವ ಸಂಭಾವನಾಪ್ರಾಯಂ ಸಾಕ್ಷಾತ್ಕಾರಂ ಚತುರ್ಥ ಭೂಮಿಕಾದ್ವಾರಂ ದರ್ಶಯತಿ—ಧ್ಯಾನೇತಿ । ಪ್ರಾಂತಗತಂ ಶಾಖಾಗ್ರ ಸಂಲಗ್ನಂ ।—ತಾ ಪ್ರ)

೪. ಮನುಷ್ಯನು ಆ ಫಲವನ್ನು ಸವಿಯಲು ಆ ಮರವನ್ನು ಏರುವನು. ಮಿಕ್ಕೆಲ್ಲವನ್ನೂ ಬಿಡುವನು: ಯಾವಾಗಲೂ ಆ ಮರವನ್ನು ಏರುವ ಪ್ರಯತ್ನವನ್ನೇ ಮಾಡುವನು

(ಇಲ್ಲಿ ಇದುವರೆಗೆ ಮನೋ ಮೃಗ ಎಂದು ಹೇಳಿ, ಈ ಶ್ಲೋಕದಲ್ಲಿ ನರಃ ಎಂದಿರುವುದನ್ನೂ ತಾತ್ಪರ್ಯ ಪ್ರಕಾಶಿಕಾಕಾರರು ಚಾಪಲವಶುಭಾವಾದಿ ನಿವೃತ್ತೇಶ್ಚ ನರ ಇತ್ಯುಕ್ತಿಃ ಎಂದಿರುವುದನ್ನೂ ಗಮನಿಸಿ)

೫. ವಿವೇಕ ವೃಕ್ಷದಲ್ಲಿ ಪಾದಗಳನ್ನು ಇಟ್ಟವನಾಗಿ, (ಸಂಸಾರ) ಭೂಮಿಯಲ್ಲಿದ್ದಾಗ ಇದ್ದ (ದೇಹಾದಿಷು ಅಹಂ ಮಮತಾದಿ) ವೃತ್ತಿಗಳನ್ನೆಲ್ಲ ಬಿಡುವನು ಉನ್ನತವಾದ ಪದವಿಯನ್ನು ಹೊಂದಿದವನು ಕೆಳಗಿನ ಸ್ಥಿತಿಗಳನ್ನು ಮತ್ತೆ ಬಯಸುವನೆ ?

೬. ಆ ಉತ್ತಮವಾದ ಫಲವು ಬೇಕೆಂಬ ಅಭಿಲಾಷೆಯು ಹುಟ್ಟುತ್ತಿದ್ದ ಹಾಗೆಯೇ, ಇವನು ವಿವೇಕವೆಂಬ ಮರವನ್ನು ಹತ್ತುತ್ತಿದ್ದ ಹಾಗೆಯೇ ಪ್ರಾಕ್ತನ ಸಂಸ್ಕಾರಗಳನ್ನೆಲ್ಲ ಹಾವು ಪರೆಯನ್ನು ಬಿಡುವಂತೆ ಬಿಟ್ಟು ಬಿಡುವನು.

(ಸಂಸ್ಕಾರಾನ್ ತ್ಯಜತಿನ ಕಿಂಚಿತ್ಪೂರ್ವಕೃತ್ಯನಂ ಸ್ಮರತೀತಿ—ತಾ. ಪ್ರ.)

ಹಸತ್ಯುಚ್ಚೈಃ ಪದಾರೂಢಮಾತ್ಮಾನಮವಲೋಕಯನ್ ।
ಏತಾವಂತಮಹಂ ಕಾಲಂ ಕೃಪಣಃ ಕೋಽಭವಂ ತ್ವಿತಿ ॥ ೭ ॥

ಕರುಣಾದಿಷು ತೇಷ್ವಸ್ಯ ಭ್ರಮನ್ ಶಾಖಾಂತರೇಷು ಸಃ ।
ಲೋಭವ್ಯಾಲಮಧಃ ಕುರ್ವನ್ಸಮ್ರಾಡಿವ ವಿರಾಜತೇ ॥ ೮ ॥

ಹೃದಯೇಂದೋರ್ಗಲತ್ರೇಣೀ ದುಃಖಾಬ್ಜತಿಮಿರಾವಲಿಃ ।
ಕೃಷ್ಣಾಯಃಶೃಂಖಲಾತೃಷ್ಣಾ ದಿನಾನುದಿನಮುಜ್ಝತಿ ॥ ೯ ॥

---

೭ ಉನ್ನತವಾದ ಪದವನ್ನು ಪಡೆದಿರುವ ತನ್ನನ್ನು ನೋಡಿಕೊಂಡು "ಇದುವರೆಗೂ ನಾನೇಕೆ ಕೃಪಣನಾಗಿದ್ದೆನು?" ಎಂದುಕೊಂಡು ಗಟ್ಟಿಯಾಗಿ ನಗುವನು.

(ಕದಾಚಿದ್ದೈವಾತ್ ಸ್ಮರನ್ನಪಿ ಹಸತಿ। ಕೃಪಣೋ ವಿಷಯ ಸುಖ ಕಣ ಪ್ರಾರ್ಥನಯಾ ದೀನಃ—ತಾ. ಪ್ರ)

೮ ವಿವೇಕ ಮಹಾವೃಕ್ಷದ ಶಾಖೋಪಶಾಖೆಗಳಾದ ಕರುಣಾ (ಆದಿಪದಾತ್ "ಅಭಯಂ ಸತ್ವ ಸಂಶುದ್ಧಿ ಜ್ಞಾನಯೋಗವ್ಯವಸ್ಥಿತಿಃ" ಇತಿ) ಮೊದಲಾದ ದೈವೀ ಸಂಪತ್ತುಗಳಲ್ಲಿ ವಿಹರಿಸುತ್ತ, ಲೋಭವೆಂಬ ಹಾವನ್ನು ತಿರಸ್ಕರಿಸಿ, ಸಮ್ರಾಜನಂತೆ ವಿರಾಜಿಸುವನು.

೯. ಸದ್ಬುದ್ಧಿ ಚಂದ್ರನ ಕೃಷ್ಣಪಕ್ಷದ ತಿಥಿಗಳಾಗಿ, ದುಃಖವೆಂಬ ನಾನಾ ಚಂದ್ರ ದರ್ಶನ ರೂಪವಾದ ನೇತ್ರದೋಷಗಳಿಂದ ಕೂಡಿರುವ ಕರಿಯ ಉಕ್ಕಿನ ಸಂಕಲೆಯಾದ ತೃಷ್ಣೆಯು ದಿನದಿನಕ್ಕೂ ಕಳಚುತ್ತ ಬರುವುದು.

(ಶೃಂಖಲೇವ ಪ್ರಾಣಿನಾಂ ಬಂಧನಹೇತುಃ ಈದೃಶೀ ತೃಷ್ಣಾ ಶುಭೇಚ್ಛಾ ರಂಭ ದಿನಮಾರಭ್ಯ ದಿನಾನುದಿನಂ ಕ್ಷೀಯಮಾಣಾ ಚತುರ್ಥಭೂಮಿಕಾಯಾಂ ನಿಶ್ಶೇಷಮುಜ್ಝತಿ। ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ, ಇತಿ ಭಗವದ್ವಚ ನಾದಿತಿ ಭಾವಃ।—ತಾ. ಪ್ರ.

**ಉಪೇಕ್ಷತೇ ನ ಸಂಪ್ರಾಪ್ತಂ ನಾಪ್ರಾಪ್ತಮಭಿವಾಂಛತಿ ।**
**ಸೋಮಸೌಮ್ಯೋ ಭವತ್ಯಂತಃ ಶೀತಲಃ ಸರ್ವವೃತ್ತಿಷು ॥ ೧೦ ॥**

**ಶಾಸ್ತ್ರಾರ್ಥಪಲ್ಲವೇಷ್ವೇವ ನಿಷಣ್ಣಾತ್ಮಾವತಿಷ್ಠತೇ ।**
**ಉನ್ನತಾವನತಾಯಾತಾ ಅಧಃ ಪಶ್ಯನ್ ಜಗದ್ಗತೀಃ ॥ ೧೧ ॥**

**ಭೀಮದ್ರುಮಲತೋತ್ಕೀರ್ಣಪುಷ್ಪಪ್ರಕರದಂತುರಾಃ ।**
**ಪ್ರಾಕ್ತನೀಃ ಸ್ವಾಃ ಸ್ಥಲೀಃ ಪಶ್ಯನ್ಹಸತ್ಯಂತರ್ವರಾಕತಾಂ ॥ ೧೨ ॥**

**ತೇಷು ತತ್ಸ್ಕಂಧದೇಶೇಷು ತಥೋಡ್ಡೀನವಿಡೀನಯಾ ।**
**ಹಾರಿಣ್ಯಾ ವಿಹರನ್ ಜಾತ್ಯಾ ರಾಜೇವ ಪರಿರಾಜತೇ ॥ ೧೩ ॥**

---

೧೦. ಇಂಥವನು ಸಂಪ್ರಾಪ್ತವಾಗಿ ಬಂದುದನ್ನು ಉಪೇಕ್ಷಿಸುವುದಿಲ್ಲ; ಅಪ್ರಾಪ್ತವಾದುದನ್ನು ಅಭಿವಾಂಛಿಸುವುದಿಲ್ಲ ಸೋಮನಂತೆ ಸೌಮ್ಯನಾಗಿ ಸರ್ವ ವೃತ್ತಿಗಳಲ್ಲಿಯೂ ಅಂತಶ್ಶೀಲನಾಗಿರುವನು.

೧೧. ಶಾಸ್ತ್ರಾರ್ಥಗಳೆಂಬ ಪಲ್ಲವಗಳಲ್ಲಿಯೇ ಇರುವವನಾಗಿ ಆ ಮರದ ಕೆಳಗೆ ಎದ್ದೆದ್ದು ಬೀಳುತ್ತಿರುವ ಜಗದ್ಗತಿಗಳನ್ನು ನೋಡುತ್ತ ಕುಳಿತಿರುವನು.

(ಶಾಸ್ತ್ರ ಮಧ್ಯಾತ್ಮ ಶಾಸ್ತ್ರಂ ತದರ್ಥಾಃ ಶಮದಮ ಸಂತೋಷಾದಯಃ, ತಲ್ಲಕ್ಷಣೇಷು ಪಲ್ಲವೇಷು ..ಇತರ ಶಾಸ್ತ್ರಾನುಸಾರಿ ಪ್ರವೃತ್ತ್ಯಾ ಪ್ರಾಣಿನಾಂ ಬ್ರಹ್ಮ ಲೋಕ ಪರ್ಯಂತಮುನ್ನತಾಃ, ಸ್ವಾಭಾವಿಕ ಪ್ರವೃತ್ತ್ಯಾ ನಿರಯಾಂತ ಮವನತಾಶ್ಚ ಜಗದ್ಗತೀರಧಃ ಅಜ್ಞದಶಾಯಾಮೇವೇತಿ ಪಶ್ಯನ್—ತಾ ಪ್ರ)

೧೨ ಆ ಮರದ ಮೇಲೆ ಕುಳಿತುಕೊಂಡು ಹೂಬಿಟ್ಟುಕೊಂಡು ವಿರಾಜಿಸುತ್ತಿರುವ ಭಯಂಕರಗಳಾದ ವಿಷವೃಕ್ಷಗಳೂ ವಿಷವಲ್ಲರಿಗಳೂ ಹಲ್ಲು ಕಿರಿದುಕೊಂಡು ಹೆದರಿಸುತ್ತಿರುವೆಯೋ ಎಂಬಂತಿರುವ ತನ್ನ ಹಿಂದಿನ ಅಜ್ಞಾನ ಭೂಮಿಕೆಗಳೆಂಬ ವನಸ್ಥಲಿಗಳನ್ನು ನೋಡಿ, ತನ್ನ ಹಿಂದಿನ ಅಜ್ಞಸ್ಥಿತಿಯನ್ನು ಕುರಿತು ನಗುವನು

೧೩ ಆ ಮರದ ಸ್ಕಂಧ ದೇಶಗಳಲ್ಲಿ ಹತ್ತುತ್ತಾ ಇಳಿಯುತ್ತಾ ಮನೋಹಾರಿಗಳಾದ ಕ್ರೀಡಾ ವೃತ್ತಿಗಳಿಂದ ರಾಜನಂತೆ ವಿರಾಜಿಸುವನು.

ಪುತ್ರದಾರಸಮಗ್ರಾಣಿ ಮಿತ್ರಾಣಿ ಚ ಧನಾನಿ ಚ ।
ಜನ್ಮಾಂತರಕೃತಾನೀವ ಸ್ವಪ್ನಜಾನೀವ ಪಶ್ಯತಿ　　　　|| ೧೪ ||

ರಾಗದ್ವೇಷಭಯೋನ್ಮಾದಮಾನಮೋಹಪಃಹತ್ತಯಾ ।
ನಟಸ್ಯೇವಾಸ್ಯ ದೃಶ್ಯಂತೇ ಶೀತಲಾಮಲಚೇತಸಃ　　　　|| ೧೫ ||

ಉನ್ಮತ್ತಚೇಷ್ಟಿತಾಕಾರಾ ಹಸತ್ಯಪಿ ಪುರೋಗತಾಃ ।
ತರಂಗಭಂಗುರಾಧಾರಾಃ ಸಂಸಾರಸರಿತೋ ಗತೀಃ　　　　|| ೧೬ ||

ನ ಸ ಚೇತಯತೇ ಕಾಶ್ಚಿಲ್ಲೋಕದಾರಧನೈಷಣಾಃ ।
ಅಪೂರ್ವಪದವಿಶ್ರಾಂತೋ ಜೀವನ್ನೇವ ಯಥಾ ಶವಃ　　　　|| ೧೭ ||

ಕೇವಲಂ ಕೇವಲೇ ಶುದ್ಧೇ ಬೋಧಾತ್ಮನಿ ಮಹೋನ್ನತೇ ।
ದತ್ತದೃಷ್ಟಿಃ ಫಲೇ ತಸ್ಮಿನ್ಪರಂ ಸಮಧಿರೋಹತಿ　　　　|| ೧೮ ||

೧೪. ಅಂಥವನು ಪುತ್ರದಾರಾದಿ ಸಮಗ್ರ ಸಂಸಾರವನ್ನೂ ಮಿತ್ರರನ್ನೂ ಧನಗಳನ್ನೂ ಜನ್ಮಾಂತರ ಸಂಗತಿಗಳಂತೆಯೂ ಸ್ವಪ್ನ ದೃಷ್ಟಗಳಂತೆಯೂ ಭಾವಿಸುವನು

೧೫. ಅಂಥವನ ಹೃದಯವು ಶಾಂತವೂ ಶುದ್ಧವೂ ಆಗಿರುವುದರಿಂದ ಅವನಲ್ಲಿ ಕಾಣುವ ರಾಗದ್ವೇಷ ಭಯ ಉನ್ಮಾದ ಮಾನ ಮೋಹ ಮೊದಲಾದ ವೃತ್ತಿಗಳೆಲ್ಲವೂ ನಟನಲ್ಲಿ ಕಾಣುವಂತೆ ಕಾಣುವುವು.

೧೬. ಅದೇ ವೃತ್ತಿಗಳು ಇತರರಲ್ಲಿ ಕಂಡು ಬಂದಾಗ, ಇವೆಲ್ಲವೂ ಹುಚ್ಚನ ಚೇಷ್ಟೆಗಳಂತೆ ಅರ್ಥವಿಲ್ಲದವು ಸಂಸಾರವೆಂಬ ನದಿಯ ಗತಿಗಳು: ತರಂಗಗಳಂತೆ ಭಂಗುರವಾದವು ಎಂದು ನಗುವನು

೧೭. ಲೋಕೈಷಣ, ದಾರೈಷಣ, ಧನೈಷಣಗಳು ಯಾವವೂ ಅವನನ್ನು ಅಲ್ಲಾಡಿಸಲಾರವು: ಅಪೂರ್ವವಾದ ಆತ್ಮ ಪದದಲ್ಲಿ ವಿಶ್ರಾಂತಿಯನ್ನು ಪಡೆದವನಾಗಿ, ಜೀವಿಸುತ್ತಿದ್ದರೂ ಶವದಂತಿರುವನು.

೧೮ ಕೇವಲವೂ ಶುದ್ಧವೂ ಆದ ಜ್ಞಾನ ಸ್ವರೂಪನಾದ ಆತ್ಮನೆಂಬ

ಸ್ಮೃತ್ವಾ ಸ್ಮೃತ್ವಾಪದಃ ಪೂರ್ವಂ ಸಂತೋಷಾಮೃತಪೋಷಿತಃ ।
ಅರ್ಥಾನಾಮಪ್ಯನರ್ಥಾನಾಂ ನಾಶೇಷು ಪರಿತುಷ್ಯತಿ ॥ ೧೯ ॥

ವ್ಯವಹಾರೇಷು ಕಾರ್ಯೇಷು ಭೋಗಸಂಪಾದಕೇಷ್ವಪಿ ।
ಪರಮುದ್ವೇಗಮಾಯಾತಿ ಸನಿದ್ರ ಇವ ಬೋಧಿತಃ ॥ ೨೦ ॥

ದೀರ್ಘಾಧ್ವಗ ಇವೋದಾರಾಮನಾರತಮಬಾಧಿತಾಂ ।
ಚಿರಂ ಮೌರ್ಖ್ಯಶ್ರಮಾಕ್ರಾಂತೋ ವಿಶ್ರಾಂತಿಮಭಿವಾಂಛತಿ ॥ ೨೧ ॥

---

ಮಹೋನ್ನತ ಫಲವೊಂದರಲ್ಲೇ ನೆಟ್ಟ ದೃಷ್ಟಿಯುಳ್ಳವನಾಗಿ, ಪರಮ ಸಮಾಧಿ ಪಂಚಮಭೂಮಿಕೆಯನ್ನು ಪಡೆಯುವನು.

೧೯. ಹಿಂದೆ ತಾನು ಅನುಭವಿಸಿದ ಆಪತ್ತುಗಳನ್ನು ಸ್ಮರಿಸಿಕೊಳ್ಳುತ್ತ, ಸಂತೋಷವೆಂಬ ಅಮೃತದಿಂದ ಸದಾಪೋಷಿತನಾಗಿ, ಅರ್ಥವಾಗಲಿ ಅನರ್ಥವಾಗಲಿ ಯಾವುದು ನಾಶವಾದರೂ (ಅದರಿಂದ ಖಿನ್ನನಾಗದೆ) ಪರಿತೋಷವನ್ನೇ ಪಡೆಯುವನು.

೨೦. ನಿದ್ದೆಯಲ್ಲಿ ಇರುವವನನ್ನು ಎಬ್ಬಿಸಿದರೆ ಅವನು ಉದ್ವೇಗಪಡುವಂತೆ, ಭೋಗವನ್ನು ಸಂಪಾದಿಸುವ ವ್ಯವಹಾರಗಳನ್ನು (ಪರಪ್ರೇರಣೆಯಿಂದ) ಮಾಡಬೇಕಾಗಿ ಬಂದಲ್ಲಿಯೂ ಮಾಡಬೇಕಲ್ಲಾ ಎಂದು ಉದ್ವೇಗಪಡುವನು.

(ಯಥಾ ಸನಿದ್ರಃ ಪುರುಷಃ ಬೋಧಿತಃ ಸನ್ನಿದ್ರಾಸುಖವಿಚ್ಛೇದಾದುದ್ವೇಗಮಾಯಾತಿ ತದ್ವಯಮವಶ್ಯ ಕಾರ್ಯೇಷು ವ್ಯವಹಾರೇಷು ಪರೈರ್ಬೋಧ್ಯಮಾನಃ ಸಮಾಧಿಸುಖವಿಚ್ಛೇದಾದುದ್ವೇಗಮಾಯಾತೀತ್ಯಥಃ।—ತಾ. ಪ್ರ)

೨೧ ಬಹುಕಾಲ ಮೂರ್ಖತೆಗೆ ವಶನಾಗಿ ಶ್ರಮಪಟ್ಟಿದ್ದವನಂತೆ, ಬಹು ದೂರ ಪ್ರಯಾಣ ಮಾಡಿದವನಂತೆ ಆಯಾಸ ಪಟ್ಟಿದ್ದವನಂತೆ, ತಾನೇ ತಾನಾಗಿ ಅಬಾಧಿತವಾಗಿ ಸಂತತವಾಗಿರುವ (ಸಮಾಧಿ) ವಿಶ್ರಾಂತಿಯನ್ನು ಕೋರುವನು.

ನಿಃಶ್ವಾಸಬೋಧಿತೋಽಪ್ಯಗ್ನಿರಸಿಂಧನ ಇವಾತ್ಮನಿ ।
ಶ್ವಾಸಮಾತ್ರಸಮೋಽಪ್ಯಂತರತಿಷ್ಠನ್ನೇವ ಶಾಮ್ಯತಿ ॥ ೨೨ ॥

ಆಪತಂತೀಂ ಬಲಾದೇವ ಪದಾರ್ಥೇಷ್ವರತಿಂ ಶನೈಃ ।
ನ ಶಕ್ನೋತಿ ನಿರಾಕರ್ತುಂ ದೃಷ್ಟಿಮತ್ರ ಚ್ಯುತಾಮಿವ ॥ ೨೩ ॥

ತಾಂ ಮಹಾಪದವೀಂ ಗಚ್ಛನ್ಪರಮಾರ್ಥಫಲಪ್ರದಾಂ ।
ಭೂಮಿಕಾಮಪ್ಯುಪಾಯಾತಿ ವಚಸಾಮಪ್ಯಗೋಚರಾಂ ॥ ೨೪ ॥

ಕುತೋಽಪ್ಯಚೇಷ್ಟಿತೇಷ್ವೇವ ಸಂಪ್ರಾಪ್ತೇಷು ವಿಧೇರ್ವಶಾತ್ ।
ಭೋಗೇಷ್ವರತಿಮಾಯಾತಿ ಪಾಂಥೋ ಮರುಮಹೀಷ್ವಿವ ॥ ೨೫ ॥

ಘೂರ್ಣಃ ಕ್ಷೀಣ ಇವಾನಂದೀ ಸುಪ್ತಃ ಸಂಸಾರವೃತ್ತಿಷು ।
ಅಂತಃಪೂರ್ಣಮನಾ ಮೌನೀ ಕಾಮಪಿ ಸ್ಥಿತಿಮೃಚ್ಛತಿ ॥ ೨೬ ॥

---

೨೨. ಸೌದೆಯೆಲ್ಲವನ್ನೂ ಉರಿಸಿ ಶಾಂತವಾಗಿರುವ ಅಗ್ನಿಯು ಊದಿದರೂ ರೇಗದಂತೆ, ಅಲ್ಲಿಯೇ ಶಾಂತವಾಗುವಂತೆ, ಇವನೂ ಶ್ವಾಸಮಾತ್ರದಿಂದ ಕಾಣುವ ಸ್ಥಿತಿಯುಳ್ಳವನಾಗಿ, ಇಲ್ಲದವನಂತೆ ಶಾಂತವಾಗಿರುವನು.

೨೩. ಯಾವದಾದರೂ ಪದಾರ್ಥದ ಮೇಲೆ ಬಿದ್ದ ದೃಷ್ಟಿಯನ್ನು ನಿರಾಕರಿಸುವುದಕ್ಕೆ ಹೇಗೆ ಆಗುವುದಿಲ್ಲವೋ (ಕಣ್ಣಿಗೆ ಬಿದ್ದ ವಸ್ತುವನ್ನು ನೋಡದಿರುವುದು ಹೇಗೆ ಸಾಧ್ಯವೋ) ಹಾಗೆ ಪದಾರ್ಥಗಳಲ್ಲಿ ತಾನಾಗಿ ಬಲಾತ್ಕಾರದಿಂದಲೋ ಎಂಬಂತೆ ಪ್ರಸರಿಸುತ್ತಿರುವ ಅರತಿಯನ್ನು ನಿರಾಕರಿಸಲಾರದೆ ಇರುವನು.

೨೪. ಪರಮಾರ್ಥವೆಂಬ ಮಹಾಫಲವನ್ನು ಕೊಡುವ ಪ್ರಸಿದ್ಧವಾದ, ಬಾಯಿಂದ ಹೀಗೆಂದು ಹೇಳಲೂ ಸಾಧ್ಯವಿಲ್ಲದ ಮಹಾಪದವಿ (ಷಷ್ಠಭೂಮಿಕೆ) ಯನ್ನು, ಹೊಂದುವನು

೨೫ ತನ್ನ ವ್ಯಾಪಾರಾದಿಗಳೇನೂ ಇಲ್ಲದೆ ವಿಧಿವಶವಾಗಿ ಎಲ್ಲಿಂದಲೋ ಹೇಗೋ ಬಂದ ಭೋಗಗಳಲ್ಲಿಯೂ, ಪಾಂಥನು ಮರುಭೂಮಿಗಳಲ್ಲಿ ಹೇಗೋ ಹಾಗೇ, ಅರತಿಯನ್ನು ಹೊಂದುವನು

೨೬. ಇಂಥವನು ಮದಿಸಿದವನ ಹಾಗಿರಲಿ, ಕ್ಷೀಣನ ಹಾಗಿರಲಿ, ಆನಂದಿಯಾ

ಸ ತಾದೃಗ್ರೂಪತಾಮೇತ್ಯ ಪರಮಾರ್ಥಫಲಸ್ಯ ತತ್ ।
ಕ್ರಮಾನ್ನಿಕಟಮಾಪ್ನೋತಿ ಖಗೋಽಗಪಪವೀಮಿವ ॥ ೨೭ ॥

ತತಸ್ತದಖಿಲಾಂ ಬುದ್ಧಿಂ ವಿಹಾಯ ವಿಯುತಾ ಸಮಃ ।
ಗೃಹ್ಣಾತ್ಯಥಾಸ್ವಾದಯತಿ ಭುಂಕ್ತೇಽಥ ಪರಿತೃಪ್ಯತಿ ॥ ೨೮ ॥

ಸಂಕಲ್ಪಾರ್ಥಪರಿತ್ಯಾಗಾದ್ದಿನಾನುದಿನಮಾತತಾ ।
ಶುದ್ಧಸ್ವಭಾವವಿಶ್ರಾಂತಿಃ ಪರಮಾರ್ಥಾಪ್ತಿರುಚ್ಯತೇ ॥ ೨೯ ॥

---

ಗಿಯೇ ಇರುವನು. ಸಂಸಾರವೃತ್ತಿಗಳಲ್ಲಿ ಸುಸ್ತನಾಗಿರುವನು. ಅಂತಃಪೂರ್ಣ ಮನನಾಗಿ ಮೌನವಾಗಿರುವನು: ಯಾವುದೋ ಸ್ಥಿತಿಯಲ್ಲಿರುವನು.

೨೭ ಹಾರುತ್ತಿರುವ ಹಕ್ಕಿಯು ಮರವನ್ನು ಸೇರುವಂತೆ, ವಿವೇಕ ವೃಕ್ಷದ ಪರಮಾರ್ಥವಾದ ಆತ್ಮಜ್ಞಾನದ ಸಾರೂಪ್ಯವನ್ನು ಹೊಂದಿ ಕ್ರಮವಾಗಿ ಅದರ ಬಳಿ ಸಾರುವನು.

೨೮ ಅನಂತರ ಬುದ್ಧಿಯನ್ನು ಸಂಪೂರ್ಣವಾಗಿ ತ್ಯಜಿಸಿ, ಆಕಾಶ ಸಮನಾಗಿ ಏನಾದರೂ ತೆಗೆದುಕೊಳ್ಳುವನು ತಿನ್ನುವನು ಭೋಗಿಸುವನು: ಪರಿತೃಪ್ತಿ ಪಡುವನು.

(ತಸ್ಯ ಸಪ್ತಮಭೂಮಿಕಾ ಪ್ರತಿಷ್ಠಾಮಾಹ–ತತ ಇತೀ । ಅಖಿಲಾಂ ಬುದ್ಧಿಂ ವಿಹಾಯೇತ್ಯನೇನ ತತ್ರ ಅಸ್ಯ[ಆತ್ಯಂತಿಕ ವಾಸನಾಕ್ಷಯ ಮನೋನಾಶೌ ದರ್ಶಿತೌ। ಗೃಹ್ಣಾತಿ ಭೂಮಾನಂದ ಬ್ರಹ್ಮ ಭಾವ ಫಲಮಿತಿ ಶೇಷಃ । ಆವರಣ ಭಂಗಾದ್ಗೃಹ್ಣಾತಿ ನಿರ್ವಿಕ್ಷೇಪ ಸ್ಫುರಣಾದಾಸ್ವಾದಯತಿ ತದೇಕ ಪ್ರವಣ ವೃತ್ತ್ಯಾ ಭುಂಕ್ತೇ ತದ್ಭಾವೇನ ಪೂರ್ಣಸ್ಥಿತ್ಯಾ ಪರಿತೃಪ್ಯತೀತಿ ಚತುರ್ಥಾದಿ ಭೂಮಿಕಾ ಫಲಾನಾಮತ್ರ ಲಾಭೋ ದರ್ಶಿತಃ ॥—ತಾ ಪ್ರ)

೨೯. ಸಂಕಲ್ಪವನ್ನೂ ಅರ್ಥವನ್ನೂ ಪರಿತ್ಯಾಗ ಮಾಡೋಣದರಿಂದ ದಿನ ದಿನಕ್ಕೂ ಬೆಳೆಯುವ (ಹರಡುವ) ಶುದ್ಧಸ್ವಭಾವದಲ್ಲಿ ಪಡೆಯುವ ವಿಶ್ರಾಂತಿಯು ಯಾವುದುಂಟೋ ಅದನ್ನೇ ಪರಮಾರ್ಥವನ್ನು ಹೊಂದುವಿಕೆಯೆನ್ನುವರು.

ಭೇದಬುದ್ಧಿರ್ವಿಲೀನಾರ್ಥಾಃಭೇದ ಏವಾವಶಿಷ್ಯತೇ ।
ಶುದ್ಧಮೇಕಮನಾದ್ಯಂತಂ ತದ್ಬ್ರಹ್ಮೇತಿ ವಿದುರ್ಬುಧಾಃ ॥ ೩೦ ॥

ಲೋಕೈಷಣಾವಿರಕ್ತೇನ ತ್ಯಕ್ತದಾರೈಷಣೇನ ಚ ।
ಧನೈಷಣಾವಿಮುಕ್ತೇನ ತಸ್ಮಿನ್ವಿಶ್ರಮ್ಯತೇ ಪದೇ ॥ ೩೧ ॥

ಪರೇಣ ಪರಿಣಾಮೇನವಿಧಶ್ಚಿತ್ಪರಮಾರ್ಥಯೋಃ ।
ತಾಪೇನ ಹಿಮಲೇಶೇವ ಭೇದಬುದ್ಧಿರ್ವಿಲೀಯತೇ ॥ ೩೨ ॥

ತಜ್ಜ್ಞಸ್ಯಾಕೃಷ್ಟಮುಕ್ತಸ್ಯ ಸ್ವಭಾವೇಷೂಪಶಮಾಂ ವಿನಾ ।
ಸ್ಥಿತಿಃ ಸ್ರಗ್ದಾಮಕಸ್ಯೇವ ನ ಸಂಭವತಿ ಕಾಚನ ॥ ೩೩ ॥

೩೦. ಭೇದಬುದ್ಧಿಯೇ ಬಾಹ್ಯಾರ್ಥಸತ್ಯತೆಗೆ ಕಾರಣವು ಹೊರಗಣ ಅರ್ಥವಿಲ್ಲದೆ ಹೋಗಿ ಭೇದಬುದ್ಧಿಯೂ ವಿಲೀನವಾಗಲು ಆಗ ಅಭೇದವೊಂದೇ ಉಳಿಯುವುದು ಆಗ ಶುದ್ಧವೂ ಏಕವೂ ಆದಿ ಅಂತಗಳಿಲ್ಲದ್ದೂ ಆದ ಯಾವುದು ಉಳಿಯುವುದೋ ಅದೇ ಬ್ರಹ್ಮವು ಎಂದು ತಿಳಿದವರು ಹೇಳುವರು.

(ಭೇದಬುದ್ಧಿಸ್ತ್ರಿಪುಟೀ ಭೇದ ಸಾಕ್ಷಿಚಿತ್ ವಿಲೀನಾ, ಅರ್ಥಾಃ ತ್ರಿಪುಟೀ ಭೇದಾ ಯಸ್ಯಾಃ ತಥಾವಿಧಾ ಸತೀ ಅಭೇದ ಏವಾವಶಿಷ್ಯತೇ । ಸಚ ಶುದ್ಧಂ ಬ್ರಹ್ಮೈವೇತ್ಯರ್ಥಃ—ತಾ. ಪ್ರ.)

೩೧ ಲೋಕೈಷಣದಲ್ಲಿ ವಿರಕ್ತನಾಗಿ, ದಾರೈಷಣವನ್ನು ಬಿಟ್ಟು, ಧನೈಷಣದಿಂದ ವಿಮುಕ್ತನಾದವನು ಆ ಬಹ್ಮಪದದಲ್ಲಿ ವಿಶ್ರಾಂತಿಯನ್ನು ಪಡೆಯುವನು

೩೨. ಚಿತ್ತು-ಪರಮಾರ್ಥಗಳೆರಡರ ಒಟ್ಟಾಗುವಿಕೆಯು ಪರಮ ಪರಿಣಾಮವು. ಹಾಗೆ ಆದಾಗ, ಬಿಸಿಲಿಗೆ ಸಿಕ್ಕಿದ ಹಿಮದಂತೆ, ಭೇದ ಬುದ್ಧಿಯು ಅಳಿದು ಹೋಗುವುದು

(ದೃಶ್ಯತತ್ತ್ವ ಶೋಧನೇ ಸನ್ಮಾತ್ರಂ ಪರಮಾರ್ಥಃ । ದ್ರಷ್ಟೃತತ್ತ್ವ ಶೋಧನೇ ಚಿನ್ಮಾತ್ರಂ । ತಯೋರಖಂಡೈಕ್ಯ ಲಕ್ಷಣೇನ ಪರೇಣ ನಿರತಿಶಯಾನಂದಾತ್ಮನಾ ಪರಿಣಾಮಶ್ಚಿತ್ತಸ್ಯ ಚರಮ ಸಾಕ್ಷಾತ್ಕಾರ ವೃತ್ತಿಸ್ತೇನ ಇತ್ಯರ್ಥಃ—ತಾ. ಪ್ರ )

೩೩. ಹಾಗೆ ವಿಮುಕ್ತನಾದವನ ಸ್ವಭಾವವು ಹೇಗಿರುವುದು ಎಂದರೆ ಎಳೆದು

ಯಥಾಽಪ್ರಕಟಿತಾಂಗಾಂತಃ ಸಂಸ್ಥಿತಾ ಶಾಲಭಂಜಿಕಾ ।
ನ ಸತೀ ನಾಸತೀ ಸ್ತಂಭೇ ತಥಾ ವಿಶ್ವಸ್ಥಿತಿಃ ಪರೇ ॥ ೩೪ ॥

ಧ್ಯಾನಂ ನ ಶಕ್ಯತೇ ಕರ್ತುಂ ನ ಚೈತದುಪಯುಜ್ಯತೇ ।
ಅಬೋಧೇನ ವಿಬುದ್ಧಸ್ತು ಸ್ವಯಮತ್ರೈವ ತಿಷ್ಠತಿ ॥ ೩೫ ॥

---

ಹೊಡೆದ ಧನುಸ್ಸಿನಂತಿರುವುದು ಹೂವಿನ ಹಾರದ ಹಾಗಲ್ಲ ಆ ಸ್ಥಿತಿಯನ್ನು ಉಪಮಾ ಇಲ್ಲದೆ ಹೇಳುವುದೇ ಸಾಧ್ಯವಿಲ್ಲ.

(ನನು ಆಕೃಷ್ಟಮುಕ್ತಧನುಷ ಇವ ಚಿತ್ತಸ್ಯಾ ಖಂಡಾಕಾರವೃತ್ತ್ಯುಪರಮೇ ಪುನಃ ಪೂರ್ವಾವಸ್ಥಿತಿರ್ದುರ್ವಾರೇತ್ಯಾಶಂಕ್ಯಾಹ–ತಜ್ಞಸ್ಯೇತಿ । ತಜ್ಞಸ್ಯ ಲಬ್ಧ ಸಾಕ್ಷಾತ್ಕಾರಸ್ಯ ಧನುರಾದಿ ಕಠೋರೋಪಮಾಂ ವಿನಾ ಕೋಮಲತರಸ್ಯ ಸ್ರಗ್ದಾಮ ಕಸ್ಯೇವ ಸ್ಥಿತಿಃ ಭೂಮೌ ಪತಿತಂ ಹಿ ಸ್ರಗ್ದಾಮ ಋಜುವಕ್ರಾದಿಭಾವೇನ ಯಥೈವಾ ಕೃಷ್ಯ ಸ್ಥಾಪ್ಯತೇ ತಥೈವಾವತಿಷ್ಠತೇ ನ ಧನುರ್ವತ್ಪೂರ್ವಾವಸ್ಥಾಸ್ಥಿತಿಸ್ತಸ್ಯ ಸಂಭವತೀತ್ಯಾಹ—ತಾ. ಪ್ರ.)

೩೪. ತಜ್ಞನ ಸ್ಥಿತಿಯು ವಿಶ್ವ ಸ್ಥಿತಿಯೆನ್ನುವರು. ಅದು ಬ್ರಹ್ಮದಲ್ಲಿ ಇರುವ ವರಿಗೆ ಮಾತ್ರ ಗೊತ್ತು. ಅಪ್ರಕಟಿತವಾದ ಅಂಗಗಳಿಂದ, ಸ್ತಂಭದಲ್ಲಿ (ಕೆತ್ತುವುದ ಕ್ಕಿಂತ ಮುಂಚೆ ಇರುವ) ಶಾಲಭಂಜಿಕೆಯಂತೆ, ಅದು ಉಂಟೊ ಉಂಟು ಇಲ್ಲವೂ ಇಲ್ಲ ಎನ್ನುವಂತಹ ಸ್ಥಿತಿಯು ಅದು.

೩೫. ಅಲ್ಲಿ ಅಬೋಧವೇ ಸ್ಥಿತಿಯಾದ್ದರಿಂದ ಧ್ಯಾನವು ಶಕ್ಯವು ಇಲ್ಲ : ಉಪಯೋಗವೂ ಇಲ್ಲ. ವಿಬುಧ್ಧನಾದವನು ಸ್ವಯಂ ಆಗಿ ಇರುವನು ಅಷ್ಟೇ !

(ಇತ್ಥಂ ಪ್ರಾಗ್ಬೋಧಾತ್ ನ ಪ್ರಪಂಚೇ ಬ್ರಹ್ಮಣಿ ನಿಷ್ಪ್ರಪಂಚ ಸ್ವಭಾವಸ್ಯಾ ಬೋಧೇನ ಧ್ಯಾನಂ ತಾವತ್ಕರ್ತುಂ ನ ಶಕ್ಯತೇ । ಸಾಕ್ಷಾದ್ವಿಬುದ್ಧಸ್ತು ಸ್ವಯಂ ತತ್ಸ್ವಭಾವೇ ಏವತಿಷ್ಠನ್ಕಥಂ ತಜ್ಜ್ಞಾತುಂ ಶಕ್ನುಯಾತ್ । ನಹಿ ಸ್ವಪ್ನಂ ಜಾಗ ರೂಕೋ ವಾ, ಅಸ್ವಪ್ನೋಽಹಮಸ್ಮೀತ್ಯಾತ್ಮಾನಂ ಧ್ಯಾತುಂ ಶಕ್ನೋತೀತಿ ಭಾವಃ । —ತಾ. ಪ್ರ.)

ಆತ್ಯಂತಿಕೀ ವಿರಸತಾ ಯಸ್ಯ ದೃಶ್ಯೇಷು ದೃಶ್ಯತೇ ।
ಸ ಬುದ್ಧೋ ನಾಪ್ರಬುದ್ಧಸ್ಯ ದೃಶ್ಯತ್ಯಾಗೇ ಹಿ ಶಕ್ತತಾ || ೩೬ ||

ದೃಶ್ಯಸ್ಯ ಬೋಧತಾ ಬೋಧೋ ಯೋ ಬೋಧಾದಪರೀಕ್ಷಯಃ ।
ಸ ಸಮಾಧಾನಶಬ್ದೇನ ಪ್ರೋಚ್ಯತೇ ಸುಸಮಾಹಿತೈಃ || ೩೭ ||

---

೩೬ ದೃಶ್ಯ ಪ್ರಪಂಚ ವಿಷಯದಲ್ಲಿ ಆತ್ಯಂತಿಕ ವಿರಸತೆಯು ಯಾರಿಗೆ ಹುಟ್ಟಿರುವುದೋ ಅವನೇ ಬುದ್ಧನು ತಿಳಿದವನು. ಅಪ್ರಬುದ್ಧನಾದವನಿಗೆ ದೃಶ್ಯ ತ್ಯಾಗವು ಸಾಧ್ಯವೇ ಇಲ್ಲ.

(ಜಾಗರೂಕೇಣ ಸ್ವಾಪ್ನಾರ್ಥೇಷ್ವಿವ ತತ್ತ್ವವಿದಾ ಪ್ರಪಂಚೇ ತುಚ್ಛಬುದ್ಧ್ಯಾ ಆತ್ಯಂತಿಕ ವೈರಸ್ಯ ಮಾತ್ರಂ ತು ಕರ್ತುಂ ಶಕ್ಯಮಿತ್ಯಾಹ—ತಾ.ಪ್ರ.)

೩೭ ದೃಶ್ಯವನ್ನು ತಿಳಿಯುವ ಸಾಕ್ಷಿಯು ಯಾವದುಂಟೋ ಅದನ್ನು ತಿಳಿಯುವಿಕೆಯೇ ಬೋಧವು ಆ ಬೋಧದಿಂದ ದೃಶ್ಯವಾದ ಪ್ರಪಂಚವು ಸಾಕ್ಷಿ ಭಾವದಲ್ಲಿ ಐಕ್ಯವಾಗಿ, ಆ ಸಾಕ್ಷಿಭಾವವು ಸಮಾಹಿತವಾಗಿ ನಿಲ್ಲುವುದೇ ಸಮಾ ಧಾನ, ಸಮಾಧಿಯೆನ್ನುವರು.

(ಯದಿ ನ ಧ್ಯಾನಂ ತರ್ಹಿ ತದವಿಷಯೇ ಬ್ರಹ್ಮಣಿ ಕಥಂ ಸಮಾಧಿಃ ಧಾರಣಾ ಧ್ಯಾನ ಸಮಾಧೀನಾಮೇಕವಿಷಯತ್ವ ನಿಯಮಾತ್ । ತಥಾಹಿ ಭವಗತಃ ಪತಂಜಲೇಃ ಸೂತ್ರಾಣಿ 'ದೇಶ ಬಂಧಶ್ಚಿತ್ತಸ್ಯಧಾರಣಾ', 'ತತ್ರ ಪ್ರತ್ಯಯೈಕತಾ ನತಾ ಧ್ಯಾನಂ', 'ತದೇವ ಅರ್ಥಮಾತ್ರನಿರ್ಭಾಸಂ ಸ್ವರೂಪ ಶೂನ್ಯಮಿವ ಸಮಾಧಿಃ' 'ತ್ರಯಮೇಕತ್ರ ಸಂಯಮಃ' ಇತಿ ತತ್ರಾಹ–ದೃಶ್ಯಸ್ಯೇತಿ । ಯೋ ದೃಶ್ಯಸ್ಯ ತ್ರಿಪುಟೀ ಲಕ್ಷಣಸ್ಯ ಜಗತಸ್ತತ್ಸಾಕ್ಷಿ ಸ್ವರೂಪ ಬೋಧಮಾತ್ರತಾಬೋಧಃ ಸ ಏವ ಸುಷ್ಟು ಸಮ್ಯಗ್ಯಥಾರ್ಥಸ್ವಭಾವೇ ಆಹಿತೇಃ ಸ್ಥಾಪನಾದ್ಧೇತೋಃ ಸಮ್ಯ ಗಾಧಾನಂ ಸಮಾಧಿರಿತಿ ವಿಗ್ರಹೇ ಸಮಾಧಾನ ಶಬ್ದೇನೋಚ್ಯತೇ । ತಾದೃಶ ಬೋಧಸ್ವಭಾವಾದ್ಧಿ ಪ್ರಪಂಚೋಽಪರಿಕ್ಷಯಃ ಶಾಶ್ವತೋ ಭವತೀತಿ ಸಮ್ಯಗ್ಸ್ವ ಭಾವೇ ತಸ್ಯಾಧಾನಂ ಸಂಪನ್ನ ಮಿತ್ಯಕ್ಷರಾರ್ಥಾನುಗಮಾದಿತ್ಯರ್ಥಃ—ತಾ ಪ್ರ.)

ದ್ರಷ್ಟೃದೃಶ್ಯೈಕತಾರೂಪಃ ಪ್ರತ್ಯಯೋ ಮನಸೋ ಯದಾ ।
ಸ ತದೇಕಸಮಾಧಾನೇ ತದಾ ವಿಶ್ರಾನ್ಯತಿ ಸ್ವಯಂ ॥ ೩೮ ॥

ಸ್ವಭಾವೋ ದೃಶ್ಯವೈರಸ್ಯಮೇವ ತತ್ವವಿದೋ ನಿಜಃ ।
ದೃಶ್ಯಸ್ಪಂದನಮೇವಾಹುರತತ್ತ್ವಜ್ಞತ್ವಮುತ್ತಮಾಃ ॥ ೩೯ ॥

ಅತಜ್ಜ್ಞಾಯೈವ ವಿಷಯಾಃ ಸ್ವದಂತೇ,ನತು ತದ್ವಿದಃ ।
ನಹಿ ಪೀತಾಮೃತಾಯಾಂತಃ ಸ್ವದತೇ ಕಟು ಕಾಂಜಿಕಂ ॥ ೪೦ ॥

---

೩೮ ದ್ರಷ್ಟೃ ದೃಶ್ಯ ಇವೆರಡೂ ಒಂದೇ ಎಂಬ ಪ್ರತ್ಯಯವು ಯಾವಾಗ ಮನಸ್ಸಿಗೆ ಬಂದು ಅದು ದೃಢವಾಗಿ ನಿಶ್ಚಲವಾಗಿ ನಿಲ್ಲುವುದೋ ಆಗ ಅವನು ಸ್ವಯಂ ಇತರರ ಸಹಾಯವಿಲ್ಲದೆ ವಿಶ್ರಾಂತಿಯನ್ನು ಹೊಂದುವನು.

(ಅರ್ಥಮಾತ್ರ ನಿರ್ಭಾಸಂ ಸ್ವರೂಪ ಶೂನ್ಯಮಿವೇತಿ ಪತಂಜಲಿವಚನಸ್ಯಾಪಿ ದೃಗ್ದೃಶ್ಯೈಕ್ಯಾಪಾದನೇನ ಮನಸೋ ವಿಲಯೇ ತಾತ್ಪರ್ಯಂ ಸುವಚಮಿತ್ಯಾಶಯೇನಾಹ–ದ್ರಷ್ಟ್ರಿತಿ ! ದ್ರಷ್ಟಾ ಸಾಕ್ಷಿದೃಶ್ಯಾ ತ್ರಿಪುಟೀ ತದೇಕತಾಂ ರೂಪಯತೀತಿ ರೂಪಃ ॥—ತಾ ಪ್ರ.)

೩೯. ತತ್ವವೇತ್ತನ ನಿಜವಾದ ಸ್ವಭಾವವು ದೃಶ್ಯದಲ್ಲಿ ಆಸಕ್ತಿಯನ್ನು ವಹಿಸದಿರುವಿಕೆಯು. ದೃಶ್ಯವನ್ನು ಕಂಡು ವ್ಯಾಪಾರಾಭಿಮುಖವಾಗುವಿಕೆಯೇ ಅತತ್ವಜ್ಞತೆಯು ಎಂದು ಉತ್ತಮರು ಹೇಳುವರು.

(ದೃಶ್ಯಸ್ಯ ವೈರಸ್ಯಂ ಜಾಡ್ಯದುಃಖಾದಿ ರಸತಾ ವಿರುದ್ಧ ಚಿದಾನಂದರಸ ಭಾವಃ ॥—ತಾ. ಪ್ರ.)

೪೦ ಅತಜ್ಞನಿಗೆ ವಿಷಯಗಳು ರುಚಿಸುವವೇ ಹೊರತು ತಜ್ಞನಿಗೆ ಅಲ್ಲ. ಅಮೃತವನ್ನು ಕುಡಿದವನ ಮನಸ್ಸಿಗೆ ಖಾರದ ಮದ್ಯದ ಯೋಚನೆಯು ಬಂದೀತೆ ?

(ಕಾಂಜಿಕಂ ಮದ್ಯವಿಶೇಷಃ—ತಾ. ಪ್ರ.)

ವಿತೃಷ್ಣಸ್ಯಾತ್ಮನಿಷ್ಠತ್ವಾದೇಷಣಾತ್ರಯಮುಜ್ಝತಃ ।
ಜ್ಞಸ್ಯಾಪ್ಯನಿಚ್ಛತೋ ಧ್ಯಾನಮರ್ಥಾಯಾತಂ ಪ್ರವರ್ತತೇ ॥ ೪೧ ॥

ಬೋಧಃ ಸ್ಫುರತಿ ತೃಷ್ಣಾಯಾಃ ಸೈವ ಯಸ್ಯ ನ ವಿದ್ಯತೇ ।
ತಸ್ಯ ಸ್ವರೂಪಮುತ್ಸೃಜ್ಯ ಕ್ವಾಸೌ ತಿಷ್ಠತಿ ಕಃ ಕಥಂ ॥ ೪೨ ॥

ಜ್ಞಸ್ಯಾನಾರಾಧಕೋ ಧ್ಯೇಯಬೋಧೋ ನಯತು ಯೋ ಭವೇತ್ ।
ಅನಂತಾ ಸಾ ವಿತೃಷ್ಣಸ್ಯ ನಿರ್ವಿಭಾಗೋದಿತಃ ಸ್ವಯಂ ॥ ೪೩ ॥

---

೪೧. ಆತ್ಮನಿಷ್ಠನಾಗಿ ವಿತೃಷ್ಣನಾಗಿರುವವನಿಗೆ, ಈಷಣಾತ್ರಯಗಳನ್ನು ಬಿಟ್ಟವನಿಗೆ, ಜ್ಞನಿಗೆ, ಅವನಿಚ್ಛೆಯಿಲ್ಲದೆಯೇ ಅರ್ಥ (ಪರಮಾರ್ಥ?)ದ ಕಡೆಗೆ ಧ್ಯಾನವು ಹೋಗುತ್ತಲೇ ಇರುವುದು.

(ಶ್ರೀ ಶಂಕರರು ಹೇಳುವ "ಸಂತಾನ"ವನ್ನು ಕುರಿತು ಯೋಚಿಸಿ )

೪೨. ತೃಷ್ಣೆಯಿರುವಾಗಲೇ ಬೋಧವು ಸ್ಫುರಿಸುವುದು: ಆ ತೃಷ್ಣೆಯೇ ಇಲ್ಲದವನಿಗೆ ಸ್ವರೂಪವನ್ನು ಬಿಟ್ಟು ಇನ್ನೆಲ್ಲಿ ಇರುವುದಾದೀತು? ಆ ಅನ್ಯವು ಯಾರು ? ಹೇಗೆ ? ಎಲ್ಲಿ ? (ಉಂಟು ?)

(ಬೋಧಃ ಸ್ವರೂಪಾನು ಸಂಧಾನ ಲಕ್ಷಣಂ ಧ್ಯಾನಂ ತೃಷ್ಣಾದಿ ವಿಕ್ಷೇಪ ಹೇತೋಃ ಸ್ಫುರತಿ ಸಂಚಲತೀತಿ ಪ್ರಸಿದ್ಧಂ। ಯಸ್ಯ ತತ್ತ್ವವಿದಃ। ತಥಾಚ ಪರಿಶೇಷಾತ್ ಸ್ವರೂಪಾನು ಸಂಧಾನಸ್ಯೈವ ಸಿದ್ಧಿರಿತ್ಯಾಹ–ತಸ್ಯೇತಿ । ಕಿಂವೃತ್ತಾನಿ ದೃಶ್ಯದ್ರಷ್ಟೃ ದರ್ಶನ ತ್ರಿಪುಟೀ ಪರಾಮರ್ಶೀನಿ॥—ತಾ. ಪ್ರ.)

೪೩. (ಅಥವಾ) ವಿತೃಷ್ಣನಾದವನ ತೃಷ್ಣೆಯು ಅನಂತವಾಗಿಯೂ ಇರಬಹುದು: ಆಗ ಅದೇ ನಿರ್ವಿಭಾಗವಾದ ಅಪರಿಚ್ಛೇದ್ಯ ಆತ್ಮವಾಗಬಹುದು ಆಗಲೂ ಧ್ಯೇಯ ಜ್ಞಾನವು ಸಂಭವಿಸಿದರೂ ಅದೂ ಅನಾರಾಧಕವೇ ಆಗುವುದು

(ಅಥವಾ ವಿತೃಷ್ಣಸ್ಯ ಜ್ಞಸ್ಯ ನಾ ತೃಷ್ಣಾ ಅನಂತಾ ಅಪರಿಚ್ಛೇದ್ಯಾ । ಯತೋಽಯಂ ಸ್ವಯಂ ನಿರ್ವಿಭಾಗೋಽಪರಿಚ್ಛಿನ್ನಾತ್ಮರೂಪ ಏವೋದಿತಃ । ಅತೋ ಧ್ಯೇಯಸ್ಯ ಚಿಂತನೀಯಸ್ಯ ಬಾಹ್ಯಾರ್ಥಸ್ಯ ಬೋಧೋ ಯೋ ಯಾದೃಶೋ

ಅನಂತಮುಪತೃಷ್ಣಸ್ಯ ಸ್ವಯಮೇವ ಪ್ರವರ್ತತೇ ।
ಧ್ಯಾನಂ ಗಲಿತಪಕ್ಷಸ್ಯ ಸಂಸ್ಥಾನಮಿವ ಭೂಭೃತಃ ॥ ೪೪ ॥

ಶುದ್ಧಬೋಧಾತ್ಮನಿ ಜ್ಞತ್ವಾದಸಮಾಹಿತತೋದಿತಾ ।
ನ ಜಾತು ಸುಸಮಿದ್ಧೇಽಗ್ನೌ ಘೃತಬಿಂದೋರವಸ್ಥಿತಿಃ ॥ ೪೫ ॥

ವರಂ ವಿಷಯವೈತೃಷ್ಣ್ಯಂ ಸಮಾಧಾನಮುದಾಹೃತಂ ।
ಆಹೃತಂ ಯೇನ ತನ್ನೂನಂ ತಸ್ಮೈ ನೃಬ್ರಹ್ಮಣೇ ನಮಃ ॥ ೪೬ ॥

---

ಭವೇತ್ಸ ತಾದೃಶೇ ಸಮಾಧೌ ವ್ಯವಹಾರೇ ವಾ ನಯತು ತಥಾವ್ಯಸೌ ತಸ್ಯಾನಾರಾಧಕೇನ ತತ್ತೃಷ್ಣಾ ಪೂರ್ತಿ ಸಮರ್ಥಂ ಇತ್ಯರ್ಥಃ)

೪೪. ತೃಷ್ಣೆಯನ್ನು ಬಿಟ್ಟವನಿಗೆ ಅನಂತ ಧ್ಯಾನವು ಸ್ವಯಂ ಪ್ರವರ್ತಿಸುವುದು. ಬೆಟ್ಟಗಳ ಮೇಲಿರುವ ವಸ್ತುವು ತನ್ನ ಸ್ಥಾನದಿಂದ ಜಾರಿದರೆ ಕೆಳಕ್ಕಿಳಿಯಲು ಬೇರೆ ಯತ್ನವು ಬೇಕೇನು ?

(ಅತೋ ಬಾಹ್ಯಾರ್ಥೇಽಪಗತ ತೃಷ್ಣಸ್ಯ ತಸ್ಯ ತಾದೃಶ ತೃಷ್ಣಾಯಾಃ ನಿತ್ಯನಿರತಿಶಯಾನಂದಾತ್ಮೈವ ಪರಿಶೇಷಾದ್ಬೋಧಕ ಇತಿ ತದನುಭವ ಲಕ್ಷಣಮನಂತಧ್ಯಾನಂ ಸ್ವಯಮೇವ ಪ್ರವರ್ತತೇ ನ ಯತ್ನ ಮಪೇಕ್ಷತೇ ಇತ್ಯರ್ಥಃ ॥ —ತಾ. ಪ್ರ.)

೪೫. (ಒಂದು ವೇಳೆ) ಶುದ್ಧ ಬೋಧ ಸ್ವರೂಪನಾದ ಆತ್ಮನಲ್ಲಿ ಜ್ಞತ್ವದಿಂದಲೇ ಅಸಮಾಹಿತತ್ವವು ಉದಯಿಸಿದರೋ ಎಂದರೆ, ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಘೃತಬಿಂದುವು ಉಳಿಯುವುದೂ ಉಂಟೇನು ? ಹಾಗಾಗುವುದು.

೪೬. ವಿಷಯಗಳಲ್ಲಿ "ಆಸಕ್ತಿಯಿಲ್ಲದಿರುವುದು ತಾನೇ ತಾನಾಗಿರುವಿಕೆಯು ಸಮಾಧಾನ" ಎನ್ನುವರು. ಅಂತಹ ಸಮಾಧಾನವನ್ನು ಪೂರ್ಣವಾಗಿ ಪಡೆದ ನರಸ್ವರೂಪಿಯಾದ ಬ್ರಹ್ಮನಿಗೆ ನಮಸ್ಕಾರವು.

(ವಿಕ್ಷೇಪ ಹೇತೂನಾಂ ರಾಗಾದಿ ದೋಷಾಣಾಮಾತ್ಯಂತಿಕೋಚ್ಛೇದ ಲಕ್ಷಣಂ ಸಮಾಧಾನಂ ವಿದುಷಾಮೇವಾಸ್ತ್ಯತಸ್ತೇ ನಮಸ್ಯಾಃ ಇತ್ಯಾಹ-ಪರಮಿತಿ—ಆಹೃತಂ ಸಂಪಾದಿತಂ—ತಾ. ಪ್ರ.)

ನೂನಂ ವಿಷಯವೈತೃಷ್ಣ್ಯೇ ಪರಿಪ್ರೌಢಿಮುಪಾಗತೇ ।
ನ ಶಕ್ನುವಂತಿ ನಿರ್ಹಂತುಂ ಧ್ಯಾನಂ ಸೇಂದ್ರಾಃ ಸುರಾಸುರಾಃ ॥ ೪೭ ॥

ಪರಂ ವಿಷಯವೈತೃಷ್ಣ್ಯಂ ವಜ್ರಧ್ಯಾನಂ ಪ್ರಸಾಧ್ಯತಾಂ ।
ಭೇದೇ ವಿಗಲಿತೇ ಜ್ಞಾನಾದನ್ಯಧ್ಯಾನತೃಣೇನ ಕಿಂ ॥ ೪೮ ॥

ಮೂರ್ಖಸ್ಥೋ ವಿಶ್ವಶಬ್ದಾರ್ಥೋ ನಾಮೂರ್ಖವಿಷಯಸ್ತಥಾ ।
ತಜ್ಜ್ಞಾಜ್ಞಯೋಸ್ತಯೋಶ್ಚೈವ ವಿಶ್ವವಿಶ್ವೇಶಯೋಸ್ತಥಾ ॥ ೪೯ ॥

ಯತ್ರೈಕೀಭೂಯ ಕಚನಂ ತತ್ರ ವಿಶ್ರಾಮ್ಯತಾಂ ಬುಧಾಃ ।
ಬೋಧಭೂಮಿಷು ಸಿದ್ಧಾನಾಮರ್ಥಾನಾಂ ವಾ ವಿವೇಕಿನಾಂ ।
ಸತ್ತಾಸತ್ತೇ ದ್ವಯೈಕ್ಯೇ ಚ ನಿರ್ಣೀತೇ ನೇಹ ಕೇನಚಿತ್ ॥ ೫೦ ॥

---

೪೭. ವಿಷಯವೈತೃಷ್ಣದಲ್ಲಿ ಉತ್ತಮವಾದ ಪ್ರೌಢಿಯನ್ನು ಸಂಪಾದಿಸಿದ್ದಲ್ಲಿ, ಧ್ಯಾನವನ್ನು ಅಡ್ಡಿಪಡಿಸಲು ಇಂದ್ರ ಸಮೇತರಾದ ಸುರಾಸುರರಿಗೂ ಸಾಧ್ಯವಿಲ್ಲ.

(ತೃಷ್ಣಾಪಾಶಬದ್ಧಾ ಸ್ವಪರ್ಶೂ ಪ್ರತ್ಯೇವ ದೇವಾನಾಂ ತೃಷ್ಣೋದ್ದೀಪನೇನ ವಿಘ್ನೇ ಸಮರ್ಥತ್ವಾದಿತಿ ಭಾವಃ—ತಾ. ಪ್ರ.)

೪೮. ಉತ್ತಮವಾದ ವಿಷಯ ವೈತೃಷ್ಣ್ಯವೇ ವಜ್ರದಂತೆ ದೃಢವಾದ ಧ್ಯಾನವು: ಅದನ್ನು ಸಾಧಿಸಿರಿ. ಜ್ಞಾನಬಲದಿಂದ ಭೇದವು ಸಡಿಲಿ ಹೋದರೆ, ಮಿಕ್ಕ ಧ್ಯಾನವೆಲ್ಲವೂ ತೃಣಪ್ರಾಯವು. ಅದರಿಂದ ಆಗಬೇಕಾದುದೇನು ?

೪೯. ವಿಶ್ವ ಎಂಬ ಶಬ್ದದ ಅರ್ಥವು ಮೂರ್ಖನಿಗೆ ಉಂಟೇ ಹೊರತು ಅದು ಅಮೂರ್ಖನಿಗೆ ವಿಷಯವೇ ಆಗುವುದಿಲ್ಲ. ಅದರಿಂದ, ತಜ್ಞನಿಗೂ ಅತಜ್ಞನಿಗೂ ಇರುವ ಭೇದವೇ ಅದು! ವಿಶ್ವಕ್ಕೂ ವಿಶ್ವೇಶ್ವರನಿಗೂ ಇರುವ ಭೇದವೆಷ್ಟೋ ಅಷ್ಟು ಅದು.

೫೦. ಎಲ್ಲಿ ದ್ವೈತ ಹೇತುಗಳಾದ ಭೇದಗಳೆಲ್ಲವೂ ಒಂದೇ ಆಗಿ ವ್ಯಾಪಾರ ಮಾಡುವುವೋ ಅಲ್ಲಿ ಬುಧರು ವಿಶ್ರಾಂತಿಯನ್ನು ಪಡೆಯಲಿ. ಆ ಭೂಮಿಯಲ್ಲಿ ಜ್ಞಾನವು ತಾನೇ ತಾನಾಗಿರುವಾಗ ಆರುರುಕ್ಷು (ಮೇಲಕ್ಕೆ ಏರಬೇಕೆಂದಿರುವವನು) ವಾದ ವಿವೇಕಿಗೂ ಆರೂಢನಾದ ಸಿದ್ಧನಿಗೂ, ಅರ್ಥಗಳಿಗೂ ಅವು ಅನರ್ಥಗಳೆಂದು ತಿಳಿದ ವಿವೇಕಿಗಳಿಗೂ, ಸತ್ತೆ–ಅಸತ್ತೆಗಳಿಗೂ, ದ್ವೈತವೋ ಐಕ್ಯವೋ ಯಾರೂ ನಿರ್ಣಯಿಸಿಲ್ಲ.

ಉಪಾಯ ಏಕಃ ಶಾಸ್ತ್ರಾರ್ಥೋ ದ್ವಿತೀಯೋ ಜ್ಞಸಮಾಗಮಃ ।
ಧ್ಯಾನಂ ತೃತೀಯಂ ನಿರ್ವಾಣೇ ಶ್ರೇಷ್ಠಸ್ತತ್ರೋತ್ತರೋತ್ತರಃ ॥ ೫೧ ॥

ಜೀವಾದರ್ಶಾನ್ಮಿಥೋ ರೂಪಂ ಗೃಹ್ಣಾತ್ಯೇಷಾ ಮಹದ್ವಪುಃ ।
ಜಗತ್ಯುದೇತಿ ಸಂಘಟಾದಾವಿಶೇಷಂ ಸಮೇ ಸಮೇ ॥ ೫೨ ॥

ಜ್ಞಾನಪೂರ್ವಾಪರಾಶೇಷಜಗದಷ್ಟಾಪದಸ್ಥಿತೇಃ ।
ಏಕಸಿದ್ಧೌ ದ್ವಯೋಃ ಸಿದ್ಧಿರ್ಬೋಧವೈತೃಷ್ಣ್ಯದೀಪಯೋಃ ॥ ೫೩ ॥

---

೫೧. (ವಿಶ್ರಾಂತಿಯನ್ನು ಪಡೆಯಲು) ಮೊದಲನೆಯ ಉಪಾಯವು ಶಾಸ್ತ್ರಾರ್ಥವು ಎರಡನೆಯದು ಬ್ರಹ್ಮಜ್ಞ ಸಮಾಗಮವು ಧ್ಯಾನವು ಮೂರನೆಯದು. ಇವುಗಳಲ್ಲಿ ಒಂದಕ್ಕಿಂತ ಇನ್ನೊಂದು ಉತ್ತರೋತ್ತರವಾಗಿ ಶ್ರೇಷ್ಠವು.

೫೨ ಈ ಜಗತ್ತು ಜೀವವೆಂಬ ಆದರ್ಶದಲ್ಲಿ ರೂಪುಗೊಂಡು ಮಹದ್ವಪುವಾಗಿ ಬೆಳೆಯುವುದು: ಪ್ರಿಯ-ಅಪ್ರಿಯಗಳೆಂಬ ಸಂಘಟ್ಟದಿಂದ ಸಮವೈಷಮ್ಯ ರೂಪವಾಗಿ ಹರಡುವುದು.

(ಅವಿವೇಕ ಪ್ರಯುಕ್ತ ಜೀವೋಪಾಧಿ ಪರಿಚ್ಛೇದಾಧೀನ ರಾಗದ್ವೇಷಾಭ್ಯಾಂ ಪ್ರಿಯಾಪ್ರಿಯ ವಿಷಯಸಂಘಟ್ಟಾತ್ ಸಾಮ್ಯವೈಷಮ್ಯ ಕಲ್ಪನಾಂ ದರ್ಶಯತಿ। ಮಹದ್ವಪುರಪರಿಚ್ಛಿನ್ನಾ ಏಷಾ ನಿತ್ಯಾಪರೋಕ್ಷಾ ಬ್ರಹ್ಮ ಚಿಜ್ಜೀವಾಖ್ಯಸ್ಯ ಸ್ವಪ್ನ ಪ್ರತಿಬಿಂಬಸ್ಯ ಆದರ್ಶ ಭೂತಾದಂತಃಕರಣೋಪಾಧೇರ್ವಶಾನ್ಮಿಥಃ ಪರಸ್ಪರ ವಿಭಿನ್ನಂ ರೂಪಂ ಗೃಹ್ಣಾತಿ ತತ್ರ ಜಗತಿ ಪ್ರಿಯಾಪ್ರಿಯಸಂಘಟ್ಟಾತ್ ಅವಿಶೇಷಂ ಬ್ರಹ್ಮಾದಿಸ್ತಂಭಪರ್ಯಂತಾನ್ವಿಶೇಷಾನಭಿವ್ಯಾಪ್ಯ ಸ್ವಕರ್ಮ ವೈಚಿತ್ರ್ಯಾತ್ ಸಮವಿಷಮೇ ಶರೀರಭೇದೇ ಉದೇತೀತ್ಯರ್ಥಃ ।—ತಾ ಪ್ರ)

೫೩. ಜ್ಞಾನಕ್ಕೆ ಅಧಿಕಾರಿಯಾದೊಬ್ಬನು ಪೂರ್ವಪರಗಳನ್ನು ಕುರಿತು ಯೋಚಿಸುತ್ತ ಅಶೇಷ ಜಗತ್ತೆಂಬ ಜೇಡನನ್ನು ಕಂಡು, ಬೋಧ ವೈತೃಷ್ಣ್ಯ ಎಂಬ ದೀಪಗಳನ್ನು ಹಿಡಿದು ನೋಡಿದರೆ (ಈ ಜಗತ್ತು ಇಲ್ಲವಾಗುವುದು. ಈ ಎರಡು ದೀಪಗಳು ಇಲ್ಲದಿದ್ದರೆ) ಒಂದಾದರೂ ಸಾಕು. ಒಂದರಿಂದಲೇ ಎರಡರಿಂದ ಆಗಬೇಕಾದ ಕಾರ್ಯವು ಸಿದ್ಧಿಸುವುದು.

ಮತಿವಾತ್ಯಾಧುತೋ ವ್ಯೋಮ್ನಿ ದಗ್ಧೋ ಜ್ಞಾನಾಗ್ನಿನಾಖಿಲಃ ।
ಜಗತ್ತೂಲಃ ಪರೇ ಶಾಂತೇ ನ ಜಾನೇ ಕ್ವಾಶು ಗಚ್ಛತಿ ॥ ೫೪ ॥

ಚಿತ್ರಾಗ್ನಿನೇವ ಬೋಧೇನ ತೇನ ಜಾಡ್ಯಂ ನ ಶಾಮ್ಯತಿ ।
ನಿರ್ಮೂಲಾಪಿ ಜಗದ್ಭ್ರಾಂತಿರ್ಯೇನಾಸು ನ ವಿಲೀಯತೇ ॥ ೫೫ ॥

ಯಥಾಽಜ್ಞಸ್ಯ ಜಗಜ್ಜ್ಞಪ್ತಿರಪಜ್ಞಾನಾತ್ಪ್ರದೀವ್ಯತೇ ।
ತಥಾ ಜ್ಞಸ್ಯ ಪರಿಜ್ಞಾನಾತ್ತದಜ್ಞಪ್ತಿಃ ಪ್ರದೀಪ್ಯತೇ ॥ ೫೬ ॥

ತಜ್ಜ್ಞಸ್ಯಾಜ್ಞಜಗಜ್ಞಪ್ತಿಶಬ್ದಾರ್ಥರಹಿತಾ ಸ್ಥಿತಾ ।
ಯಥಾಸ್ಥಿತೈವ ತ್ರಿಜಗಜ್ಜ್ಞಪ್ತಿಶ್ಚಿತ್ರ ಇವೋದಿತಾ ॥ ೫೭ ॥

---

೫೪ ಸನ್ಮತಿ ಎಂಬ ವಾಯುವು ಬೀಸುತ್ತಿರುವ ಚಿದಾಕಾಶದಲ್ಲಿ ಜ್ಞಾನಾಗ್ನಿಯು ವಿಜೃಂಭಿಸಿ ಜಗತ್ತೆಂಬ ಅರಳೆಯ ರಾಶಿಯನ್ನು ಸುಟ್ಟಾಗ, ಉಳಿಯುವ ಪರಮಶಾಂತಿಯಲ್ಲಿ ಈ ದೃಶ್ಯವೆಲ್ಲವೂ ಎಲ್ಲಿ ಹೋಗುವುದೋ ಯಾರು ಬಲ್ಲರು ?

(ಉತ್ತರಭೂಮಿಕಾಭ್ಯಾಸಲಕ್ಷಣಯಾ ಮತಿವಾತ್ಯಯಾ ಧುತ ಉಡ್ಡಾಯಿತಃ ಸರ್ ಕ್ವ ಗಚ್ಛತಿ ನ ಜಾನೇ—ತಾ. ಪ್ರ )

೫೫. ಚಿತ್ರಾಗ್ನಿಯು ಚಳಿಯನ್ನು ಹೇಗೆ ಶಮನ ಮಾಡಲಾರದೋ ಹಾಗೆಯೇ (ಬರಿಯ ಶಾಸ್ತ್ರಾರ್ಥರೂಪವಾದ) ಬೋಧವು, ಜಗಜ್ಜಾಡ್ಯವನ್ನು ಶಮನ ಮಾಡಲಾರದು. ಜಗದ್ಭ್ರಾಂತಿಯನ್ನು ನಿರ್ಮೂಲ ಮಾಡಿದರೂ ಅದು (ಆ ಕೇವಲ ಶಾಸ್ತ್ರಾರ್ಥರೂಪ) ಜ್ಞಾನದಿಂದ ವಿಲೀನವಾಗುವುದಿಲ್ಲ.

೫೬. ಅಜ್ಞನಿಗೆ ಜಗತ್ತು ಇದೆಯೆಂಬ ಜ್ಞಪ್ತಿಯು ಅಪಜ್ಞಾನದಿಂದ ಪ್ರದೀಪ್ತವಾಗುವಂತೆ, ಜ್ಞನಿಗೆ ಪರಿಜ್ಞಾನದಿಂದ ಜಗಪ ಜ್ಞಪ್ತಿಯು ಪ್ರದೀಪ್ತವಾಗುವುದು.

(೫೫ರಲ್ಲಿ ಹೇಳಿರುವುದು ಆಪಾತಜ್ಞಾನ: ಇಲ್ಲಿ ಹೇಳಿರುವ ಅಪಜ್ಞಾನ, ಪರಿಜ್ಞಾನಗಳೊಡನೆ ಅದನ್ನು ಹೋಲಿಸಿ ಜ್ಞಾನವು ಚೋದನಾತ್ಮಕವಾಗಿರಬೇಕು: ಇಲ್ಲದಿದ್ದರೆ ಅದು ಅರ್ಥಶೂನ್ಯವು: ವಿಕಲ್ಪವು .ಕೇವಲ ಶಬ್ದಾನುಪಾತಿಯು ಎಂಬುದನ್ನು ನೆನೆಯಿರಿ )

೫೭. ತಜ್ಞನಿಗೂ ಅಜ್ಞನಿಗೂ ಇಷ್ಟೇ ವ್ಯತ್ಯಾಸ! ಅಜ್ಞನು ಯಾವ

ಶೂನ್ಯತ್ವೇನೈವ ರಚಿತಾ ಸುಪ್ತತ್ವೇನೇವ ನಿರ್ಮಿತಾ ।
ಭಾಸತೇ ಭಾಮಯೀ ವಾಂಛಾ ಜಗಜ್ಜ್ಞಪ್ತಿರ್ಜ್ಞಚೇತಸಿ ॥ ೫೮ ॥

ನೂನಂ ಬೋಧೇ ವಿಮೂಢಸ್ಯ ನಾಹಂತಾ ನ ಜಗತ್‌ಸ್ಥಿತಿಃ ।
ಭಾಸತೇ ಪರಮಾಭಾನರೂಪಿಣಃ ಕಾಪ್ಯವಸ್ಥಿತಿಃ ॥ ೫೯ ॥

ಬೋಧಾಬೋಧಾತ್ಮಕಂ ಚಿತ್ತಂ ಭಾತಿ ಶುಷ್ಕಾರ್ದ್ರಕಾಷ್ಠವತ್ ।
ಬೋಧಾದೇಕಂ ಜಗದ್ಭಾವೈರ್ಜಾಡ್ಯಾನ್ನಾತ್ಮತ್ವಮಾಗತಂ ॥ ೬೦ ॥

ಮಿಥೋಽಬೋಧಾದ್ವಿವದತಿ ಮೈತ್ರಿಂ ಭಜತಿ ಬೋಧತಃ
ಯ ಏವಾನ್ಯಾಧಿಕೋ ಭಾಗಸ್ತನ್ಮಯತ್ವೇನ ತಿಷ್ಠತಿ । ॥ ೬೧ ॥

---

ಜಗತ್ತನ್ನೂ ಜ್ಞಪ್ತಿಯನ್ನು ಅರ್ಥಪೂರ್ಣವಾಗಿ ನೋಡುವನೋ ಅದೇ ಜಗಜ್ಜ್ಞಪ್ತಿಗಳು ಜ್ಞನಿಗೆ ಅರ್ಥರಹಿತವಾಗಿ ಕಾಣಿಸುವುವು: ಜಗಜ್ಜ್ಞಪ್ತಿಯು ಯಥಾಸ್ಥಿತವಾಗಿ ಕಾಣುತ್ತಿದ್ದರೂ ಚಿತ್ರದಲ್ಲಿ ಇರುವಂತೆ ಕಾಣಿಸುತ್ತಿರುವುದು.

೫೮ ಜಗಜ್ಜ್ಞಪ್ತಿ ಎಂಬ ಹೃದಯದಲ್ಲಿ ಶೂನ್ಯತ್ವದಿಂದ ರಚಿತವಾದಂತೆ, ಸುಪ್ತತ್ವದಿಂದ ನಿರ್ಮಿತವಾದಂತೆ, ಕೇವಲ ಪ್ರಕಾಶಮಯವಾದ ವಾಂಛೆಯು ಮೆರೆಯುವುದು.

೫೯ ನಿಜವಾಗಿಯೂ ವಿಮೂಢನಿಗೂ ಅಹಂತಾ ಆಗಲಿ ಜಗತ್ ಸ್ಥಿತಿಯಾಗಲೀ ಇಲ್ಲ. ಏನೋ ಒಂದು ಇರುವ ಹಾಗೆ ಆ ಭಾನರೂಪವು (ನೆರಳಿನ ಹಾಗೆ ತೋರುವಿಕೆಯು) ಇರುವುದು ಅಷ್ಟೆ!

೬೦ ಬೋಧ–ಅಬೋಧಾತ್ಮಕವಾದ ಚಿತ್ತವು, ಶುಷ್ಕವೂ ಆರ್ದ್ರವೂ ಆದ ಕಟ್ಟಿಗೆಯಂತೆ ಇರುವುದು. ಬೋಧದಿಂದ ಏಕತ್ವವನ್ನೂ, ಅಬೋಧರೂಪವಾದ ಜಾಡ್ಯದಿಂದ ಜಗತ್ತಿನಲ್ಲಿ ಸದ್ಭಾವವನ್ನು ಕಾಣುತ್ತ ಆತ್ಮತ್ವವನ್ನು ಹೊಂದದೆ ಇರುವುದು.

೬೧ ಅಬೋಧದಿಂದ ಪರಸ್ಪರ ವಿವಾದ ಮಾಡುವುದು: ಬೋಧದಿಂದ ಮೈತ್ರಿಯನ್ನು ಪಡೆಯುವುದು. ಯಾವುದು ಇವೆರಡನ್ನೂ ಮೀರಿದುದೋ ಆ ಆ ಭಾಗವು ತನ್ಮಯವಾಗಿ ಇರುವುದು.

ಬುಧಃ ಸತತ್ತ್ವಂ ನಾಪ್ನೈತಿ ಜಗತೋಽಭಾವಭಾವಯೋಃ ।
ಜಾಗ್ರತ್ಸ್ವಪ್ನಸುಷುಪ್ತಾನಾಂ ಸ್ವಭಾವಮಿವ ತುರ್ಯಗಃ ॥ ೬೧ ॥

ವಾಸನೈವ ಮನಃ ಸೇಯಂ ಸ್ವವಿಚಾರೇಣ ನಶ್ಯತಿ ।
ಅವಸ್ತುತ್ವಾದತೋ ಮೋಕ್ಷೋ ನಾತ್ಮನಾಶೇ ಪ್ರವರ್ತತೇ ॥ ೬೨ ॥

ಧ್ಯಾನದ್ರುಮಾತ್ಸ್ವಯಮುಪೋಢಮನಲ್ಪಪಾಕಾ-
ತ್ಕಾಲೇನ ಬೋಧಮುಪಯಾತವತಃ ಕ್ರಮೇಣ ॥
ಭುಕ್ತ್ವಾ ರಸಾಯನಫಲಂ ಪರಬೋಧಮಾದ್ಯ-
ಮಿಚ್ಛನ್ಮನೋಹರಿಣಕೋ ನಿಗಡಾದ್ವಿಮುಕ್ತಃ ॥ ೬೪ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು**
**ನಿರ್ವಾಣ ಪ್ರಕರಣೇ "ಮನೋಹರಿಣಕೋಪಾಖ್ಯಾನಂ" ನಾಮ**
**ಪಂಚಚತ್ವಾರಿಂಶಃ ಸರ್ಗಃ**

---

(ಬೋಧತೋ ಬೋಧಾಧಿಕ್ಯೇನ ಸರ್ವಜನೇಷ್ವತಿ ಮೈತ್ರೀಂ ಭಜತಿ ಆತ್ಮೌಪಮ್ಯೇನ ಸುಖದುಃಖೇ ದಯಯಾ ಪಶ್ಯತೀತ್ಯರ್ಥಃ। ಅಬೋಧಾದಬೋಧಾಂಶೇನ ವಿವದತಿ ವಿವಾದಾದಿನಾ ವ್ಯವಹರತಿ ವಾ ॥—ತಾ. ಪ್ರ )

೬೧. ತುರ್ಯಾವಸ್ಥೆಯಲ್ಲಿರುವವನು ಜಾಗ್ರತ್ ಸ್ವಪ್ನ ಸುಷುಪ್ತಗಳ ಸ್ವಭಾವವನ್ನು ಹೇಗೆ ತಿಳಿಯನೋ ಹಾಗೆಯೇ ಬುಧನು ಜಗತ್ತಿನ ಅಥವಾ ಭಾವಾಭಾವಗಳ ತತ್ವವನ್ನು ತಿಳಿಯುವುದಿಲ್ಲ

೬೨. ವಾಸನೆಯೆನ್ನುವುದೇ ಮನವು: ಆ ವಾಸನೆಯೇ ಆತ್ಮ ವಿಚಾರದಿಂದ ನಾಶವಾಗುವುದು ಏಕೆಂದರೆ ಅದು ಅವಸ್ತುವು. ಹಾಗೆ ಆದಾಗ ಮೋಕ್ಷವು ಅದರಿಂದ ಯಾರೂ ಆತ್ಮನಾಶದಲ್ಲಿ ಪ್ರವರ್ತಿಸುವುದಿಲ್ಲ

೬೪. ಧ್ಯಾನವೃಕ್ಷದಿಂದ ಪರಿಪಕ್ವವಾದ ಪುಣ್ಯಬಲದಿಂದ ತಾನಾಗಿ ಲಭಿಸುವ, ಸಕ್ರಮವಾಗಿ ಸಕಾಲದಲ್ಲಿ ಬೋಧವನ್ನು ಪಡೆದ ಆ ಮನೋಹರಿಣಕವು ಉತ್ತಮವಾದ ಆತ್ಮಜ್ಞಾನವೆಂಬ ರಸಪೂರ್ಣ ಫಲವನ್ನು ಭುಂಜಿಸಿ, ಆದ್ಯವಾದ ಬ್ರಹ್ಮವನ್ನು ಸೇರಬೇಕೆಂದು ಬಯಸಿ ಸಂಕಲೆಯಿಂದ ವಿಮುಕ್ತವಾಗುವುದು.

**ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ**
**ನಿರ್ವಾಣ ಪ್ರಕರಣದಲ್ಲಿ "ಮನೋಹರಿಣಕೋಪಾಖ್ಯಾನ" ಎಂಬ**
**ನಲವತ್ತೈದನೆಯ ಸರ್ಗವು.**

## ಷಟ್‌ಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಪರಮಾರ್ಥಫಲೇ ಜ್ಞಾತೇ ಮುಕ್ತೌ ಪರಿಣತಿಂ ಗತೇ ।
ಬೋಧೋಽಪ್ಯಸದ್ಭವತ್ಯಾಶು ಪರಮಾರ್ಥೋ ಮನೋಮೃಗಃ ॥ ೧ ।

ಕ್ವಾಪಿ ನಾ ಮೃಗತಾ ಯಾತಿ ಪ್ರಕ್ಷೀಣಸ್ನೇಹದೀಪವತ್ ।
ಪರಮಾರ್ಥದಶೈವಾನ್ತೇ ತತ್ರಾನಂತಾವಭಾಸಿನೀ ॥ ೨ ॥

ಧ್ಯಾನದ್ರುಮಫಲಪ್ರಾಪ್ತೌ ಬೋಧತಾಮಾಗತಂ ಮನಃ ।
ವಜ್ರಸಾರಾಂ ಸ್ಥಿತಿಂ ಧತ್ತೇ ಛಿನ್ನಪಕ್ಷ ಇವಾಚಲಃ ॥ ೩ ॥

---

## ನಲವತ್ತಾರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧ ಪರಮಾತ್ಮ ಫಲವನ್ನು ಅರಿತ ಮೇಲೆ, ಆ ಅರಿವು ಮುಕ್ತಿಯಲ್ಲಿ ಪರಿಣತಿಯನ್ನು ಹೊಂದಿದ ಮೇಲೆ, ಆ ಪರಮಾರ್ಥವೂ ಆ ಬೋಧವೂ ಆ ಮನೋಮೃಗವೂ ಆ ಕೂಡಲೇ ಇಲ್ಲವಾಗುವುವು

೨ ಆ ಮೃಗತೆಯು (ಎಂದರೆ ವಿಷಯಗಳನ್ನು ತೃಷ್ಣೆಯಿಂದ ಅನ್ವೇಷಣ ಮಾಡುವ ಸ್ವಭಾವವು) ಎಲ್ಲಿಯೋ ಹೋಗುವುದು. ಅನಂತವನ್ನು ಪ್ರಕಾಶಗೊಳಿಸುವ ಪರಮಾರ್ಥದಶೆಯೊಂದೇ ನಿಲ್ಲುವುದು

೩ ಧ್ಯಾನದ್ರುಮದ ಫಲವು ದೊರೆಯಲು ಮನಸ್ಸು ಬುದ್ಧತೆಯನ್ನು ಹೊಂದುವುದು: ಆಗ ಅದು, ರೆಕ್ಕೆಗಳನ್ನು ಕಳೆದುಕೊಂಡ ಪರ್ವತದಂತೆ ವಜ್ರಸಾರವಾಗಿರುವ ಸ್ಥಿತಿಯನ್ನು ಹೊಂದುವುದು.

ಮನಸ್ತಾ ಕ್ವಾಪಿ ಸಂಯಾತಿ ಶಿಷ್ಯತ್ಯಚ್ಛೈವ ಬೋಧತಾ ।
ನಿರ್ಬಾಧಾ ನಿರ್ವಿಭಾಗಾ ಚ ಸರ್ವಾ ಖರ್ವಾತ್ಮಿಕಾ ಸತೀ　　॥ ೪ ॥

ಸುವಿವಿಕ್ತತಯಾ ಚಿತ್ತಸತ್ತಾ ಬೋಧತಯೋದಿತಾ ।
ಅನಾದ್ಯಂತಾ ಭವತ್ಯಚ್ಛಪ್ರಕಾಶಫಲದಾಯಿನೀ　　॥ ೫ ॥

ಸ್ವಯಮೇವ ತತಸ್ತತ್ರ ನಿರಸ್ತಸಕಲೈಷಣಂ ।
ಅನಾದ್ಯಂತಮನಾಯಾಸಂ ಧ್ಯಾನಮೇವಾವಶಿಷ್ಯತೇ　　॥ ೬ ॥

ಯಾವನ್ನಾಧಿಗತಂ ಬ್ರಹ್ಮ ನ ವಿಶ್ರಾಂತಂ ಪರೇ ಪದೇ ।
ತಾವತ್ತನ್ಮನನತ್ವೇನ ನ ಧ್ಯಾನಮುಪಗಮ್ಯತೇ　　॥ ೭ ॥

---

೪ ಮನಸ್ತಾ (ಎಂದರೆ ಬಾಹ್ಯಾರ್ಥ ಮನನ ಸ್ವಭಾವವು)ಎಲ್ಲಿಯೋ ಹೋಗಿ ಬೋಧತಾ ಒಂದೇ ಉಳಿಯುವುದು. ಆಗ ಯಾವುದರಿಂದಲೂ ಬಾಧೆ ಹೊಂದದ, ಯಾವುದೊಂದೂ ವಿಭಾಗವನ್ನೂ ಅರಿಯದ, ಸರ್ವವೂ ತಾನೇ ಆಗಿರುವ ಚಿದಾತ್ಮ ಕತೆಯೊಂದೇ ಉಳಿಯುವುದು.

೫. ಅದುವರೆಗೂ ಚಿತ್ತ ಸತ್ತೆಯಾಗಿ (ದೃಶ್ಯದಲ್ಲಿ ಆಸಕ್ತವಾಗಿದ್ದುದು) ಪ್ರತ್ಯೇಕವಾಗಿ ತಾನೇತಾನಾದುದರಿಂದ, ಬೋಧತೆಯಾಗಿ ಉದಯವಾಗುವುದು: ಅಚ್ಛವಾದ ಪ್ರಕಾಶವನ್ನು ಕೊಡುವ ಆದ್ಯಂತರಹಿತವಾದ ಚಿತ್ ಏ ತಾನಾಗುವುದು.

೬. ಅನಂತರದಲ್ಲಿ ಸಕಲೈಷಣಗಳೂ ಸಂಪೂರ್ಣವಾಗಿ ನಿರಸ್ತವಾಗಿರುವುದರಿಂದ, ಆದಿ–ಅಂತಗಳಿಲ್ಲದೆ, ಆಯಾಸವಿಲ್ಲದೆ, ಧ್ಯಾನವೊಂದೇ ಉಳಿಯುವುದು.

೭ ಎಲ್ಲಿಯವರೆಗೂ ಬ್ರಹ್ಮಲಾಭವಾಗುವುದಿಲ್ಲವೋ, ಎಂದಿನವರೆಗೂ ಪರಮ ಪದದಲ್ಲಿ ವಿಶ್ರಾಂತಿಯನ್ನು ಹೊಂದುವುದಿಲ್ಲವೋ, ಅದುವರೆಗೂ ಮನನವು ಇದ್ದೇ ಇರುವುದಾದ್ದರಿಂದ ಧ್ಯಾನವು ಕೂಡುವುದಿಲ್ಲ.

ಪರಮಾರ್ಥೈಕತಾಮೇತ್ಯ ನ ಜಾನೇ ಕ್ವ ಮನೋಗತಂ ।
ಕ್ವ ವಾಸನಾ ಕ್ವ ಕರ್ಮಾಣಿ ಕ್ವ ಹರ್ಷಾಮರ್ಷಸಂವಿದಃ ॥ ೮ ॥

ಕೇವಲಂ ದೃಶ್ಯತೇ ಯೋಗೀ ಗತೋ ಧ್ಯಾನೈಕನಿಷ್ಠತಾಂ ।
ಸ್ಥಿತೋ ವಜ್ರಸಮಾಧಾನೇ ವಿಪಕ್ಷ ಇವ ಪರ್ವತಃ ॥ ೯ ॥

ವಿರಸಾಖಿಲಭೋಗಸ್ಯ ಪ್ರಶಾಂತೇಂದ್ರಿಯಸಂವಿದಃ ।
ನೀರಸಾಶೇಷದೃಶ್ಯಸ್ಯ ಸ್ವಾತ್ಮಾರಾಮಸ್ಯ ಯೋಗಿನಃ ॥ ೧೦ ॥

ಕ್ರಮೇಣ ವಿಗಲದ್ವೃತ್ತೇರ್ಬಲಾದ್ವಿಶ್ರಾಂತಿಮಾಯುಷಃ ।
ಅರ್ಥಾಯಾತಂ ಸಮಾಧಾನಂ ಕೇನ ನಾಮ ವಿಚಾರ್ಯತೇ ॥ ೧೧ ॥

ತಾವದ್ವಿಷಯವೈರಸ್ಯಂ ಭಾವಯಂತ್ಯುಚಿತಾಶಯಾಃ ।
ನ ಪಶ್ಯಂತ್ಯೇವ ತಾನ್ಯಾವದ್ಭೋಗಾಂಶ್ಚಿತ್ರನರೋ ಯಥಾ ॥ ೧೨ ॥

---

೮. ಪರಮಾರ್ಥದಲ್ಲಿ ಐಕ್ಯವನ್ನು ಹೊಂದಿದ ಮೇಲೆ ಮನವೆತ್ತ ಹೋಗುವುದೋ ಯಾರು ಬಲ್ಲರು? ಆಗ ಎಲ್ಲಿಯ ವಾಸನೆಗಳು? ಎಲ್ಲಿಯ ಕರ್ಮಗಳು? ಎಲ್ಲಿಯ ಹರ್ಷ, ಆಮರ್ಷ ಸಂವಿತ್ತುಗಳು?

೯. ಧ್ಯಾನೈಕನಿಷ್ಠನಾದ ಯೋಗಿಯು ವಜ್ರಸಮಾಧಿಯಲ್ಲಿ ಸ್ಥಿರನಾಗಿ, ರೆಕ್ಕೆಗಳಿಲ್ಲದ ಪರ್ವತದಂತೆ ಇರುವುದೊಂದು ಮಾತ್ರ ಕಾಣುವುದು.

೧೦–೧೧. ಭೋಗಭೋಗದಲ್ಲೂ ವಿರಸನಾಗಿ, ಇಂದ್ರಿಯ ಸಂವಿತ್ತುಗಳೆಲ್ಲ ಪ್ರಶಾಂತವಾಗಿ, ದೃಶ್ಯದೃಶ್ಯವೂ ನೀರಸವಾಗಿ ಹೋಗಿರುವ, ಸ್ವಾತ್ಮಾರಾಮನಾದ ಯೋಗಿಗೆ, ಕ್ರಮವಾಗಿ ವೃತ್ತಿಗಳೆಲ್ಲವೂ ಕಳಚಿಹೋಗುವುವು. ಬಲವಂತವಾಗಿ ವಿಶ್ರಾಂತಿಯು ಪ್ರಾಪ್ತವಾಗುವುದು. ಹುಡುಕಿಕೊಂಡು ಹೋದಂತೆ ಸಮಾಧಾನವು ಸಿಕ್ಕುವುದು. ಅದನ್ನು ಹೀಗೆಂದು ಯಾರು ವಿಚಾರ ಮಾಡಿ ಹೇಳಬಲ್ಲರು?

೧೨. ಎಂದಿನವರೆಗೆ ಯೋಗ್ಯವಾದುದರಲ್ಲೇ ಮನಸ್ಸಿಟ್ಟುಕೊಂಡು ಉಚಿತಾಶಯರಾಗಿ ವಿಷಯಪರಾಂಗ್ಮುಖರಾಗಿರುವರೋ ಅಲ್ಲಿನವರೆಗೂ ಚಿತ್ರದಲ್ಲಿರುವ ನರರಂತೆ ಇದ್ದುಕೊಂಡು ಭೋಗಗಳನ್ನು ನೋಡುವುದೇ ಇಲ್ಲ.

ಅಪಶ್ಯನ್ ಜಾಗತಾನರ್ಥಾನ್ನಿರ್ವಾಸನತಯಾತ್ಮವಾನ್ |
ಬಲಾದ್ವಜ್ರಸಮಾಧಾನೇ ತ್ವನ್ಯೇನೇವ ನಿವೇಶ್ಯತೇ || ೧೩ ||

ಪ್ರಾವೃಷೀವ ನದೀಪೂರೋ ಯಃ ಸಮಾಧಿರುಪಸ್ಥಿತಃ |
ಬಲಾದೇವತ ಮಾಯಾತಂ ಭೂಯಶ್ಚಲತಿ ನೋ ಮನಃ || ೧೪ ||

ಸರ್ವಾರ್ಥಶೀತಲತ್ವೇನ ಬಲಾದ್ಧ್ಯಾನೇ ಯದಾಗತಂ |
ಜ್ಞಾನಾದ್ವಿಷಯವೈರಸ್ಯಂ ಸ ಸಮಾಧಿರ್ನ ನೇತರಃ || ೧೫ ||

ದೃಢಂ ವಿಷಯವೈರಸ್ಯಮೇವ ಧ್ಯಾನಮುದಾಹೃತಂ |
ತದೇವ ಪರಿಪಾಕೇನ ವಜ್ರಸಾರಂ ಭವತ್ಯಲಂ || ೧೬ ||

ತದೇತದ್ಭೋಗವೈತೃಷ್ಣ್ಯಂ ಧ್ಯಾನಮಂಕುರಿತಂ ಹಿ ತತ್ |
ತದೇವ ಪೀಠಬಂಧೇನ ಬದ್ಧಂ ಭವತಿ ಬಂಧುರಂ || ೧೭ ||

---

೧೩. ಜಗತ್ತಿನ (ಅರ್ಥ) ಅನರ್ಥಗಳನ್ನು ನೋಡದೆಯೇ ಇರುವವನಾಗಿ, ನಿರ್ವಾಸನನಾದುದರಿಂದ ಆತ್ಮವಂತನಾಗಿ, ವಜ್ರಸಮಾಧಿಯಲ್ಲಿದ್ದುಕೊಂಡು, ಯಾರೋ ಹಿಡಿದು ಕೂರಿಸಿಕೊಂಡಿರುವಂತೆ ಇರುವನು.

೧೪. ಮಳೆಗಾಲದಲ್ಲಿ ಬರುವ ನದಿಯು ಪ್ರವಾಹದಂತೆ ಯಾವ ಸಮಾಧಿಯು ಉಪಸ್ಥಿತವಾಗಿರುವುದೋ, ಆ ತಾನಾಗಿ ಬಂದ ಸಮಾಧಿಯನ್ನು ಮನಸ್ಸು ಮತ್ತೆ ಚಲಿಸಲಾರದು.

೧೫. ಸರ್ವಾರ್ಥಗಳೂ ಶಾಂತವಾಗಿರುವುದರಿಂದ ಬಲಾತ್ಕಾರವಾಗಿ ಧ್ಯಾನಕ್ಕೆ ಬಂದಿರುವ, ಜ್ಞಾನಬಲದಿಂದ ವಿಷಯ ವೈಮುಖ್ಯವನ್ನು ಸಂಪಾದಿಸಿರುವ, ಸ್ಥಿತಿಯು ಯಾವುದೋ ಅದೇ ಸಮಾಧಿಯು: ಇನ್ನು ಯಾವುದೂ ಅಲ್ಲ.

೧೬. ವಿಷಯದಲ್ಲಿ ಅಭಿಲಾಷೆಯು ಎಳ್ಳಷ್ಟೂ ಇಲ್ಲದಿರುವಿಕೆಯೇ ಧ್ಯಾನವು. ಅದೇ ಪಾಕವಾಗುತ್ತ ಬಂದು ವಜ್ರಸಾರವಾಗುವುದು.

೧೭. ಧ್ಯಾನವು ಅಂಕುರಿಸಿತು ಎನ್ನುವುದು ಯಾವುದೋ ಅದೇ ಭೋಗ ವೈತೃಷ್ಣ್ಯವು. ಅದೇ ಪೀಠವನ್ನು ಮಾಡಿಕೊಂಡು ಬಲಿತು ಕುಳಿತರೆ ಸಮಾಧಿಯಾಗುವುದು.

ಸಮ್ಯಗ್ಜ್ಞಾನಂ ಸಮುಚ್ಛೂನಂ ಸದ್ಯೈವೋಜ್ಝಿತವಾಸನಂ ।
ಧ್ಯಾನಂ ಭವತಿ ನಿರ್ವಾಣಮಾನಂದಪದಮಾಗತಂ ॥ ೧೮ ॥

ಅಸ್ತಿ ಚೇದ್ಭೋಗವೈತೃಷ್ಣ್ಯಂ ಕಿಮನ್ಯದ್ಧ್ಯಾನದುರ್ಧಿಯಾ ।
ನಾಸ್ತಿ ಚೇದ್ಭೋಗವೈತೃಷ್ಣ್ಯಂ ಕಿಮನ್ಯದ್ಧ್ಯಾನದುರ್ಧಿಯಾ ॥ ೧೯ ॥

ದೃಶ್ಯಸ್ವದನಮುಕ್ತಸ್ಯ ಸಮ್ಯಗ್ಜ್ಞಾನವತೋ ಮುನೇಃ ।
ನಿರ್ವಿಕಲ್ಪಂ ಸಮಾಧಾನಮವಿರಾಮಂ ಪ್ರವರ್ತತೇ ॥ ೨೦ ॥

ಯಸ್ಮೈ ನ ಸ್ವದತೇ ದೃಶ್ಯಂ ಸ ಸಂಬುದ್ಧ ಇತಿ ಸ್ಮೃತಃ ।
ನ ಸ್ವದಂತೇ ಯದಾ ಭೋಗಾಃ ಸಮ್ಯಗ್ಬೋಧಸ್ತದೋದಿತಃ ॥ ೨೧ ॥

ಯಸ್ಯ ಸ್ವಭಾವವಿಶ್ರಾಂತಿಃ ಕಥಂ ತಸ್ಯಾಸ್ತಿ ಭೋಗಿತಾ ।
ಅಸ್ವಭಾವೋ ಹಿ ಭೋಗಿತ್ವಂ ತತ್ಕ್ಷಯೇ ತತ್ಕಥಂ ಕುತಃ ॥ ೨೨ ॥

---

೧೮ ಸಾಕ್ಷಾತ್ಕಾರ ವೃತ್ತಿಗೋಚರವಾದ ಬ್ರಹ್ಮವೇ ಅವಿದ್ಯೆಯನ್ನು ನಾಶ ಮಾಡಿದಾಗ ಜ್ಞಾನವೆನ್ನಿಸಿಕೊಳ್ಳುವುದು. ವಾಸನೆಯನ್ನು ನಾಶ ಮಾಡಿದಾಗ ಧ್ಯಾನವೆನ್ನಿಸಿಕೊಳ್ಳುವುದು : ಸರ್ವ ದುಃಖಗಳನ್ನೂ ಛೇದ ಮಾಡಿ ಆನಂದರೂಪವಾಗಿ ಪ್ರಕಟವಾದಾಗ ನಿರ್ವಾಣವಾಗುವುದು.

೧೯ ಭೋಗ ವೈತೃಷ್ಣ್ಯವು ಇರುವುದಾದರೆ ಬೇರೆ ಧ್ಯಾನವು ಬೇಕೆಂಬುದೇ ದುರ್ಬುದ್ಧಿಯು ಭೋಗ ವೈತೃಷ್ಣ್ಯವು ಇಲ್ಲವಾದರೆ ಧ್ಯಾನವೆಂಬುದೇ ದುರ್ಬುದ್ಧಿಯು.

೨೦. ದೃಶ್ಯದಲ್ಲಿ ಆಸಕ್ತಿಯನ್ನು ತೊರೆದು, ಸಮ್ಯಗ್ಜ್ಞಾನವನ್ನು ಪಡೆದಿರುವ ಮುನಿಗೆ ನಿರ್ವಿಕಲ್ಪ ಸಮಾಧಿಯು ಸಂತತವಾಗಿರುವುದು.

೨೧. ಯಾವನಿಗೆ ದೃಶ್ಯವು ರುಚಿಸುವುದಿಲ್ಲವೋ ಅವನು ಸಂಬುದ್ಧನೆಂದು ಹೇಳುವರು. ಯಾವಾಗ ಭೋಗಗಳಲ್ಲಿ ರುಚಿ ತಪ್ಪುವುದೋ ಸಮ್ಯಗ್ಬೋಧವು ಆಗ ಹುಟ್ಟಿತು (ಎನ್ನಬೇಕು).

೨೨. ಯಾವನು ಸ್ವಭಾವದಲ್ಲಿ ವಿಶ್ರಾಂತಿಯನ್ನು ಪಡೆದಿರುವನೋ ಅವನಿಗೆ ಭೋಗಿತಾ ಹೇಗೆ ಉಳಿಯುವುದು ? (ಏಕೆಂದರೆ) ಭೋಗಿತೆಯೇ ಅಸ್ವಭಾವವು. ಅದು ನಾಶವಾದ ಮೇಲೂ ಇರುವುದೆಲ್ಲಿಂದ ? ಹೇಗೆ ?

ಶ್ರುತಪಾಠಜಪಾಂತೇಷು ಸಮಾಧಿನಿರತೋ ಭವೇತ್ ।
ಸಮಾಧಿವಿರತಃ ಶ್ರಾಂತಃ ಶ್ರುತಪಾಠಜಪಾಞ್ಛ್ರಯೇತ್ ॥ ೨೩ ॥

ನಿರ್ವಾಣಮಾಸೀತ ನಿರಸ್ತಖೇದಂ
ಸಮಸ್ತಶಂಕಾಸ್ತಮಯಾಭಿರಾಮಂ ।
ಸುಷುಪ್ತಸೌಮ್ಯಂ ಸಮಶಾಂತಚಿತ್ತಂ
ಶರದ್ಘನಾಭೋಗವಿಶುದ್ಧಮಂತಃ ॥ ೨೪ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಸಾಮ್ಯಾವಬೋಧನಂ" ನಾಮ
ಷಟ್ ಚತ್ವಾರಿಂಶಃ ಸರ್ಗಃ

---

೨೩. (ಅಭ್ಯಾಸ ಕಾಲದಲ್ಲಿ) ಶಾಸ್ತ್ರಶ್ರವಣ ಶಾಸ್ತ್ರಪಾಠ ಜಪಗಳನ್ನು ಮುಗಿಸಿ ಸಮಾಧಿ ನಿರತನಾಗಬೇಕು. ಸಮಾಧಿಯು ಇಲ್ಲದಿರುವಾಗ ಶಾಸ್ತ್ರ ಶ್ರವಣ, ಶಾಸ್ತ್ರಪಾಠ-ಜಪಗಳನ್ನು ಮಾಡಬೇಕು.

(ತಥಾ ಚೋಕ್ತಂ ಸ್ಕಾಂದೇ–ಜಪಶ್ರಾಂತಃ ಪುನರ್ಧ್ಯಾಯೇತ್ ಧ್ಯಾನ ಶ್ರಾಂತಃಪುನರ್ಜಪೇತ್॥ ಜಪಧ್ಯಾನಾಭಿಯುಕ್ತಸ್ಯ ಪ್ರಸೀದತಿ ಪರಃ ಶಿವಃ ॥ —ತಾ. ಪ್ರ.)

೨೪. ಖೇದಗಳೆಲ್ಲವನ್ನೂ ತ್ಯಜಿಸಿ ನಿರ್ವಾಣದಲ್ಲಿರಬೇಕು. ಶಂಕೆಗಳೆಲ್ಲವನ್ನೂ ಬಿಟ್ಟು ಅಭಿರಾಮ (ಆನಂದ) ವಾಗಿರಬೇಕು. ಸುಷುಪ್ತಿಯಲ್ಲಿರುವಂತೆ- ಸೌಮ್ಯ ವಾಗಿರಬೇಕು ಸಮ (ಬ್ರಹ್ಮ)ದಲ್ಲಿದ್ದುಕೊಂಡು ಶಾಂತ ಚಿತ್ತನಾಗಿರಬೇಕು. ಒಳಗೆ ಶರದೃತುವಿನ ಮೋಡದಂತೆ ವಿಶದ್ಧನಾಗಿರಬೇಕು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಸಾಮ್ಯಾವಬೋಧನ" ಎಂಬ
ನಲವತ್ತಾರನೆಯ ಸರ್ಗವು.

## ಸಪ್ತಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಸಂಸಾರಭಾರಸುಶ್ರಾಂತಃ ಸಂಕಟೇಷು ಲುಠತ್ತನುಃ ।
ಯೋಽಭಿವಾಂಛತಿ ವಿಶ್ರಾಂತಿಂ ತಸ್ಯ ಕ್ರಮಮಿಮಂ ಶೃಣು ॥ ೧ ॥

ಪೂರ್ವಂ ವಿವೇಕಕಣಿಕಾ ಯದಾ ಸ್ವಹೃದಿ ಜಾಯತೇ ।
ಸಂಸಾರನಿರ್ವೇದಮಯೀ ಕಾರಣಾದ್ವಾಪ್ಯಕಾರಣಾತ್ ॥ ೨ ॥

---

## ನಲವತ್ತೇಳನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು.—

೧. ಸಂಸಾರದ ಭಾರವನ್ನು ಹೊರಲಾರದೆ ಬಳಲಿದವನೂ ಸಂಕಟಗಳಲ್ಲಿ ಬಿದ್ದು ಒದ್ದಾಡುವನೂ ಆದವನು ವಿಶ್ರಾಂತಿಯನ್ನು ಪಡೆಯುವ ಕ್ರಮವನ್ನು ಹೇಳುವೆನು ಕೇಳು

೨. ತನ್ನ ಮನಸ್ಸಿನಲ್ಲಿ ಸಂಸಾರದಲ್ಲಿ ಬೇಸರಪಡುವುದೆಂಬ ವಿವೇಕದ ಕಣಿಕೆಯು ಯಾವಾಗ, ಸಕಾರಣವಾಗಿಯೋ ಅಕಾರಣವಾಗಿಯೋ ಹುಟ್ಟುವುದೋ,

(ಇಲ್ಲಿ ತಾತ್ಪರ್ಯ ಪ್ರಕಾಶಿಕೆಯು ಹೇಳುವುದನ್ನಷ್ಟು ನೋಡಿ:—ಕಾರಣಾದೈಹಿಕ ಯಜ್ಞತಪೋದಾನಾದಿ ಪಾಪಕ್ಷಯ ಕಾರಣಾತ್ । ಅಕಾರಾಣಾತ್ತದಭಾವಾತ್ । ಜನ್ಮಾಂತರಾನುಷ್ಠಿತ ಸತ್ಕರ್ಮಭಿರೇವ ಕ್ಷೀಣಪಾಪಾನಾಂ ಬಾಲ್ಯಾತ್ಪ್ರಭೃತ್ಯೇವ ವಿನೈವೈಹಿಕಕಾರಣಂ ವಿವೇಕೋದಯ ದರ್ಶನಾದಿತಿ ಭಾವಃ।– ಒಂದು ಕಾರ್ಯವಾಗಬೇಕಾದರೆ ಒಂದು ಕಾರಣ ಬೇಕು. ಆ ಕಾರಣವು ಕಾಲದೃಷ್ಟಿಯಿಂದ ಈಗಲಾದರೂ ಸಂಭವಿಸಿರಬೇಕು. ಆಗಲಾದರೂ ಸಂಭವಿಸಿರಬೇಕು. ಈಗ ಅಲ್ಲದಿದ್ದರೆ ಆಗ; ಈಗ-ಆಗ ಎರಡೂ ಒಂದೇ ಕಾಲದ ಎರಡು ತುಂಡುಗಳಾಗಿರಲು ಆ ಕೊನೆಯಾದರೇನು ? ಈ ಕೊನೆಯಾದರೇನು ? ಹೀಗೆ ಕಾಲೈಕ್ಯವನ್ನು ಹೇಳುವಂತೆಯೇ ಕರ್ತ್ರೈಕ್ಯವೂ ಸಿದ್ಧಿಸುವುದು ಎಂದೊಪ್ಪಿಕೊಂಡರೆ ಜನ್ಮಾಂತರವುಂಟೆನ್ನಲು ಅಡ್ಡಿಯೇನು ?)

ತದಾ ಶ್ರಯಂತಿ ಸಚ್ಛಾಯರ್ಾಸಾಧುತ್ವಸುವಿಶಾಲಿನಃ ।
ಅಧ್ವಶ್ರಮಹರಾಂಸ್ತಾಪತಪ್ತಾ ಮಾರ್ಗತರೂನಿವ ॥ ೩ ॥

ದೂರೇ ಪರಿಹರತ್ಯಜ್ಞಾನ್ಯಜ್ಞಯೂಪಾನಿವಾಧ್ವಗಃ ।
ಸ್ನಾನದಾನತಪೋಯಜ್ಞಾನ್ಕರೋತಿ ವಿಬುಧಾನುಗಃ ॥ ೪ ॥

ಪೇಶಲಂ ಚಾನುರೂಪಂ ಚ ವ್ಯವಹಾರಮಕೃತ್ರಿಮಂ ।
ಲೋಕ್ಯಮಾಹ್ಲಾದನಂ ಧತ್ತೇ ಚಂದ್ರಬಿಂಬಮಿವಾವೃತಂ ॥ ೫ ॥

ಪರಪ್ರಜ್ಞಾನುಗೋ ಭವ್ಯಃ ಪರಾರ್ಥಪರಿಪೂರಕಃ ।
ಪವಿತ್ರ ಕರ್ಮ ರಸಿಕಃ ಕೋಪಿ ಸೌಮ್ಯ ಪ್ರವರ್ತತೇ ॥ ೬ ॥

---

೩. ಆಗ ಬಳಲಿದ ಪ್ರಯಾಣಿಕರು ದಾರಿಯ ಶ್ರಮವನ್ನು ಕಳೆಯುವ ನೆರಳಿರುವ ಮಾರ್ಗವೃಕ್ಷಗಳನ್ನು ಆಶ್ರಯಿಸುವಂತೆ, ಸಾಧುತ್ವದಿಂದ ಸುಂದರವಾಗಿರುವ ವಿಶಾಲ ಸದ್ಗುಣಗಳೆಲ್ಲವೂ ಆಶ್ರಯವನ್ನು ಹುಡುಕಿಕೊಂಡು ಬರುವುವು.

೪. ದಾರಿಹೋಕನು ಯಜ್ಞಯೂಪಸ್ತಂಭಗಳನ್ನು ದೂರದಲ್ಲಿಯೇ ಬಿಡುವಂತೆ, ಅಜ್ಞರನ್ನು ಬಿಡುವನು. ಸ್ನಾನದಾನ ತಪೋಯಜ್ಞಗಳನ್ನು ಮಾಡುವನು. ಬಲ್ಲವರನ್ನು ಹಿಂಬಾಲಿಸುವನು.

೫. ಚಂದ್ರ ಬಿಂಬವು ಅಮೃತವನ್ನು ವಹಿಸಿರುವಂತೆ, ಸುಂದರವೂ, ಅನುರೂಪವೂ, ಅಕೃತ್ರಿಮವೂ ಆಗಿರುವ ವ್ಯವಹಾರದಲ್ಲಿದ್ದುಕೊಂಡು, ಲೋಕದವರಿಗೆ ಆಹ್ಲಾದನವನ್ನುಂಟುಮಾಡುತ್ತಿರುವನು.

(ಲೋಕೇಭ್ಯಃ ಪರಿಣಾಮೇ ಹಿತಂ ಲೋಕಂ। ಸದ್ಯಶ್ಚಾಹ್ಲಾದನಂ-ತಾ ಪ್ರ.)

೬. ಇತರರ ಮನಸ್ಸಿನಂತೆ ನಡೆಯುವನು: (ಸರ್ವಜನಪ್ರಿಯನಾಗಿ) ಭವ್ಯನಾಗಿರುವನು: ಇತರರಿಗೆ ಬೇಕಾದ ಕೆಲಸವನ್ನು ಮಾಡಿಕೊಡುವನು; ಪವಿತ್ರವಾದ ಕರ್ಮಗಳನ್ನೇ ಮಾಡುವುದರಲ್ಲಿ ಆಸಕ್ತಿಯುಳ್ಳವನಾಗಿರುವನು: ಎಲ್ಲರಿಗಿಂತಲೂ ಉತ್ಕೃಷ್ಟನಾಗಿದ್ದರೂ ಸೌಮ್ಯನಾಗಿ ವ್ಯವಹರಿಸುವನು.

ನವನೀತಸ್ಥಲೀವಾಚ್ಛಾ ಸ್ನಿಗ್ಧಾ ಮೃದ್ವೀ ಮನೋಹರಾ ।
ಜನಂ ಸುಖಯತಿ ಸ್ವಾದ್ವೀ ತದೀಯಾ ನವಸಂಗತಿಃ ॥ ೭ ॥

ಶೀತಲಾನಿ ಪವಿತ್ರಾಣಿ ಚರಿತಾನಿ ವಿವೇಕಿನಃ ।
ಇಂದೋರಿವಾಂಶುಜಾಲಾನಿ ಜನಂ ಶೀತಲಯಂತ್ಯಲಂ ॥ ೮ ॥

ನ ತಥೋದ್ಯಾನಖಂಡೇಷು ಪುಷ್ಪಪ್ರಕರಹಾರಿಷು ।
ವಿಶ್ರಾಮ್ಯತೇ ವೀತಭಯಂ ಯಥಾ ಸಾಧುಸಮಾಗಮೇ ॥ ೯ ॥

ಮಂದಾಕಿನೀಪಯಾಂಸೀವ ಸಂಗತಾನಿ ವಿವೇಕಿನಾಂ ।
ಪ್ರಕ್ಷಾಲಯಂತಿ ಪಾಪಾನಿ ಪ್ರಯಚ್ಛಂತಿ ವಿಶುದ್ಧತಾಂ ॥ ೧೦ ॥

ವಿವೇಕಿಷು ವಿರಕ್ತೇಷು ಸಂಸಾರೋತ್ತರಣಾರ್ಥಿಷು ।
ಜನಃ ಶೀತಲತಾಮೇತಿ ಹಿಮಹಾರಗೃಹೇಷ್ವಿವ ॥ ೧೧ ॥

---

೭ ಅವನ ಜೊತೆಯು ಆರಂಭದಲ್ಲೇ ಬೆಣ್ಣೆಗೆ ಆಶ್ರಯವಾದ ಕೆನೆಯಂತೆ ಶುದ್ಧವಾಗಿರುವುದು ಸ್ನೇಹಸಂಪನ್ನವಾಗಿರುವುದು : ಮೃದುವಾಗಿರುವುದು : ಮನೋಹರವಾಗಿರುವುದು . ಹಿತವಾಗಿರುವುದು : (ಬೇಕೆನ್ನಿಸುವುದು) ಜನರನ್ನು ಸುಖಪಡಿಸುವುದು

೮. ವಿವೇಕಿಯ ಆಚರಣಗಳು ಹಿತವಾದವು. ಪವಿತ್ರವಾದವು. ಚಂದ್ರನ ಕಿರಣಗಳಂತೆ ಜನರನ್ನು ಬೇಕಾದ ಹಾಗೆ ತಣಿಸುವುವು.

೯ ಜನರು ಸಾಧುಗಳ ಜೊತೆಯಲ್ಲಿದ್ದು ಸಂತೋಷಪಡುವ ಹಾಗೆ, ಹೂವುಗಳು ತುಂಬಿರುವ ಉದ್ಯಾನವನಗಳಲ್ಲಿಯೂ ನಿರ್ಭಯರಾಗಿ ಸಂತೋಷಪಟ್ಟು ವಿಶ್ರಾಂತಿಯನ್ನು ಹೊಂದುವುದಿಲ್ಲ

೧೦, ವಿವೇಕಿ ಜನರ ಸಂಗತಿಯು ಗಂಗಾನದಿಯ ನೀರುಗಳಂತೆ ಪಾಪಗಳನ್ನೂ ತೊಳೆಯುವುವು ವಿಶುದ್ಧತೆಯನ್ನೂ ಕೊಡುವುವು

೧೧ ವಿರಕ್ತರೂ ಸಂಸಾರವನ್ನು ದಾಟಬೇಕೆಂದಿರುವವರೂ ಆದ ವಿವೇಕಿಗಳ ಜೊತೆಯಲ್ಲಿ ಜನವು ಶಾಂತಿಯನ್ನು ಹಿಮದ ಹಾರಗಳುಳ್ಳ ಮನೆಗಳಲ್ಲಿ ಹೇಗೋ ಹಾಗೆ ಪಡೆಯುವುದು.

ನನು ನಾಮರತೋದಾರಾ ಯಾ ವಿವೇಕಿನಿ ವಿದ್ಯತೇ ।
ಸುರಗಂಧರ್ವಕನ್ಯಾಸು ಮಾನವೀಷು ನ ವಿದ್ಯತೇ ॥ ೧೨ ॥

ಪ್ರಜ್ಞಾ ಪ್ರಸಾದಮಾಯಾತಿ ಕ್ರಮಾದುಚಿತಕರ್ಮಣಃ ।
ಅತಃ ಕರೋತಿ ಶಾಸ್ತ್ರಾರ್ಥಮರ್ಥಂ ಮುಕುರ ಭೂರಿವ ॥ ೧೩ ॥

ಸತ್ಪ್ರಜ್ಞೋನ್ನತಿಮಾಯಾತಿ ಶಾಸ್ತ್ರಾರ್ಥರಸಶಾಲಿನೀ ।
ವಿವೇಕಿನಿ ವಿಲಾಸೇನ ಕದಲೀವ ಮಹಾವನೇ ॥ ೧೪ ॥

ಅಂತರೇವಾನುಭವತಿ ಸರ್ವಾರ್ಥಾನ್ಪ್ರತಿಬಿಂಬಿತಾನ್ ।
ಆದರ್ಶವದಶೇಷೇಣ ಪ್ರಜ್ಞಾನೈರ್ಮಲ್ಯಶಾಲಿನೀ ॥ ೧೫ ॥

ಸಾಧುಸಂಗಮಶುದ್ಧಾತ್ಮಾ ಶಾಸ್ತ್ರಾರ್ಥಪರಿಮಾರ್ಜಿತಃ ।
ಪ್ರಾಜ್ಞೋ ಭಾತ್ಯುದ್ಧೃತಂ ವಹ್ನೇರಗ್ನಿಶೌಚಮಿವಾಂಶುಕಂ ॥ ೧೬ ॥

---

೧೨. ವಿವೇಕಿಗಳ ಸಂಗಮದಲ್ಲಿ ಉದಾರವಾಗಿ ಲಭಿಸುವ ಯಾವ ಸಂತೋಷವು ಸುರ ಗಂಧರ್ವ ಕನ್ಯೆಯರಲ್ಲಾಗಲೀ ಮಾನವಿಯರಲ್ಲಾಗಲೀ ಲಭಿಸುವುದಿಲ್ಲ.

೧೩. ಉಚಿತವಾದ ಕರ್ಮವನ್ನೇ ಮಾಡುತ್ತಿರುವವ ಪ್ರಜ್ಞೆಯು ಪ್ರಸಾದ ಗುಣವನ್ನು ಪಡೆದು ತಿಳಿಯಾಗುವುದು : ಕನ್ನಡಿಯು ಪ್ರತಿಬಿಂಬವನ್ನು ಗ್ರಹಿಸುವಂತೆ (ಉಪದಿಷ್ಟವಾದ) ಶಾಸ್ತ್ರಾರ್ಥವನ್ನು ಅರ್ಥವಾಗುವಂತೆ ಚೆನ್ನಾಗಿ ಗ್ರಹಿಸುವುದು.

೧೪. ಮಹಾವನದಲ್ಲಿ, ಚೆನ್ನಾಗಿ ಕೃಷಿಯು ನಡೆವಿರುವ ತೋಟದಲ್ಲಿ, ಬಾಳೆಯು ಪಲ್ಲವಿಸಿ ಬೆಳೆಯುವಂತೆ, ವಿವೇಕವುಳ್ಳವನಲ್ಲಿ ಸತ್ಪ್ರಜ್ಞೆಯು ಶಾಸ್ತ್ರಾರ್ಥದಲ್ಲಿ ಅಭಿರುಚಿಯುಳ್ಳುದಾಗಿ ಉನ್ನತಿಯನ್ನು ಹೊಂದುವುದು.

೧೫ ನೈರ್ಮಲ್ಯವನ್ನುಳ್ಳ ಪ್ರಜ್ಞೆಯು ಕನ್ನಡಿಯಂತೆ, ಸಮಗ್ರವಾಗಿ, ತನ್ನಲ್ಲಿಯೇ ಗ್ರಹಣಮಾಡಿಕೊಂಡು, ಎಲ್ಲಾ ಅರ್ಥಗಳನ್ನೂ ಅನುಭವಿಸುವುದು.

೧೬ ಸಾಧು ಸಂಗದಿಂದ ಪರಿಶುದ್ಧಾತ್ಮನಾದವನು, ಶಾಸ್ತ್ರಾರ್ಥಗಳಿಂದ ಎಲ್ಲವನ್ನೂ ತೊಳೆದುಕೊಂಡು ಪ್ರಾಜ್ಞನಾಗಿ, ಅಗ್ನಿಶೌಚದಿಂದ ಶುದ್ಧವಾಗಿರುವ

ಕಚತ್ಕಾಂಚನಕಾಂತೇನ ವಿಮಲಾಲೋಕಕಾರಿಣಾ ।
ಭುವನಂ ಭಾಸ್ಕರೇಣೇವ ಭಾತಿ ಸಾಧುಃ ಸ್ವತೇಜಸಾ ॥ ೧೭ ॥

ತಥಾನುಗಚ್ಛತಿ ಪ್ರಾಜ್ಞಃ ಶಾಸ್ತ್ರಸಾಧುಸಮಾಗಮೌ ।
ಯಥಾತ್ಯಂತಾನುಷಂಗೇಣ ತಾವೇವಾನುಭವತ್ಯಸೌ ॥ ೧೮ ॥

ಕ್ರಮಾತ್ಸಜ್ಜನತಾಮೇತ್ಯ ಶಾಸ್ತ್ರಾರ್ಥಭರಭಾವಿತಃ ।
ಭಾತಿ ಭೋಗಾನಂದಃ ಕುರ್ವನ್ಪಂಜರಾದಿವ ನಿರ್ಗತಃ ॥ ೧೯ ॥

---

ಬಟ್ಟೆಯನ್ನು ಬೆಂಕಿಯಿಂದ ಈಚೆಗೆ ತೆಗೆದರೆ ಅದು ಹೇಗೆ ವಿರಾಜಿಸುವುದೋ ಹಾಗೆ ವಿರಾಜಿಸುವನು.

(ಅಗ್ನಾವೇವ ಶೌಚಂ ಮಾಲಿನ್ಯದಾಹಾದ್ವಿಶುದ್ಧಿರ್ಯಸ್ಯ ತಥಾ ವಿಧಮಂಶುಕಂ ವಸ್ತ್ರರತ್ನಮಿವ । ತದ್ಧಿದಿವ್ಯಂ ಸಿದ್ಧಾಂಬರಂ ಮಲದಾಹೋತ್ತರಂ ವಹ್ನೇರುದ್ಧೃತಂ ವಿದ್ಯುತ್ಪುಂಜಮಿವ ಭಾಸ್ವರತರಂ ಭಾತೀತಿ ಶಾಸ್ತ್ರಪ್ರಸಿದ್ಧಂ॥—ತಾ. ಪ್ರ.)

೧೭. ಹೊಳೆಯುತ್ತಿರುವ ಚಿನ್ನದ ಕಾಂತಿಯಿಂದ ಕೂಡಿ, ನಿರ್ಮಲವಾದ ಕಾಂತಿಯನ್ನು ಪ್ರಸರಿಸುತ್ತಾ, ಸೂರ್ಯನಂತೆ ಸಾಧುವು ಸ್ವತೇಜಸ್ಸಿನಿಂದ ಲೋಕವನ್ನೆಲ್ಲಾ ಬೆಳಗುವನು.

೧೮. ಪ್ರಾಜ್ಞನು ಶಾಸ್ತ್ರವನ್ನೂ ಸಾಧು ಸಂಗತಿಯನ್ನೂ ಬಹಳಮಟ್ಟಿಗೆ ಅನುಸರಿಸುತ್ತ, ಅದಿಲ್ಲದೆ ತಾನೇ ಇಲ್ಲ ಎನ್ನುವಮಟ್ಟಿಗಾಗುವನು.

(ಶಾಸ್ತ್ರಮಭ್ಯಾಸೇನ ಸಾಧೋರ್ಗುರೋಸ್ಸಮಾಗಮಂ ಚ ಸೇವಾದಿನಾ ತಥಾ ಅನುಗಚ್ಛತಿ ನಿರಂತರಮನುಸರತಿ ಯಥಾ ಅತ್ಯಂತಂ ತದುಪದಿಷ್ಟಾರ್ಥಾಭಿ ನಿವೇಶ ಲಕ್ಷಣೇನ ತದನುಷಂಗೇಣ ಸ್ವಪ್ನೇಽಪಿ ತಚ್ಚಿಂತನ ತಚ್ಛುಶ್ರೂಷಾಪರಸ್ತಾವೇವಾನುಭವತಿ ನ ತದತಿರಿಕ್ತಂ ಸ್ವಶರೀರಾದಿಕಮಪೀತ್ಯರ್ಥಃ ।—ತಾ. ಪ್ರ.)

೧೯. ಶಾಸ್ತ್ರಾರ್ಥಗಳನ್ನು ಬೇಕಾದಹಾಗೆ ಭಾವನ ಮಾಡುತ್ತ ಕ್ರಮಕ್ರಮವಾಗಿ ಸಜ್ಜನನಾಗಿ, ಭೋಗಗಳನ್ನೆಲ್ಲ ತುಳಿದು ಪಂಜರದಿಂದ ಈಚೆಗೆ ಬಂದವನಂತೆ ಮೆರೆಯುವನು.

ಭೋಗಾಭಿಗಮದೌರ್ಭಾಗ್ಯಂ ದಿನಾನುದಿನಮುಜ್ಝತಾ ।
ತೇನ ತತ್ಕುಲಮಾಭಾತಿ ತಾರಾಚಕ್ರಮಿವೇಂದುನಾ ॥ ೨೦ ॥

ಆಭೋಗಕೃಪಣಾ ಕಾಪಿ ನ ವೈವಾಸ್ಯ ಪ್ರವರ್ತತೇ ।
ಮುಖೇ ಕಾಂತಿರಪೂರ್ವೈವ ಚಂದ್ರೇ ರಾಹುಮೃತೇ ಯಥಾ ॥ ೨೧ ॥

ತೃಣೀಕೃತ ತ್ರಿಜಗತಾಂ ಮಹತಾಮಭಿಧೇಯತಾಂ ।
ಸ ಯಾತಿ ಕಲ್ಪವಿಟಪೀ ನಭಸೀವ ದಿವೌಕಸಾಂ ॥ ೨೨ ॥

ಭೋಗಾನಾಂ ದ್ವೇಷಣೇನಾಂತರ್ಲಜ್ಜಮಾನೋ ಮನಸ್ಯಪಿ ।
ಭೋಗಾನಾಮಪ್ಯಸಂಪತ್ತ್ಯಾ ಪರಮಂ ಪರಿತುಷ್ಯತಿ ॥ ೨೩ ॥

---

(ರಾಗ ದ್ವೇಷ ಲೋಭ ಪ್ರಮಾದಾದಿ ದೋಷಕ್ಷಯ, ಮೈತ್ರ್ಯಾದಿ ಗುಣ ಸಂಚಯ ಕ್ರಮಾತ್ ಸಜ್ಜನತಾಂ ನಿರ್ದೋಷಗುಣಪಜ್ಜನತಾಂ—ತಾ. ಪ್ರ.)

೨೦. ಭೋಗಗಳಿಗೆ ಅಭಿಮುಖನಾಗಿರುವುದೆಂಬ ದೌರ್ಭಾಗ್ಯವನ್ನು ದಿನ ದಿನವೂ ಬಿಡುತ್ತ, ತಾರಾಚಕ್ರವನ್ನೆಲ್ಲ ಬೆಳಗುವ ಚಂದ್ರನಂತೆ, ತನ್ನ ಕುಲವನ್ನೆಲ್ಲ ಬೆಳಗುವವನಾಗುವನು.

(ಭೋಗಾಪ್ರತಿ ವ್ಯಸನಿತಯಾ ವಿಷಯಾಭಿಮುಖ್ಯೇನ ಗಮನಂ ಭೋಗಾಭಿಗಮಸ್ತಲ್ಲಕ್ಷಣಂ ದೌರ್ಭಾಗ್ಯಂ)

೨೧. ಅಂತಹವನಿಗೆ ಭೋಗಕೃಪಣವಲ್ಲದ, ಎಂದರೆ ಭೋಗದಿಂದ ಕುಗ್ಗದಿರುವ ಯಾವುದೋ ಒಂದು ಹೊಸ ಕಾಂತಿಯು ಮುಖದಲ್ಲಿ ಕಾಣಿಸುವುದು. ಆವನು ರಾಹುವಿನಿಂದ ಬಿಡಲ್ಪಟ್ಟ ಚಂದ್ರನ ಹಾಗೆ ಪ್ರಕಾಶಿಸುವನು.

೨೨. ಸ್ವರ್ಗದಲ್ಲಿರುವವರಿಗೆ ಆಕಾಶದಲ್ಲಿ ಕಲ್ಪವೃಕ್ಷವು ಹೇಗೆ ಪ್ರಶಂಸನೀಯವಾಗುವುದೋ ಹಾಗೆಯೇ ಅವನೂ ತ್ರಿಜಗತ್ತನ್ನೂ ತೃಣೀಕೃತವಾಗಿ ಬಿಟ್ಟಿರುವ ಮಹನೀಯರಲ್ಲಿ ಪ್ರಶಂಸನೀಯನಾಗುವನು.

೨೩. ಅವನು ಭೋಗಗಳನ್ನು ಬೇಡವೆನ್ನುವುದು ಅವುಗಳಲ್ಲಿ ದ್ವೇಷದಿಂದಲ್ಲವಾದುದರಿಂದ, ಯಾವಾಗಲಾದರೂ ಆ ಭೋಗಗಳ ಮೇಲೆ ದ್ವೇಷವು ತೋರಿದರೆ

ಸ್ವಾ ಏವೋಪಹಸತ್ಯಂತಸ್ತರುಣೀಸ್ತರಲಕ್ರಿಯಾಃ ।
ಖೇದಸ್ಮೇರಮುಖೋ ಜಾತೀರ್ಜಾತಿಸ್ಮರ ಇವಾಧಮಃ ॥ ೨೪ ॥

ಅಥ ತಂ ದ್ರಷ್ಟುಮಾಯಾಂತಿ ಸೌಹಾರ್ದೇನೈವ ಸಾಧವಃ ।
ಭೂಪಾವಿವೋದಿತಂ ಚಂದ್ರಂ ವಿಸ್ಮಯೋತ್ಫುಲ್ಲಲೋಚನಾಃ ॥ ೨೫ ॥

ನಿತ್ಯಾನಾದೃತಭೋಗೋಽಸೌ ತತೋಽಪ್ಯುಚಿತಯಾ ಧಿಯಾ ।
ಪ್ರಾಪ್ತಮಪ್ಯುಚಿತಾರಂಭಂ ಭೋಗಂ ನ ಬಹುಮನ್ಯತೇ ॥ ೨೬ ॥

---

ತಾನೇ ತನ್ನ ಮನಸ್ಸಿನಲ್ಲಿಯೇ ನಾಚಿಕೊಳ್ಳುವನು. ಭೋಗಗಳು ಸಿಕ್ಕದೆಯೇ ಇದ್ದರೆ, ಮನಸ್ಸಿನಲ್ಲಿ ಬಹುವಾಗಿ ಸಂತೋಷಪಟ್ಟುಕೊಳ್ಳುವನು.

(ಪ್ರಾಪ್ತಭೋಗಾನಾಂ ಪರಿತ್ಯಾಗೇ ತುಷ್ಯನ್ನಪಿ, ತ್ಯಕ್ತ ಸರ್ವದ್ವೇಷೇಣ ಮಯಾ ಭೋಗೇಷು ದ್ವೇಷಃ ಕಥಂ ಕೃತ ಇತಿ ಮನಸಿ ಲಜ್ಜಮಾನೋಽಪಿ, ಕದಾಚಿದ್ಭವತೀತಿ ನ ತಯಾ ಪರಿತುಷ್ಯತಿ ।ಭೋಗಾನಾಮ ಸಂಪತ್ತ್ಯಾ ಅಲಾಭೇನ ತು ಲಜ್ಜಾಪ್ರಸಕ್ತ್ಯಭಾವಾತ್ ಪರಮಂ ಪರಿತುಷ್ಯತೀತ್ಯರ್ಥಃ—ತಾ. ಪ್ರ)

೨೪. ಹಿಂದೆ ರಾಗಾದಿಗಳು ಪ್ರೌಢವಾಗಿದ್ದ ಕಾಲದಲ್ಲಿ ತಾನು ಆಚರಿಸಿದ ಭೋಗ ಚೇಷ್ಟೆಗಳನ್ನೆಲ್ಲ ನೆನೆದುಕೊಂಡು ಜಾತಿಸ್ಮರನಾದ ಅಧಮನು ತನ್ನ ಹಿಂದಿನ ಜನ್ಮಗಳನ್ನು ನೆನೆದುಕೊಂಡು ನೋವಿನ ನಗುವನ್ನು ಮುಖದಲ್ಲಿ ತೋರುವಂತೆ, ತನ್ನೊಳಗೇ ನಗುವನು.

೨೫. ಅಂತಹವನನ್ನು ನೋಡಲು ಭೂಮಿಯಲ್ಲಿ ಹುಟ್ಟಿದ ಚಂದ್ರನನ್ನು ನೋಡುವುದಕ್ಕೆ ಬರುವ ವಿಸ್ಮಯದಿಂದ ಅರಳಿದ ಕಣ್ಣುಳ್ಳವರಂತೆ, ಸೌಹಾರ್ದದಿಂದ ಸಾಧುಗಳೆಲ್ಲರೂ ಬರುವರು.

೨೬. ಯಾವಾಗಲೂ ಭೋಗಗಳನ್ನು ಗೌರವಿಸದ ಅವನು ಆಗಲೂ ಕೂಡ ಬುದ್ಧಿಯನ್ನು ಸಮವಾಗಿಯೇ ಇಟ್ಟುಕೊಂಡು (ಹಿಗ್ಗದೆ) ನಿಷಿದ್ಧವಲ್ಲದ ಭೋಗವು ಪ್ರಾಪ್ತವಾದರೂ ಅದನ್ನು ಬಹುವೆಂದು ತಿಳಿಯುವುದಿಲ್ಲ

(ಇಹಾಮುತ್ರಫಲ ಭೋಗವಿರಾಗ ಎಂಬುದನ್ನು ಇಲ್ಲಿ ಚಿಂತಿಸಿ.)

ಪೂರ್ವಂ ಸಂಸೃತಿವೈರಸ್ಯಮಂತರೇವೋದಿತಾತ್ಮನಃ ।
ಜಾಯತೇ ಜೀರ್ಣಜಾಡ್ಯಸ್ಯ ಪಾಕಾದಿವ ಶರತ್ತರೋಃ ॥ ೨೭ ॥

ತತಃ ಸಜ್ಜನಸಂಪರ್ಕಮುದರ್ಕಶ್ರೇಯಸೇ ಸ್ವಯಂ ।
ಕರೋತಿ ಸ್ವಸ್ಥತಾಗೃಧ್ನುರ್ಭಿಷಗಾಶ್ರಯಣಂ ಯಥಾ ॥ ೨೮ ॥

ತೇನೋದಾರಮತಿರ್ಭೂತ್ವಾ ಶಾಸ್ತ್ರಾರ್ಥೇಷು ನಿಮಜ್ಜತಿ ।
ಮಹಾನ್ಮಹಾಪ್ರಸನ್ನೇಷು ಸರಸ್ಸ್ವಿವ ಮಹಾಗಜಃ ॥ ೨೯ ॥

ಸಜ್ಜನೋ ಹಿ ಸಮುತ್ತಾರ್ಯ ವಿಪದ್ಭ್ಯೋ ನಿಕಟಸ್ಥಿತಂ ।
ನಿಯೋಜಯತಿ ಸಂಪತ್ಸು ಸ್ವಾಲೋಕೇಷ್ವಿವ ಭಾಸ್ಕರಃ ॥ ೩೦ ॥

ಪರಸ್ವಾದಾನವಿರತಿಃ ಪೂರ್ವಮೇವ ಪ್ರವರ್ತತೇ ।
ವಿವೇಕಿನೋ ನಿಜಾರ್ಥೇಷು ಸಂತೋಷಶ್ಚೋಪಜಾಯತೇ ॥ ೩೧ ॥

---

೨೭. ಮೊದಲೇ(ಗುರು ಶಾಸ್ತ್ರ ಕೃಪೆಯಿಂದ) ಆತ್ಮಸ್ವರೂಪವನ್ನು ಬಲ್ಲವನಿಗೆ, ಶರದೃತುವಿನಲ್ಲಿ ಪರಿಪಾಕದಿಂದ ಜಾಡ್ಯವೆಲ್ಲವೂ ಜೀರ್ಣವಾಗುವ ಹಾಗೆ, ಸಂಸೃತಿ ವೈರಸ್ಯವು ಹುಟ್ಟುವುದು.

(ಉಕ್ತಮೇವ ಗುಣೋದಯಕ್ರಮಂ ಪುನರನುಕ್ರಾಮತಿ—ತಾ. ಪ್ರ.)

೨೮. ಸ್ವಸ್ಥತೆಯುು ಬೇಕೆನ್ನುವವನು ವೈದ್ಯರನ್ನು ಆಶ್ರಯಿಸುವಂತೆ ಉತ್ತರೋತ್ತರ ಶ್ರೇಯಸ್ಸಾಧನವೆಂದು ಅವನು ಅನಂತರ ಸಜ್ಜನಸಂಪರ್ಕವನ್ನು ತಾನಾಗಿ ಹುಡುಕಿಕೊಂಡು ಹೋಗುವನು.

೨೯. ಆ ಸಾಧು ಸಂಗವನ್ನು ಆಶ್ರಯಿಸಿದುದರ ಫಲವಾಗಿ ಉದಾರ ಮತಿಯಾಗಿ, ಮಹಾತ್ ಆಗಿ, ಮಹಾಗಜವು ಮಹಾಪ್ರಸನ್ನವಾದ ಸರೋವರದಲ್ಲಿ ಮಗ್ನವಾಗುವ ಹಾಗೆ ಶಾಸ್ತ್ರಾರ್ಥಗಳಲ್ಲಿ ಮಗ್ನನಾಗುವನು.

೩೦. ಸೂರ್ಯನು ಬೆಳಕನ್ನು ಕೊಟ್ಟು ಕಾಪಾಡುವಂತೆ, ಸಜ್ಜನನೂ ತನ್ನ ಬಳಿಯಿರುವವನನ್ನೂ ವಿಪತ್ತುಗಳಿಂದ ಉದ್ಧಾರ ಮಾಡಿ ಸಂಪತ್ತುಗಳಲ್ಲಿ ನಿಯೋಜಿಸುವನು

೩೧ ವಿವೇಕಿಯಾದವನಿಗೆ ಪರಸ್ವವನ್ನು ಗ್ರಹಿಸುವುದರಲ್ಲಿ ಆಸಕ್ತಿಯಿಲ್ಲದಃ

ಪರಸ್ವಾದಾನವಿರತಃ ಸಂತೋಷಾಮೃತನಿರ್ಭರಃ ।
ವಿವೇಕೀ ಕ್ರಮಶಃ ಸ್ವಾರ್ಥಾನಪ್ಯುಪೇಕ್ಷಿತುಮಿಚ್ಛತಿ ॥ ೩೨ ॥

ದದಾತಿ ಕಣಪಿಣ್ಯಾಕಶಾಕಾದ್ಯಪಿ ನ ಯಾಚತೇ ।
ತೈನೈವಾಭ್ಯಾಸಯೋಗೇನ ಸ್ವಮಾಂಸಾನಿ ದದಾತ್ಯಸೌ ॥ ೩೩ ॥

ನೂನಂ ವಿಲಯಚಿತ್ತಾನಾಂ ವಿವೇಕಮಸುಧಾವತಾಂ ।
ಮೌರ್ಖ್ಯಂ ಲಘುತ್ವಮಾಯಾತಿ ಧಾವತಾಮಿವ ಗೋಷ್ಪದಂ ॥ ೩೪ ॥

ಪರಾರ್ಥಾದಾನವಿರತಿಂ ಪೂರ್ವಮಭ್ಯಸ್ಯ ಯತ್ನತಃ ।
ಆಹರ್ತವ್ಯಾ ವಿವೇಕೇನ ತತಃ ಸ್ವಾರ್ಥೇಷ್ವರಕ್ತತಾ ॥ ೩೫ ॥

ತತೋ ಭೋಗನಿರಾಸೇನ ಸಹ ಸ್ವಾರ್ಥನಿರಾಕೃತಿಃ ।
ಪರಮಾಯೈ ಸುವಿಶ್ರಾಂತ್ಯೈ ಕ್ರಿಯತೇ ಕೃತಿಭಿಃ ಕ್ರಮಾತ್ ॥ ೩೬ ॥

---

ನಾಗಿರುವಿಕೆಯು ಮೊದಲೇ ಇರುವುದು: ಜೊತೆಗೆ, ತನಗೆ ಬೇಕಾದುದನ್ನು ಸಂಪಾದಿಸಿಕೊಳ್ಳುವುದರಲ್ಲಿ ಸಂತೋಷವೂ ಹುಟ್ಟುವುದು.

೩೨. ಪರಸ್ವಗ್ರಹಣದಲ್ಲಿ ಅಭಿರುಚಿ ಇಲ್ಲದವನಾಗಿ, ಸಂತೋಷವೆಂಬ ಅಮೃತವು ತುಂಬಿರುವವನಾಗಿ, ವಿವೇಕಿಯು, ಸ್ವಾರ್ಥಗಳನ್ನೂ ಕ್ರಮವಾಗಿ ಉಪೇಕ್ಷಿಸಲು ಆರಂಭಿಸುವನು

೩೩. ಏನಿದ್ದರೂ ಕೊಟ್ಟುಬಿಡುವನು. ಕಣ, ಪಿಣ್ಯಾಕ (ಹಿಂಡಿ), ಶಾಕ, ಮೊದಲಾದವುಗಳನ್ನೂ ಯಾಚಿಸುವುದಿಲ್ಲ. ಹೀಗೆಯೇ ಅಭ್ಯಾಸ ಬಲದಿಂದ, ತನ್ನ ಮಾಂಸವನ್ನೇ ಯಾಚಿಸಿದರೂ ಕೊಟ್ಟುಬಿಡುವನು

೩೪. ಓಡುವವರಿಗೆ ಗೋಷ್ಪದವು ಹೇಗೆ ಲಕ್ಷ್ಯವೇ ಇಲ್ಲವೋ ಹಾಗೆಯೇ, ವಿವೇಕದ ಹಾದಿಯನ್ನು ಹಿಡಿದವರಿಗೆ, ಚಿತ್ತವು ಲಯವಾಗಿರುವವರಿಗೆ, ಮೌರ್ಖ್ಯವು ಬಲು ಸಣ್ಣದಾಗುವುದು (ಕ್ಷುದ್ರವಾಗುವುದು.)

೩೫. ಪ್ರಯತ್ನಪೂರ್ವಕವಾಗಿ ಪರಾರ್ಥವು ಬೇಕೆನ್ನುವುದನ್ನು ಬಿಡಬೇಕು. ಅನಂತರ ವಿವೇಕದಿಂದ ಸ್ವಾರ್ಥವನ್ನು ಬಿಡುವುದನ್ನೂ ಕಲಿಯಬೇಕು.

೩೬. ಅನಂತರ ಭೋಗನಿರಾಸದೊಡನೆ ಸ್ವಾರ್ಥನಿರಾಕೃತಿಯನ್ನೂ ಸಾಧಿಸ

ನ ತಾದೃಶಂ ಜಗತ್ಯಸ್ಮಿನ್ದುಃಖಂ ನರಕಕೋಟಿಷು ।
ಯಾದೃಶಂ ಯಾವದಾಯುಷ್ಕಮರ್ಥೋಪಾರ್ಜನಶಾಸನಂ ॥ ೩೭ ॥

ಆಸನೇ ಶಯನೇ ಯಾನೇ ಗಮನೇ ರಮಣೇ ಜನೇ ।
ಆಧಿಚಿಂತಾಪರಾ ಏವ ನನು ಮೂಢಾ ವಿದಂತು ತಾಂ ॥ ೩೮ ॥

ನನ್ವರ್ಥಾ ವಿತತಾನರ್ಥಾಃ ಸಂಪದಃ ಸಂತತಾಪದಃ ।
ಭೋಗಾ ಭವಮಹಾರೋಗಾ ವಿಪರೀತೇನ ಭಾವಿತಾಃ ॥ ೩೯ ॥

ತಾವನ್ನಾಯಾತಿ ವೈರಸ್ಯಂ ಚಿಂತಾವಿಷಯಜೃಂಭಣೈಃ ।
ಯಾವದರ್ಥಮಹಾನರ್ಥೋ ನ ಕದರ್ಥಾರ್ಥಮರ್ಥ್ಯತೇ ॥ ೪೦ ॥

---

ಬೇಕು. ಕೃತಿಗಳಾದವರು ಕ್ರಮವಾಗಿ ಪರಮ ಸುವಿಶ್ರಾಂತಿಯು ದೊರೆಯಲೆಂದು ಹೀಗೆ ಮಾಡುವರು.

೩೭. ಬದುಕಿರುವವರೆಗೂ ಅರ್ಥವನ್ನು ಸಂಪಾದಿಸುತ್ತಿರು ಎಂಬ ಶಾಸನಕ್ಕಿಂತಲೂ ಹೆಚ್ಚಾದ ದುಃಖವು ಜಗತ್ತಿನಲ್ಲಿ ಆಗಲಿ, ನರಕಕೋಟಿಗಳಲ್ಲಾಗಲಿ ಇಲ್ಲ.

೩೮. ಆಸನದಲ್ಲಿಯೂ ಶಯನದಲ್ಲಿಯೂ ಯಾನದಲ್ಲಿಯೂ, ಗಮನದಲ್ಲಿಯೂ, ರಮಣದಲ್ಲಿಯೂ, ಜನರಿರುವಾಗಲೂ, ಯಾವಾಗಲೂ (ಅರ್ಥಕ್ಕಾಗಿ) ಕೊರಗುತ್ತಲೇ ಇರುವವರು ಮೂಢರಲ್ಲವೆ? ಅವರೇ ಆ ದುಃಸ್ಥಿತಿಯನ್ನು ಸ್ಮರಿಸಿಕೊಳ್ಳಲಿ.

೩೯. ಅರ್ಥಗಳು ಹಬ್ಬಿರುವ ಅನರ್ಥಗಳಲ್ಲವೆ? ಸಂಪತ್ತುಗಳು ಸಂತತವಾದ ಆಪತ್ತುಗಳಲ್ಲವೆ? ಭೋಗಗಳು ಭವ ಮಹಾರೋಗಗಳಲ್ಲವೆ? ಆದರೂ (ಮೂಢರು)ಅವುಗಳನ್ನು ವಿಪರೀತವಾಗಿ ತಿಳಿದುಕೊಂಡಿರುವರು.

೪೦. ಚಿಂತಾವಿಷಯವು ಬಲವಾಗಿದ್ದುಕೊಂಡು, ಅರ್ಥವೆಂಬುದು ಮಹಾನರ್ಥವು ಎಂಬುದು ತಿಳಿದು ಅದನ್ನು ಛೀ! ಪ್ರಯೋಜನವಿಲ್ಲದುದು ಎಂದು ಬಿಡುವವರೆಗೆ ವೈರಸ್ಯವು ಸಿಕ್ಕುವುದಿಲ್ಲ.

ಅನುತ್ತಮಸುಖಂ ಯಸ್ಮೈ ಚಿರಾಯ ಪರಿರೋಚತೇ ।
ಜಗತ್ತೃಣಶಿಖಾದೃಷ್ಟ್ವಾ ಸೋಽರ್ಥಂ ಪಶ್ಯತು ಶಾಮ್ಯತು ॥ ೪೧ ॥

ಭೂರಿಭಾವವಿಕಾರಾಣಾಂ ಜರಾಮರಣಕರ್ಮಣಾಂ ।
ದೈನ್ಯದೌರಾತ್ಮ್ಯದಾಹಾನಾಮರ್ಥಃ ನಾರ್ಥ ಇತಿ ಸ್ಮೃತಃ ॥ ೪೨ ॥

ಅಸ್ಮಿನ್ ಜಗತಿ ಜಂತೂನಾಂ ಜರಾಮರಣಶಾಲಿನಾಂ ।
ಅಜರಾಮರಣಂ ಕರ್ತುಂ ಸಂತೋಷೋಽಸ್ತಿ ರಸಾಯನಂ ॥ ೪೩ ॥

ವಸಂತೋ ನಂದನೋದ್ಯಾನಮಿಂದುರಪ್ಸರಸಃ ಸ್ಮೃತಾಃ ।
ಇತ್ಯೇಕತಃ ಸಮುದಿತಂ ಸಂತೋಷಾಮೃತಮೇಕತಃ ॥ ೪೪ ॥

ಸರಸಃ ಪ್ರಾವೃಷೇವಾಂತಃ ಸಂತೋಷೇಣೈವ ಪೂರ್ಣತಾ ।
ಗಂಭಿರಾಂ ಶೀತಲಾಂ ಹೃದ್ಯಾಂ ಪ್ರಸನ್ನಾಂ ರಸಶಾಲಿನೀಂ ॥ ೪೫ ॥

ಸಾಧುರೋಜಸ್ವಿತಾಮೇತ್ಯ ಸಂತೋಷೇಣೈವ ರಾಜತೇ
ಸುಪುಷ್ಪಿತವನಾಕಾರೋ ವಸಂತೇನೇವ ಪಾದಪಃ ॥ ೪೬ ॥

---

೪೧ ಯಾವನಿಗೆ ಅನುತ್ತಮ ಸುಖ (ಮೋಕ್ಷ)ವು ಬೇಕೆನ್ನಿಸುವುದೋ ಅವನು ಜಗತ್ತನ್ನು ತೃಣದ ಕೊನೆಯಂತೆ ಕಾಣಬೇಕು. ಶಾಂತಿಯನ್ನು ಪಡೆಯಬೇಕು

೪೨ ನಾನಾ ಜನ್ಮಗಳೆಂಬ ವಿಕಾರಗಳಿಗೆ, ಜರಾಮರಣಗಳೆಂಬ ಕರ್ಮಗಳಿಗೆ ದೈನ್ಯ ದೌರಾತ್ಮ್ಯ ದಾಹಗಳಿಗೆ ಅರ್ಥವೇ ಕಾರಣವೆಂದು ತಿಳಿದವರು ಹೇಳುವರು.

೪೩. ಜರಾಮರಣಶಾಲಿಗಳಾದ ಜಂತುಗಳನ್ನು ಅಜರರನ್ನೂ ಅಮರರನ್ನೂ ಮಾಡುವ ರಸಾಯನವೊಂದು ಈ ಜಗತ್ತಿನಲ್ಲಿದೆ: ಅದರ ಹೆಸರು ಸಂತೋಷ.

೪೪ ವಂಸತ, ಸಂದನೋದ್ಯಾನ, ಚಂದ್ರ, ಅಪ್ಸರಸೆಯರು, ಇವೆಲ್ಲವೂ ಸೇರಿ ಒಂದು ಗೂಡಿ ಆಗಿರುವ ರೂಪವು ಸಂತೋಷಾಮೃತವು.

೪೫-೪೬. ಮಳೆಗಾಲದಿಂದ ರಸವು ಎಲ್ಲೆಲ್ಲೂ ಹರಡುವಂತೆ ಪುರುಷನಿಗೆ ಸಂತೋಷದಿಂದಲೇ ಪೂರ್ಣತೆಯು ಬರುವುದು. ಗಂಭೀರವಾಗಿ, ಶೀತಲವಾಗಿ,

ಪಾದಪೀಠಪರಾಮರ್ಶಪಿಷ್ಟಕೀಟವದೀಹತೇ ।
ದೀನಪ್ರಕೃತಿರರ್ಥಾರ್ಥೀ ದುಃಖಾದ್ದುಃಖಾಂತರಂ ವ್ರಜೇತ್ ॥ ೪೭ ॥

ಕಲ್ಲೋಲವಿಕಲಾಃ ಕ್ಷುಬ್ಧ ಸಮುದ್ರಪತಿತಾ ಇವ ।
ನಾಪ್ನುವಂತಿ ಸ್ಥಿತಿಂ ಸ್ವಸ್ಥಾಂ ವಿಕೃತಾಕೃತಯೋಽರ್ಥಿನಃ ॥ ೪೮ ॥

ಸಂಪದಃ ಪ್ರಮದಾಶ್ಚೈವ ತರಂಗೋತ್ತುಂಗಭಂಗುರಾಃ ।
ಕಸ್ತಾಸ್ವಹಿಫಣಚ್ಛತ್ರಚ್ಛಾಯಾಸು ರಮತೇ ಬುಧಃ ॥ ೪೯ ॥

ಅರ್ಥೋಪಾರ್ಜನರಕ್ಷಾಣಾಂ ಜಾನನ್ನಪಿ ಕದರ್ಥನಾಂ ।
ಯಃ ಕರೋತಿ ಸ್ಪೃಹಾಂ ಮೂಢೋ ನೃಪಶುಂ ತಂ ನ ಸಂಸ್ಪೃಶೇತ್ ॥ ೫೦ ॥

---

ಹೃದ್ಯವಾಗಿ, ಪ್ರಸನ್ನವಾಗಿ, ರಸಶಾಲಿನಿಯಾಗಿರುವ ಓಜಸ್ವಿತೆಯನ್ನು ಸಾಧುವು ಸಂತೋಷದಿಂದಲೇ ಹೊಂದಿ ವಿರಾಜಿಸುವನು ವಸಂತವು ಬರಲು ಚೆನ್ನಾಗಿ ಹೂಗಳನ್ನು ಬಿಟ್ಟು, ಮರವು ಒಂದು ವನದಂತೆ ಶೋಭಿಸುವುದಿಲ್ಲವೆ? ಹಾಗೆಯೇ ಇದೂ !

೪೭ ಪಾದ ಪೀಠಕ್ಕೆ ಸಿಕ್ಕಿ ಪಿಷ್ಟವಾಗಿ ಹೋದ ಕೀಟದಂತೆ ದೀನ ಪ್ರಕೃತಿಯಾದವನು ಅರ್ಥಾರ್ಥಿಯಾಗಿ, ಅರ್ಥವು ಬೇಕೆಂದು ಅಪೇಕ್ಷಿಸುವನು: ದುಃಖದಿಂದ ದುಃಖಾಂತರವನ್ನು ಹೊಂದುವನು.

೪೮ ಹೀಗೆ ಅರ್ಥಿಗಳಾದ ದೀನರಾಗಿ ವಿಕೃತಾಕೃತಿಗಳಾಗಿ, ಕ್ಷುಬ್ಧವಾದ ಸಮುದ್ರದಲ್ಲಿ ಬಿದ್ದವರು ಅಲೆಗಳ ಏಟು ತಿಂದು ಒದ್ದಾಡುವಂತೆ, ಸ್ವಸ್ಥವಾಗಿರುವ ನೈಜಸ್ಥಿತಿಯನ್ನು ಹೊಂದುವುದಿಲ್ಲ.

೪೯. ಸಂಪದಗಳೂ ಪ್ರಮದೆಯರೂ ತರಂಗಗಳಂತೆ ಮೇಲಕ್ಕೆತ್ತಿಕೊಂಡು ಹೋಗಿ ಕೆಡುವವರು. ತಿಳಿದವನು ಯಾವನು ತಾನೇ ಹಾವುಗಳ ಹೆಡೆಗಳ ನೆರಳಿನಂತಿರುವ ಅವುಗಳಲ್ಲಿ ರಮಿಸುವನು ?

೫೦ ಅರ್ಥವನ್ನು ಉಪಾರ್ಜನ ಮಾಡುವುದು: ರಕ್ಷಿಸುವುದು ಎಂಬ ಕಾರ್ಯಗಳ ಕದರ್ಥನವನ್ನು ಬಲ್ಲವನಾದರೂ ಯಾವನು ಸ್ಪೃಹೆಯನ್ನು ಮಾಡುವನೋ ಅವನು ಮೂಢನು. ಅಂತಹ ನರಪಶುವನ್ನು ಮುಟ್ಟಲೂ ಬಾರದು.

ಮನಸೋ ಬಾಹ್ಯಮಾರಂಭಮಾಂತರಂ ಚ ಲುನಾತಿ ಯಃ ।
ಸಮಂ ವೈತೃಷ್ಣ್ಯದಾತ್ರೇಣ ತಸ್ಯ ಕ್ಷೇತ್ರಂ ಪ್ರಕಾಶತೇ ॥ ೫೧ ॥

ಜಗತ್ತ್ಯಮಜ್ಞಸಂಬುದ್ಧಂ ಜ್ಞೋ ವಿದನ್ನಸದೇವ ಯತ್ ।
ಸತೀವ ತತ್ರ ಸ್ಫುರತಿ ತದನಭ್ಯಾಸಜೃಂಭಿತಂ ॥ ೫೨ ॥

ಸಂಸಾರನಿರ್ವೇದದಶಾಮುಪೇತ್ಯ
ಸತ್ಸಂಗಮಂ ಶಾಸ್ತ್ರಮುಪೇತ್ಯ ತೇನ ।
ಶಾಸ್ತ್ರಾರ್ಥಭಾವೇನ ನಿರಸ್ಯ ಭೋಗಾ-
ನ್ವೈತೃಷ್ಣ್ಯದಾರ್ಢ್ಯಾತ್ಪರಮಾರ್ಥಮೇತಿ ॥ ೫೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಮುಮುಕ್ಷುಪ್ರಥಮೋಪಕ್ರಮೋ" ನಾಮ ಸಪ್ತಚತ್ವಾರಿಂಶಃ ಸರ್ಗಃ**

---

೫೧. ಮನಸ್ಸಿನ ಹೊರಗಿನ ಒಳಗಿನ ಕಾರ್ಯಗಳನ್ನೆಲ್ಲ ಯಾವನು ವೈತೃಷ್ಣವೆಂಬ ಮಚ್ಚುಕತ್ತಿಯಿಂದ ಏಕ ಕಾಲದಲ್ಲಿ ಕಡಿದು ಹಾಕುವನೋ ಅವನ ಕ್ಷೇತ್ರವು ಪ್ರಕಾಶಿಸುವುದು.

(ಬಾಹ್ಯಮಾರಂಭಮಿಂದ್ರಿಯಾನು ಧಾವನ ಲಕ್ಷಣಂ ಆಂತರಂ ಸಂಕಲ್ಪಾದಿ ಲಕ್ಷಣಂ ವಾ ಕ್ಷೇತ್ರಂ ಜ್ಞಾನ ಬೀಜೋದ್ಭವ ಸ್ಥಾನಂ ಮುಕ್ತಿನಿದಾನ ಸ್ಥಾನಂ ವಾ ಹೃದಯಂ।—ತಾ ಪ್ರ.)

೫೨. ಅಜ್ಞ ಸಂಬುದ್ಧವಾದ ಜಗತ್ತು ಅಸತ್ತೇ ಎಂದು ಬಲ್ಲವನಾಗಿದ್ದರೂ, ಅದು ಸತ್ಯವೆಂಬಂತೆ ವ್ಯಾಪಾರಮಾಡುವುದು ಯಾವುದುಂಟೋ ಅದು ಅನಭ್ಯಾಸದಿಂದ ಆದುದು

೫೩. ಸಂಸಾರದಲ್ಲಿ ಬೇಸರವು ಹುಟ್ಟಿದಾಗ ಸತ್ಸಂಗವುವನ್ನೂ ಶಾಸ್ತ್ರವನ್ನೂ ಹೊಂದಿ ಶಾಸ್ತ್ರಾರ್ಥವನ್ನು ಚೆನ್ನಾಗಿ ತಿಳಿದವನಾಗಿ, ಭೋಗಗಳನ್ನು ವೈತೃಷ್ಣ್ಯದಾರ್ಢ್ಯತೆಯಿಂದ ತುಳಿದು,ಪರಮಾರ್ಥವನ್ನು ಹೊಂದುವನು.

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಮುಮುಕ್ಷುಪ್ರಥಮೋಪಕ್ರಮ" ಎಂಬ ನಲವತ್ತೇಳನೆಯ ಸರ್ಗವು.**

## ಅಷ್ಟಾಚತ್ವಾರಿಂಶಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ರೂಢೇ ಸಂಸಾರನಿರ್ವೇದೇ ಸ್ಥಿತೇ ಸಾಧುಸಮಾಗಮೇ ।
ಶಾಸ್ತ್ರಾರ್ಥೇ ಭಾವಿತೇ ಬುದ್ಧ್ಯಾ ಭೋಗವೈತೃಷ್ಣ್ಯ ಆಗತೇ ॥ ೧ ॥

ಜಾತೇ ವಿಷಯವೈರಸ್ಯೇ ಸಜ್ಜನತ್ವೇ ತಥೋದಿತೇ ।
ಪ್ರಕಾಶೇ ಸೋನ್ಮುಖೀಭೂತೇ ಹೃದಯೇ ಕಲಿತೋದಯೇ ॥ ೨ ॥

ಧನಾನಿ ನಾಭಿವಾಂಛ್ಯಂತೇ ತಮಾಂಸೀವ ವಿವೇಕಿನಾ ।
ತ್ಯಜ್ಯಂತೇ ವಿದ್ಯಮಾನಾನಿ ಸಂಶುಷ್ಕಾಮೇಧ್ಯಪರ್ಣವತ್ ॥ ೩ ॥

---

## ನಲವತ್ತೆಂಟನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಸಂಸಾರದಲ್ಲಿ ನಿರ್ವೇದವು ದೃಢವಾಗಲು, ಸಾಧುಸಂಗಮವು ನೆಲೆಯಾಗಿ ನಿಲ್ಲಲು, ಶಾಸ್ತ್ರಾರ್ಥವು ಬುದ್ಧಿಯಿಂದ ಭಾವಿತವಾಗಲು, ಭೋಗವೈತೃಷ್ಣ್ಯವು ಲಭಿಸಿರಲು,

೨. ವಿಷಯಗಳಲ್ಲಿ ಅನಾಸಕ್ತಿಯು ಹುಟ್ಟಿರಲು, ಹಾಗೆಯೇ ಸಜ್ಜನತ್ವವು ಉದಿತವಾಗಲು, ಸಂತೋಷವು ಉದಯವಾಗಿರುವ ಹೃದಯದಲ್ಲಿ ಪ್ರಕಾಶವು ಮೇಲಕ್ಕೇಳುತ್ತಿರಲು,

೩. ವಿವೇಕಿಯಾದವನು ಧನಗಳು ಬೇಕು ಎನ್ನುವುದಿಲ್ಲ: ಕತ್ತಲನ್ನು ನಿರಾಕರಿಸುವಂತೆ ನಿರಾಕರಿಸುವನು: ಇದ್ದವುಗಳನ್ನೂ ಒಣಗಿ ಹೋಗಿ ಅಪವಿತ್ರವಾದ ಎಲೆಗಳನ್ನು (ಮರವು ಬಿಡುವಂತೆ) ಬಿಡುವನು.

ಭಾರಾಯ ಪಾಂಥದೃಷ್ಟ್ಯೇವ ದೃಶ್ಯಂತೇ ದಾರಬಂಧವಃ ।
ಯಥಾಶಕ್ತಿ ಯಥಾಕಾಲಮುಪಚರ್ಯಂತ ಏವ ಚ ॥ ೪ ॥

ಇಂದ್ರಿಯೇಷ್ವಪಿ ಸಂಲಗ್ನಾ ಇಂದ್ರಿಯಾರ್ಥಾಃ ಪುನಃ ಪುನಃ ।
ನ ಭೋಗಾ ಅನುಭೂಯಂತೇ ನೂನಂ ಶಾಂತಮನಸ್ತಯಾ ॥ ೫ ॥

ಏಕಾಂತೇಷು ದಿಗಂತೇಷು ಸರಃಸು ವಿಪಿನೇಷು ಚ ।
ಉದ್ಯಾನೇ ಪುಣ್ಯದೇಶೇಷು ನಿಜೇಷ್ವೇವ ಗೃಹೇಷು ವಾ ॥ ೬ ॥

ಸುಹೃತ್ಕೇಲಿವಿಲಾಸೇಷು ಶುಭೋದ್ಯಾನಾಶನಾದಿಷು ।
ಶಾಸ್ತ್ರತರ್ಕವಿಚಾರೇಷು ನ ತಥಾ ಸ್ಥೀಯತೇ ಸ್ಥಿರಂ ॥ ೭ ॥

ಉಪಶಾಂತೇನ ದಾಂತೇನ ಸ್ವಾತ್ಮಾರಾಮೇಣ ಮೌನಿನಾ ।
ಜ್ಞಾತೈವಾನ್ವಿಷ್ಯತೇ ಜ್ಞೇನ ವಿಜ್ಞಾನೈಕಾಂತವಾದಿನಾ ॥ ೮ ॥

---

೪. ದಾರಬಂಧುಗಳನ್ನು ವಿವೇಕಿಯಾದವನು ಪಾಂಥನು ಭಾರವನ್ನು ಕಾಣುವಂತೆ ಕಾಣುವನು: ಯಥಾಶಕ್ತಿಯಾಗಿ ಯಥಾಕಾಲ ಉಪಚಾರಮಾಡಲೂ ಮಾಡುವನು.

೫. ನಿಜವಾಗಿ ಶಾಂತಮನನಾಗಿರುವುದರಿಂದ, ಅವನು ಇಂದ್ರಿಯಗಳಲ್ಲಿ ಹೊಂದಿಕೊಂಡು ಇಂದ್ರಿಯಗಳನ್ನು ಪದೇಪದೇ ಸೆಳೆಯುವ ಭೋಗಗಳನ್ನು ಅನುಭವಿಸುವುದಿಲ್ಲ.

೬ ಏಕಾಂತಗಳಾಗಿರುವ ದಿಗಂತಗಳಲ್ಲಿ, ಸರಸ್ಸುಗಳಲ್ಲಿ, ವಿಪಿನಗಳಲ್ಲಿ, ಉದ್ಯಾನದಲ್ಲಿ, ಪುಣ್ಯಪ್ರದೇಶಗಳಲ್ಲಿ, ತನ್ನ ಮನೆಗಳಲ್ಲಿಯೇ,

೭. ಮಿತ್ರರೊಡನೆ ಆಟಗಳಲ್ಲಿ, ಶುಭವಾದ ವನ ಭೋಜನಗಳಲ್ಲಿ, ಶಾಸ್ತ್ರಗಳನ್ನು ತರ್ಕಿಸುವುದರಲ್ಲಿ ವಿಚಾರಮಾಡುವುದರಲ್ಲಿ, ಯಾವುದರಲ್ಲಿಯೂ ಸ್ಥಿರನಾಗಿ ನಿಲ್ಲುವುದಿಲ್ಲ.

೮. ಉಪಶಾಂತನಾಗಿ, ದಮಯುಕ್ತನಾಗಿ, ಸ್ವಾತ್ಮಾರಾಮನಾಗಿ, ಮೌನಸಂಪನ್ನನಾಗಿರುವ ಜ್ಞನು, ವಿಜ್ಞಾನೈಕಾಂತವಾದಿಯಾಗಿ, ಜ್ಞಾತೆಯೊಂದನ್ನೇ ಬಯಸುವನು.

ಏವಮಭ್ಯಾಸವಶತಃ ಪರೇ ವಿಶ್ರಾಮ್ಯತೇ ಪದೇ ।
ನಿರ್ಮ್ನೇಽಮ್ಭಸಿ ಶಾಂತೇನ ಸ್ವಯಮೇವ ವಿವೇಕಿನಾ ॥ ೯ ॥

ಸಬಾಹ್ಯಾಭ್ಯಂತರಂ ಶಾಂತಾ ಜ್ಞಪ್ತಿರೇವಾರ್ಥತಯೋದಿತಾ ।
ನ ಸಂಭವತಿ ಭಿನ್ನೋಽರ್ಥ ಇತ್ಯೇವ ಪರಮಂ ಪದಂ ॥ ೧೦ ॥

ನಾರ್ಥೋಪಲಬ್ಧಿರ್ನೋ ಶೂನ್ಯಮಸ್ತಿ ಬೋಧಾತ್ಮತಾಂ ವಿನಾ ।
ಇತ್ಯಂತರನುಭೂತಿಸ್ಥಮಾಹುಸ್ತತ್ಪರಮಂ ಪದಂ ॥ ೧೧ ॥

ಏಕಬೋಧಾತಿಸಂಬಂಧಪರಿಣಾಮಾನ್ನ ಬೋಧತಾ ।
ನ ಶೂನ್ಯತಾ ನಾರ್ಥತೇತಿ ವಿದ್ಧಿ ತತ್ಪರಮಂ ಪದಂ ॥ ೧೨ ॥

---

೯. ವಿವೇಕಿಯಾದವನು ಹೀಗೆ ಅಭ್ಯಾಸಮಾಡುತ್ತ, ಶಾಂತನಾಗಿ ಪರಮ ಪದದಲ್ಲಿ ತಾನಾಗಿ ವಿಶ್ರಾಂತಿಯನ್ನು ಹೊಂದುವನು (ನಿರ್ಮ್ನೇಽಮ್ಭಸಿ ?)

೧೦ ಬಾಹ್ಯದಲ್ಲಿಯೂ ಆಭ್ಯಂತರದಲ್ಲಿಯೂ ಶಾಂತವಾಗಿರುವ ಜ್ಞಪ್ತಿಯೇ ಅರ್ಥವಾಗಿ ಉದಯಿಸುವುದು. ಆ ಅರ್ಥವು ಭಿನ್ನವಾದರೆ ಅದು ಸಂಭವಿಸುವುದಿಲ್ಲ ಎಂಬುದೇ ಪರಮ ಪದವು.

(ಕೀದೃಶಂ ತತ್ಪದಂ ಯತ್ರಾಸ್ಯ ವಿಶ್ರಾಂತಿಃ, ಕೀದೃಶ ನಿಶ್ಚಯಾತ್ಮಿಕಾ ಚ ಸಾ, ತದಾಹ ಸಬಾಹ್ಯಾಭ್ಯಂತರಮಿತಿ । ಅಜ್ಞಪ್ತಾ ಸ್ವಾಜ್ಞಾನಮೇವ ಅರ್ಥತಯಾ ದೃಶ್ಯವರ್ಗಾಕಾರೇಣ ಉದಿತಾ, ಸಾ ಚ ಭಿನ್ನೋಽರ್ಥೋ ನ ಸಂಭವತೀತಿ ಶಾಂತಾ ಸಾ ಶಾಂತಿರೇವ ಪರಮಂ ಪದಮಿತ್ಯರ್ಥಃ। ಅಥವಾ ಸಬಾಹ್ಯಾಭ್ಯಂತರಂ ಭಿನ್ನೋಽರ್ಥೋ ನ ಸಂಭವತೀತ್ಯೇವ ನಿಶ್ಚಯರೂಪಾ ಜ್ಞಪ್ತಾ ಚರಮ ಸಾಕ್ಷಾತ್ಕಾರ ವೃತ್ತಿರೇವ ದಗ್ಧೇಂಧನಾಗ್ನಿವತ್ ಚಿದಾತ್ಮನಿ ಶಾಂತಾ ಚೈತ್ತದೇವ ಪರಮಂ ಪದಮಿತ್ಯರ್ಥಃ—ತಾ. ಪ್ರ.)

೧೧. "ಜ್ಞಾನಾತ್ಮತೆಯೊಂದನ್ನು ಬಿಟ್ಟು ಬೇರೆ ಅರ್ಥಲಾಭವಿಲ್ಲ: ಶೂನ್ಯವಲ್ಲ" ಎಂಬ ಅಂತರ-ಅನುಭೂತಿಯಲ್ಲಿರುವಿಕೆಯನ್ನೇ ಪರಮಪದವೆನ್ನುವರು.

೧೨. "ಒಂದೇ ಒಂದು ಬೋಧವಾಗಿ, ಸಂಬಂಧಗಳನ್ನು ಮೀರಿದ ಪರಿಣಾಮವಾಗುವುದರಿಂದ, ಆ ಪರಮ ಪದವು (ಅಲ್ಲಿ ಬೋಧ್ಯ ಬೋಧಕಾದಿ ಸಂಬಂಧವಿಲ್ಲ

ಸ್ವಸಂವಿನ್ಮಾತ್ರವಿಶ್ರಾಮಮವತಾಮಮನಸಾಂ ಸತಾಂ ।
ನ ಸ್ವದಂತೇ ಹಿ ವಿಷಯಾಃ ಪಯಾಂಸಿ ದೃಷದಾಮಿವ ॥ ೧೩ ॥

ನಿರೋಧಪದಮಾಪನ್ನೋ ನಿರ್ಮನಾ ಮೌನಮಂಥರಃ ।
ಸ್ವಭಾವೇ ಸ್ಥಿತ ಏವಾಸ್ತೇ ಚಿತ್ರೇ ಕೃತ ಇವಾತ್ಮವಾನ್ ॥ ೧೪ ॥

---

ವಾಗಿ) ಬೋಧತೆಯೂ ಅಲ್ಲ ಅದು ಏನೂ ಅಲ್ಲ ಎಂದು ಹೇಳುವಂತಿಲ್ಲವಾಗಿ ಶೂನ್ಯತೆಯೂ ಅಲ್ಲ: ಅದು ಹುಡುಕುವವನಿಗಿಂತ ಬೇರೆಯಲ್ಲವಾಗಿ ಅರ್ಥತೆಯೂ ಅಲ್ಲ" ಎಂದು ತಿಳಿ.

(ತಸ್ಯ ಪರಮಪದಸ್ಯ ನ ಬೋಧತಾ, ನ ಶೂನ್ಯತಾ, ನಾಪ್ಯರ್ಥತೇತಿ ವಿದ್ಧಿ । ಕುತಃ । ಸರ್ವಸ್ಯ ವಸ್ತುಜಾತಸ್ಯ ಏಕೇನಾದ್ವಯೇನ ಬೋಧೇನೈವಾತಿ ಶಯಿತಃ ಸಂಬಂಧೋಽತಿಸಂಬಂಧ ಆತ್ಯಂತಿಕೈಕರಸ್ಯಂ ತಥಾ ಪರಿಣಾಮಾತ್ । ನಹಿ ಬೋಧ್ಯಾಭಾವೇ ತದ್ವ್ಯಾವೃತ್ತಾ ಬೋಧತಾವ್ಯಪದೇಷ್ಟುಂ ಶಕ್ಯಾ, ನಾಪಿ ತದರ್ಥತಾ ತಸ್ಯೈವ ವ್ಯಪದೇಷ್ಟುಂ ಶಕ್ಯಾನಾಪ್ಯರ್ಥಶೂನ್ಯತಾ ಮಾತ್ರೇಣ ಬೋಧಸ್ಯ ಶೂನ್ಯತಾ ಪ್ರಸಕ್ತಿರಿತಿ ಭಾವಃ—ತಾ. ಪ್ರ )

೧೩. ನೀರು (ಹಾಲು)ಗಳು ಕಲ್ಲುಗಳಿಗೆ ರುಚಿಸುವುವೇನು ? ಅದರಂತೆಯೇ ಸ್ವಸಂವಿನ್ಮಾತ್ರದಲ್ಲಿ ವಿಶ್ರಾಂತಿಯನ್ನು ಪಡೆದು ಅಮನಸ್ಕರಾದ, ಸತ್ಪುರುಷರಿಗೆ, ವಿಷಯಗಳು ಬೇಕು ಎನ್ನಿಸುವುದಿಲ್ಲ.

೧೪. ನಿರೋಧಪದವನ್ನು ಸೇರಿದವನು ನಿರ್ಮನನಾಗುವನು. ಮೌನ ಮಂದರ ಪರ್ವತವಾಗುವನು ಸ್ವಭಾವದಲ್ಲಿ ಸ್ಥಿತನಾಗುವನು. ಇಂತಹ ಆತ್ಮ ವಂತನು ಚಿತ್ರದಲ್ಲಿ ಬರೆದವನಂತೆ ಇರುವನು.

(ಬಹಿರ್ಮುಖ ಚಿತ್ತಾನಾಂ ಸ್ವಾತ್ಮಪ್ರವಣತಾಂ, ಸ್ವಾತ್ಮ ವಿಶ್ರಾಂತಾನಾಂ ಚ ಬಹಿರ್ಮುಖತಾಂ ನಿರುಣದ್ಧೀತಿ ನಿರೋಧಸ್ತಥಾವಿಧಂ ಪದಂ ।—ತಾ. ಪ್ರ.)

ಸರ್ವಾರ್ಥಮರ್ಥರಹಿತಂ ಮಹದೇವ ಪುರಾಣುವತ್ ।
ಅಶೂನ್ಯಮೇವ ಶೂನ್ಯಾತ್ಮ ಹೃದಯಂ ವೇದ್ಯವೇದಿನಃ ॥ ೧೫ ॥

ಅಹಂತ್ವಂ ಜಗದೀಹಾದಿ ದಿಕ್ಕಾಲಕಲನಾದಿ ಚ ।
ಜ್ಞಸ್ಯ ಜ್ಞಾನಾದಿಶೂನ್ಯಾದಿ ಸ್ಥಿತಮೇವ ನ ವಿದ್ಯತೇ ॥ ೧೬ ॥

ಜ್ಞೇನಾಮಲಪದಸ್ಥೇನ ದೀಪೇನೇವ ನಿರಸ್ಯತೇ ।
ತಮೋ ಹಾರ್ದಂ ತಥಾ ಬಾಹ್ಯಂ ರಾಗದ್ವೇಷಭಯಾದಿ ಚ ॥ ೧೭ ॥

ರಜೋರಹಿತಸರ್ವಾಂಶಂ ಸತ್ವಾತ್ಪಾರಮುಪಾಗತಂ ।
ಅಸಂಭವತ್ತಮೋರೂಪಂ ಪ್ರಣಮೇತ್ತಂ ನೃಭಾಸ್ಕರಂ ॥ ೧೮ ॥

---

೧೫. ವೇದ್ಯವನ್ನು ಬಲ್ಲವನ ಹೃದಯವು ಸರ್ವಾರ್ಥಗಳನ್ನೂ ಅರ್ಥರಹಿತವನ್ನಾಗಿ ನೋಡುವುದು: ಎಲ್ಲವನ್ನೂ ಮಹತ್ತಿಗಿಂತ ಮಹತ್ತಾದ ಬ್ರಹ್ಮವನ್ನಾಗಿ, ಯಾವ ಅಣುವು ಎಲ್ಲದಕ್ಕಿಂತ ಹಿಂದಣದೋ ಅದನ್ನೇ ಆಗಿ, ತಾನು ಶೂನ್ಯಾತ್ಮನಾದರೂ ಎಲ್ಲವನ್ನೂ ಅಶೂನ್ಯವನ್ನಾಗಿ ಕಾಣುವುದು.

೧೬. ಬಲ್ಲವನಿಗೆ ಅಹಂತ್ವ ಜಗತ್ತಿನ ಮೇಲೆ ಇಚ್ಛೆ, ದಿಕ್ಕಾಲಕಲನಾದಿಗಳು, ಇವೆಲ್ಲವೂ ಇದ್ದರೂ ಇಲ್ಲದ ಹಾಗೆ ಕಾಣುವುದು: ಜ್ಞಾನಾದಿಯು ಉಂಟು: ಶೂನ್ಯಾದಿಯು ಇಲ್ಲ ಎನ್ನಿಸುವುದು.

(ನಾಸತೋ ವಿದ್ಯತೇ ಭಾವಃ ನಾಭಾವೋ ವಿದ್ಯತೇ ಸತಃ-ಇತಿ ನ್ಯಾಯಾದಿತಿ ಭಾವಃ ।—ತಾ. ಪ್ರ)

೧೭. ಅಮಲ ಪದದಲ್ಲಿರುವ ಜ್ಞಾನಿಯು ದೀಪವು ಹೇಗೆ ಕತ್ತಲು ಮೊದಲಾದವುಗಳನ್ನು ಕಳೆಯುವುದೊ ಹಾಗೆಯೇ, ಹೃದಯದಲ್ಲಿರುವ ತಮಸ್ಸನ್ನೂ ಬಾಹ್ಯವಾದ ರಾಗ ದ್ವೇಷ ಭಯಾದಿಗಳನ್ನೂ ನೀಗುವನು.

೧೮. ಯಾವುದರಲ್ಲಿಯೂ ರಜಸ್ಸು ಇಲ್ಲದವನಾಗಿ, ಸತ್ವ ಬಲದಿಂದ ಕೊನೆಯನ್ನು ಸೇರಿದವನಾಗಿ, ತಮಸ್ಸು ಎಂಬುವುದು ಸಂಭವವೇ ಇಲ್ಲದಿರುವ, ಇಂತಹ ಮಾನವ (ರೂಪ) ಸೂರ್ಯನನ್ನು ನಮಸ್ಕರಿಸಬೇಕು.

(ಸತ್ವ ರಜಸ್ ತಮಸ್ಸು—ಗುಣತ್ರಯಗಳು, ಬಲ, ಧೂಳು, ಕತ್ತಲೆ.)

ಭೇದಪ್ರವಿಲಯೇ ಜಾತೇ ಚಿತ್ತೇ ಚಾದೃಶ್ಯತಾಂ ಗತೇ ।
ಯಾ ಸ್ಥಿತಿಃ ಪ್ರಾಪ್ತಬೋಧಸ್ಯ ನ ವಾಗ್ಗೋಚರಮೇತಿ ಸಾ ॥ ೧೯ ॥

ದದಾತ್ಯೇತನ್ಮಹಾಬುದ್ಧೇ ನಿರ್ವಾಣಂ ಪರಮೇಶ್ವರಃ ।
ಅಹರ್ನಿಶಂ ಪರಮಯಾ ಚಿರಂ ಭಕ್ತ್ಯಾ ಪ್ರಸಾದಿತಃ ॥ ೨೦ ॥

ಶ್ರೀ ರಾಮ ಉವಾಚ:—

ಈಶ್ವರಃ ಕೋ ಮುನಿಶ್ರೇಷ್ಠ ಕಥಂ ಭಕ್ತ್ಯಾ ಪ್ರಸಾದ್ಯತೇ ।
ಏತನ್ಮೇ ತತ್ತ್ವತೋ ಬ್ರೂಹಿ ಸರ್ವತತ್ತ್ವವಿದಾಂ ವರ ॥ ೨೧ ॥

ಶ್ರೀ ವಸಿಷ್ಠ ಉವಾಚ —

ಈಶ್ವರೋ ನ ಮಹಾಬುದ್ಧೇ ದೂರೇ ನ ಚ ಸುದುರ್ಲಭಃ ।
ಮಹಾಬೋಧಮಯೈಕಾತ್ಮಾ ಸ್ವಾತ್ಮೈವ ಪರಮೇಶ್ವರಃ ॥ ೨೨ ॥

---

೧೯. ಭೇದವೆಂಬುದು ಪ್ರಲಯವಾಗಿ ಹೋಗಿರಲು, ಚಿತ್ತವು ಅದೃಶ್ಯತೆಯನ್ನು ಹೊಂದಿರಲು, ಪ್ರಾಪ್ತ ಬೋಧನು ಯಾವ ಸ್ಥಿತಿಯನ್ನು ಹೊಂದಿರುವನೆಂಬುದು ವಾಕ್ಕಿಗೆ ಗೋಚರವಾಗುವುದಿಲ್ಲ

೨೦. ಎಲೈ ಮಹಾಬುದ್ಧಿಯೇ, ಇರುಳು' ಹಗಲೆನ್ನದೆ ಬಹುಕಾಲ ಪರಮ ಭಕ್ತಿಯಿಂದ ಒಲಿಸಿಕೊಂಡರೆ, ಪರಮೇಶ್ವರನು ಇದನ್ನು ಕೊಡುವನು.

(ತಪಃ ಪ್ರಭಾವಾತ್, ದೇವ ಪ್ರಸಾದಾಚ್ಚ– ಇತ್ಯಾದಿ ಶ್ರುತೇರಿತಿ ಭಾವಃ —ತಾ ಪ್ರ)

ಶ್ರೀ ರಾಮನು ಕೇಳಿದನು.—

೨೧. ಎಲೈ ಮುನಿಶ್ರೇಷ್ಠನೆ, ಈಶ್ವರನು ಯಾರು ? ಅವನನ್ನು ಭಕ್ತಿಯಿಂದ ಒಲಿಸಿಕೊಳ್ಳುವುದು ಹೇಗೆ ? ಎಲೈ ಸರ್ವ ತತ್ವವೇತ್ತೃಗಳಲ್ಲಿ ಶ್ರೇಷ್ಠನಾದವನೆ, ಇದರ ತತ್ವವೇನು ಎಂದುದನ್ನು ನನಗೆ ಹೇಳು.

ಶ್ರೀ ವಸಿಷ್ಠನು ಹೇಳಿದನು.—

೨೨. ಎಲೈ ಮಹಾಬುದ್ಧಿಯೇ, ಈಶ್ವರನು ದೂರದಲ್ಲಿಲ್ಲ; ಅವನು ಸಿಕ್ಕ

ತಸ್ಮೈ ಸರ್ವಂ ತತಃ ಸರ್ವಂ ಸ ಸರ್ವಂ ಸರ್ವತಶ್ಚ ಸಃ ।
ಸೋಽಂತಃ ಸರ್ವಮಯೋ ನಿತ್ಯಂ ತಸ್ಮೈ ಸರ್ವಾತ್ಮನೇ ನಮಃ　　　　॥ ೨೩ ॥

ತಸ್ಮಾದಿಮಾಃ ಪ್ರಸೂಯಂತೇ ಸರ್ಗಪ್ರಲಯವಿಕ್ರಿಯಾಃ ।
ಅಕಾರಣಂ ಕಾರಣತೋ ಗತಯಃ ಪವನಾದಿವ　　　　॥ ೨೪ ॥

---

ದವನೂ ಅಲ್ಲ. ಮಹಾಬೋಧಮಯನಾದ ಏಕಾತ್ಮನಾಗಿ ಎಲ್ಲರ ಆತ್ಮವೂ ಆಗಿರುವವನೇ ಪರಮೇಶ್ವರನು.

೨೩. ಎಲ್ಲವೂ ಅವನಿಗಾಗಿಯೇ ! (ಅವನ ಪ್ರಸಾದವನ್ನು ಪಡೆಯುವುದಕ್ಕಾಗಿಯೆ) ಎಲ್ಲವೂ ಅವನಿಂದಲೇ! ಎಲ್ಲವೂ ಅವನೇ! ಎಲ್ಲ ಕಡೆಯಲ್ಲಿಯೂ ಅವನೇ! ಅವನೇ ಒಳಗೆ ! ಯಾವಾಗಲೂ ಸರ್ವಮಯನೇ ಆಗಿರುವ ಆ ಸರ್ವಾತ್ಮನಿಗೆ ನಮಸ್ಕಾರವು.

(ಈಶ್ವರತಾ ಹಿ ಈಶ್ಯವಿಷಯೆ ಸರ್ವಥಾ ಸ್ವಾತಂತ್ರ್ಯಂ। ತಚ್ಚ ಸರ್ವಂ ಪ್ರತಿ ಸರ್ವಪ್ರಕಾರೇಣ ಸ್ವಾತ್ಮನ ಏವ ಸಂಭವತೀತ್ಯುಪಪತ್ತಿಮಾಹ—ತಸ್ಮೈ ಇತಿ। ಅಚೇತನಂ ಹಿ ಸರ್ವಂ ರಥಗೃಹ ಪ್ರಸಾದಾದಿ ಚೇತನಾರ್ಥಂ । ನ ಚ ತದತಿರಿಕ್ತೋಽನ್ಯಶ್ಚೇತನಧಾತುರಸ್ತಿ। "ನಾನ್ಯೋಽತೋಽಸ್ತಿ ದ್ರಷ್ಟಾ" ಇತ್ಯಾದಿ ಶ್ರುತೇಃ। ಅನೇನ ಸರ್ವೋಽಪಿ ಭೋಕ್ತೃತಾ ಸ್ವಾತಂತ್ರ್ಯಮೇತ್ಯಾಹ-ತತ ಇತಿ। ತೃತೀಯಾ ಪಂಚಮೀ ಷಷ್ಠೀ ಸಪ್ತಮೀ ವಿಭಕ್ತ್ಯಂಶಾತ್ ಸರ್ವಾವಿಭಕ್ತಿಕಸ್ತಸಿಃ। ಕರ್ತೃಕರಣ ನಿಮಿತ್ತ ಸ್ವಾಮ್ಯಾದಿಭಾವೇನ-ಅತಿ ಸ್ವಾತಂತ್ರದ್ಯೋತನಾರ್ಥೋ ಬೋಧ್ಯಃ । ಸಸರ್ವಮಿತಿ-ಉಪಾದಾನ-ಅಧಿಷ್ಠಾನತಾದಿ ಸ್ವಾತಂತ್ರ್ಯ ಪ್ರದರ್ಶನಾಯ। ಏವಂ ಸರ್ವತ ಇತ್ಯಪಿ ಸರ್ವಶಕ್ತಿ ನಿರೂಪಕತಾ ಸ್ವಾತಂತ್ರ್ಯ ದ್ಯೋತನಾಯ ಬೋಧ್ಯಂ। ಸೌಕ್ಷ್ಮ್ಯಸರ್ವಗತತ್ವ ಪರಿಣಾಮಾದಿ ಸ್ವಾತಂತ್ರ್ಯಮಪಿ ತಸ್ಯೈವ ಸಂಭವತೀತ್ಯಾಹ—ಸೋಽಂತಃ ಸರ್ವಮಯ ಇತಿ। ಇತ್ಥಂ ಸರ್ವಥಾ ಸರ್ವದಾ ಸರ್ವಾತ್ಮನಃ ತಸ್ಯೈವ ಸರ್ವಥಾಪಿ ಸರ್ವೋತ್ಕರ್ಷಾತ್ ಸ ಏವೇಶ್ವರ ಇತಿ ನಮಸ್ಕಾರ್ಯ ಇತ್ಯಾಹ—ತಸ್ಮೈ ಇತಿ।—ತಾ ಪ್ರ.)

೨೪. ಕಾರಣನಾದ ಅವನಿಂದ ಈ ಸರ್ಗ ಪ್ರಲಯ ವಿಕಾರಗಳೆಲ್ಲವೂ, ಅಕಾರಣವಾಗಿಯೇ ಪ್ರಸೂತಗಳಾಗುವುವು ಅದು ಹೇಗೆ ಎಂದರೆ, ಪವನನಿಂದ ಗತಿಗಳು ಉಂಟಾಗುವಂತೆ

ಅನಿಶಂ ಪೂಜಯಂತ್ಯೇತಾಃ ಸರ್ವಾಃ ಸ್ಥಾವರಜಂಗಮಾಃ ।
ಯಥಾಭಿಮತದಾನೇನ ಸರ್ವೇ ಭೂತಜಾತಯಃ ॥ ೨೫ ॥

ಸುಬಹೂನ್ಯೇಷ ಜನ್ಮಾನಿ ಯಥಾಭಿಮತಯೇಚ್ಛಯಾ ।
ಯದಾ ಸಂಪೂಜಿತಸ್ತೇನ ಪ್ರಸಾದಮಧಿಗಚ್ಛತಿ ॥ ೨೬ ॥

ಪ್ರಸನ್ನಃ ಸ ಮಹಾದೇವಃ ಸ್ವಯಮಾತ್ಮಾ ಮಹೇಶ್ವರಃ ।
ಬೋಧಾಯ ಪ್ರೇರಯತ್ಯಾಶು ದೂತಂ ಪೂತಂ ಶುಭೇಹಿತೈಃ ॥ ೨೭ ॥

ಶ್ರೀ ರಾಮ ಉವಾಚ—

ಆತ್ಮನಾ ಪರಮೇಶೇನ ಕೋ ದೂತಃ ಪ್ರೇರ್ಯತೇ ಮುನೇ ।
ಸ ದೂತೋ ಬೋಧನಂ ವಾಪಿ ಕರೋತಿ ವದ ಮೇ ಕಥಂ ॥ ೨೮ ॥

---

೨೫ ಸ್ಥಾವರಜಂಗಮಗಳೆಲ್ಲವೂ, ಪ್ರಾಣಿಗಳಾಗಿ ಹುಟ್ಟಿ ಬಂದಿರುವ ಸರ್ವ ಭೂತಗಳೂ ಈತನನ್ನು ಯಥಾಭಿಮತವಾಗಿ ಕಾಣಿಕೆಯನ್ನೊಪ್ಪಿಸಿ, ಅಹರ್ನಿಶಿಗಳಲ್ಲೂ ಪೂಜಿಸುತ್ತಿರುವುವು.

೨೬. ಬಹುಜನ್ಮಗಳಲ್ಲಿ ತಮತಮಗೆ ಅಭಿಮತಗಳಾದ ಇಚ್ಛೆಯಿಂದ ಈತನನ್ನು ಪೂಜಿಸಿದರೆ, ಆಗ ಆತನ ಪ್ರಸಾದವು ಲಭಿಸುವುದು.

೨೭. ಪ್ರಸನ್ನನಾದ ಆ ಮಹಾದೇವನೇ ಸ್ವಯಂ ಆತ್ಮನು: ಮಹೇಶ್ವರನು. ಆತನೇ ಬೋಧವಾಗಲೆಂದು, ತತ್ವಜ್ಞಾನ ಲಾಭವಾಗಲೆಂದು, ಪವಿತ್ರನಾದ ದೂತನನ್ನು ಶುಭೇಚ್ಛೆಗಳಿಂದ ಕಳುಹಿಸುವನು.

ಶ್ರೀ ರಾಮನು ಕೇಳಿದನು —

೨೮. ಎಲೈ ಮುನೀಂದ್ರನೇ, ಪರಮೇಶ್ವರನಾದ ಆತ್ಮನು ಯಾವ ದೂತನನ್ನು ಕಳುಹಿಸುವನು ? ಆ ದೂತನು ಹೇಗೆ ಬೋಧನ ಮಾಡುವನು ? ಅದನ್ನು ನನಗೆ ಹೇಳು.

ಶ್ರೀ ವಸಿಷ್ಠ ಉವಾಚ:—

ಆತ್ಮಸಂಪ್ರೇರಿತೋ ದೂತೋ ವಿವೇಕೋ ನಾಮ ನಾಮತಃ ।
ಹೃದ್ಗುಹಾಯಾ ಸದಾನಂದಸ್ತಿಷ್ಠತೀಂದುರಿವಾಂಬರೇ || ೨೯ ||

ಸ ಏಷ ವಾಸನಾತ್ಮಾನಂ ಜಂತುಂ ಬೋಧಯತಿ ಕ್ರಮಾತ್ ।
ಸಂಸಾರಸಾಗರಾದಸ್ಮಾತ್ತಾರಯತ್ಯವಿವೇಕಿನಂ || ೩೦ ||

ಬೋಧಾತ್ಮೈಷೋಽಂತರಾತ್ಮೈವ ಪರಮಃ ಪರಮೇಶ್ವರಃ
ಅಸ್ಯೈವ ವಾಚಕೋ ನಾಮ ಪ್ರಣವೋ ವೇದಸಂಮತಃ || ೩೧ ||

ಜಪಹೋಮತಪೋದಾನಪಾರಯಜ್ಞಕ್ರಿಯಾಕ್ರಮೈಃ ।
ಏಷ ಪ್ರಸಾದ್ಯತೇ ನಿತ್ಯಂ ನರನಾಗಸುರಾಸುರೈಃ || ೩೨ ||

ಶ್ರೀ ವಸಿಷ್ಠನು ಹೇಳಿದನು —

೨೯. ಆತ್ಮಸಂಪ್ರೇರಿತನಾದ ದೂತನ ಹೆಸರು ವಿವೇಕನೆಂದು ಅವನು ಹೃದಯವೆಂಬ ಗುಹೆಯಲ್ಲಿ, ಆಕಾಶದಲ್ಲಿರುವ ಚಂದ್ರನಂತೆ, ಸದಾನಂದನಾಗಿ ಇರುವನು.

೩೦. ಅವನೇ ವಾಸನಾತ್ಮಕನಾದ ಜಂತುವನ್ನು ಕ್ರಮಕ್ರಮವಾಗಿ ಬೋಧಗೊಳಿಸುವನು. ಅವಿವೇಕಿಯಾದ ಜಂತುವನ್ನು ಈ ಸಂಸಾರ ಸಾಗರವನ್ನು ದಾಟಿಸುವನು.

೩೧. ಪ್ರತಿಯೊಂದು ಜಂತುವಿನಲ್ಲಿರುವ ಅಂತರಾತ್ಮನೂ ಬೋಧಾತ್ಮನು: ಆತನೇ ಪರಮನಾದ ಪರಮೇಶ್ವರನು. ಇವನನ್ನು ಕುರಿತು ಹೇಳುವುದೇ ಪ್ರಣವವು. ಈ ಮಾತು ವೇದಕ್ಕೆ ಸಮ್ಮತವಾದುದು

೩೨ ಜಪ ಹೋಮ ತಪೋದಾನ ಪಾರ ಯಜ್ಞ ಮೊದಲಾದ ಕರ್ಮಗಳಿಂದ ನರ ನಾಗ ಸುರ ಅಸುರರು ಈ ಮಹೇಶ್ವರನನ್ನು ಪ್ರಸನ್ನನನ್ನು ಮಾಡಿಕೊಳ್ಳುತ್ತಿರುವರು.

ದ್ಯೌರ್ಮೂರ್ಧಾ ಪೃಥಿವೀ ಪಾದೌ ತಾರಕಾ ರೋಮರಾಜಯಃ ।
ಭೂತಾನ್ಯಸ್ಥೀನಿ ಹೃದಯಂ ವ್ಯೋಮಾಸ್ಯ ಪರಮೇಶ್ವರಃ ॥ ೩೩ ॥

ಸರ್ವತ್ರೈಷ ಚಿದಾತ್ಮತ್ವಾದ್ಯಾತಿ ಜಾಗರ್ತಿ ಪಶ್ಯತಿ ।
ತೇನೈಷ ಸರ್ವತೋ ಲಕ್ಷ್ಯಕರಕರ್ಣಾಕ್ಷಿಪಾದಭೃತ್ ॥ ೩೪ ॥

ವಿವೇಕದೂತಮುದ್ಬೋಧ್ಯ ಹತ್ವಾ ಚಿತ್ತಪಿಶಾಚಕಂ ।
ಆತ್ಮನಃ ಪದವೀಂ ಸ್ಫಾರಾಂ ಜೀವಃ ಕಾಮಪಿ ನೀಯತೇ ॥ ೩೫ ॥

---

೩೩. ಈ ಪರಮೇಶ್ವರನಿಗೆ ಶಿರವು ಅಂತರಿಕ್ಷವು: ಪೃಥಿವಿಯು ಪಾದವು. ತಾರಕೆಗಳು ರೋಮರಾಜಿಗಳು: ಭೂತಗಳು ಅಸ್ಥಿಗಳು ಹೃದಯವು ವ್ಯೋಮವು.

(ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ಇತಿ ಶ್ರುತೇಃ ।—ತಾ ಪ್ರ)

೩೪ ಈತನು ಚಿದಾತ್ಮನಾದ್ದರಿಂದ ಸರ್ವತ್ರ ಗಮನವು ಈತನಿಗೆ ಉಂಟು ಈತನು ಯಾವಾಗಲೂ ಜಾಗರೂಕನಾಗಿರುವನು: ಯಾವಾಗಲೂ ನೋಡುತ್ತಿರುವನು: ಆದರಿಂದ ಈತನು ಎಲ್ಲ ಕಡೆಯೂ ಲಕ್ಷ್ಯವಿರುವ ಕರ, ಕರ್ಣ, ಅಕ್ಷಿ, ಪಾದಗಳುಳ್ಳವನು

(ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್' ಇತ್ಯಾದಿ ಶ್ರುತಿನಾಮಪ್ಯತ್ರೈವಂ ಸಾಮಂಜಸ್ಯ ಮಿತ್ಯಾಶಯೇನಾಹ । —ತಾ. ಪ್ರ.)

೩೫. ವಿವೇಕವೆಂಬ ದೂತನನ್ನು ಎಚ್ಚರಗೊಳಿಸಿ, ಚಿತ್ತವೆಂಬ ಪಿಶಾಚವನ್ನು ಹೊಡೆದು ಹಾಕಿ, ಅನಿರ್ವಾಚ್ಯವಾದ ಸುಂದರವಾದ ಆತ್ಮ ಪದವಿಯನ್ನು ಜೀವನಿಗೆ ಕೊಡುವನು.

ತ್ಯಕ್ತ್ವಾ ಸರ್ವವಿಕಲ್ಪೌಘಾನ್ವಿಕಾರಾನರ್ಥಸಂಕರಾನ್ ।
ಪೌರುಷೇಣಾತ್ಮನೈವಾತ್ಮಾ ಸ್ವಯಮೇವ ಪ್ರಸಾದ್ಯತಾಂ ॥ ೩೬ ॥

ಭ್ರಮನ್ಮನಃಪಿಶಾಚೇಽಸ್ಮಿನ್ಕಲ್ಲೋಲಜಲದಾಕುಲೇ ।
ಸಂಸಾರರಾತ್ರಿತಿಮಿರೇ ಸ್ವಾತ್ಮೈವಾಪೂರ್ಣಚಂದ್ರಮಾಃ ॥ ೩೭ ॥

ಅಗಾಧಮರಣಾವರ್ತಕಲ್ಲೋಲಾಕುಲಕೋಟರೇ ।
ತೃಷ್ಣಾತರಂಗತರಲೆ ಸ್ವಮನಶ್ಚಂಡಮಾರುತೇ ॥ ೩೮ ॥

ಮಹಾಜಡಲವಾಧಾರೇ ಸಂಸಾರವಿಷಮಾರ್ಣವೇ ।
ಇಂದ್ರಿಯಗ್ರಾಹನೇ ವಿವೇಕಃ ಪ್ರೋತಕೋ ಮಹಾನ್ ॥ ೩೯ ॥

---

೩೬. ಸರ್ವವಿಕಲ್ಪ ಸಮೂಹಗಳನ್ನು ಬಿಟ್ಟು, ಅರ್ಥಸಂಕರಗಳಾದ ವಿಕಾರಗಳನ್ನೆಲ್ಲ ತ್ಯಜಿಸಿ,ಪೌರುಷ ಮಾಡಿ, ಪರ ಸಹಾಯವನ್ನು ಅಪೇಕ್ಷಿಸದೆ ಆತ್ಮನನ್ನು ಪ್ರಸನ್ನನನ್ನು ಮಾಡಿಕೊ

೩೭ ಮನಸ್ಸೆಂಬ ಪಿಶಾಚವು ತಿರುಗುತ್ತಿರುವ, ಮೊಳಗುತ್ತಿರುವ ಮೋಡಗಳಿಂದ ತುಂಬಿರುವ, ಸಂಸಾರವೆಂಬ ಕಾಳರಾತ್ರಿಯ ಕಗ್ಗತ್ತಲೆಯಲ್ಲಿ ಸ್ವಾತ್ಮನೇ ಪೂರ್ಣಚಂದ್ರಮನು.

೩೮–೩೯. ಅಗಾಧವಾದ ಮರಣವೆಂಬ ಆವರ್ತ (ಸುಳಿ) ದಿಂದ ಕಲ್ಲೋಲವೂ ಆಕುಲವೂ ಆಗಿರುವ ಹಳ್ಳವುಳ್ಳ, ತೃಷ್ಣೆಯೆಂಬ ತರಂಗಗಳಿಂದ ಚಂಚಲವಾಗಿರುವ ಸ್ವಮನವೆಂಬ ಚಂಡಮಾರುತನಿಂದ ಕೂಡಿರುವ, ಮಹಾಜಡವಾಗಿರುವ ಲವ ಮಾತ್ರವೇ ಆಧಾರವಾಗಿರುವ, ಇಂದ್ರಿಯಗಳೆಂಬ ಮೊಸಳೆಗಳಿಂದ ಭಯಂಕರವಾಗಿರುವ, ಸಂಸಾರವೆಂಬ ವಿಷಮಸಮುದ್ರದಲ್ಲಿ, ವಿವೇಕವೆಂಬುದೊಂದೇ ಮಹಾನೌಕೆಯು.

ಪೂರ್ವಂ ಯಥಾಭಿಮತಪೂಜನಸುಪ್ರಸನ್ನೋ
ದತ್ವಾ ವಿವೇಕಮಿಹ ಪಾವನದೂತಮಾತ್ಮಾ ।
ಜೀವಂ ಪದಂ ನಯತಿ ನಿರ್ಮಲಮೇಕಮಾದ್ಯಂ
ಸತ್ಸಂಗಶಾಸ್ತ್ರಪರಮಾರ್ಥಪರಾವಬೋಧೈಃ ॥ ೪೦ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ವಿವೇಕಮಾಹಾತ್ಮ್ಯಂ" ನಾಮ
ಅಷ್ಟಚತ್ವಾರಿಂಶಃ ಸರ್ಗಃ

---

೪೦. ಮೊದಲು ಬೇಕಾದ ಪೂಜನಗಳಿಂದ ಸುಪ್ರಸನ್ನನಾದ ಆತ್ಮನು, ವಿವೇಕವೆಂಬ ಪಾವನ ದೂತನನ್ನು ಕೊಟ್ಟು (ಕಳುಹಿಸಿ) ಜೀವನನ್ನು ಸತ್ಸಂಗ ಶಾಸ್ತ್ರ, ಪರಮಾರ್ಥ ಪರಮ ಜ್ಞಾನಗಳಿಂದ, ನಿರ್ಮಲವೂ ಏಕವೂ ಆದ್ಯವೂ ಆದ ಪದವಿಗೆ ಕರೆದೊಯ್ಯುವನು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿವೇಕಮಾಹಾತ್ಮ್ಯ" ಎಂಬ
ನಲವತ್ತೆಂಟನೆಯ ಸರ್ಗವು.

## ಏಕೋನಪಂಚಾಶಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಪರಿಪುಷ್ಟವಿವೇಕಾನಾಂ ವಾಸನಾಮಲಮುಜ್ಝತಾಂ ।
ಮಹತ್ತಾ ಮಹತಾಮಂತಃ ಕಾಪ್ಯಪೂರ್ವೈವ ಜಾಯತೇ ॥ ೧ ॥

ಔದಾರ್ಯೋದಾರಮರ್ಯಾದಾಂ ಮತಿಂ ಗಾಂಭೀರ್ಯಸುಂದರೀಂ ।
ಮಹತಾಂ ನಾವಗಾಹಂತೇ ಭುವನಾನಿ ಚತುರ್ದಶ ॥ ೨ ॥

ಚಿತ್ತಭ್ರಾಂತಿರ್ಜಗದಿತಿ ಪ್ರರೂಢೇ ಪ್ರತ್ಯಯೇ ಸತಾಂ ।
ಬಾಹ್ಯಶ್ಚಾಂತಶ್ಚರನ್ನಕ್ರಗ್ರಹೋ ಮೋಹಶ್ಚ ಶಾಮ್ಯತಿ ॥ ೩ ॥

## ನಲವತ್ತೊಂಭತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು :—

೧. ವಿವೇಕವು ಚೆನ್ನಾಗಿ ಬೆಳೆದಿರುವ ವಾಸನಾ ಮಲವನ್ನು ತ್ಯಾಗಮಾಡಿರುವ ಮಹಾತ್ಮರಿಗೆ, ಅವರ ಹೃದಯದಲ್ಲಿ ಯಾವುದೋ ಒಂದು ಲೋಕೋತ್ತರವಾದ ಮಹತ್ತ್ವಯು ಹುಟ್ಟುವುದು.

೨ ಔದಾರ್ಯವೆಂಬ ಉದಾರವಾದ ಮರ್ಯಾದೆಯನ್ನುಳ್ಳ ಗಾಂಭೀರ್ಯದಿಂದ ಸುಂದರಳಾದ, ಮಹಾತ್ಮರ ಬುದ್ಧಿಯನ್ನು, ಚತುರ್ದಶಭುವನಗಳೂ (ತಮ್ಮಲ್ಲಿರುವ ಸರ್ವಸ್ವವನ್ನೂ ಕೊಟ್ಟೂ) ಪ್ರಲೋಭಗೊಳಿಸಲಾರವು.

೩. ಚಿತ್ತ ಭ್ರಾಂತಿಯೇ ಜಗತ್ತು ಎಂಬ ಪ್ರತ್ಯಯವು (ನಂಬಿಕೆಯು) ಚೆನ್ನಾಗಿ ರೂಢವಾಗಿರಲು, ಒಳಗೂ ಹೊರಗೂ ಚರಿಸುವ ಮೋಹವೆಂಬ ಮೊಸಳೆಯು ತಣ್ಣಗಾಗುವುದು.

(ಬಹಿಃ ಶಬ್ದಾದಿ ಲಕ್ಷಣೇಷ್ವತಿಗ್ರಥೇಷು ಭವೋ ಬಾಹ್ಯಃ, ಅಂತಸ್ಸಂಕಲ್ಪ ವಿಕಲ್ಪಾದಿರೂಪೈಶ್ಚರನ್ನತ ಏವ ಹೃದಾಂತರ್ಬಹಿ ಸಂಚಾರ ಕ್ಷಮನಕ್ರಪ್ರಾಯೋ

ದ್ವಿಇಂದುವತ್ತಾಪಜಲವತ್ಕೇಶೋಂಡ್ರುಕವದಂಬರೇ ।
ವಿಸ್ಫುರಂತ್ಯಾಂ ಜಗದ್ಭ್ರಾಂತೌ ವಾಸನಾಪ್ರತ್ಯಯಃ ಕುತಃ ॥ ೪ ॥

ವಾಸನಾಪ್ರತ್ಯಯೇ ಶೂನ್ಯೇ ಶೂನ್ಯಂ ವ್ಯೋಮೈವ ಶಿಷ್ಯತೇ ।
ಸಾಽಪ್ಯವಸ್ಥಾ ಮನೋಽಸತ್ವೇ ಕುತಸ್ತ್ಯಾಜ್ಯಾ ವಿವೇಕಿನಾ ॥ ೫ ॥

ತ್ರಯಮೇತತ್ತು ಯಾವಸ್ಥಾತ್ರಯೇಣಾನೇನ ವರ್ಜಿತಾ ।
ಪಶ್ಯಂತೀವಾಪ್ಯಪಶ್ಯಂತೀ ಸಾವಸ್ಥಾ ಪರಮೋಚ್ಯತೇ ॥ ೬ ॥

---

ಗ್ರಹಃ ಸಮನಸ್ಕೇಂದ್ರಿಯಾದಿ ಕಲಾಪಸ್ತನ್ಮೂಲಭೂತೋ ಮೋಹೋಽಜ್ಞಾನಂ ಚಕಾರಾದ್ವಾಸನಾ ಕಾಮಕರ್ಮಾದಿಶ್ಚ ಶಾಮ್ಯತೀತ್ಯರ್ಥಃ—ತಾ. ಪ್ರ.)

೪. ಈ ಜಗದ್ಭ್ರಾಂತಿಯು ದ್ವಿಚಂದ್ರರಂತೆ, ಬಿಸಿನೀರಿನಂತೆ, ಆಕಾಶದಲ್ಲಿ ಕಾಣುವ ಕೋಶೋಂಡ್ರಕದಂತೆ, ತೋರುತ್ತಿರುವುದು; (ಇದು ನಿಜವೆಂದು ಕೊಂಡಾಗ ವಾಸನೆಯು ಬೆಳೆಯುವುದು : ಇದು ಭ್ರಾಂತಿಯೆಂದು ನಿಜವನು ಕಂಡಾಗ ಅದೇ ಇಲ್ಲವಾಗುವುದು. ಹೀಗಿರಲು) ಇದರಲ್ಲಿ ವಾಸನಾಪ್ರತ್ಯಯವು ಎಲ್ಲಿಯದು ?

೫. ಈ ವಾಸನಾ ಪ್ರತ್ಯಯವು (ಹಿಂದಿನಿಂದ ನಿಜ ನಿಜ ಎಂದುಕೊಂಡು ಬಂದಿರುವಿಕೆಯು) ಇಲ್ಲವಾಗಲು, ಶೂನ್ಯವಾದ ಆಕಾಶವೊಂದೇ ಉಳಿಯುವುದು. ಈ ಅವಸ್ಥೆಯು (ಆಕಾಶವೊಂದೇ ಉಳಿಯುವಿಕೆಯು) ಮನಸ್ಸು ಇಲ್ಲದ ಅಮನಸ್ಕ ಸ್ಥಿತಿಯು ಬಂದಾಗಲೂ ಲಭಿಸುವುದು ಅದರಿಂದ ವಿವೇಕಿಯು ಅದನ್ನು ಬೇಡ ವೆನ್ನುವುದಿಲ್ಲ.

(ನಿರ್ಮನಸ್ಕಾವಸ್ಥಾ ಸಪ್ತಮ ಭೂಮಿಕಾಯಾಂ ವಿವೇಕಿನಾಪ್ರಾಪ್ತ–ತಾ. ಪ್ರ)

೬ (ಜಾಗ್ರತ್‌ಸ್ವಪ್ನ ಸುಷುಪ್ತಿಗಳೆಂಬ) ಅವಸ್ಥಾತ್ರಯವು ಪ್ರಸಿದ್ಧವು. ಈ ಅವಸ್ಥಾತ್ರಯ ವಿವರ್ಜಿತವಾದ ಅವಸ್ಥೆಯು ಯಾವುದೋ ಅದು ಪರಮವು ಅದು ಪಶ್ಯಂತಿಯೆನ್ನುವಂತಿದ್ದರೂ ಅಪಶ್ಯಂತಿಯು (ದರ್ಶನಾದಿ ವ್ಯವಹಾರ ಮೂಲವು ಇಲ್ಲದಿರುವುದರಿಂದ ಅಪಶ್ಯಂತಿಯಾದರೂ ಜೀವನು ಮಾತ್ರ ಹೇತು ಪ್ರಾರಬ್ಧ ಶೇಷದಿಂದ ಪಶ್ಯಂತಿಯಾಗಿ ಇತರರಿಗೆ ಕಾಣುವುದು)

ವಿಚಿತ್ರರತ್ನರಶ್ಮ್ಯೌಘ ಇವ ನಾನಾತ್ಮಕಂ ಜಗತ್ ।
ಆಭಾಸಮಾತ್ರಂ ನತ್ವಾತ್ಮಾ ನ ಘನಂ ನ ಚ ಪಾರ್ಥಿವಂ　　　　　　॥ ೭ ॥

---

೭. ವಿಚಿತ್ರವಾದ ರತ್ನಪ್ರಭೆಯು ಹೇಗೋ ಹಾಗೆಯೇ ಈ ಜಗತ್ತು ನಾನಾತ್ಮಕವಾದುದು. ಇದು ಆಭಾಸಮಾತ್ರವೇ ಹೊರತು ಆತ್ಮನಲ್ಲಿ (ಪ್ರತ್ಯೇಕಸತ್ತೆಯಲ್ಲ) ಇದು ಘನವೂ ಅಲ್ಲ: ಪಾರ್ಥಿವವೂ ಅಲ್ಲ

. ಈಗಿನ ಸೈನ್ಸ್ ಸಿದ್ಧಾಂತವು ತನ್ನ ಹಿಂದಿನ ಮ್ಯಾಟರ್ ಥಿಯರಿಯನ್ನು ಬಿಟ್ಟಿದೆ ಮ್ಯಾಟರ್–ಎನರ್ಜಿ ಎಂದು ಇದ್ದುದು ಈಗ ಮ್ಯಾಟರ್ ಇಲ್ಲ; ಎನರ್ಜಿ ಮಾತ್ರವೇ ಇರುವುದು ಎಂಬ ಥಿಯರಿಗೆ ಬಂದಿದೆ

ನಮ್ಮ ಸಿದ್ಧಾಂತವು ಹೀಗೆ: ಈ ಭೂಮಂಡಲವು ಆಗಿರುವುದು ಪಂಚ ಭೂತಗಳಿಂದ, ಸೃಷ್ಟಿಯಾಗುವಾಗ ಅವೆಲ್ಲ ಒಂದೇ ಆಗಿದ್ದುವು: ಪ್ರಲಯದಲ್ಲಿ ಮತ್ತೆ ಒಂದಾಗುವುದು ಅವು ಬೇರೆ ಬೇರೆಯೇ ಆಗಿರುವುವು.

ಒಂದೊಂದು ಭೂತದ ಅಂಶವು ಹೆಚ್ಚಾಗಿರುವುದು ಒಂದೊಂದು ಲೋಕದ ವೈಶಿಷ್ಟ್ಯ. ಆದರೂ ಎಲ್ಲಾ ಭೂತಗಳೂ ಸೇರಿಯೇ ಒಂದು ವಸ್ತುವಾಗುವುದು

ಹೀಗೆ ವಸ್ತು ವಸ್ತುವೂ ಪಂಚಭೂತಗಳ ಸಂಘಾತವು. ಅದರಲ್ಲಿ ಆಕಾಶ, ವಾಯು, ಅಗ್ನಿಗಳು ಒಂದಕ್ಕಿಂತ ಒಂದು ತೂಕವಾದರೂ, ತೂಕವಿದೆಯೆಂದು ತಿಳಿಯುವುದು. ಜಲಾಂಶವು ಸೇರಿದಾಗ ಘನವಾಗಿ, ತೂಕವು ತಿಳಿಯುವಷ್ಟು ಆಗುವುದು. ಪೃಥ್ವಿಯ ಅಂಶವು ಸೇರಿದಾಗ, ಯೋಗಿಗಳು ಇದನ್ನು ಪ್ರಯೋಗ (Demonstration) ಪೂರ್ವಕವಾಗಿ ತೋರಿಸಬಲ್ಲರು. ಪ್ರವೀಣರು ಆಯುರ್ವೇದದ ಮೂಲಕವೂ ತೋರಿಸಬಹುದು. ಆದರಿಂದ, ಎಂದರೆ ಪಂಚಭೂತ ಸಿದ್ಧಾಂತವನ್ನು ಪ್ರಯೋಗಪೂರ್ವಕವಾಗಿ ತೋರಿಸಬಹುದಾದ್ದರಿಂದ, ವೇದಾಂತ ಇರುವುದೆಲ್ಲ ಆತ್ಮವೊಂದೇ ಎಂಬ ಸಿದ್ಧಾಂತವು ಗ್ರಾಹ್ಯವು. ಪಿಂಡಗ್ರಹ ನಿವೃತ್ತಿಯಾದಾಗ ಎಂದರೆ ಘನವೂ ಸತ್ಯವೂ ಆದ ಜಗತ್ತಿದೆ ಎಂಬುದು ಬಿಟ್ಟಾಗ ಈ ಸಿದ್ಧಾಂತವು ಅರ್ಥವಾಗುವುದು.)

ರೂಪಾಲೋಕನಮಾತ್ರಂ ಹಿ ಶೂನ್ಯಮೇವ ಜಗತ್ಸ್ಥಿತಂ ।
ಖೇ ವಿಚಿತ್ರಮಣಿವ್ಯೂಹಕರಜಾಲಮಿವೋತ್ಥಿತಂ ॥ ೮ ॥

ನೇಹ ಸತ್ಯಾನಿ ಭೂತಾನಿ ನ ಜಗತ್ತಾ ನ ಶೂನ್ಯತಾ ।
ಇದಂ ಬ್ರಹ್ಮಾಖ್ಯರತ್ನೇಶಪ್ರಭಾಜಾಲಂ ವಿಜೃಂಭಿತಂ ॥ ೯ ॥

ಸೃಷ್ಟಯೋಽನ್ಯಸೃಷ್ಟಯೋ ಬ್ರಾಹ್ಮ್ಯೋ ನಾನಾತಾ ಚ ನ ನಾಶತಾಃ ।
ಅಮೂರ್ತಾ ಏವ ಭಾಸಂತೇ ಕಲ್ಪನಾರ್ಕಗಣಾ ಘನಾಃ ॥ ೧೦ ॥

ಏವಂ ತಾವದ್ಘನೀಭೂತಃ ಪಿಂಡಗ್ರಾಹೋ ನ ವಿದ್ಯತೇ ।
ಸಂಕಲ್ಪಿತೇ ಚ ವ್ಯೋಮ್ನೀವ ಶೂನ್ಯತೈವಾವಗಮ್ಯತೇ ॥ ೧೧ ॥

---

೮. ಜಗತ್ತು ಕಣ್ಣಿಗೆ ಕಾಣಿಸುತ್ತಿರುವುದು. (ಹೀಗೆ ಇಂದ್ರಿಯಗೋಚರವಾಗುತ್ತಿದ್ದರೂ) ಶೂನ್ಯವಾಗಿಯೇ ಇರುವುದು ಆಕಾಶದಲ್ಲಿ ರತ್ನಕಿರಣಗಳು ಪ್ರಸಾರವಾದಾಗ ಕಾಣುವ ವಿಚಿತ್ರ ಕಿರಣವ್ಯೂಹದಂತೆ ಆಗಿರುವುದು

(ಈಗಿನ ಸಿನಿಮಾ ಪ್ರಪಂಚವನ್ನು ನೋಡಿ ಸಾಹಿತ್ಯ ಸೃಷ್ಟಿಯನ್ನು ನೋಡಿ ಉತ್ತಮ ಚಿತ್ರಗಳನ್ನು ನೋಡಿ ನಿಜವಾಗಿದ್ದರೆ ಮನಸ್ಸಿನಲ್ಲಿ ಏನೇನು ಆಗುತ್ತಿತ್ತೋ ಅದೆಲ್ಲ ಆದರೆ ತಾನೇ ನಾವು ಇವುಗಳಲ್ಲಿರುವ ನೈಪುಣ್ಯವನ್ನು ಮೆಚ್ಚುವುದು ! ಹೀಗ, ಈ ಸೃಷ್ಟಿಯಿಂದ "Aeshehic Pleasure" "ರಸಾನುಭವ" ಎಂಬುದನ್ನು ವಿಮರ್ಶಿಸಿ ನೋಡಿ.)

೯. ಇರುವ ಭೂತಗಳೂ ಸತ್ಯಗಳಲ್ಲ ಜಗತ್ತಿಯೂ ಇಲ್ಲ ಶೂನ್ಯತೆಯೂ ಇಲ್ಲ. ಇದೆಲ್ಲವೂ, (ದೃಶ್ಯವಾಗಿ ಕಾಣಿಸುತ್ತಿರುವ ಈ ಸರ್ವವೂ) ಬ್ರಹ್ಮವೆಂಬ ಉತ್ತಮವಾದ ರತ್ನದ ಪ್ರಭಾಜಾಲದ ವಿಜೃಂಭಣವು.

೧೦. ನಾನಾತಾ ಇಲ್ಲವಾದ್ದರಿಂದ ಬ್ರಾಹ್ಮ್ಯ ಸೃಷ್ಟಿಗಳು ಇಲ್ಲ: ನಾಶತಾ ಇಲ್ಲವಾದ್ದರಿಂದ ಅಸೃಷ್ಟಿ (ಪ್ರಲಯ)ಗಳೂ ಇಲ್ಲ. ಯಾವಯಾವದು ಕಾಣಿಸುತ್ತಿರುವುದೋ ಅದೆಲ್ಲವೂ ಅಮೂರ್ತವೇ! ಕಲ್ಪನಾ ಪ್ರಪಂಚದ ಸೂರ್ಯರೆಲ್ಲ ಒಟ್ಟುಗೂಡಿದಾಗ ಅವರ ಕಿರಣಗಳೆಲ್ಲ ಏಕೀಭವಿಸಿ ಘನವಾದ ಹಾಗೆ ಇದು

೧೧. (ಆದರೆ) ಹಾಗೆ ಘನೀಭೂತವಾದ ಅರ್ಕಕಿರಣಗಳೆಲ್ಲ ಸೇರಿ ಒಂದು

ತಸ್ಯಾಮವಸ್ತುಭೂತಾಯಾಂ ಕಥಂ ಭಾವನಿಬಂಧನಂ ।
ಭವಿಷ್ಯದಾಕಾಶತರೌ ವಿಶ್ರಾಂತಃ ಕೋ ವಿಹಂಗಮಃ ॥ ೧೨ ॥

ಪಿಂಡಿತ್ವಂ ನಾಸ್ತಿ ಭೂತಾನಾಂ ಶೂನ್ಯತಾ ಚ ನ ವಿದ್ಯತೇ ।
ಚಿತ್ತಮಪ್ಯತ ಏವಾಸ್ತಂ ಶೇಷಂ ಸತ್ತನ್ನ ಚಾಸ್ಥಿತಿ ॥ ೧೩ ॥

ಅನಾನಾ ಸಮಮೇವಾಸ್ತೇ ನಾನಾರೂಪೋ ವಿಬೋಧವಾನ್ ।
ಅಂತರಾಲೀನನಾನಾರ್ಥೋ ಯಥಾ ಕನಕಪಿಂಡಕಃ ॥ ೧೪ ॥

ಯಥಾಸ್ಥಿತಸ್ಯ ನಾಹಂತ್ವಂ ವಿಶ್ವಂ ಚಿತ್ತಂ ವಿಲೀಯತೇ ।
ಜ್ಞಸ್ಯಾವಾಚ್ಯಮಚಿತ್ತ್ವಂ ಸತ್ಸ್ವರೂಪಮವಿಷ್ಯತೇ ॥ ೧೫ ।

ಪಿಂಡವಾಗುವುದೂ ಉಂಟೇನು? ಹಾಗೆ ಆದರೂ ಸಂಕಲ್ಪಾಕಾಶದಲ್ಲಿ ಹೇಗೋ ಹಾಗೆಯೇ ಶೂನ್ಯವೇ ಎಂಬುದು ತಿಳಿಯುವುದು.

೧೨. ಆದರಿಂದ ಅವಸ್ತುವಾದ ಜಗತ್ತಿನಲ್ಲಿ ಭಾವನಿಬಂಧನ (ಅಭಿಮಾನ ವಿಡುವುದು) ಎಂದರೆ ಹೇಗೆ? ಮುಂದೆ ಹುಟ್ಟಿಬರುವ ಆಕಾಶವೃಕ್ಷದಲ್ಲಿ ಯಾವ ಪಕ್ಷಿಯು ವಿಶ್ರಮಿಸಿಕೊಂಡೀತು?

(ಶೂನ್ಯತಾಯಾಂ ಅಹಂ ಮಮತಾರಾಗದ್ವೇಷಾದಿಭಾವ ನಿಬಂಧನಂ ಕಥಂ —ತಾ. ಪ್ರ)

೧೩. ಭೂತಗಳಿಗೆ ಪಿಂಡತ್ವವೂ ಇಲ್ಲ, ಶೂನ್ಯತೆಯೂ ಇಲ್ಲ. ಅದರಿಂದ ಚಿತ್ತವೂ ಇಲ್ಲವೇ ಇಲ್ಲ. ಇವೆಲ್ಲ ಹೋದಮೇಲೆ ಉಳಿಯುವ ಶೇಷವು ಸತ್! ಅದು ಅಸ್ಥಿತಿಯಲ್ಲ.

೧೪. (ಅದರಿಂದ) ಕನಕ ಪಿಂಡವು ತನ್ನೊಳಗೇ ನಾನಾ ಭೂಷಣತ್ವಗಳನ್ನು ಇಟ್ಟುಕೊಂಡಿರುವಂತೆ, ಬುದ್ಧಿವಂತನು ನಾನಾರೂಪವೂ ಅನಾನಾ ಒಳಗಿರುವುದರಿಂದ ಅಧರ ಸಮವೇ ಎಂದು ತಿಳಿಯುವನು

(ಅತ ಏವ ತತ್ತ್ವವಿತ್ ಜಾಗ್ರತ್ಯಪಿ ಸುಷುಪ್ತಸ್ಥೋ ಭಾಸಮಾನ ನಾನಾತ್ವಾನಾಂ ಸನ್ಮಾತ್ರಾತ್ಮನಿ ಅಂತರ್ಲಯಾದಿ—ತಾ. ಪ್ರ)

೧೫ ಕಲ್ಪಿಸ ಹಾಗೆ ಇರುವುದಾದರೆ, ವಿಶ್ವವೂ ಚಿತ್ತವೂ ಅಹಂತಾಸಹಿತವಾಗಿ

ಕ್ಲಿಶ್ಯತೇ ಕೇವಲಂ ಬುದ್ಧಿರುತ್ತರಾಧರದರ್ಶನೈಃ |
ಸ್ತೋಕಯಾಭ್ಯಸ್ತಯಾ ಯುಕ್ತ್ಯಾ ಸತ್ಯೋಽರ್ಥೋ ಹ್ಯವಗಮ್ಯತೇ || ೧೬ ||

ವಿರಾಡೋಜೋವಿರಹಿತಂ ಕಾರ್ಯಕಾರಣತಾದಿಭಿಃ |
ಭೂತಭವ್ಯಭವಿಷ್ಯಸ್ಯ ಜಗದಂಗಸ್ಯ ಸಂಭವಂ || ೧೭ ||

ಯೇನ ಬೋಧಾತ್ಮನಾ ಬುದ್ಧಂ ಸ ಜ್ಞ ಇತ್ಯಭಿಧೀಯತೇ |
ಅದ್ವೈತಸ್ಯೋಪಶಾಂತಸ್ಯ ತಸ್ಯ ವಿಶ್ವಂ ನ ವಿದ್ಯತೇ || ೧೮ ||

ಪೂರ್ವೋಕ್ತಾಃ ಸರ್ವ ಏವೈತೇ ಉಪದೇಶಾ ವಿಶೇಷಣಾಃ |
ಜ್ಞಸ್ಯಾನುಭವಮಾಯಾಂತಿ ಸ್ವತಃ ಸಾಧುಕಥಾ ಇವ || ೧೯ ||

---

ಇಲ್ಲವೇ ಆಗುವುದು, (ಇದು ಅಜ್ಞಾನದ ಅವಸ್ಥೆ ಆದರೆ) ಜ್ಞನಿಗೆ ವಿಶ್ವವೂ ಚಿತ್ತವೂ ಅಹಂತಾಸಹಿತವಾಗಿ ನಾಶವಾದಾಗ ಸತ್ಸ್ವರೂಪವಾದರೂ ಅವಾಚ್ಯವೂ ಅಚಿತ್ತ್ವವೂ ಆದ 'ಅದು' ಒಂದೇ ಉಳಿಯುವುದು.

೧೬. ಬುದ್ಧಿಯು ಮೇಲು ಕೆಳಗು ನೋಡುತ್ತ ಒಂದೇ ಕ್ಲೇಶಪಡುವುದು. ಯುಕ್ತಿಯನ್ನು ಹಿಡಿದು ಕೊಂಚ ಅಭ್ಯಾಸಮಾಡಿನೋಡಿದರೆ ಸತ್ಯವಾದ ಅರ್ಥವು ಸಿಕ್ಕುವುದು

೧೭-೧೮. ವಿರಾಟ್ಪುರುಷನ ಓಜಸ್ಸಿಲ್ಲದೆ, ಭೂತ ಭವ್ಯ ಭವಿಷ್ಯದ್ರೂಪವಾದ ಜಗದಂಗವು ಸಂಭವಿಸುವುದು (ಹೇಗೆ) ಎಂಬುದನ್ನು ಯಾವನು ಕಾರ್ಯಕಾರಣತಾದಿ ವಾದವಿವಾದಗಳಿಂದ ತಿಳಿಯುವನೋ ಅವನು ಬೋಧಾತ್ಮನು, ಜ್ಞನು, ಎನ್ನಿಸಿ ಕೊಳ್ಳುವನು. ಅವನು ತಿಳಿದುದು ಅದ್ವೈತವು· ಉಪಶಾಂತವು; ಆದಕ್ಕೆ, ಅವನಿಗೆ, ವಿಶ್ವವಿಲ್ಲ

೧೯ ಸಾಧುಗಳ ಕಥೆಗಳನ್ನು ಕೇಳಿದರೆ, ಅವು ತಮ್ಮ ತಮ್ಮ ಅನುಭವಕ್ಕೆ ಬರುವಂತೆ, ಮೇಲೆ ಹೇಳಿದ ಈ ವಿಶೇಷಣಗಳೆಲ್ಲ ಉಪದೇಶ (ಸಮವಾದ)ವು. ತಿಳಿದವನ ಅನುಭವಕ್ಕೆ ಬರುವವು.

ಪಿಂಡತ್ವಂ ನಾಸ್ತಿ ಭೂತಾನಾಂ ಶೂನ್ಯತ್ವಂ ಚಾಪ್ಯಸಂಭವಾತ್ ।
ಅತಏವ ಮನೋ ನಾಸ್ತಿ ಶೇಷಂ ಸತ್ತತ್ತವ ಸ್ಥಿತಿಃ　　॥ ೨೦ ॥

ಚೇತ್ಯೋನ್ಮುಖತ್ವಮೇವಾಂತಶ್ಚೇತನಸ್ಯಾಸ್ಯ ಚೇತನಂ
ಉದಿತಂ ತದನರ್ಥಾಯ ಶ್ರೇಯಸೇಽನುದಿತಂ ಭವೇತ್　　॥ ೨೧ ॥

ಉದಿತಂ ಬಾಹ್ಯತಾಮೇತಿ ತತ್ರ ಗಚ್ಛತಿ ಪಿಂಡತಾಂ ।
ಸ್ವಯಂ ಸಂವೇದನಾದೇವ ಜಾಡ್ಯಾದಂಬ್ವಿವ ಶೈಲತಾಂ　　॥ ೨೨ ॥

---

೨೦ ಭೂತಗಳಿಗೆ ಪಿಂಡತ್ವವು ಇಲ್ಲ, ಶೂನ್ಯತ್ವವೆಂಬುದು ಅಸಂಭವವು. ಆದರಿಂದ ಮನಸ್ಸು ಎಂಬುದೂ ಇಲ್ಲ; ಶೇಷವು ಯಾವುದೋ ಅದು ಸತ್ ! ಅದೇ ನಿನ್ನ ಸ್ಥಿತಿಯು

(ಯುಕ್ತ್ಯಂತರಮಾಹ ।... ಚತುರ್ವಿಧಭೂತಗ್ರಾಮಾಣಾಂ ಪೃಥಿವ್ಯಾದಿ ಮಹಾಭೂತಾನಾಂ ಚಾವಯವಶೋ ಗುಣಶಶ್ಚ ವಿವಿಚ್ಯ ದೃಶ್ಯಮಾನಾನಾಂ ಪರಮಾಣುಭಾವೇಽಪ್ಯವಿಶ್ರಾಂತೇಃ ಪಿಂಡತ್ವಂ ತಾವನ್ನಾಸ್ತಿ । ನಾಪಿ ಚ ಶೂನ್ಯತ್ವಂ ಪ್ರತ್ಯಕ್ಷತ್ವಾದ್ಯಸಂಭವಾತ್ । ಉಭಯಾಸಂಭವೇ ಚ ಸರ್ವವಿಕಲ್ಪಾಪಗಮಾತ್ ತದಧೀನಸ್ಥಿತಿಕಂ ಮನೋಽಪಿ ನಾಸ್ತೀತ್ಯವಿಕಲ್ಪಂ ಸನ್ಮಾತ್ರರೂಪಂ ಸ್ಫುರಣಮೇವ, ಶಿಷ್ಯತ ಇತಿ ಶೇಷಂ ತದೇವ ತವ ಪಾರಮಾರ್ಥಿಕಂ ರೂಪಂ ಸ್ಥಿತಿಃ ಪ್ರತಿಷ್ಠಾ-ಇತ್ಯರ್ಥಃ—ತಾ. ಪ್ರ.)

೨೧. ಚೇತ್ಯದ ಕಡೆಗೆ ಅಭಿಮುಖವಾಗಿರುವಿಕೆಯೇ ಚೇತನದ ಚೇತನವು. ಅದು ಉದಿತ (ಕಾರ್ಯೋನ್ಮುಖ)ವಾದರೆ ಅನರ್ಥವು, ಅನುದಿತವಾಗಿದ್ದರೆ ಅದೇ ಶ್ರೇಯಸ್ಸಿಗೆ ಕಾರಣವು.

(ಯುಕ್ತ್ಯಂತರಮಾಹ ..ಅಂತಶ್ಚೇತನಸ್ಯ ಅಸ್ಯ ಪ್ರತ್ಯಗಾತ್ಮನಃ ಚೇತ್ಯೋನ್ಮುಖತ್ವಮೇವ ಚೇತನಂ, ಸಂಸಾರಾತ್ಮನಾ ಬೋಧಃ—ತಾ. ಪ್ರ )

೨೨ ಚೇತನವು ಉದಿತವಾದರೆ ಬಾಹ್ಯತೆ (ಪ್ರತ್ಯೇಕತೆ)ಯನ್ನು ಹೊಂದುವುದು. ಅದು ಅಲ್ಲಿ ಪಿಂಡವಾಗುವುದು ತಾನು ಬೇರೆ ಎಂದುಕೊಳ್ಳುವ ಸ್ವಯಂ ಸಂವೇದನವೇ ಪಿಂಡವು. ಅದು ಶೈತ್ಯದಿಂದ ನೀರಿನಲ್ಲಾಗುವ ಶೈಲತೆಯು

ಸ್ವಪ್ನಾದ್ಯರ್ಥವದಾದತ್ತೇ ಬೋಧೋ ಬೋಧೇನ ಪಿಂಡತಾಂ ।
ತದ್ಗ್ರಾಹಕತಯಾ ಚಿತ್ತಂ ಭೂತ್ವಾ ಬಧ್ನಾತಿ ದೇಹಕಂ ॥ ೨೩ ॥

ಏತಾವತೀಷ್ವವಸ್ಥಾಸು ಬೋಧಸ್ಯೋದೇತಿ ನಾನ್ಯತಾ ।
ಶಬ್ದಕಲ್ಪನಯಾ ಭೇದಃ ಕೇವಲಂ ಪರಿಕಲ್ಪಿತಃ ॥ ೨೪ ॥

ಬಹಿರಂತಶ್ಚ ಬೋಧಸ್ಯ ಭಾತ್ಯಾತ್ಮೈವಾರ್ಥದೃಷ್ಟಿಭಿಃ ।
ಅಂತರನ್ಯೇನ ಬಹಿಷ್ಟನ್ಯೇನ ನೈವಾಸ್ಯ ಮನಸೋ ಯಥಾ ॥ ೨೫ ॥

ಬೋಧಸ್ಯಾಕಾಶಕಲ್ಪತ್ವಾತ್ಕಾಲಾಕಾಶಾದಿ ತದ್ವಪುಃ ।
ಪದಾರ್ಥಾಸ್ತ್ವೈವ ಸ್ವಾತ್ಮಾನಃ ಸ್ವಪ್ನವನ್ನಾರ್ಥರೂಪಿ ಖಂ ॥ ೨೬ ॥

---

( ಇವೆಲ್ಲವೂ ಪ್ರಾಣಧರ್ಮಗಳು ಪ್ರಾಣವು ಎಲ್ಲಿದ್ದರೂ ವ್ಯೂಹ ಕಟ್ಟುತ್ತಲೇ ಇರುವುದು. ವ್ಯೂಹವು ತಕ್ಕಷ್ಟು ಘನವಾದರೆ ಅದಕ್ಕೆ ವ್ಯಕ್ತಿತ್ವವು ಬರುವುದು ಆ ವ್ಯಕ್ತಿತ್ವವು ಕಾರ್ಯೋನ್ಮುಖವಾಗಲು ಅದಕ್ಕೆ ಮೂಲವು ವಿಸ್ಮರಣವಾಗಬೇಕು. ಇದನ್ನು "ಮಹಾಬ್ರಾಹ್ಮಣ"ದಲ್ಲಿ ವಿಶ್ವಾಮಿತ್ರನು ಕಾವೇರೀ ತೀರದಲ್ಲಿ ತಪಸ್ಸು ಮಾಡುವ ಘಟ್ಟದಲ್ಲಿ ಹೇಳಿದೆ )

೨೩. ಸ್ವಪ್ನಾದಿಗಳಲ್ಲಿ ನಡೆಯುವ ವ್ಯಾಪಾರದ ಕರ್ತೃವಿನಂತೆ, ಬೋಧವು ಅಬೋಧವನ್ನು ಪಡೆದು ಪಿಂಡತೆಯನ್ನು ಪಡೆಯುವುದು. ತದ್ಗ್ರಾಹಕವಾಗಿ ಚಿತ್ತವಾಗಿ ದೇಹವನ್ನು ಕಟ್ಟುವುದು.

೨೪. ಇಷ್ಟೆಲ್ಲಾ ಅವಸ್ಥೆಗಳನ್ನು ಪಡೆದರೂ ಬೋಧರೂಪವಾದ ಚಿತ್ತಿಗೆ ಅನ್ಯತೆಯು ಬರುವುದಿಲ್ಲ ಭೇದಗಳಾಗಿವೆಯಲ್ಲ ಎಂದರೆ ಅವೆಲ್ಲವೂ ಶಬ್ದಕಲ್ಪನಗಳಿಂದಲೇ ಆದುದು ಕೇವಲ ಕಲ್ಪಿತಗಳು.

೨೫. ಬೋಧದ ಅಂತಃ ಆಗಲಿ ಬಹಿಃ ಆಗಲಿ, ಬೇರೆ ಬೇರೆ ಅರ್ಥಗಳಾಗಿ ಕಾಣುವುದೆಲ್ಲ ಆತ್ಮವೇ! (ಆದರೆ ಮನಸ್ಸು ಹೀಗಲ್ಲ ) ಮನಸ್ಸು ಅಂತಃ ಒಂದು ರೀತಿಯಾಗಿ, ಬಹಿಃ ಇನ್ನೊಂದು ರೀತಿಯಾಗಿ ಕಾಣುವುದು ಆದರಿಂದ ಆತ್ಮನು ಮನಸ್ಸಿನ ಹಾಗಲ್ಲ.

೨೬. ಬೋಧವು ಆಕಾಶ ಕಲ್ಪವು. ಅದರಿಂದ ಕಾಲ, ಆಕಾಶ, ಮೊದಲಾದವೆಲ್ಲ ಅದರ ದೇಹವು ಪದಾರ್ಥಗಳಾಗಿ ಕಾಣಿಸುವವೆಲ್ಲ ಆತ್ಮಗಳೇ! ಇದು ಸ್ವಪ್ನ

ಬಾಹ್ಯಾರ್ಥತಾ ನಾಂತರತ್ವಂ ತದ್ವಶ್ಯೋಧವಶಾದ್ವ್ರಜೇತ್ ।
ನಾಶಾದೃಶ್ಯಂ ಹಿ ಬೋಧತ್ವಂ ಗಂತುಂ ಶಕ್ತಂ ಜಡಂ ಕ್ವಚಿತ್ ೨೭ ॥

ಬೋಧೋ ದೃಶ್ಯದಶಾಂ ನೈತಿ ಪ್ರಾಪ್ತೋ ವಾಪಿ ಚ ತಾಂ ಸ್ಥಿತಿಂ ।
ಸ ಯಥಾಸ್ಥಿತಮೇವಾಸ್ತೇ ಮನಾಗಪ್ಯೇತಿ ನಾನ್ಯತಾಂ ॥ ೨೮

ಅತ್ಯರ್ಥಂ ಶುದ್ಧಬೋಧೈಕಪರಿಣಾಮೇ ಕೃತೋದಯೇ ।
ಬೋಧಾಬೋಧಾರ್ಥಶಬ್ದಾನಾಂ ಶ್ರುತಿರಪ್ಯಸ್ತಮೇಷ್ಯತಿ ॥ ೨೯

---

ದಂತಲ್ಲ: ಏಕೆಂದರೆ ಆಕಾಶವೇ ಅರ್ಥರೂಪವಾಗುವುದು ಅಲ್ಲಿ. (ಇಲ್ಲಿ ಆತ್ಮವು ತನ್ನ ರೂಪವನ್ನು ಬಿಡದೆ ಬೇರೊಂದು ರೂಪವಾಗಿ ಕಾಣುವುದು.)

೨೭. ಬಾಹ್ಯಾರ್ಥತೆಯು ಬಾಹ್ಯಾರ್ಥ ರೂಪ ಜ್ಞಾನದಿಂದ ಆಂತರತ್ವವನ್ನು ಹೊಂದಲಿ ಎಂದರೆ, ಅದೂ ಸಾಧ್ಯವಿಲ್ಲ: ಏಕೆಂದರೆ, ಜಡವು ಜ್ಞಾನತ್ವವನ್ನು ಹೊಂದಲು, ಅದು ಸದೃಶವಲ್ಲ . ಅಸದೃಶ

(ಚಿಜ್ಜಡ ಬಾಹ್ಯಾರ್ಥಾಕಾರೇಣ ನ ವಿಕ್ರಿಯತಾಂ । ಜಡಮೇವ ತತ್ತ್ವ ಬೋಧವಶಾತ್ ಆಂತರ ಚಿದಾಕಾರತ್ವೇನ ವಿಕ್ರಿಯತಾಂ । ತತ್ರಾಹ—ಹಿ ಯಸ್ಮಾತ್, ಜಡಂ ಅಸಾದೃಶ್ಯಂ ಅತ್ಯಂತ ವಿಸದೃಶಂ ಇತ್ಯರ್ಥಃ—ತಾ ಪ್ರ.)

(ಹಿಂದೆ ಚಿತ್ತು ಜಡವಾಗುವುದಿಲ್ಲ ಎಂದು ಹೇಳಿ, ಈಗ ಜಡವು ಚಿತ್ತೂ ಆಗುವುದಿಲ್ಲ ಎಂಬ ವಾದವನ್ನು ಮಂಡಿಸಲಾಗಿದೆ )

೨೮. ಬೋಧವು ಎಂದಿಗೂ ದೃಶ್ಯವಾಗುವುದೇ ಇಲ್ಲ: ಒಂದು ವೇಳೆ ಆದರೂ ಅದು ಯಥಾಸ್ಥಿತವಾಗಿ ತಾನಿದ್ದಂತೆ ಇರುವುದೇ ಹೊರತು, ಅನ್ಯತೆಯನ್ನು ಪಡೆಯುವುದಿಲ್ಲ.

(ತಾಂದೃಶ್ಯ ಸ್ಥಿತಿಂ ವಿವರ್ತವಶಾತ್ ಪ್ರಾಪ್ತೋಽಪಿ ಬೋಧಃ ಯಥಾಸ್ಥಿತಮ ವಿಕೃತ ಏವ ಆಸ್ತೇ ॥—ತಾ ಪ್ರ )

೨೯. ಅರ್ಥವನ್ನು ದಾಟಿದ ಮೇಲೆ ಅದು ಶುದ್ಧ ಬೋಧದಲ್ಲಿಯೇ ಪರಿಣಾಮ

ಆತಿವಾಹಿಕದೇಹಾನಾಂ ಚಿತ್ತಾನಾಮೇವ ಜಾಯತೇ ।
ಆಧಿಭೌತಿಕತಾಬೋಧೋ ದೃಢಭಾವನಯಾ ಸ್ವಯಾ ॥ ೩೦ ॥

ಆಕಾಶವಿಶದೈಶ್ಚಿತ್ತೈರ್ಭಾವಿತೈಷಾತಿವಾಹಿಕೈಃ ।
ಆಧಿಭೌತಿಕತಾ ಮಿಥ್ಯಾ ನಟೈರಿವ ಪಿಶಾಚತಾ ॥ ೩೧ ॥

ಭ್ರಾಂತಿರಭ್ರಮಣಾಭ್ಯಾಸಾತ್ಪ್ರಜ್ಞಾತೈಷೋಪಶಾಮ್ಯತಿ ।
ನೋನ್ಮತ್ತೋಽಸ್ಮೀತಿ ಸಂಬೋಧಾಚ್ಛಾಮ್ಯತ್ಯುನ್ಮತ್ತತಾ ಕಿಲ ॥ ೩೨ ॥

---

ವನ್ನು ಪಡೆದ ಮೇಲೆ, ಬೋಧ-ಅಬೋಧ ಎಂಬ ಅರ್ಥಗಳನ್ನು ಕುರಿತು ಹೇಳುವ ಶಬ್ದಗಳುಳ್ಳ ಶ್ರುತಿಯೂ ಅಸ್ತವಾಗುವುದು

(ಸಪ್ತಮ ಭೂಮಿಕಾ ವಿಶ್ರಾಂತಿ ಪರ್ಯಂತೇ ಪರಿಣಾಮೋ—ತಾ. ಪ್ರ.)

೩೦. ಆತಿವಾಹಿಕದೇಹಗಳಾದ ಚಿತ್ತಗಳಿಗೆ ಆಧಿ ಭೌತಿಕತಾ ಜ್ಞಾನವು ಎಂದರೆ ತಾನು ಭೂತ ಸಂಘಾತವೆಂಬ ಜ್ಞಾನವು ದೃಢಭಾವನೆಯಿಂದ ಉಂಟಾಗುವುದು. ಆ ದೃಢ ಭಾವನೆಯು ತನ್ನದೇ! ಆ ಚಿತ್ತಗಳದೇ!

(ದೃಶ್ಯಸ್ಯ ಮನೋ ಭಾವನಯೈವ ದೃಢೀಭಾವ ಇವ, ತಯೈವ ಶಿಥಿಲೀಭಾವ, ಇತ್ಯಾಹ—ತಾ. ಪ್ರ.)

೩೧ ಆಕಾಶದಂತೆ ಶುದ್ಧವಾದ ಚಿತ್ತಗಳು ಆತಿವಾಹಿಕಗಳು ಇವುಗಳು ಆಧಿ ಭೌತಿಕತೆಯನ್ನು ಭಾವಿಸಿಕೊಂಡಿರುವುವು ಅದರಿಂದ ಇವೆಲ್ಲ ಮಿಥ್ಯಾ! ನಟರು ಪಿಶಾಚಿಗಳಂತೆ ನಟಿಸಲು ಪಿಶಾಚತೆಯನ್ನು ಕಲ್ಪಿಸಿಕೊಳ್ಳುವುದಿಲ್ಲವೆ? ಹಾಗೆ ಇದು

೩೨. ಈ ಭ್ರಾಂತಿಯು ಅಭ್ರಾಂತಿಯ ಅಭ್ಯಾಸದಿಂದ ಅರಿವಾಗಲು ಉಪಶಾಂತವಾಗುವುದು. ನಾನು ಉನ್ಮತ್ತನಲ್ಲ ಎಂದು ತಿಳಿದು ಬಂದರೆ ಉನ್ಮತ್ತತೆಯು ಶಾಂತವಾಗುವುದಲ್ಲವೆ?

ಭ್ರಾಂತೇಃ ಸ್ವಯಂ ಪರಿಜ್ಞಾನಾದ್ವಾಸನಾ ವಿನಿವರ್ತತೇ ।
ಸ್ವಪ್ನೇ ಸ್ವಪ್ನತಯಾ ಬುದ್ಧೇ ಕಸ್ಯ ಸ್ಯಾತ್ಕಿಲ ಭಾವನಾ ॥ ೩೩ ॥

ವಾಸನಾತಾನವೇನೈವ ಸಂಸಾರ ಉಪಶಾಮ್ಯತಿ ।
ವಾಸನೈವ ಮಹಾಯಕ್ಷಿಣ್ಯೇತಚ್ಛೇದಪರಾ ಬುಧಾಃ ॥ ೩೪ ॥

ಅಜ್ಞಾನೋನ್ಮತ್ತತಾ ಪುಂಸಾಂ ಯಥಾಭ್ಯಾಸೇನ .ಭಾವಿತಾ ।
ತಥೈವ ಬೋಧಾಭ್ಯಾಸಾತ್ಸಾ ಕಾಲೇನೋಪಶಾಮ್ಯತಿ ॥ ೩೫ ॥

ಆತಿವಾಹಿಕದೇಹೋಽಯಮಾಧಿಭೌತಿಕತಾಂ ಯಥಾ ।
ನೀಯತೇ ಭಾವನಾಂ ತಜ್ಜ್ಞೈರ್ಬೋಧಸತ್ತಾಪ್ರಸಾದತಃ ॥ ೩೬

೩೩. ಭ್ರಾಂತಿಯೆಂದು ತಿಳಿದು ಕೂಡಲೇ ವಾಸನೆಯು ಸ್ವಯಂ ಹಿಂತಿರುಗು ವುದು ಸ್ವಪ್ನವನ್ನು ಸ್ವಪ್ನವೆಂದು ತಿಳಿದರೆ, ಅದರಲ್ಲಿ ಯಾರಿಗೆ ನಂಬಿಕೆಯು ಬರುವುದು ?

ಭಾವನಾ ಅರ್ಥ ಸತ್ಯತಾ ವಾಸನಾ—ತಾ. ಪ್ರ.)

೩೪. ವಾಸನೆಯು ಕ್ಷೀಣವಾಗುತ್ತ ಬಂದ ಹಾಗೆಲ್ಲಾ ಸಂಸಾರವು ಶಾಂತ ವಾಗುತ್ತ ಬರುವುದು. ಸಂಸಾರವನ್ನು ಕಟ್ಟಿರುವ ಮಹಾಯಕ್ಷಿಣಿಯು ವಾಸನೆಯೇ ಹೊರತು ಇನ್ನು ಯಾರೂ ಅಲ್ಲ: ಅದರಿಂದಲೇ ತಿಳಿದವರು ವಾಸನೆಯನ್ನು ಕ್ಷೀಣ ಮಾಡುವುದರಲ್ಲಿಯೇ ನಿರತರಾಗಿರುವರು

೩೫. ಅಜ್ಞಾನದಿಂದ ಬಂದಿರುವ ಈ ಉನ್ಮತ್ತತೆಯು ಮಾನವರಿಗೆ ಹೇಗ ಅಭ್ಯಾಸದಿಂದ ಗೌರವವನ್ನು ಪಡೆಯುತ್ತಿರುವುದೋ ಹಾಗೆಯೇ ಜ್ಞಾನವನ್ನು ಚೆನ್ನಾಗಿ ಅಭ್ಯಾಸ ಮಾಡುತ್ತ ಬಂದರೆ ಕಾಲಕ್ರಮದಲ್ಲಿ ಶಾಂತವಾಗುವುದು

೩೬. ಆತಿವಾಹಿಕ ದೇಹವು ಹೇಗೆ ಆಧಿ ಭೌತಿಕತೆಯನ್ನು ಹೊಂದುವುದೊ ಹಾಗೆಯೇ ಬಲ್ಲವರು ಅದು ಭಾವನೆ (ಬ್ರಹ್ಮಾಹಂಭಾವ ವಾಸನಾ ಮಾತ್ರತೆ ಯನ್ನೂ ಬೋಧ ಸತ್ತಾ ಪ್ರಸಾದದಿಂದ ಹೊಂದುವಂತೆ ಮಾಡುವರು.

ಆತಿವಾಹಿಕದೇಹೋಽಪಿ ನೀತ್ವಾ ಜೀವಪದಂ ತಥಾ ।
ದೃಢೇನಬೋಧಾಭ್ಯಾಸೇನ ನೇತವ್ಯೋ ಬ್ರಹ್ಮತಾಮಪಿ ॥ ೩೭ ॥

ಸ್ವವಸ್ತುವಚ್ಚೇದುತ್ಪತ್ತಿರ್ಬುಧ್ಯತೇ ಬೋಧರೂಪಿಣೀ ।
ತದಾತಿವಾಹಿಕೀ ಬುದ್ಧಿಃ ಕಥಮಿತ್ಯಪಿ ಬುಧ್ಯತೇ ॥ ೩೮ ॥

---

೩೭ ಆತಿವಾಹಿಕ ದೇಹವು ಮೊದಲು ಜೀವ ಪದವನ್ನು ಹೊಂದುವಂತೆ ಮಾಡಿ ದೃಢವಾದ ಜ್ಞಾನಾಭ್ಯಾಸದಿಂದ ಬ್ರಹ್ಮತೆಯನ್ನು ಹೊಂದುವಂತೆ ಮಾಡಬೇಕು.

೩೮ (ಉತ್ಪನ್ನಗಳಾದ ಬಾಹ್ಯ ಭಾವಗಳನ್ನೂ ಆಧ್ಯಾತ್ಮಿಕಭಾವಗಳನ್ನು ಹಿಡಿದು ಅವುಗಳ ಸಂಬಂಧವಾದ ರಾಗಾದಿಭಾವಗಳನ್ನು ಉದ್ಭಾವನ ಮಾಡಿ ಆತ್ಮನು ಅತಿವಹನ ಮಾಡುವುದು ಅತಿವಾಹವು. ಅದೇ ವಾಸನಾಸಂಘವು ಅದರಿಂದಲೇ ಹುಟ್ಟಿದುದು ಲಿಂಗದೇಹವು. ಅದನ್ನೇ ಆತಿವಾಹಿಕವೆನ್ನುವರು.) ಉತ್ಪತ್ತಿಯಾದ ವಸುವು ಮೂಲವಸ್ತುವಿನಂತೆಯೇ ಇರುವುದಾದರೆ, ಬುದ್ಧಿಯೂ ಬೋಧರೂಪಿಣಿಯಾಗಿಯೇ ಇರಬೇಕು ಎಂಬ ನ್ಯಾಯವನ್ನು ಹಿಡಿದು ನೋಡಿದರೆ ಆತಿವಾಹಿಕವಾದ ಬುದ್ಧಿಯು ಹೇಗೆ ಬಂತು ಎಂದು ವಿಚಾರಮಾಡಿ ನೋಡಿದರೆ ಅದರ ಸ್ವರೂಪವೂ ತಿಳಿಯುವುದು.

(ಸರ್ವ ಭಾವಾನಾಂ ಪ್ರಥಮೋವಿಕಾರ ಉತ್ಪತ್ತಿಃ। ಸಾ ಚೇದ್ವಿಮೃಸ್ಯ ಸ್ವವಸ್ತುವತ್ ಕೂಟಸ್ಥಾ ಬೋಧ ಮಾತ್ರ ರೂಪಿಣೀ ಬುಧ್ಯತೇ ತದಾ ಆತಿವಾಹಿಕೀ ಬುದ್ಧಿರಪಿ ಕಥಂ ಕಿಂತತ್ವಾ ಇತಿ ತುಲ್ಯನ್ಯಾಯೇನ ಬುಧ್ಯತೇ। ನ ತಾವತ್ ಕಸ್ಯ ಚಿದ್ಭಾವಸ್ಯ ಕೂಟಸ್ಥ ಬೋಧ ಸ್ವಭಾವ ವ್ಯತಿರೇಕೇಣೋತ್ಪತ್ತಿರ್ನಿರೂಪಯಿತುಂ ಶಕ್ಯಾ। ತಥಾ ಹಿ। ಸಾ ಹಿ ಪ್ರಾಕ್ ಸ್ವಯಮುತ್ಪದ್ಯ ಭಾವಾನ್ ವಿಶಿಷ್ಯಾದನುತ್ಪದ್ಯ ವಾ? ದ್ವಿತಿಯೇ ಶೃಂಗಮಪಿ ಶಶಂ ವಿಶಿಷ್ಯಾತ್ ಆದ್ಯೇ ಸ್ವಯಮುತ್ಪತ್ತ್ಯಾದಿಭಿರ್ವಿಶೇಷ್ಯಮಾಣಾ ಭಾವ ಏವ ಸ್ಯಾನ್ನಭಾವ ವಿಕಾರಃ। ಏವಂ ತದುತ್ಪತ್ತಿರಪೀತ್ಯನವಸ್ಥಾದೋಷಾಭ್ಯುಪಗಮೇ ನಿರ್ವಿಕಾರ ಭಾವಾನವಸ್ಥೈವ ಸ್ಯಾದಿತಿ ನೋತ್ಪತ್ತ್ಯಾದಿ ವಿಕಾರಾಃ ಕಸ್ಯಚಿತ್ ಕೇನಚಿತ್ ನಿರೂಪಯಿತುಂ ಶಕ್ಯಾ ಇತಿ ಕೂಟಸ್ಥ ಬೋಧರೂಪಾ ಏವ ತೇ ಇತಿ ಬುದ್ಧೇಃ ಕಃ ಕಸ್ಮೈ ಕಮತಿವಹೇತ್ ಕಿಂತದತಿವಹನಂ ಕಾ ವಾ ತದ್ಬುದ್ಧಿರನ್ಯಾ ಸ್ಯಾದಿತಿ ನಾಪಿ ತತ್ವತೋ ಬುಧ್ಯತ— ಇತ್ಯರ್ಥಃ—ತಾ ಪ್ರ)

ನೋಚೇತ್ತತ್ಪ್ರತಿವಾಕ್ಯಾರ್ಥಾತ್ತದ್ಗ್ರಂಥಿರ್ವಿನಿವರ್ತತೇ ।
ಭೂತೋತ್ಸಾದನಸೂತ್ರಸ್ಯ ಪ್ರತಿಪತ್ತ್ಯುಪದಂ ಯಥಾ ॥ ೩೯ ॥

ಜಗದ್ಬೋಧೈಕತಾಂ ಬುದ್ಧ್ವಾ ಬೋದ್ಧವ್ಯಾ ತಾವದವ್ರಣಂ ।
ಅತ್ಯಂತ ಪರಿಣಾಮೇನ ಯಾವತ್ಸಾಪಿ ನ ಬುಧ್ಯತೇ ॥ ೪೦ ॥

ಸಬಾಹ್ಯಾಭ್ಯಂತರೇ ಚಿತ್ತೇ ಶಾಂತೇ ಭಾತಿ ಸ್ವಭಾವತಾ ।
ಶೀತಲಾಂ ವ್ಯೋಮನಿರ್ಭಾಸಾಂ ತಾಮೇವಾಶ್ರಿತ್ಯ ಶಾಮ್ಯತಾಂ ॥ ೪೧ ॥

೩೯ ಹಾಗಿಲ್ಲವಾದರೆ, ಅದಕ್ಕೆ ವಿರುದ್ಧವಾದ(ಮಹಾ) ವಾಕ್ಯಗಳ ಅರ್ಥದಿಂದ ಗ್ರಂಥಿಯು ಒಡೆಯುವುದೆಂದರೆ, ಭೂತಗಳನ್ನು ಬಿಡಿಸುವಾಗ ಉಪಯೋಗಿಸುವ ಮಂತ್ರಗಳಲ್ಲಿ ಬರುವ ಹುಂಫಟ್ ಮೊದಲಾದ ಪ್ರತಿಪತ್ತ್ಯುಪದಗಳಂತೆ ಆ ವಾಕ್ಯಗಳೆಲ್ಲ ಆಗಬೇಕಾದೀತು

೪೦. ಜಗತ್ತೂ ಬೋಧವೂ ಒಂದೇ ಎಂಬುದನ್ನು ತಿಳಿದು ಅನಂತರ ಅವ್ರಣನಾದ ಬ್ರಹ್ಮವನ್ನು ತಿಳಿಯಬೇಕು ಅತ್ಯಂತವಾಗಿ ಪರಿಣಾಮವಾಗಿ ನಿಶ್ಶೇಷವಾಗಿ ಆ ಬೋಧವೂ ಉಳಿಯದಂತಾಗಬೇಕು.

(ತತ್ಪದಾರ್ಥಶೋಧಾಯ ವಾಚಾರಂಭಣ ನ್ಯಾಯೇನ ಪ್ರಥಮಂ ಜಗತ್ಕಾರಣೇಶ್ವರ ಸ್ವರೂಪ ಬೋಧೈಕತಾಂ ಬುದ್ಧ್ವಾ ತದನಂತರಂ ತ್ವಂ ಪದಾರ್ಥಶೋಧಾಯ ಪ್ರತ್ಯಕ್ಚಿದಪಿ "ಸಪರ್ಯಗಾಚ್ಛುಕ್ರಮಕಾಯಮವ್ರಣಂ" ಇತಿ ಶ್ರುತಿ ದರ್ಶಿತ ದಿಶಾ ಅಸಂಗಾದ್ವಯಾ ಬೋದ್ಧವ್ಯಾ । ಕಿಯತ್ಕಾಲಂ ಪದಾರ್ಥ ದ್ವಯ ಶೋಧನ ಪರೇಣ ಭಾವ್ಯಂ ? ತತ್ರಾಹ—ಯಾವತ್ಪದಾರ್ಥ ಯೋರಖಂಡ ರಸೈಕ್ಯವಾಕ್ಯಾರ್ಥರೂಪೇಣ ಅತ್ಯಂತ ಪರಿಣಾಮೇನ ಸಾ ಅಖಂಡಾಕಾರ ವೃತ್ತಿರಪಿ ನ ಬುದ್ಧ್ಯತೇ ತಾವತ್ಕಾಲಂ—ತಾ ಪ್ರ )

೪೧. ಬಾಹ್ಯಾಭ್ಯಂತರಗಳೆಂಬ ಭೇದವನ್ನು ವಹಿಸಿರುವ ಚಿತ್ತವು ಶಾಂತವಾಗಲು ಸ್ವಭಾವತೆಯು ಪ್ರಕಟವಾಗುವುದು. ಪರಮ ಶಾಂತವೂ ಆಕಾಶದಂತೆ ನಿರ್ಭಾಸವೂ ಆದ ಆ ಸ್ವಭಾವತೆಯನ್ನು ಆಶ್ರಯಿಸಿ ಶಾಂತವಾಗಬೇಕು

ಜ್ಞಾನವಾನ್ಜ್ಞಾನಯಜ್ಞಸ್ಥೋ ಧ್ಯಾನಯೂಪಂ ವಿರೋಪಯನ್ ।
ಜಗದ್ವಿಜಿತ್ಯ ಜಯತಿ ಸರ್ವತ್ಯಾಗೈಕದಕ್ಷಿಣಃ ॥ ೪೨ ॥

ಪತತ್ವಂಗಾರವರ್ಷೇ ಚ ವಾತಿ ವಾ ಪ್ರಲಯಾನಿಲೇ ।
ಭೂತಲೇ ವ್ರಜತಿ ವ್ಯೋಮ್ನಿ ಸಮಮಾಸ್ತೇ ಜ್ಞ ಆತ್ಮನಿ ॥ ೪೩ ॥

ವೈತೃಷ್ಣ್ಯಶಾಂತಮನಸೋ ನಿರೋಧಮಲಮೇಯುಷಃ ।
ಸ್ಥಿತಿವಜ್ರಸಮಾಧಾನಂ ವಿನಾ ನಾನ್ಯೋಪಪದ್ಯತೇ ॥ ೪೪ ॥

ಯಥಾ ಬಾಹ್ಯಾರ್ಥ ವೈತೃಷ್ಣ್ಯೋ ನೋಪಶಾಮ್ಯತ್ಯಲಂ ಮನಃ ।
ನ ತಥಾ ಶಾಸ್ತ್ರಸಂದರ್ಭೈರ್ನೋಪದೇಶತಪೋದಮೈಃ ॥ ೪೫ ॥

---

೪೨. ಜ್ಞಾನವಂತನಾಗಿ, ಜ್ಞಾನಯಜ್ಞ ದೀಕ್ಷಿತನಾಗಿ, ಧ್ಯಾನಯೂಪವನ್ನು ನಿಲ್ಲಿಸಿ, ಜಗತ್ತನ್ನು ಜಯಿಸಿ, ಸರ್ವತ್ಯಾಗವೆಂಬ ಒಂದೇ ದಕ್ಷಿಣೆಯನ್ನು ಕೊಟ್ಟು, ಗೆಲ್ಲುವನು.

(ಸ ಏವ ಮುಖ್ಯೋ ವಿಶ್ವಜಿದಾಖ್ಯೋ ಜ್ಞಾನಯಜ್ಞ ಇತ್ಯಾಹ—ತಾ.ಪ್ರ.)

೪೩. ಬೆಂಕಿಯ ಮಳೆ ಸುರಿಯುತ್ತಿದ್ದರೂ, ಪ್ರಲಯವಾಯುವು ಬೀಸುತ್ತಿದ್ದರೂ, ನೆಲವೆಲ್ಲವೂ ಆಕಾಶಕ್ಕೆದ್ದು ಹೋಗುತ್ತಿದ್ದರೂ, ಬ್ರಹ್ಮಜ್ಞನು ಆತ್ಮನಲ್ಲಿ ನಿರ್ವಿಕಾರನಾಗಿಯೇ ಇರುವನು

೪೪. ವೈತೃಷ್ಣ್ಯದಿಂದ ಮನಸ್ಸನ್ನು ಶಾಂತಗೊಳಿಸಿ, ನಿರೋಧ ಮಲವನ್ನು ಕಳೆದು ವಜ್ರ ಸಮಾಧಿಯನ್ನು ಸ್ಥಿರಗೊಳಿಸುವುದೊಂದೇ ದಾರಿ! ಅದನ್ನು ಬಿಟ್ಟು ಇನ್ನು ಹೇಗೂ ಈ ಸ್ಥಿತಿಯನ್ನು ಸಂಪಾದಿಸಲಾಗುವುದಿಲ್ಲ.

೪೫ ಬಾಹ್ಯಾರ್ಥದಲ್ಲಿ ವಿತೃಷ್ಣನಾಗುವುದೊಂದೇ ಮನಸ್ಸು ಶಾಂತವಾಗುವ ಹಾದಿ ಶಾಸ್ತ್ರ ಸಂದರ್ಭಗಳಿಂದಲಾಗಲೀ, ಉಪದೇಶ, ತಪಸ್ಸು, ದಮ (ಮೊದಲಾದವು)ಗಳಿಂದಲಾಗಲೀ ಆ ಕಾರ್ಯವು ಆಗುವುದಿಲ್ಲ.

ಮನಸ್ತೃಣಸ್ಯ ಸರ್ವಾರ್ಥವೈತೃಷ್ಣ್ಯಾಗ್ನಿರ್ವಿಬೋಧಿತಃ ।
ಸರ್ವತ್ಯಾಗಾನಿಲೈಃ ಸಂಪದತ್ಯಾಪದಿತಿ ಭಾವನಾತ್ ॥ ೪೬ ॥

ಬಹಿರಂತಶ್ಚ ಮೋಹಶ್ಚ ಪಿಂಡಗ್ರಾಹೋಽರ್ಥವೇದನಂ ।
ಜ್ಞಪ್ತಿರೇವೇತಿ ಕಚತಿ ಜ್ಞಾತ್ವಾ ಮಣಿರಿವಾತ್ಮನಿ ॥ ೪೭ ॥

ನರನಾಗಾಸುರಾಗಾರಗಿರಿಗಹ್ವರದೃಷ್ಟಿಭಿಃ ।
ಚಿತಿರೇವೇತಿ ವಿಸೃತಾ ಧೂಮೋಽಂಬುದತಯೇವ ಖೇ ॥ ೪೮ ॥

ವೇಪಂತೇ ಚಿದ್ದ್ರವತ್ವೇನ ಬ್ರಹ್ಮಾಂಡಜಡಭಾಂಡಗಾಃ ।
ಸ್ವವಿವರ್ತತರಂಗಿಣ್ಯೋ ಜೀವಶಕ್ತ್ಯಾ ಪತದ್ರಸಾಃ ॥ ೪೯ ॥

---

೪೬. ಸಂಪತ್ತುಗಳೆಲ್ಲ ಆ ಪದಗಳೇ ಎಂದು ದೃಢವಾಗಿ ಭಾವಿಸುವುದರಿಂದ, ಸರ್ವತ್ಯಾಗವೆಂಬ ಗಾಳಿಯು ಬೀಸುವ ಹಾಗೆ ಮಾಡುವುದರಿಂದ, ಮನಸ್ಸು ಎಂಬ ತೃಣರಾಶಿಯಲ್ಲಿ ಸರ್ವಾರ್ಥ ವೈತೃಷ್ಣವೆಂಬ ಅಗ್ನಿಯು ಹುಟ್ಟುವುದು

೪೭. ಆಗ ಬಹಿಃ ಅಂತಶ್ಚ ತುಂಬಿರುವ ಮೋಹವು ಪಿಂಡಗ್ರಹ ಅರ್ಥ ವೇದನವೂ ಸರ್ವವೂ ಜ್ಞಪ್ತಿಯೇ ಎಂಬ ಅರ್ಥವು ತನ್ನಲ್ಲಿಯೇ ವಜ್ರಮಣಿಯಂತೆ ಹೊಳೆಯುವುದು

(ಬಹಿರಂತಶ್ಚ ಪ್ರಸಿದ್ಧೋ ಯೋ ಮೋಹಾಂಧಕಾರೋ ಯಶ್ಚ ತತ್ಪ್ರಯುಕ್ತ ಶ್ಚೋರಯಕ್ಷಾದಿ ಕಲ್ಪನಾತುಲ್ಯೋ ಬ್ರಹ್ಮಾಂಡ ಭೂತ ಭೌತಿಕ ಮೂರ್ತಲಕ್ಷಣ ಪಿಂಡಗ್ರಾಹೋ ಯಚ್ಚ ತತ್ಪ್ರಯುಕ್ತಂ ಚಕ್ಷುರಾದಿನಾ ಶಬ್ದಾರ್ಥವೇದನಂ ತತ್ಸ ರ್ವಂಜ್ಞಪ್ತಿ ಶ್ಚಿದಾತ್ಮೈವ–ಇತ್ಯಖಂಡಾದ್ವಯ ಸ್ವಭಾವೇನೈವಕಚತಿ ।—ತಾ.ಪ್ರ )

೪೮. ಆಕಾಶದಲ್ಲಿ ಧೂಮವು ಮೋಡವಾಗುವ ಹಾಗೆ, ಚಿತಿಯೇ ನರ, ನಾಗ, ಅಸುರ, ಆಗಾರ, ಗಿರಿ, ಗಂಹ್ವರ, ಮುಂತಾದ ನಾನಾ ಆಗಿ ಚಿತ್ರ ವಿಚಿತ್ರ ರೂಪ ಗಳಿಂದ ಹರಡಿರುವುದು.

೪೯. ಬ್ರಹ್ಮಾಂಡವೆಂಬ ಜಡ ಭಾಂಡದಲ್ಲಿರುವ ಸರ್ವವೂ ಚಿತ್ತಿನ ದ್ರವದಿಂದ ಪೂರ್ಣವಾಗಿರುವುದರಿಂದಲೇ ಆಡುತ್ತಿರುವುವು. ಆ ಚಿತ್ತಿನ ವಿವರ್ತದಿಂದಲೇ ಆಗಿರುವ ತರಂಗಿಣಿಗಳೆಲ್ಲವೂ ಚಿತ್ಸ್ವರೂಪವಾದ ಜೀವಶಕ್ತಿ (ಪ್ರಾಣ, ಯಿಂದಲೇ ಬದುಕಿರುವುವು.

ಜೀವಕಾಜೀರ್ಣಶಫರೀ ವ್ಯೋಮವಾರಿವಿಹಾರಿಣೀ ।
ಮೋಹಜಾಲೇನ ವಲಿತಾ ವಸ್ಮರತ್ಯಾತ್ಮನಿ ಸ್ಥಿತಿಂ ॥ ೫೦ ॥

ಘನೀಭೂತಾ ಘನತ್ವೇನ ಚಿದ್ಘನಾ ಗಗನಾಂಗಣೇ ।
ನಾನಾಪದಾರ್ಥರೂಪೇಣ ಸ್ಫುರತಿ ಸ್ವಾತ್ಮನಾತ್ಮನಿ ॥ ೫೧ ॥

ಸರ್ವ ಏವ ಸಮಾ ಜೀವಾ ವಾಸನಾಮಂತರೇಣ ಚ ।
ಶುಷ್ಕಪರ್ಣವದುಡ್ಡೀನಾ ಜಡಾಃ ಶ್ವಸನವೇಣವಃ ॥ ೫೨ ॥

ಆಹೃತ್ಯ ಪೌರುಷಬಲಾನ್ಯವಜಿತ್ಯ ತಂದ್ರೀ-
ಮುತ್ಥಾಯ ತರ್ಜಿತಸಮರ್ಜಿತ ವಾಸನೌಘಂ
ಸಂಸಾರವಾಶಘನಪಂಜರಮಂಜಸೈವ ।
ಭಂಕ್ತ್ವಾಭ್ಯುದೇಯಮತಿನಾ ಜ್ಞನಮೇನ ಭಾವ್ಯಂ ॥ ೫೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು**
**ನಿರ್ವಾಣ ಪ್ರಕರಣೇ "ಸರ್ವೋಪಶಾಂತಿ" ನಾಮ**
**ಏಕೋನಪಂಚಾಶಃ ಸರ್ಗಃ**

---

೫೦. ಆದರೆ, ಜೀವವೆಂಬ ಮುದಿ ಮೀನು, ಆಕಾಶವೆಂಬ ನೀರಿನಲ್ಲಿ ವಿಹರಿಸುತ್ತಾ, ಮೋಹವೆಂಬ ಬಲೆಯಲ್ಲಿ ಸಿಕ್ಕಿಕೊಂಡು ತಾನು ಆತ್ಮನಲ್ಲಿ ಇರುವುದನ್ನು ಮರೆತುಬಿಟ್ಟಿರುವುದು

೫೧. ಆಕಾಶವೆಂಬ ಅಂಗಳದಲ್ಲಿ ಚಿದ್ಘನವೇ ಸ್ವಾತ್ಮನಾ, ಸ್ವಾತ್ಮನಿ, ನಾನಾ ಪದಾರ್ಥ ರೂಪದಿಂದ ಘನೀಭೂತವಾಗಿ, ಘನರೂಪದಿಂದಲೇ ವ್ಯಾಪಾರಮಾಡುತ್ತಿರುವುದು.

೫೨. ವಾಸನೆಯೊಂದನ್ನು ಬಿಟ್ಟು ಮಿಕ್ಕೆಲ್ಲದರಲ್ಲೂ ಜೀವರು ಒಬ್ಬರಿಗೆ ಒಬ್ಬರು ಸಮರೇ! ಗಾಳಿಯಿಂದ ವೇಣುವಿನಲ್ಲಿ ಬೇರೆ ಬೇರೆ ಸ್ವರಗಳು ಹೊರಡುವಂತೆ, ಈ ವಾಸನೆಯೆಂಬ ಗಾಳಿಯಿಂದ ಈ ಜೀವರು ತರಗೆಲೆಗಳಂತೆ ಹಾರಿಹೋಗಿ ಎಲ್ಲೆಲ್ಲಿಯೋ ಜಡರಂತೆ ಬೀಳುವರು

೫೩. ಪೌರುಷದಿಂದ ಬಲವನ್ನು ಸಂಪಾದಿಸಿ, ಆಲಸ್ಯವನ್ನು ಗೆದ್ದು, ಸಂಪಾದಿಸಿದ್ದ ವಾಸನಾಜಾಲವನ್ನೆಲ್ಲ ತುಳಿದು ಧ್ವಂಸಮಾಡಿ ಮೇಲಕ್ಕೆದ್ದು,

ಸಂಸಾರವೆಂಬ ಹಗ್ಗದ ಬಲೆಯನ್ನು ಬೇಗ ಹರಿದು, ಶ್ರೇಯಸ್ಸಿನ ಕಡೆ ತಿರುಗಿದ ಬುದ್ಧಿಯುಳ್ಳವನಾಗಿ ಜ್ಞ ಸಮನಾಗಬೇಕು.

(ಪೌರುಷಬಲಾನಿ ಸಾಧನ ಚತುಷ್ಟಯಂ ಶ್ರವಣ ಮನನ ಆದೀನ್ಯಾಹೃತ್ಯ ತತೋ ಧ್ಯಾನ ವಿಘ್ನಭೂತಾಂ ತಂದ್ರೀಮಾಸನ ಪ್ರಾಣಾಯಾಮಾದ್ಯಭ್ಯಾಸೇನ ಅವಜಿತ್ಯ, ಸಂಪ್ರಜ್ಞಾತ ಸಮಾಧಿನಾ ಬಹಿರ್ದೃಷ್ಟೇರುತ್ಥಾಯ ನಿರ್ವಿಕಲ್ಪಾ ಸಂಪ್ರಜ್ಞಾತ ಸಮಾಧ್ಯನುಪ್ರವೇಶಾದೇವ ತರ್ಜಿತಂ ಪ್ರಾಕ್ಸಮರ್ಜಿತ ವಾಸನೌಘ ಲಕ್ಷಣಂ ಸಂಸಾರ ಪಾಶ ಘನ ಪಂಜರ ಮಂಜಸಾ ಶೀಘ್ರಮೇವ ತತ್ವಸಾಕ್ಷಾತ್ಕಾ ರೇಣ ಭಂಕ್ತ್ವಾ ಅಭಿತಃ ಪೂರ್ಣಾನಂದೈಕರಸ ಬ್ರಹ್ಮಾತ್ಮನಾ ಉದೇಯಂ ತ್ವಯಾ ನ ತ್ವಜ್ಞಸಮೇನ ಸಂಸಾರಾಂತರ ವರ್ತಿನಾ ಭಾವ್ಯ ಮಿತ್ಯರ್ಥಃ–ತಾ ಪ್ರ.)

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಸರ್ವೋಪಶಾಂತಿ" ಎಂಬ
ನಲವತ್ತೊಂಭತ್ತನೆಯ ಸರ್ಗವು.

## ಪಂಚಾಶಃ ಸರ್ಗಃ

ಶ್ರೀ ವಸಿಷ್ಠ ಉವಾಚ —

ಇಮೇ ಯೇ ಜೀವಸಂಘಾತಾ ದೃಶ್ಯಂತೇ ದಶ ದಿಗ್ಗತಾಃ ।
ನರನಾಗಸುರಾಗೇಂದ್ರಗಂಧರ್ವಾದ್ಯಭಿಧಾನಕಾಃ ॥ ೧ ॥

ತೇ ಸ್ವಪ್ನಜಾಗರಾಃ ಕೇಚಿತ್ಕೇಚಿತ್ಸಂಕಲ್ಪಜಾಗರಾಃ ।
ಕೇಚಿತ್ಕೇವಲಜಾಗ್ರಸ್ಥಾಶ್ಚಿರಾಜ್ಜಾಗ್ರತ್ಸ್ಥಿತಾಃ ಪರೇ ॥ ೨ ॥

ಘನಜಾಗ್ರತ್ಸ್ಥಿತಾಶ್ಚಾನ್ಯೇ ಜಾಗ್ರತ್ಸ್ವಪ್ನಾಸ್ತಥೇತರೇ ।
ಕ್ಷೀಣಜಾಗರಕಾಃ ಕೇಚಿಜ್ಜೀವಾಃ ಸಪ್ತವಿಧಾಃ ಸ್ಮೃತಾಃ ॥ ೩ ॥

---

## ಐವತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧-೨-೩. ನರ ನಾಗ ಸುರ ಅಗೇಂದ್ರ ಗಂಧರ್ವ ಮೊದಲಾದ ಹೆಸರುಗಳಿಂದ ದಶದಿಕ್ಕುಗಳಲ್ಲಿ ಇರುವ ಈ ಜೀವಸಂಘಾತಗಳು ಇವೆಯಲ್ಲವೆ? ಅವುಗಳಲ್ಲಿ ಸ್ವಪ್ನ ಜಾಗರಗಳು ಕೆಲವು. ಸಂಕಲ್ಪಜಾಗರಗಳು ಇನ್ನು ಕೆಲವು: ಕೇವಲ ಜಾಗ್ರತ್ತಿನಲ್ಲಿರುವವು ಕೆಲವು: ಬಹು ಕಾಲದಿಂದಲೂ ಜಾಗ್ರತ್ತಿನಲ್ಲಿಯೇ ಇರುವವು ಕೆಲವು. ಘನವಾದ ಜಾಗ್ರತ್ತಿನಲ್ಲಿ ಇರುವುವು ಕೆಲವು. ಜಾಗ್ರತ್ಸ್ವಪ್ನಗಳು ಕೆಲವು: ಕ್ಷೀಣ ಜಾಗರಗಳು ಇನ್ನು ಕೆಲವು ಒಟ್ಟಿನಲ್ಲಿ ಇವು ಏಳು ವಿಧವಾಗಿರುವುವು

(ಹಿಂದೆ ವಾಸನಾ ಎಂಬುದದನ್ನು ಬಿಟ್ಟು ಇನ್ನೆಲ್ಲದರಲ್ಲಿಯೂ ಜೀವ ಜೀವರೂ ಸಮರೇ ಎಂದು ಹೇಳಿತು. ಆಗ ವಾಸನಾ ಹಿಡಿದು ಜೀವರಲ್ಲಿ ಏಳು ವಿಧವನ್ನು ಹೇಳಿದೆ)

ಶ್ರೀ ರಾಮಉವಾಚ :—

ಏತೇಷಾಂ ಭಗವನ್ಭೇದೋ ಬೋಧಾಯ ಮಮ ಕಥ್ಯತಾಂ ।
ಜೀವಾನಾಂ ಸಪ್ತರೂಪಾಣಾಂ ಜಲಾನಾಮರ್ಣವೇಷ್ವಿವ ॥ ೪ ॥

ಶ್ರೀ ವಸಿಷ್ಠ ಉವಾಚ:—

ಕಸ್ಮಿಂಶ್ಚಿತ್ಪ್ರಾಕ್ತನೇ ಕಲ್ಪೇ ಕಸ್ಮಿಂಶ್ಚಿಜ್ಜಗತಿ ಕ್ವಚಿತ್ ।
ಕೇಚಿತ್ಸುಪ್ತಾಃ ಸ್ಥಿತಾ ದೇಹೈರ್ಜೀವಾ ಜೀವಿತಧರ್ಮಿಣಃ ॥ ೫ ॥

ಯೇ ಸ್ವಪ್ನಮಭಿಪಶ್ಯಂತಿ ತೇಷಾಂ ಸ್ವಪ್ನಮಿದಂ ಜಗತ್ ।
ವಿದ್ಧಿ ತೇ ಹಿ ಖಲೂಚ್ಯಂತೇ ಜೀವಕಾಃ ಸ್ವಪ್ನಜಾಗರಾಃ ॥ ೬ ॥

ಶ್ರೀ ರಾಮನು ಕೇಳಿದನು:—

೪ ಭಗವಂತನೇ, ಸಮುದ್ರದಲ್ಲಿರುವ ಜಲಗಳ ಹಾಗೆ, ಸಪ್ತವಿಧರಾಗಿರುವ ಜೀವರ ಭೇದಗಳನ್ನು ನನಗೆ ತಿಳಿಯಲೆಂದು ಹೇಳು.

(ಅರ್ಣವೇಷು ಕ್ಷೀರಾದಿರಸಭೇದ ವಾಸಿತಾನಾಂ ಜಲಾನಾಂ—ತಾ. ಪ್ರ)

ಶ್ರೀ ವಸಿಷ್ಠನು ಹೇಳಿದನು:—

೫. ಹಿಂದಿನ ಒಂದಾನೊಂದು ಕಲ್ಪದಲ್ಲಿ ಯಾವುದೋ ಒಂದು ಜಗತ್ತಿನಲ್ಲಿ, ಎಲ್ಲೋ ಒಂದು ಕಡೆ, ಕೆಲವರು ಜೀವರು ಜೀವಿತ ಧರ್ಮವುಳ್ಳವರಾದರೂ ಸುಪ್ತರಾಗಿದ್ದರು.

(ಜೀವತೋ)ಪಾಖ್ಯಾನಪರ್ಶಿತ ನ್ಯಾಯಮವಲಂಬ್ಯ ಲಕ್ಷಯತಿ—ತಾ ಪ್ರ)

೬. ಯಾರು ಕನಸು ಕಾಣುತ್ತಿರುವರೋ ಅವರಿಗೆ ಈ ಜಗತ್ತು ಒಂದು ಸ್ವಪ್ನವೇ! ಅವರನ್ನೇ ಸ್ವಪ್ನಜಾಗರರೆಂದು ಹೇಳುವುದು.

ಕ್ವಚಿದೇವ ಪ್ರಸುಪ್ತಾನಾಂ ಯಃ ಸ್ವಪ್ನಃ ಸ್ವಯಮುತ್ಥಿತಃ ।
ವಿಷಯಃ ಸೋಽಯಮಸ್ಮಾಕಂ ತೇಷಾಂ ಸ್ವಪ್ನನರಾ ವಯಂ ॥ ೭ ॥

ತೇಷಾಂ ಚಿರತಯಾ ಸ್ವಪ್ನಃ ಸ ಜಾಗ್ರತ್ತ್ವಮುಪಾಗತಃ ।
ಸ್ವಪ್ನಜಾಗರಕಾಸ್ತೇ ತು ಜೀವಾಸ್ತೇ ತದ್ಗತಾಃ ಸ್ಥಿತಾಃ ॥ ೮ ॥

ಸರ್ವಜ್ಞತ್ವಾತ್ಸರ್ವಗಸ್ಯ ಸರ್ವಂ ಸರ್ವತ್ರ ವಿದ್ಯತೇ ।
ಯೇನ ಸ್ವಪ್ನವತಾಂ ತೇಷಾಂ ವಯಂ ಸ್ವಪ್ನನರಾಃ ಸ್ಥಿತಾಃ ॥ ೯ ॥

ಶ್ರೀ ರಾಮ ಉವಾಚ.—

ಯೇಷು ಕಲ್ಪೇಷು ತೇ ಜಾತಾಃ ಕ್ಷೀಯಂತೇ ಕಲ್ಪಕಲ್ಪನಾಃ ।
ಯದಿ ತಾಸ್ತತ್ಕಥಂ ತೇಷಾಂ ಪ್ರಬುದ್ಧಾನಾಮವಸ್ಥಿತಿಃ ॥ ೧೦ ॥

---

೭. ಕೊಂಚ ಮಟ್ಟಿಗೆ ನಿದ್ದೆ ಬಂದು ಯಾರಿಗೆ ಕನಸು ಬೀಳುತ್ತಿರುವದೋ ಅವರೇ ನಮಗೆ ಈಗ ವಿಷಯವು: ಅವರಿಗೆ ನಾವು ಸ್ವಪ್ನನರರು

(ಉಪಪಾದಿತೋ ಹ್ಯಯಮರ್ಥಃ ಪ್ರಾಗ್ಲೀಲೋಪಾಖ್ಯಾನೇ—ತಾ ಪ್ರ)

೮ ಅವರಿಗೆ ಬಹಳ ಕಾಲವಾದಮೇಲೆ ಸ್ವಪ್ನವು ಮುಗಿದು ಜಾಗ್ರತ್ತು ಬಂದಿರುವುದು. ಅವರು ಸ್ವಪ್ನಜಾಗರಕರು. ಜೀವರು ಕೆಲವರು ಆ ಅವಸ್ಥೆಯಲ್ಲಿರುವರು

೯. ಸರ್ವಗವಾಗಿರುವ ಬ್ರಹ್ಮವು ಸರ್ವಜ್ಞವಾದ್ದರಿಂದ, ಸರ್ವವೂ ಸರ್ವತ್ರ ಇರುವುದರಿಂದ, ಅವರು ಕನಸು ಕಾಣುತ್ತ ಅಲ್ಲಿ ನಮ್ಮನ್ನು ನೋಡುವರು

ಶ್ರೀ ರಾಮನು ಕೇಳಿದನು :—

೧೦. ಯಾವ ಕಲ್ಪಗಳಲ್ಲಿ ಅವರು ಇದ್ದರೋ ಆ ಕಲ್ಪಗಳ ಕಲ್ಪನೆಗಳೂ ಕೂಡ ನಷ್ಟವಾಗಿರುವಾಗ, ಅವರು ಏಳುವುದು, ಇರುವುದು, ಎನ್ನುವುದು ಹೇಗಾದೀತು

(ಅಸ್ತು ದೈಶಿಕೀ ಸರ್ವತ್ರ ಸರ್ವಸ್ಥಿತಿಃ, ಕಾಲಿಕೀ ತು ನ ಸಂಭವತಿ। ಅತೀತ ಕಲ್ಪೇಷು ವರ್ತಮಾನ ವಸ್ತುಸ್ಥಿತ್ಯ ಯೋಗಾದನ್ಯಥಾ ಸರ್ವಕಲ್ಪಾನಾಂ ಯೌಗಪದ್ಯಾಪತ್ತ್ಯಾ ಭೇದಾ ಭಾವ ಪ್ರಸಂಗಾದಿತ್ಯಾಶಯೇನ ರಾಮಃ ಪೃಚ್ಛತಿ ।—

ಶ್ರೀ ವಸಿಷ್ಠ ಉವಾಚ —

ಇಹ ಸ್ವಪ್ನಭ್ರಮಾಂತೇ ತೇ ಮುಚ್ಯಂತೇ ವಾ ವಿನಿದ್ರತಾಂ ।
ಪ್ರಾಪ್ಯ ಸಂಕಲ್ಪತೋ ದೇಹಾಂಸ್ತಥೈವಾನ್ಯಾನ್ ಶ್ರಯಂತ್ಯಲಂ ॥ ೧೧ ॥

ತಥೈವಾನ್ಯಂ ಪ್ರಪಶ್ಯಂತಿ ಜಗತ್ಕಲ್ಪಂ ಚ ಕಲ್ಪಿತಂ ।
ಕಲ್ಪನಾಭಾಸನಭಸೋ ನಹಿ ಸಂಕಟತಾ ಭವೇತ್ ॥ ೧೨ ॥

ಪ್ರಾಗ್ಯೇಷು ಕಲ್ಪೇಷು ತೇ ಅಸ್ಮತ್ಪ್ರಪಂಚ ಸ್ವಪ್ನದ್ರಷ್ಟಾರೋ ಜೀವಾಜಾತಾ ಜನ್ಮ ಪ್ರಾಪ್ತಾಸ್ತೇಷಾಂ ಕಲ್ಪಾನಾಂ ಕಲ್ಪನಾಃ ನಹ ತದ್ದೇಹೈಃ ಸಾಂಪ್ರತಂ ಯದಿ ಕ್ಷೀಯಂತೇ ತಸ್ಮಾನ್ನರ್ಹಿ ಏತಸ್ಮಾತ್ ಸ್ವಪ್ನಾತ್ ಪ್ರಬುದ್ಧಾನಾಂ ತೇಷಾಂ ಪುನರನ್ಯತ್ರ ಸ್ವಪ್ನೇ ನಾವಸ್ಥಿತಿಃ ಸಿದ್ಧ್ಯತಿ । ನಸ್ಯಧ್ಯತನ ಸ್ವಪ್ನಾತ್ ಪ್ರಬುದ್ಧೇನ ಪೂರ್ವೇಣಾದ್ಯನ್ತನೋಽಪಿ ಜಾಗರೋಽನುಭವಿತುಂ ಶಕ್ಯೋ ದೂರೇ ಸ್ವಾಪಃ ಕಲ್ಪಸ್ಥಃ ಸ ಇತಿ ಭಾವಃ ।—ತಾ. ಪ್ರ )

ಶ್ರೀ ವಸಿಷ್ಠನು ಹೇಳಿದನು :—

ಒಂದೆಡೆ ಸ್ವಪ್ನ ಭ್ರಮವು ಕಳೆಯುತ್ತಿದ್ದ ಹಾಗೆಯೇ ಅವರು ನಿದ್ರೆಯನ್ನು ಬಿಡುವುದೂ ಉಂಟು. ಅಥವಾ ಸಂಕಲ್ಪದಿಂದ ಅನ್ಯದೇಹಗಳನ್ನು ಪಡೆಯುವುದೂ ಉಂಟು

(ತೇ ಜೀವಾ ಯದ್ಯಸ್ಮಾತ್ ಪ್ರಪಂಚಾತ್ರಕೇ ಸ್ವಪ್ನೇ ತತ್ವಜ್ಞಾನಂ ವೈವಾಲ್ಲಭಂತೇ ತರ್ಹಿ ಮುಚ್ಯಂತ ಏವೇತಿ ನೈತಸ್ಮಿನ್ನಪ ಪ್ರಸಕ್ತಿರ್ಯದಿ ತು ತನ್ನಲಭಂತೇ ತರ್ಹಿ ನ ತತ್ಕಲ್ಪನೇಽಪಿ ನಸ್ತೇಷಾಮತೀತ ಇತ್ಯಗ್ರೇ ಉದ್ಭವಿಷ್ಯತೇವ । ಅನ್ಯ ಕಲ್ಪನಾ ಕಲ್ಪಿತಾನಾಮೇವಾತ್ಮಯಾತ್ । ತಚ್ಚೇತಸಿ ಪ್ರಾತಿಸ್ವಿಕತತ್ಕಲ್ಪ ಶೇಷ ಕಲ್ಪನಾಯಾ ಅಗ್ರೇಽಪ್ಯೈಂದವೋಪಾಖ್ಯಾನ ನ್ಯಾಯೇನೋಪಪತ್ತೇರಿತ್ಯಾಶಯೇನ ವಸಿಷ್ಠಃ ನಮಾಧತ್ತೇ ।—ಅನ್ಯಾನ್ ಶ್ರಯಂತೀತ್ಯುಕ್ತ್ಯಾ ದೃಷ್ಟ ಸೃಷ್ಟಿವಾದ ಮಾಲಂಬ್ಯ ಪ್ರತ್ಯಹಂ ಜಾಗರೇ ದೇಹಾಂತರ ಕಲ್ಪನಾಯಾಮಪಿ ಸಂಸ್ಕಾರ ವಶಾದೇವ ಪ್ರತ್ಯಭಿಜ್ಞಾ-ಇತ್ಯಪಿ ದರ್ಶಿತಂ ॥—ತಾ ಪ್ರ.)

೧೨ ಹಾಗೆಯೇ ತಮ್ಮ ಸಂಕಲ್ಪ ಕಲ್ಪಿತವಾದ, ಜಗತ್ತಿನಂತಹ

ಸಂಕಲ್ಪನಾತ್ಮಕಜಗಜ್ಜೀರ್ಣೋದುಂಬರಕೀಟಕಾಃ ।
ಸ್ವಪ್ನಜಾಗರಕಾಃ ಪ್ರೋಕ್ತಾಃ ಶೃಣು ಸಂಕಲ್ಪಜಾಗರಾನ್ ॥ ೧೩ ॥

ಕಸ್ಮಿಂಶ್ಚಿತ್ಪ್ರಾಕ್ತನೇ ಕಲ್ಪೇ ಕಸ್ಮಿಂಶ್ಚಿಜ್ಜಗತಿ ಕ್ವಚಿತ್ ।
ಅನಿದ್ರಾಲವ ಏವಾಂತಃ ಸಂಕಲ್ಪೈಕಪರಾಃ ಸ್ಥಿತಾಃ ॥ ೧೪ ॥

ಧ್ಯಾನಾದ್ವಿಲುಠಿತಾ ವಾಥ ಮನೋರಾಜ್ಯವಶಾನುಗಾಃ ।
ಸಂಕಲ್ಪದಾರ್ಢ್ಯಮಾಪನ್ನಾ ಗಲಿತಾಗ್ರಾನುಭೂತಯಃ ॥ ೧೫ ॥

ಇನ್ನೊಂದನ್ನು ನೋಡುವರು. ಕಲ್ಪನೆಯಿಂದ ಹುಟ್ಟಿದ ಆಕಾಶದಲ್ಲೇ ಇರುವ ವರೆಗೆ ಈ ಕಲ್ಪಿತ ಜಗತ್ತಿನಿಂದ ಕಷ್ಟವೇನೂ ಆಗುವುದಿಲ್ಲ.

(ಸಂಕಟತಾ-ನಿರವಕಾಶತಾ—ತಾ. ಪ್ರ.)

೧೩. ಸಂಕಲ್ಪಾತ್ಮಕವಾದ ಜಗತ್ತೆಂಬ ಜೀರ್ಣವಾದ ಔದುಂಬರದಲ್ಲಿ ಕೀಟಗಳಂತಿರುವ ಸ್ವಪ್ನ ಜಾಗರಕರನ್ನು ಕುರಿತು ಹೇಳಿದುದಾಯಿತು; ಇನ್ನು ಸಂಕಲ್ಪ ಜಾಗರರನ್ನು ಕುರಿತು ಕೇಳು.

೧೪. ಯಾವುದೋ ಒಂದು ಪುರಾತನ ಕಲ್ಪದಲ್ಲಿ ಯಾವುದೋ ಜಗತ್ತಿನಲ್ಲಿ ಎಲ್ಲೋ ಒಂದೆಡೆ, ನಿದ್ದೆಯಿಲ್ಲದವರಾಗಿ, ತಮ್ಮ ಮನಸ್ಸಿನಲ್ಲಿ ಸಂಕಲ್ಪಗಳನ್ನು ಮಾಡುವುದೇ ಕಾರ್ಯವಾಗಿ ಇರುವವರುಂಟು.

(ಐಂದವವತ್ ಸಂಕಲ್ಪಪರಾಃ—ತಾ. ಪ್ರ.)

೧೫. ಅವರು ಧ್ಯಾನಾದ್ರಿಯಿಂದ ಉರುಳಿದವರಾಗಿರಬಹುದು ಮನೋರಾಜ್ಯದಲ್ಲಿ ಮೈಮರೆತವರಾಗಿರಬಹುದು ದೃಢಸಂಕಲ್ಪವನ್ನು ಹೊಂದಿದವರಾಗಿ ಪೂರ್ವಾವಸ್ಥಾನುಭವಗಳನ್ನು ಮರೆತವರಾಗಿರಬಹುದು.

(ಅಥವಾ ಜೀವಟೋವಾಖ್ಯಾನೋಕ್ತ ಭಿಕ್ಷುವದ್ಧ್ಯಾನಾದ್ವಿ ಲುಠಿತಾಃ । —ತಾ. ಪ್ರ)

ಸಂಕಲ್ಪ ಏವ ಜಾಗ್ರತ್ತ್ವಂ ಯೇಷಾಂ ಚಿರತಯಾಂಶತಃ ।
ತತ್ರಾಸ್ತಮಿತಚೇಷ್ಟಾನಾಂ ತೇ ಹಿ ಸಂಕಲ್ಪಜಾಗರಾಃ　　॥ ೧೭ ॥

ಸಂಕಲ್ಪೋಪಶಮೇ ಭೂಯಸ್ತಮನ್ಯಂ ವಾ ಶ್ರಯಂತಿ ತೇ ।
ದೇಹೇ ತೇಷಾಂ ವಯಮಿಮೇ ಸಂಕಲ್ಪ ಪುರುಷಾಃ ಸ್ಥಿತಾಃ　　॥ ೧೭ ॥

ಸಂಕಲ್ಪಜಾಗರಾಃ ಪ್ರೋಕ್ತಾ ಏತೇ ಸಂಕಲ್ಪಶಾಯಿನಃ ।
ಜೀವಾ ಜೀವಿತಗಾಲೋಕಾಃ ಶೃಣು ಕೇವಲಜಾಗರಾ　　॥ ೧೮ ॥

ಪ್ರಾಥಮ್ಯೇನಾವತೀರ್ಣಾಸ್ತೇ ಬ್ರಹ್ಮಣೋ ಬೃಂಹಿತಾತ್ಮನಃ ।
ಪ್ರೋಕ್ತಾ ಕೇವಲಜಾಗರ್ಯಾಃ ಪ್ರಾಗುತ್ಪತ್ತ್ಯವಿಕಾಶಿನಃ　　॥ ೧೯ ॥

೧೬ ಬಹು ಕಾಲದಿಂದಲೂ ಅಭ್ಯಾಸವಾಗಿ ಹೋಗಿರುವುದರಿಂದ ಅವರಿಗೆ ಸಂಕಲ್ಪವೇ ಜಾಗ್ರತ್ತ್ವವು. ಅವರು ಕೇವಲ ಸಂಕಲ್ಪಪರರು: ಅವರಿಗೆ ವ್ಯಾಪಾರವೆನ್ನುವುದೇ ಇಲ್ಲ. ಇಂಥವರು ಸಂಕಲ್ಪಜಾಗರರು.

(ಯೇಷಾಂ ಜೀವಾನಾಂ ಸಂಕಲ್ಪ ಏವ ಚಿರಾನುವೃತ್ತ್ಯಾ ಘನೀಭೂತೇ ಜಾಗ್ರತ್ತ್ವಂ ಜಾಗರಾಭಿಮಾನಃ, ತತ್ರ ಸಾಂಕಲ್ಪಿಕಾರ್ಥೇಷು ಏವ ಅಸ್ತಮಿತಾ ಸಪೂರ್ವಾಪರ ಪ್ರತಿ ಸಂಧಾನ ಕ್ಷಮಾ ಮನಶ್ಚೇಷ್ಟಾ ಯೇಷಾಂ ॥—ತಾ ಪ್ರ.)

೧೭. ಒಂದು ಸಂಕಲ್ಪವು ಉಪಶಮವಾದರೆ ಇನ್ನೊಂದನ್ನು ಆರಂಭಿಸುವರು. ಅವರ ದೇಹದಲ್ಲಿ ನಾವೂ ಇವರೂ ಎಲ್ಲರೂ ಸಂಕಲ್ಪ ಪುರುಷರಾಗಿಯೇ ಇರುವೆವು

೧೮. ಹೀಗೆ ಸಂಕಲ್ಪದಲ್ಲಿ ಬಿದ್ದು ಒದ್ದಾಡುವವರು ಸಂಕಲ್ಪ ಜಾಗರರು ಅವರ ಜೀವಿತಗಳು ಲೋಕ ಲೋಕಗಳಿಗೂ ಹೋಗಬಲ್ಲುವು. ಅವರ ದೃಷ್ಟಿಯಲ್ಲಿ ಎಲ್ಲವೂ ಕೇವಲ ಸಂಕಲ್ಪಮಯುವೇ ! ಇನ್ನು ಕೇವಲ ಜಾಗರರ ವಿಷಯವನ್ನು ಹೇಳುವನು ಕೇಳು

೧೯ ಬೃಂಹಣ ಮಾಡಿ ಲೋಕವನ್ನು ಪಡೆದ ಬ್ರಹ್ಮನಿಂದ ಅವರು ಮೊದಲು ಹುಟ್ಟಿಬಂದವರು. (ಆಗ ಸ್ವಪ್ನವಿರಲಿಲ್ಲವಾಗಿ) ಅವರಿಗೂ ಸ್ವಪ್ನವಿಲ್ಲ. (ಹಿಂದೆ ಹೇಳಿದ ಪಾವ ವ್ಯಾಲಕಟರಂತೆ ಇವರೂ । ಇವರು ಮೊದಲಿನ ಸೃಷ್ಟಿಯಲ್ಲಿದ್ದವರು.

ಭೂಯೋ ಜನ್ಮಾಂತರಗತಾಸ್ತ ಏವ ಚಿರಜಾಗರಾಃ ।
ಕಥ್ಯಂತೇ ಪ್ರೌಢಿಮಾಯಾತಾಃ ಕಾರ್ಯಕಾರಣಚಾರಿಣಃ ॥ ೨೦ ॥

ತ ಏವ ದುಷ್ಕೃತಾವೇಶಾಜ್ಜಡಸ್ಥಾವರತಾಂ ಗತಾಃ ।
ಘನಜಾಗ್ರತ್ತಯಾ ಪ್ರೋಕ್ತಾ ಜಾಗ್ರತ್ಸ್ವ ಘನತಾಂ ಗತಃ ॥ ೨೧ ॥

(ಯತಸ್ತೇ ಪ್ರಾಗುತ್ಪತ್ತಿ ವಿಕಾಶ ಲಕ್ಷಣ ಸ್ವಪ್ನಶೂನ್ಯಾಃ ಕಲ್ಪಾಂತರೀಯ ಜಾಗ್ರತ್ಸಂಸ್ಕಾರಸ್ಯ ಜಾಗ್ರಜ್ಜನನೇನೈವ ಉಪಕ್ಷೀಣಸ್ಯ ಏತತ್ಕಲ್ಪೀಯ ಸ್ವಪ್ನ ಹೇತುತ್ವಾ ಕಲ್ಪನಾದಿತಿ ಭಾವಃ—ತಾ ಪ್ರ)

೨೦. ಅವರು ಮತ್ತೊಂದು ಜನ್ಮವನ್ನು ಪಡೆದು ಬಂದರೆ ಅವರೇ ಚಿರ ಜಾಗರರೆನ್ನಿಸಿಕೊಳ್ಳುವರು. ಅವರು ಕಾರ್ಯಕಾರಣಗಳೆಂಬ ವ್ಯವಸ್ಥೆಯನ್ನು ಇಟ್ಟು ಕೊಂಡು ಪ್ರೌಢಿಮೆಯನ್ನು ಪಡೆದವರು

(ಜನ್ಮಾಂತರೇಷೂತ್ತರೋತ್ತರಜನ್ಮ ಪರಂಪರಾಸು ಕಾರ್ಯಯೋಃ ಜಾಗ್ರತ್ಸ್ವಪ್ನಯೋಃ ಕಾರಣೇ ಸುಷುಪ್ತೌ ಚ ಸಂಚರಣ ಶೀಲಾಃ—ತಾ. ಪ್ರ)

(ಚತುರ್ಥಾನಾಹ ಜಾಗ್ರತ್ಸ್ವಪ್ನಗಳು ಕಾರ್ಯಗಳು ಸುಷುಪ್ತಿಯು ಕಾರಣವು ಹೋಲಿಸಿ. ಸುಷುಪ್ತಾಖ್ಯಂತಮೋಜ್ಞಾನಂ । ಬೀಜಂ ಸ್ವಪ್ನ ಪ್ರಬೋಧಯೋಃ ॥ ಶಂಕರರು.)

೨೧ ಅವರೇ ದುಷ್ಕೃತ್ಯಗಳನ್ನು ಮಾಡಿ ಜಡವಾದ ಸ್ಥಾವರತೆಯನ್ನು ಹೊಂದುವರು. ಜಾಗ್ರತ್ತು ತಾನೇ ತಾನಾಗಿದ್ದರೂ ಅವರ ಜಾಗ್ರತ್ತಿನಲ್ಲಿ ಘನತೆಯು (ಎಂದರೆ ಅಜ್ಞಾನ ನಿಬಿಡತೆಯು) ತುಂಬಿರುವುದು

(ಪಂಚಮಾಃ ಲಕ್ಷಯತಿ . .ಜಾಗ್ರತ್ಸು ಇತಿ ವಿಶೇಷಣಾತ್ ಸ್ವಪ್ನೇ

ಯೇ ತು ಶಾಸ್ತ್ರಾರ್ಥಸತ್ಸಂಗಬೋಧಿತಾ ಬೋಧಮಾಗತಾಃ ।
ಪಶ್ಯಂತಿ ಸ್ವಪ್ನವಜ್ಜಾಗ್ರತ್ಸ್ವಪ್ನಾ ಭವಂತಿ ತೇ ॥ ೨೨ ॥

ಯೇ ತು ಸಂಪ್ರಾಪ್ತಸಂಬೋಧಾ ವಿಶ್ರಾಂತಾಃ ಪರಮೇ ಪದೇ ।
ಕ್ಷೀಣಜಾಗ್ರತ್ಪ್ರಭೃತಯಸ್ತೇ ತುರ್ಯಾಂ ಭೂಮಿಕಾಂ ಗತಾಃ ॥ ೨೩ ॥

ಇತಿ ಸಪ್ತವಿಧೋ ಭೇದೋ ಜೀವಾನಾಂ ಕಥಿತಸ್ತವ ।
ಸಮುದ್ರಾಣಾಮಿವ ಮಯಾ ಬುದ್ಧ್ವಾ ಶ್ರೇಯಃಪರೋ ಭವ ॥ ೨೪ ॥

---

ಸ್ಥಾವರಣಾಪಿ ಕದಾಚಿನ್ಮನುಷ್ಯಭಾವಾದಿ ದರ್ಶನಮಸ್ತ್ಯೇವೇತಿ ಗಮ್ಯತೇ' ಇತಿ ಪಂಚಧಾ ಭಿನ್ನಾ ಬದ್ಧಜೀವಾಃ ।—ತಾ. ಪ್ರ.

೨೨ ಯಾರು ಶಾಸ್ತ್ರಾರ್ಥ ಸತ್ಸಂಗಗಳಿಂದ ಬೋಧವನ್ನು ಪಡೆದು, ಬೋಧಸಂಪನ್ನರಾಗಿ, ಜಾಗ್ರತ್ತನ್ನು ಸ್ವಪ್ನದಂತೆ ನೋಡುವರೋ ಅವರು ಜಾಗ್ರತ್ಸ್ವಪ್ನರು.

(ಅವಶಿಷ್ಟಂ ಭೇದದ್ವಯಂ ಜೀವನ್ಮುಕ್ತೇಷು ದರ್ಶಯಿಷ್ಯನ್ ಪಕ್ಷಾನಾಹ—ಚತುರ್ಥ ಪಂಚಮ ಷಷ್ಠ ಭೂಮಿಕಾಸ್ಥಾ ಇತಿ ಯಾವತ್—ತಾ. ಪ್ರ.)

೨೩ ಯಾರು ಸಮ್ಯಗ್ಜ್ಞಾನ ಸಂಪನ್ನರಾಗಿ ಪರಮ ಪದದಲ್ಲಿ ವಿಶ್ರಾಂತಿಯನ್ನು ಪಡೆದವರೋ ಜಾಗ್ರತ್ ಮೊದಲಾದ ಅವಸ್ಥೆಗಳು ಯಾರಿಗೆ ಕ್ಷೀಣವಾಗಿ ಹೋಗಿದೆಯೋ ಅವರು ತುರ್ಯ ಭೂಮಿಕೆಯಲ್ಲಿ ಇರುವವರು.

(ಸಪ್ತಮ ಭೂಮಿಕಾ ರೂಢಾ ಏವ ಸಪ್ತಮಾ ಇತ್ಯಾಶಯೇನಾಹ— ತಾ. ಪ್ರ)

೨೪. ಹೀಗೆ ಜೀವರು ಏಳು ವಿಧವಾಗಿರುವವರು ಎಂದು ನಿನಗೆ ಹೇಳಿದುದಾಯಿತು ಇವರು ಸಪ್ತಸಮುದ್ರಗಳಂತೆ ಎಂಬುದನ್ನು ತಿಳಿದು ಶ್ರೇಯಃಪರನಾಗು: ಶ್ರೇಯಸ್ಸಿನ ಕಡೆ ತಿರುಗು

(ಶ್ರೇಯಃಪರಃ ಉತ್ತರೋತ್ತರ ಶ್ರೇಷ್ಠ ಭೂಮಿಕಾತತ್ಪರಃ—ತಾ. ಪ್ರ.)

ಭ್ರಾಂತಿ ಪರಿತ್ಯಜ ಜಗದ್ಗಣನಾತ್ಮಿಕಾಂ ತ್ವಂ ।
ಬೋಧೈಕರೂಪ ಘನತಾಮಲಮಾಗತೋಽಸಿ ॥
ಶೂನ್ಯತ್ವವರ್ಜಿತಮಶೂನ್ಯತಯಾ ಚ ಮುಕ್ತಂ ॥
ತೇನ ದ್ವಯೈಕ್ಯಕವಿಮುಕ್ತವಪುಸ್ತ್ವಮಾದ್ಯಂ ॥ ೫೫ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಜೀವಸಪ್ತಕಪ್ರಕಾರವರ್ಣನಂ" ನಾಮ
ಪಂಚಾಶಃ ಸರ್ಗಃ

---

೫೫. ಭ್ರಾಂತಿಯನ್ನು ಬಿಡು. ಜಗತ್ತು ಒಂದು ಪ್ರತ್ಯೇಕವಾಗಿ ಸತ್ಯವಾಗಿ ಇದೆ ಎಂದು ಗಣಿಸುವುದೇ ಈ ಭ್ರಾಂತಿಯು. ಬೋಧವಲ್ಲದೆ ಇನ್ನೇನೂ ಇಲ್ಲದ ಅಮಲಸ್ಥಿತಿಯನ್ನು ಹೊಂದಿರುವೆ. ಆ ಸ್ಥಿತಿಯು ಶೂನ್ಯತ್ವ ವರ್ಜಿತವು. ಅಶೂನ್ಯತ್ವವೂ ಅಲ್ಲಿಲ್ಲ ಆದರಿಂದ ದ್ವಯ ಐಕ್ಯ ಎಂಬ ಎರಡೂ ಅಲ್ಲದ ಆರ್ಯ ರೂಪನು ನೀನು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜೀವಸಪ್ತಕಪ್ರಕಾರವರ್ಣನ" ಎಂಬ
ಐವತ್ತನೆಯ ಸರ್ಗವು.

## ಏಕಪಂಚಾಶಃ ಸರ್ಗಃ

ಶ್ರೀ ರಾಮ ಉವಾಚ —

ಕಥಂ ಕೇವಲಜಾಗ್ರತ್ತ್ವಮಕಾರಣಮನರ್ಥಕಂ ।
ಪರಾದ್ವಿಕಸತಿ ಬ್ರಹ್ಮನ್ಗಗನಾದಿವ ಪಾದಪಃ ॥ ೧ ॥

ಶ್ರೀ ವಸಿಷ ಉವಾಚ —

ಅಕಾರಣಂ ಮಹಾಬುದ್ಧೇ ನ ಕಾರ್ಯಮುಪಲಭ್ಯತೇ ।
ತಜ್ಜಾಗ್ರತಃ ಕೇವಲಸ್ಯ ನ ಕಶ್ಚಿದಿಹ ಸಂಭವಃ ॥ ೨ ॥

## ಐವತ್ತೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು .—

೧. ಕೇವಲ ಜಾಗ್ರತ್ತ್ವವು ಹೇಗೆ ಅಕಾರಣವಾಗಿ ಬರುವುದು ? ಅದು ಹೇಗೆ ಅನರ್ಥಕವಾಗುವುದು ? ಆಕಾಶದಿಂದ ಮರವು ಹುಟ್ಟಿತು ಎನ್ನುವಂತೆ ಅದು ಹೇಗೆ ಪರರಿಂದ ವಿಕಾಸಗೊಳ್ಳುವುದು ? ಎಲೈ ಬ್ರಹ್ಮನೆ, (ಇವನ್ನು ನನಗೆ ಹೇಳು )

( ಪ್ರಾಥಮ್ಯೇನಾಪತೀರ್ಣಸ್ತೇ ಬ್ರಹ್ಮಣೋ ಬೃಂಹಿತಾತ್ಮನಃ । ಪ್ರೋಕ್ತಾಃ ಕೇವಲ ಜಾಗರ್ಯಾ ಇತಿ ಯದುಕ್ತಂ ತದನುಪಪನ್ನಂ । ಕೂಟಸ್ಥಾದ್ವಯಸ್ಯ ಬ್ರಹ್ಮಣಃ ಪ್ರಾಥಮ್ಯೇನ ಜೀವತಯಾವತಾರಃ ಬೀಜ ಪ್ರಯೋಜನಯೋರಸಂಭವಾತ್ ಕಾಮ ಕರ್ಮ ವಾಸನಾದಿ ಬೀಜಾನಾಂ ಜೀವಭಾವೋತ್ತರ ಕಾಲತ್ವಾದಿತಿ ರಾಮಃ ಶಂಕತೇ—ತಾ ಪ್ರ )

ಶ್ರೀ ವಸಿಷ್ಠನು ಹೇಳಿದನು --

೨. ಎಲೈ ಮಹಾಬುದ್ಧಿಯೇ, ( ಈ ಜಗತ್ತಿನಲ್ಲಿ ) ಕಾರಣವಿಲ್ಲದೆ ಕಾರ್ಯವಾಗುವುದು ಎನ್ನುವುದಿಲ್ಲ ಆದರಿಂದ ಕೇವಲ ಜಾಗ್ರತ್ತು ಎಂಬುದು ಯಾವುದೂ ಸಂಭವವವೇ ಅಲ್ಲ

ತಸ್ಮಾತೋಽಸಂಭವಾದನ್ಯೇ ಜೀವಭೇದಾಃ ಸಜೀವಕಾಃ ।
ಸರ್ವೇ ನ ಸಂಭವಂತ್ಯೇವ ಕಾರಣಾಭಾವವಿಕ್ಷತಾಃ ॥ ೩ ॥

ನೇಹ ಪ್ರಜಾಯತೇ ಕಿಂಚಿನ್ನೇಹ ಕಿಂಚನ ನಶ್ಯತಿ ।
ಉಪದೇಶ್ಯೋಪದೇಶಾರ್ಥಂ ಶಬ್ದಾರ್ಥಕಲನೋದಯಃ ॥ ೪ ॥

ಶ್ರೀ ರಾಮ ಉವಾಚ :—

ಕಃ ಕರೋತಿ ಶರೀರಾಣಿ ಮನೋಬುದ್ಧ್ಯಾದಿಚೇತನೈಃ ।
ಕೋ ಮೋಹಯತಿ ಭೂತಾನಿ ಸ್ನೇಹರಾಗಾದಿಬಂಧನೈಃ ॥ ೫ ॥

---

(ಅತ್ಯಲ್ಪಮಿದ ಮುಚ್ಯತೇ ಕೂಟಸ್ಥಾದ್ವಯಾತ್ ಕೇವಲ ಜಾಗರಾಖ್ಯ ಜೀವಾವತಾರೋ ನ ಸಂಭವತೀತಿ ತನ್ಮೂಲಕ ಜೀವಾಂತರಾಣಾಂ ಜಗತ್ಸ್ಥಾವ ತಾರಸ್ಯಾನುಪಪತ್ತೇಸ್ತುಲ್ಯತ್ವಾತ್ ಕಿಂತು ಕೂಟಸ್ಥಾದ್ವಯ ವಸ್ತುನೋ ಜಗಜ್ಜೀವೋಭಯಾಪಲಾಪವಮಂ ತರೇಣೋಪ ದೇಷ್ಟುಮಶಕ್ಯತ್ವಾತ್ತದುಪದೇಶಾರ್ಥಂ ಬ್ರಹ್ಮಣ ಏವ ಜೀವ ಜಗಚ್ಛಬ್ದಾರ್ಥಾಕಾರಕಲನಾ ಶ್ರುತಿ ಸ್ಮೃತೀತಿಹಾಸ ಪುರಾಣೇಷು ಕಲ್ಪಿತೇತ್ಯುತ್ತರಂ ವಸಿಷ್ಠ ಆಹ—ತಾ. ಪ್ರ.)

೩. ಅದರಿಂದ, ಕಾರಣವು ಇಲ್ಲದೆ ಕಾರ್ಯವು ಸಂಭವವಿಲ್ಲವಾದ್ದರಿಂದ, ಜೀವ ಭೇದಗಳೂ ಜೀವ ಗಣಗಳೂ ಯಾವವೂ ಕಾರಣದ ಅಭಾವದಿಂದ ಇಲ್ಲವೇ ಇಲ್ಲ. ಯಾವವೂ ಹುಟ್ಟುವುದೇ ಇಲ್ಲ.

೪. ಇಲ್ಲಿ ಯಾವುದೂ ಹುಟ್ಟುವುದೇ ಇಲ್ಲ. ಇಲ್ಲಿ ಯಾವುದೂ ಸಾಯುವುದಿಲ್ಲ. ಆದರೂ ಉಪದೇಶಕ್ಕಾಗಿ, ಉಪದೇಶ ಬೇಕೆನ್ನುವವರನ್ನು ಅನುಗ್ರಹಿಸುವುದಕ್ಕಾಗಿ ಈ ಶಬ್ದ ಈ ಅರ್ಥಗಳ ಯೋಜನೆಯು ಹುಟ್ಟಿತು.

ಶ್ರೀ ರಾಮನು ಕೇಳಿದನು :—

೫. ಮನೋಬುದ್ಧಿ ಮೊದಲಾದವುಗಳಿಂದ ಕೂಡಿರುವ ಈ ಶರೀರಗಳನ್ನು ಮಾಡುವವನು ಯಾರು? ಸ್ನೇಹರಾಗಾದಿ ಬಂಧನಗಳಿಂದ ಯಾರು ಮೋಹಗೊಳಿಸುವರು?

(ಅಸ್ತ್ವೇವಂ ತಥಾಪಿ ಭೋಗಾಯತನಸ್ಯ ದೇಹಾದೇಃ ಕರ್ಮಾದಿ ದ್ವಾರಾ ಸಾಕ್ಷಾದ್ವಾ ಕಶ್ಚಿನ್ನಿರ್ಮಾತಾ ಅವಶ್ಯಂ ವಾಚ್ಯಃ । ಕಾರ್ಯಮಾತ್ರಸ್ಯ ಸ್ವಕರ್ತೃಕತ್ವನಿಯಮಾತ್ । ತತ್ರ ಚ ಜೀವಂ ಪ್ರವೇಶ್ಯ ವಿಶಯೈರ್ವ್ಯಾಮೋಹಯಿತಾಽನ್ಯೋ

ಶ್ರೀ ವಸಿಷ್ಠ ಉವಾಚ :—

ನ ಕಶ್ಚಿದೇವ ಕುರುತೇ ಶರೀರಾಣಿ ಕದಾಚನ ।
ನ ಮೋಹಯತಿ ಭೂತಾನಿ ಕಶ್ಚಿದೇವ ಕದಾಚನ ॥ ೬ ॥

ಅನಾದ್ಯಂತಾವಭಾಸಾತ್ಮಾ ಬೋಧ ಆತ್ಮನಿ ಸಂಸ್ಥಿತಃ ।
ನಾನಾಪದಾರ್ಥರೂಪೇಣ ಕಮೂರ್ಮ್ಯಾದಿತಯಾ ಯಥಾ ॥ ೭ ॥

ಬಾಹ್ಯಂ ನ ವಿದ್ಯತೇ ಕಿಂಚಿದ್ಬೋಧಃ ಸ್ಫುರತಿ ಬಾಹ್ಯವತ್ ।
ಉದೇತಿ ಬೋಧಹೃದಯಾದ್ಬೀಜಾದಿವ ವರದ್ರುಮಃ ॥ ೮ ॥

---

ವಿನಾ ವ್ಯಾಮೋಹಕಂ ಚೇತನಸ್ಯ ವ್ಯಾಮೋಪಾದರ್ಶನಾತ್ । ತಥಾಚ ವ್ಯಾಮೋಹ್ಯ ವ್ಯಾಮೋಹಕೌ ದ್ವೌ ಚೇತನಾವನ್ಯೌ ಜೀವೇಶ್ವರಾಖ್ಯೌ ಸರ್ಗಾದಿ ಶ್ರುತಿಯುಕ್ತಿ ಪ್ರಾಮಾಣ್ಯಾತ್ ಸ್ವೀಕಾರ್ಯಾವೇವೇತಿ ಪುನಾರಾಮಶ್ಶಂಕತೇ —ತಾ. ಪ್ರ )

ಶ್ರೀ ವಸಿಷ್ಠನು ಹೇಳಿದನು —

೬. ಶರೀರಗಳನ್ನು ಯಾರೂ ಯಾವಾಗಲೂ ಮಾಡುವುದಿಲ್ಲ. ಭೂತಗಳನ್ನು ಯಾರೂ ಯಾವಾಗಲೂ ಮೋಹಗೊಳಿಸುವುದಿಲ್ಲ.

(ಭವೇತಾಮಾವಶ್ಯಕೌ ಯದಿ ಶರೀರಾದಿ ಕರ್ತೃತಾ ವ್ಯಾಮೋಹ್ಯ ವ್ಯಾಮೋಹಕ ಭಾವಶ್ಚ ಸತ್ಯ ಇತಿ ಶ್ರುತಿ ಯುಕ್ತಿ ಸಿದ್ಧಂ ಸ್ಯಾತ್। ವಾ ಚಾ ರಂಭಣ ಶ್ರುತ್ಯಾ ತತ್ವಮಸ್ಯಾದಿ ಶ್ರುತಿಭಿಶ್ಚ ತಸ್ಯಾಸ್ಯತತ್ವೇ ನಿರೂಢೇ ಪ್ರತಿಭಾಸಮಾತ್ರಸ್ಯ ಕೂಟಸ್ಥಾದ್ವಯೇನಾಪಿ ವಿವರ್ತಮಾತ್ರೇಣ ನಿರ್ವೋಢುಂ ಶಕ್ಯತ್ವಾನ್ನತಯೋ ರಾವಶ್ಯಕತೇ ತ್ಯಾಶಯೇನ ವಸಿಷ್ಠ ಉತ್ತರಮಾಹ—ತಾ. ಪ್ರ )

೭. ಅನಾದ್ಯಂತನಾದ ಅವಭಾಸಾತ್ಮನು ಬೋಧಸ್ವರೂಪನಾದ ಆತ್ಮನಲ್ಲಿಯೇ, ನೀರು ತರಂಗಾದಿ ರೂಪಗಳಿಂದ ಇರುವಂತೆ ನಾನಾ ಪದಾರ್ಥರೂಪವಾಗಿ ಇರುವುದು.

೮. ಬಾಹ್ಯವೆಂಬ ಪ್ರತ್ಯೇಕವಾದ ಮತ್ತೊಂದು ಇಲ್ಲ. ಬೋಧವೇ ಬಾಹ್ಯವತ್ ಸ್ಫುರಿಸುವುದು. ಬೀಜದಿಂದ ದೊಡ್ಡ ಮರವು ಹುಟ್ಟುವಂತೆ, ಬೋಧ ಹೃದಯದಿಂದ ಬೋಧವೇ ಬಾಹ್ಯವು ಹುಟ್ಟಿದಂತೆ ಹುಟ್ಟುವುದು

ಬೋಧಸ್ಯಾಂತರಿದಂ ವಿಶ್ವಂ ಸ್ಥಿತಮೇವ ರಘೂದ್ವಹ ।
ಸ್ತಂಭಸ್ಯಾಂತರ್ಯಥಾ ಶಾಲಭಂಜಿಕಾ ಪ್ರಕಟೀಕೃತಾ ॥ ೯ ॥

ಸಬಾಹ್ಯಾಭ್ಯಂತರಾತ್ಮೈಕಮನಂತಂ ದೇಶಕಾಲತಃ ।
ಬೋಧಾಮೋದಪ್ರಸರಣಂ ಜಗದೇವ ಪ್ರಬುಧ್ಯತಾಂ ॥ ೧೦ ॥

ಅಯಮೇವ ಪರೋ ಲೋಕೋ ಭಾವ್ಯತಾಂ ವಾಸನಾಕ್ಷಯಃ ।
ಶಾಮ್ಯತಾಂ ಪರಲೋಕಸ್ಥಂ ಕಾಃ ಕಿಲಾಯಾಂತಿ ವಾಸನಾಃ ॥ ೧೧ ॥

---

೯ ಎಲೈ ರಾಘವೇಂದ್ರನೇ, ಬೋಧದ ಒಳಗೆ ವಿಶ್ವವೆಲ್ಲವೂ ಇದ್ದೇ ಇರುವುದು ಶಾಲಭಂಜಿಕೆಯು ಸ್ತಂಭದೊಳಗಿದ್ದು ತಾನೇ ಪ್ರಕಟವಾಗುವುದು ? (ಹಾಗೆಯೇ ವಿಶ್ವವೂ ಬೋಧದ ಒಳಗೇ ಇದ್ದು ಪ್ರಕಟವಾಗುವುದು)

(ಹೋಲಿಸಿ:—ವಿಶ್ವಂ ದರ್ಪಣ ದೃಶ್ಯಮಾನ ನಗರೀ ತುಲ್ಯಂ ನಿಜಾಂತರ್ಗತಂ।—ಶಂಕರರು)

೧೦. ಆ ಬೋಧವು ಬಾಹ್ಯ-ಅಭ್ಯಂತರಗಳೆರಡನ್ನೂ ಒಳಗೊಂಡಿರುವುದು. ದೇಶಕಾಲಗಳ ಪರಿಚ್ಛೇದಗಳಿಗೆ ಒಳಪಡದ ಅನಂತವು. (ದೇಶದೃಷ್ಟಿಯಿಂದ ಬಾಹ್ಯ-ಅಭ್ಯಂತರಗಳು: ಅದಕ್ಕೆ ಮೀರಿದ ಎಂದರೆ ದೇಶಾತೀತವಾದ ಬೋಧದಲ್ಲಿ ಬಾಹ್ಯವಾವುದು: ಅಂತರವಾವುದು ?) ಬೋಧವೆಂಬ ಪರಿಮಳವು ಪ್ರಸರಿಸಿ ದೇಶವಾಗಿ ಜಗತ್ತಾಯಿತು ಎಂದು ತಿಳಿ.

(ಮಾಯಯಾ ಕಲ್ಪಿತ ದೇಶಕಾಲಕಲನಾ ವೈಚಿತ್ರ್ಯ ಚಿತ್ರೀಕೃತಂ । ಶಂಕರರು.)

೧೧ ಹಾಗಾದರೆ ಬ್ರಹ್ಮ ಲೋಕಾದಿಗಳು ಉಂಟು ಎನ್ನುವರಲ್ಲ ಎಂದರೆ ಅದೆಲ್ಲ ವಾಸನಾಪ್ರಭಾವವು ಈ ಲೋಕವೇ ಪರಲೋಕವು ಎಂದು ಭಾವಿಸಿಕೊ ವಾಸನಾ ಕ್ಷಯವಾದರೆ (ಅದು ನಿಜವೆಂಬುದು ತಿಳಿಯುವುದು) ಪರಲೋಕದಲ್ಲಿ ಆಸ್ಥೆಯು ಶಾಂತವಾಗಲಿ. ಪರಲೋಕದಿಂದ ಬಂದಿರುವ ಆ ವಾಸನೆಗಳು ಯಾವುವು ?

(ವಿದುಷಾಂ ಪರಲೋಕಾತ್ಮನಾ ಇಹೈವ ಸ್ಥಿತಮಾತ್ಮಾನಂ ನ ದೂರತ್ವಾದಿ ವಾಸನಾಃ ಸಮಾಯಾಂತೀತ್ಯರ್ಥಃ—ತಾ ಪ್ರ.)

ದೇಶಕಾಲಕ್ರಿಯಾಲೋಕರೂಪಚಿತ್ತಾತ್ಮಸತ್ವದಂ |
ದೇಶಕಾಲಾದಿಶಬ್ದಾರ್ಥರಹಿತಂ ನ ಚ ಶೂನ್ಯಕಂ ‖ ೧೨ ‖

ಪದೇ ಪದವಿದಾಮೇವ ತಸ್ಮಿನ್ಬೋಧಗತಿರ್ಭವೇತ್ |
ದ್ರಷ್ಟೄಣಾಂ ಶಾಂತದೃಶ್ಯಾನಾಮೇವಾನ್ಯೇಷಾಂ ನ ರಾಘವ ‖ ೧೩ ‖

ಯೇ ವೈ ತರಲಗಂಭೀರಮಹಂತಾಗರ್ತಮಾಶ್ರಿತಾಃ |
ಪಶ್ಯಂತಿ ತೇ ತಮಾಲೋಕಂ ನ ಕದಾಚನ ಕೇಚನ ‖ ೧೪ ‖

ಚತುರ್ದಶವಿಧಾನಂತಭೂತಜಾತಸುಘುಂಘುಮಾ |
ಜಗದ್ದೃಷ್ಟಿರಿಯಂ ಜ್ಞಸ್ಯ ಶರೀರಾವಯವೋಪಮಾ ‖ ೧೫ ‖

---

೧೨ ದೇಶ ಕಾಲ ಕ್ರಿಯಾ ಲೋಕ ರೂಪ ಚಿತ್ತ ಆತ್ಮ ಸತ್ವದ, ಇವುಗಳೆಲ್ಲವೂ (ದೇಶಕಾಲಾದಿ) ಶಬ್ದಗಳು · ಅರ್ಥ ರಹಿತಗಳು : ಆದರೂ ಶೂನ್ಯಗಳಲ್ಲ.

(ನನು ಪ್ರತ್ಯಗಾತ್ಮೈವ ಚೇತ್ಪರಲೋಕ ದೇಶ ಕಾಲಾದಿ ಸರ್ವಾತ್ಮಾ ತರ್ಹಿ ದೇಶಕಾಲಾದಿ ಬಾಧೇ ಶೂನ್ಯ ರೂಪ ಏವಕಿಂ ನ ಸ್ಯಾತ್ ? ತತ್ರಾಹ—ತಾ.ಪ್ರ.)

೧೩. ಹಜ್ಜೆಯನ್ನು ಬಲ್ಲವರು ಹಜ್ಜೆಯನ್ನು ಅರಿಯುವಂತೆ, ಆ ಲೋಕಾದಿಗಳಲ್ಲಿ ಬೋಧಗತಿಯು ಆಗುವುದು ಆದರೆ ಹಾಗಾಗುವುದು ಶಾಂತ ಹೃದಯರಾದ ದ್ರಷ್ಟೃ (ಆತ್ಮದರ್ಶಿ)ಗಳಿಗಲ್ಲದೆ, ರಾಘವ, ಇತರರಿಗಲ್ಲ.

ಯದಿ ನ ಶೂನ್ಯಂ ತರ್ಹಿ ಪೃಥಗ್ಜನಾನಾಮಪಿ ಪ್ರಪಂಚಾಪಲಾಪಮಾತ್ರೇಣ ತಸ್ಮಿನ್ ಪದೇ ಕುತೋ ನ ಬೋಧಗತಿಃ ತತ್ರಾಹ—ತಾ. ಪ್ರ.)

೧೪. ಯಾರು ಅಸ್ಥಿರವೂ ಗಂಭೀರ (ಆಳ)ವೂ ಆದ ಅಹಂತಾ ಎಂಬ ಹಳ್ಳದಲ್ಲಿ ಬಿದ್ದಿರುವರೋ ಅವರು ಬೋಧವೆಂಬ ಬೆಳಕನ್ನು ಯಾವಾಗಲೂ ಕಾಣುವುದಿಲ್ಲ.

೧೫. ಹದಿನಾಲ್ಕು ಜಾತಿಗಳಾಗಿ ಅನಂತವಾಗಿರುವ ಪ್ರಾಣಿ ಸಂಕುಲದ ವ್ಯಾಪಾರದಿಂದ ಕೂಡಿರುವ ಜಗತ್ತೆಂಬುದು ಯಾವುದುಂಟೋ ಅದು ಬ್ರಹ್ಮಜ್ಞನಿಗೆ ತನ್ನ ಶರೀರಗಳ ಅವಯುವಗಳಂತೆ !

(ತದ್ದರ್ಶಿನಸ್ತರ್ಹಿ ಕೀದೃಶೀ ಜಗದ್ದೃಷ್ಟಿಃ ? ತಾಮಾಹ—ತಾ.ಪ್ರ )

ಕಾರಣಾಭಾವತಃ ಸೃಷ್ಟಿರ್ನೋದಿತಾ ನ ಚ ಶಾಮ್ಯತಿ ।
ಯಾದೃಶಂ ಕಾರಣಂ ವಾ ಸ್ಯಾತ್ತಾದೃಗ್ಭವತಿ ಕಾರ್ಯಕಂ । ॥ ೧೬ ॥

ಯದಿ ಸ್ಯಾತ್ಕಾರಣೇ ಕಾರ್ಯಂ ಸ್ಥಿತಂ ಕಾರಣತಾಸ್ಯ ಕಾ ।
ಕಾರ್ಯಮೇವೋಪಲಂಭಾತ್ತದಸದ್ದ್ವಯಸಂವೇದನಾತ್ ॥ ೧೭ ॥

ಸೌಮ್ಯಸ್ಯಾಂತರ್ಯಥಾಂಭೋಧೇರೂರ್ಮ್ಯಾವರ್ತಾದಯಃ ಸ್ಥಿತಾಃ।
ಬ್ರಹ್ಮಣ್ಯಸಂಭವಕ್ಷೋಭೇ ಜಗಚ್ಚಿತ್ತಾದಯಸ್ತಥಾ ॥ ೧೮ ॥

ಸರ್ವಾತ್ಮೈವಾಮಲಂ ಬ್ರಹ್ಮ ಪಿಂಡ ಏಕ ಇವ ಸ್ಥಿತಂ ।
ನಾನಾಭಾಂಡಾತ್ಮ ಹೇಮ್ನೈವ ಯಥಾಂತಸ್ಸ್ಥಿತರೂಪಕಂ ॥ ೧೯ ॥

ಸ್ವಪ್ನಕಾಲೇ ಸ್ವಪ್ನ ಏವ ಜಾಗ್ರದ್ವ್ಯಗ್ರಾಪರಿಗ್ರಹಾತ್ ।
ಜಾಗತ್ಕಾಲೇ ಜಾಗ್ರದೇವ ಸ್ವಪ್ನಃ ಸತ್ಯಾವಬೋಧತಃ ॥ ೨೦ ॥

---

೧೬. ಕಾರಣವೇ ಇಲ್ಲವಾದ್ದರಿಂದ ಸೃಷ್ಟಿಯು ಹುಟ್ಟಲೂ ಇಲ್ಲ ನಾಶವಾಯುವುದೂ ಇಲ್ಲ ಕಾರಣವು ಎಂಥದೋ ಕಾರ್ಯವೂ ಅಂಥದೇ ಆಗಿರಬೇಕು.

೧೭. ಕಾರಣದಲ್ಲಿ ಕಾರ್ಯವು ಇರುವುದು ಎನ್ನುವುದಾದರೆ ಆ ಕಾರಣಕ್ಕೆ ಕಾರಣವು ಯಾವುದು? ಕಾರ್ಯವು ಮಾತ್ರ ಕಾಣಿಸುತ್ತಿರುವುದರಿಂದ, ಇದಕ್ಕೆ ಪ್ರತ್ಯೇಕವಾದ ಕಾರಣವು ಇಲ್ಲವಾದ್ದರಿಂದ, (ಇದ್ದರೆ ಎರಡೂ ಇರಬೇಕು ಇಲ್ಲವಾದರೆ ಎರಡೂ ಇಲ್ಲವಾಗಬೇಕಾಗಿ) ಕಾರ್ಯಕಾರಣಗಳೆರಡೂ ಅಸತ್ ಎನ್ನಬೇಕು

೧೮. ಸೌಮ್ಯವಾದ ಸಮುದ್ರದಲ್ಲಿ ತರಂಗ, ಆವರ್ತಾದಿಗಳೆಲ್ಲವೂ ಇದ್ದಂತೆ, ಕ್ಷೋಭವೆಂಬುದನ್ನೇ ಕಾಣದ ಬ್ರಹ್ಮದಲ್ಲಿ ಜಗತ್ತು, ಚಿತ್ತು, ಮೊದಲಾದವುಗಳು ಇರುವುವು

೧೯. ಸರ್ವಾತ್ಮವಾದ ಅಮಲಬ್ರಹ್ಮವು ಒಂದೇ ಪಿಂಡವೋ ಎಂಬಂತೆ ಇತ್ತು ನಾನಾ ಭೂಷಣಗಳನ್ನೆಲ್ಲ ತನ್ನೊಳಗೆ (ಸಾಧ್ಯರೂಪದಿಂದ) ಇಟ್ಟುಕೊಂಡಿರುವ ಚಿನ್ನದ ಮುದ್ದೆಯಂತೆ ಆ ಬ್ರಹ್ಮ!

೨೦ "ಸ್ವಪ್ನಕಾಲದಲ್ಲಿ ಸ್ವಪ್ನವೇ ಜಾಗ್ರತ್ತು: ಜಾಗ್ರತ್ಕಾಲದಲ್ಲಿ ಜಾಗ್ರತ್ತೇ ಸ್ವಪ್ನ" ಎಂಬುದು ಸತ್ಯವನ್ನು ಅರಿತಾಗ ಸರಿ ಎಂದು ತೋರುವುದು (ಆ ಸತ್ಯವು

ಚಿತ್ತಮಾತ್ರತಯಾ ಬುದ್ಧಂ ಮೃಗತೃಷ್ಣಾಂಬುವತ್ಸ್ಥಿತಂ ।
ಜಾಗ್ರತ್ಸ್ವಪ್ನತ್ವಮಾಯಾತಿ ವಿಚಾರವಿಕಲೀಕೃತಂ ॥ ೨೧ ॥

ಸಮ್ಯಗ್ಜ್ಞಾನೇನ ಭೂತಾನಿ ಜ್ಞಸ್ಯ ದೇಹತಯಾ ಸಹ ।
ಸೀರಬಂಧಂ ವಿಮುಂಚಂತಿ ಗತಕಾಲ ಇವಾಂಬುದಾಃ ॥ ೨೨ ॥

ಯಥಾ ಗಲಿತುಮಾರಬ್ಧೋ ಘನೋ ಗಗನತಾಮಿಯಾತ್ ।
ತಥಾ ಸತ್ಯಾವಬೋಧೇನ ಶಾಮ್ಯೇತ್ಸಾತ್ಮಗ್ರಹಂ ಜಗತ್ ॥ ೨೩ ॥

---

ಯಾವುದು, ಎಂದರೆ ಜಾಗ್ರತ್ತು ಬೇರೆ ಸ್ವಪ್ನವು ಬೇರೆ ಎಂದು ತಿಳಿಯುವ) ಮನಸ್ಸನ್ನು ಪರಿಗ್ರಹಿಸದಿರುವಿಕ

(ವ್ಯಗ್ರಸ್ಯ ವಾಸನಾ ವಿಸ್ತಾರಾಭಿಸಿ ವಿಷ್ಟಸ್ಯ ಮನಸಃ ಅಪರಿಗ್ರಹಾತ್ ಅವನರೋಧಾತ್—ತಾ. ಪ್ರ.)

೨೧. ಚಿತ್ರಮಾತ್ರ ರೂಪವಾಗಿ ಬುದ್ಧವಾಗುವುದು : ಮೃಗ ತೃಷ್ಣಾಂಬುವಿನಂತೆ ಇರುವುದು : ಜಾಗ್ರತ್ತು ಸ್ವಪ್ನಗಳಲ್ಲಿ ಮಾತ್ರ ಸಿಕ್ಕುವುದು ವಿಚಾರದಿಂದ ತುಂಡುತುಂಡಾಗುವುದು. (ಇದು ಸೃಷ್ಟಿಯ ಸ್ವರೂಪವು.)

೨೨ ವರ್ಷಿಸುವ ಕಾಲವು ಕಳೆದು ಹೋದಮೇಲೆ ಮೋಡವು ಕರಗಿ ಹೋಗುವಂತೆ, ಜ್ಞಾನಿಗೆ ಸಮ್ಯಗ್ಜ್ಞಾನವು ಲಭಿಸುತ್ತಿದ್ದ ಹಾಗೆಯೇ, ದೇಹವೂ ಭೂತಗಳೂ ಪ್ರತ್ಯೇಕವಾಗಿರುವುವೆಂಬ ಸೀರಬಂಧವು ಸಡಲಿ ಹೋಗುವುದು.

೨೩. ಕರಗುವುದಕ್ಕೆ ಆರಂಭವಾಗಿರುವ ಮೋಡವೆಂತು ಗಗನವಾಗಿ ಹೋಗುವುದೋ, ಹಾಗೆಯೇ ಸತ್ಯವನ್ನು ತಿಳಿಯುತ್ತಲೂ ಸಾತ್ಮಗ್ರಹವಾದ ಜಗತ್ತೂ ಶಾಂತವಾಗುವುದು.

(ನಾತ್ಮಗ್ರಹ-ತಾನು ಪ್ರತ್ಯೇಕನಾಗಿದ್ದೇನೆಂಬ ಜ್ಞಾನ) ಆತ್ಮಗ್ರಹೋಽಹಂಕಾರಃ—ತಾ. ಪ್ರ )

ಶರದಭ್ರವದಾಲೂತಾ ಮೃಗತೃಷ್ಣಾಂಬುವತ್ತಥಾ ।
ಪುನಃ ಸಂಸ್ಪೃಶ್ಯಮಾನೈವ ಬೋಧಾದ್ಗಲತಿ ದೃಶ್ಯತಾ ॥ ೨೪ ॥

ಯಥಾ ದೀಪ್ತಾನಲೇ ಲೀನಂ ಸುವರ್ಣಂ ಘೃತಮಿಂಧನಂ ।
ಏಕತಾಂ ಯಾತಿ ವಿಜ್ಞಾನೇ ತಥಾ ಭುವನಚಿತ್ತದೃಕ್ ॥ ೨೫ ॥

ಬೋಧೇನ ತನುತಾಮೇತಿ ಪಿಂಡಬಂಧೋ ಜಗತ್ತ್ರಯೇ ।
ಪಿಶಾಚಬುದ್ಧಿಃ ಸದನೇ ಬೋಧಿತಸ್ಯ ಯಥಾ ಶಿಶೋಃ ॥ ೨೬ ॥

ಬೋಧಸ್ಯಾನಂತರೂಪಸ್ಯ ಸ್ವಯಮೇವಾತ್ಮನಾತ್ಮನಿ ।
ಜಗಚ್ಚಿತ್ತಾದಿತಾ ಭಾತಾ ಪಿಂಡಬಂಧಃ ಕಿಲಾತ್ರ ಕಃ ॥ ೨೭ ॥

---

೨೪. ಶರದೃತುವಿನ ಅಭ್ರಗಳಂತೆ, ಮೃಗತೃಷ್ಣಾ ಜಲದಂತೆ, ಹರಡಿಕೊಂಡಿರುವ ಈ ದೃಶ್ಯತೆಯು, ಜ್ಞಾನವು ಮುಟ್ಟುತ್ತಿದ್ದ ಹಾಗೆಯೇ ಕರಗಿ ಹೋಗುವುದು

೨೫. ಚೆನ್ನಾಗಿ ಪ್ರಜ್ವಲಿಸುತ್ತಿರುವ ಬೆಂಕಿಯಲ್ಲಿ ಹಾಕಿದ ಚಿನ್ನ, ತುಪ್ಪ, ಸೌದೆ, ಎಲ್ಲವೂ ಒಂದೇ ಆಗುವ ಹಾಗೆ, ವಿಜ್ಞಾನದಲ್ಲಿ ಬಿದ್ದ ಭುವನ, ಚಿತ್ತ, ದೃಕ್ಕು ಇವೂ ಒಂದೇ ಆಗುವುವು

೨೬. ಚೆನ್ನಾಗಿ ತಿಳಿಯ ಹೇಳಿದರೆ ಶಿಶುವಿಗೆ ಮನೆಯಲ್ಲಿ ಪಿಶಾಚವಿದೆಯೆಂಬ ಬುದ್ಧಿಯು ಹೇಗೆ ಶಿಥಿಲವಾಗುವುದೋ ಹಾಗೆಯೇ ಚೆನ್ನಾಗಿ ಬೋಧಮಾಡಲು ಜಗತ್ತ್ರಯದ ವಿಚಾರವಾಗಿರುವ ಪಿಂಡ ಬಂಧವು (ಇದು ಸತ್ಯವೆಂಬ ಜ್ಞಾನವು) ಶಿಥಿಲವಾಗುವುದು

(ಪಿಂಡ ಬಂಧೋ ಮೂರ್ತಾದ್ಯಾಕಾರಗ್ರಹಃ—ತಾ. ಪ್ರ.)

೨೭. ಅನಂತರೂಪವಾದ ಬೋಧವೇ ಸ್ವಯಮೇವ ಆತ್ಮನಾ ಆತ್ಮನಲ್ಲಿ ಜಗತ್ತಾ ಚಿತ್ತತಾ ಆದಿ (ಅಹಂತಾ)ಗಳು ಆಯಿತು ಎಂದ ಮೇಲೆ ಪಿಂಡ ಬಂಧವು (ಎಲ್ಲಿಂದ ಬಂತು?) ಯಾವುದು ?

(ಅಯಂ ಚ ಪೀನೀನೋ ನತು ಜತುಕಾಠಿಣ್ಯಾದಿ ವಿಲಯವತ್ ನಿಮಿತ್ತಾಪಾಯಾದ ಪೈತಿ ಕಿಂತು ಶುಕ್ತಿರೂಪ್ಯವತ್ ಪ್ರಾತಿಯೋಗಾಕತ್ವಾದ ಪುನರಾಗಾಮೀತ್ಯಾಶಯೇನಾಹ—ತಾ ಪ್ರ.)

ಬೋಧಾಬೋಧನಮೇವೇದಂ ಜಗಚ್ಚಿತ್ತಮಿವೋದಿತಂ ।
ತದೇವಾಸ್ತಂ ಗತಂ ಬೋಧಾತ್ಪಿಂಡಬಂಧಸ್ಯ ಕಾಸ್ತಿತಾ ॥ ೨೮ ॥

ಜಹಾತಿ ಪಿಂಡಕಾಠಿನ್ಯಂ ಜಾಗ್ರತ್ಸ್ವಪ್ನಾವಬೋಧತಃ ।
ಪರಾಂ ಪೇಲವತಾಮೇತಿ ಹೇಮ ದ್ರುತಮಿವಾಗ್ನಿನಾ ॥ ೨೯ ॥

ಯಥಾಸ್ಥಿತಂ ಬೋಧ ಏವ ಘನತಾಮಪಿ ಗಚ್ಛತಿ ।
ವಿನೈವ ದೇಶಕಾಲಾಭ್ಯಾಂ ತೌ ವಿನಿರ್ಮಾಯ ಹೇಮವತ್ ॥ ೩೦ ॥

ಜಾಗ್ರತ್ಯೇವಂ ವಿಚಾರೇಣ ಸ್ವಪ್ನಾಭೇ ಪೇಲವೇ ಸ್ಥಿತೇ ।
ಕ್ಷೀಯಮಾಣೇ ಶರತ್ಕಾಲೇ ಇವೈತಿ ತನುತಾಂ ರಸಃ ॥ ೩೧ ॥

---

೨೮. ಬೋಧದ ಅಬೋಧನದಿಂದಲೇ ಜಗತ್ತೂ ಚಿತ್ತ ಅಹಂತಾದಿಗಳೆಲ್ಲ ಉದಿತವಾಗಿರುವುದು. ಬೋಧವು ಲಭಿಸಿದರೆ ಅವೆಲ್ಲ ಅಸ್ತವಾಗುವುವು. ಹೀಗಿರಲು ಪಿಂಡಬಂಧವುಂಟು ಎನ್ನುವುದು ಯಾವುದು ?

(ತಥಾ ಚ ಅಸ್ಮೃತ ಜಗತ್ ಚಿತ್ತಭಾವೇನ ಅನ್ಯತಂ ಅಜ್ಞಾನ ಮೇವ ವಿಜೃಂಭತೇ ಇತಿ ಫಲಿತ ಮಿತ್ಯಾಹ—ತಾ. ಪ್ರ )

೨೯-೩೦. ಜಾಗ್ರತ್ತು ಸ್ವಪ್ನವಾದಾಗ ತನ್ನ ಪಿಂಡಕಾಠಿನ್ಯವನ್ನು ಬಿಟ್ಟು ಬೆಂಕಿಯಿಂದ ಕರಗಿದ ಚಿನ್ನದಂತೆ ತನ್ನ ಸ್ಥೂಲಭಾವವನ್ನು ಬಿಟ್ಟು ಸೂಕ್ಷ್ಮಭಾವ ವನ್ನು ಹೊಂದಿ, ಕನಸಾಗುವುದು—(ಆ ಕನಸಿನ ಭ್ರಾಂತಿಯೇ ಬಹಳ ಕಾಲವಿದ್ದು ಘನವಾದರೆ ಜಾಗ್ರತ್ತಾಗುವುದು.) ಆದರೆ ಈ ಜಾಗ್ರತ್ಸ್ವಪ್ನಗಳೆರಡರಲ್ಲಿಯೂ ಬೋಧವೊಂದೇ ಇರುವುದು. ಅದು ಯಥಾ ಸ್ಥಿತವಾಗಿರುವುದು. ಬೋಧವು ದೇಶಕಾಲಗಳನ್ನು ಲಕ್ಷಿಸದೆ, ಅವುಗಳನ್ನು ತಾನೇ ಹುಟ್ಟಿಸಿಕೊಂಡು, ಹೇಮದಂತೆ ಮತ್ತೆ ಘನವಾದಾಗ ಜಾಗ್ರತ್ತಾಗುವುದು.

೩೧ ಹೀಗೆ ಜಾಗ್ರತ್ಸ್ವಪ್ನಗಳನ್ನು ಕುರಿತು ವಿಚಾರ ಮಾಡುವುದರಿಂದ ಜಾಗ್ರತ್ತೂ ಸ್ವಪ್ನದಂತೆ ಹಗುರವಾಗಿ ಹೋಗಲು, ಶರತ್ಕಾಲವು ಕಳೆಯಲು ರಸ (ಭೋಗಾಶೆ-ಜಲ)ವೂ ಕ್ಷೀಣವಾಗುವ ಹಾಗೆ (ಪಿಂಡಬಂಧವೂ ಕ್ಷೀಣವಾಗುವುದು.)

ಪರಾಂ ವೇಲವತಾಂ ಯಾತಾ ದೃಶ್ಯಲಕ್ಷ್ಮ್ಯಃ ಸ್ಥಿತಾ ಅಪಿ ।
ಸ್ವಪ್ನಾ ಇವ ಪರಿಜ್ಞಾತಾ ನ ಸ್ವದಂತೇ ವಿವೇಕಿನಃ ॥ ೩೨ ॥

ಕ್ವ ಕಿಲ ಸ್ವಾತ್ಮವಿಶ್ರಾಂತಿಃ ಕ್ವೈತದ್ವಿಷಯವೇದನಂ ।
ಸುಷುಪ್ತಜಾಗ್ರತೋರೈಕ್ಯಂ ಭ್ರಾಂತಾಭ್ರಾಂತಾತ್ಮನೋರ್ಭವೇತ್ ॥ ೩೩ ॥

ಚಿತ್ತಮಾತ್ರೇ ಭ್ರಾಂತಿಮಾತ್ರೇ ಸ್ವಪ್ನಮಾತ್ರಾತ್ಮನಿ ಸ್ಥಿತೇ ।
ಜಗತೀಹ ಪದಾರ್ಥೇಭ್ಯಃ ಸತ್ಯಬುದ್ಧಿರ್ನಿವರ್ತತೇ ॥ ೩೪ ॥

ಕಸ್ಯ ಸ್ವದಂತೇಽಸತ್ಯಾನಿ ಕಥಮೇವ ಮಹಾಮತೇ ।
ಮೃಗತೃಷ್ಣಾಜಲಾನೀವ ದೃಶ್ಯಾನ್ಯಪಿ ಪುರಃಸ್ಥಿತೈಃ ॥ ೩೫ ॥

ಸತ್ಯಬುದ್ಧೌ ವಿಲೀನಾಯಾಂ ಜಗತ್ಪಶ್ಯತಿ ಶಾಂತಧೀಃ ।
ಜಾಲದೀಪಾಂಶುಜಾಲಾಭಮಪಿಂಡಾತ್ಮಾಂಬರಾತ್ಮಕಂ ॥ ೩೬ ॥

---

೩೨. ದೃಶ್ಯಲಕ್ಷ್ಮಿಯರು ಹೀಗೆ ಬಹಳ ಬಡವಾಗಿ ಹೋಗಿ, ಅವರು ಇದ್ದರೂ, ವಿವೇಕಿಗೆ, ಸ್ವಪ್ನದಂತೆಯೇ ಬೋಧವಾಗಿ, ರುಚಿಸದೆ ಹೋಗುವುದು

೩೩. ಪರಿಪೂರ್ಣ ಅಖಂಡಾನಂದ ಸಂಪ್ರಾಪ್ತಿರೂಪವಾದ ಆತ್ಮ ವಿಶ್ರಾಂತಿ ಯೆಲ್ಲಿ? ಅಪೂರ್ಣ ಖಂಡ ಸುಖಾಭಾಸವಾದ ವಿಷಯ ವೇದನವೆಲ್ಲಿ? ಎರಡೂ ಒಂದೇ ಎನ್ನುವುದಾದರೆ ಸುಷುಪ್ತಿ ಜಾಗ್ರತ್ತುಗಳು ಐಕ್ಯವಾಗಬೇಕಾದೀತು! ಅದರಿಂದ ಭ್ರಾಂತರಿಗೆ ವಿಷಯವೇದನ; ಅಭ್ರಾಂತರಿಗೆ ಆತ್ಮವಿಶ್ರಾಂತಿ ಎನ್ನಬೇಕು.

೩೪. ಚಿತ್ತ ಮಾತ್ರವು ಭ್ರಾಂತಿಮಾತ್ರವಾಗಿ ಸ್ವಪ್ನಮಾತ್ರವಾಗಿ ಆತ್ಮನಲ್ಲಿ ತೋರಲು, ಜಗತ್ತಿನ ಪದಾರ್ಥಗಳು ಸತ್ಯವೆಂಬ ಬುದ್ಧಿಯು ನಿವೃತ್ತಿಯಾಗುವುದು.

೩೫. ಎಲೈ ಮಹಾಮತಿಯೇ, ಎದುರಿಗಿದ್ದ ಮಾತ್ರಕ್ಕೇ ಮೃಗತೃಷ್ಣಾ ಜಲವು (ಯಾರಿಗೂ ಪಾನಾದಿಗಳಿಗೆ ದೊರೆತು ತೃಪ್ತಿಯನ್ನು ಕೊಡುವುದಿಲ್ಲವೋ ಅಂತೆಯೇ) ದೃಶ್ಯಗಳೂ ಅಸತ್ಯವಾಗಿರುವುದರಂದ (ಬಲ್ಲ) ಯಾವನಿಗೂ ಹೇಗೂ ರುಚಿಸುವುದಿಲ್ಲ (ಚಿತ್ರದ ಹಣ್ಣು ಯಾರಿಗೆ ಬೇಕಾದೀತು?)

೩೬ ಜಗತ್ ಸತ್ಯ ಬುದ್ಧಿಯು ಲಯವಾಗಿ ಹೋಗಲು, ಶಾಂತವಾದ ಬುದ್ಧಿಯುಳ್ಳ ತಜ್ಞನು ಜಗತ್ತನ್ನು ಜಾಲರಿಯಿಂದ ಬರುತ್ತಿರುವ ದೀಪದ ಕಿರಣ ಗಳಂತೆ, ಅಪಿಂಡವಾಗಿ, ಆಕಾಶಾತ್ಮಕವಾಗಿ ಕಾಣುವನು

ಜಾಗ್ರತೋ ವಸ್ತುತಃ ಪೂಸ್ಯಾತ್ಪರಿಜ್ಞಾತಾಸ್ನಿವರ್ತತೇ ।
ಚಿತ್ತಭ್ರಮಾತ್ಮನೋ ಭ್ರಾಂತಿರೂಪಾಸ್ವಾದನಭಾವನಾ ॥ ೩೭ ॥

ಯದವಸ್ತ್ವಿತಿ ವಿಜ್ಞಾತಂ ತತ್ರೋಪಾದೇಯತಾ ಕುತಃ ।
ಕೇನ ಸ್ವಪ್ನಂ ಪರಿಜ್ಞಾಯ ಸ್ವಪ್ನಹೇಮಾಭಿಗಮ್ಯತೇ ॥ ೩೮ ॥

ಸ್ವಪ್ನಾದಿವ ಪರಿಜ್ಞಾತಾದ್ರಸೋ ದೃಶ್ಯಾನ್ನಿವರ್ತತೇ ।
ದ್ರಷ್ಟೃದೃಶ್ಯದಶಾದೋಷಗ್ರಂಥಿಚ್ಛೇದಃ ಪ್ರವರ್ತತೇ ॥ ೩೯ ॥

ನೀರಸಃ ಶಾಂತಮನನೋ ನಿರ್ವಾಣಾಹಂಕೃತಿಃ ಕೃತೀ ।
ವೀತರಾಗೋ ನಿರಾಯಾಸಃ ಶಾಂತಸ್ತಿಷ್ಠತಿಬುದ್ಧಧೀಃ ॥ ೪೦ ॥

(ನಾನಾ ಛಿದ್ರಘಟೋದರ ಸ್ಥಿತ ಮಹಾದೀಪ ಪ್ರಭಾ ಭಾಸ್ವರಂ । ಜ್ಞಾನಂ ಯಸ್ಯತು ಚಕ್ಷುರಾದಿಕರಣದ್ವಾರಾಬಹಿಃ ಸ್ಪಂದತೇ ಜಾನಾಮೀತಿ ತಮೇವ ಭಾಂತ ಮನುಭಾತ್ಯೇತತ್ಸಮಸ್ತಂಜ ತಸ್ಮೈ ಶ್ರೀ ಗುರುಮೂರ್ತಯೇನಮಃ ಇದಂ ಶ್ರೀ ದಕ್ಷಿಣಾಮೂರ್ತಯೇ ॥—ಶ್ರೀ ಶಂಕರರು.)

೩೭. ಚಿತ್ತ ಭ್ರಾಂತಿಯಾದವನು ಭ್ರಾಂತಿಯಿಂದ ಏನನ್ನೋ ಆಸ್ವಾದನ ಮಾಡುತ್ತಿರುವೆನೆಂದುಕೊಂಡಿರುವನು : ಅವನಿಗೆ ಭ್ರಾಂತಿಯು ನಿವೃತ್ತಿಯಾದ ಮೇಲೆ, ವಸ್ತುವು ಇಲ್ಲ ಎಂದು ತಿಳಿದಾಗ ಆ ಆಸ್ವಾದನ ಭಾವನೆಯು ಇಲ್ಲ ವಾಗುವುದು

೩೮. (ಅದರಿಂದ) ಯಾವುದು ವಸ್ತುವೋ ಅದರಲ್ಲಿ ಉಪಾದೇಯತೆ (ಬೇಕೆಂಬ ಬುದ್ಧಿ)ಯೇ ಹೊರತು ಅವಸ್ತುವೆಂದು ತಿಳಿದಿರುವುದರಲ್ಲೂ ಉಪಾ ದೇಯತೆಯು ಎಂತು ಬಂದೀತು? ಕನಸೆಂದು ತಿಳಿದ ಮೇಲೆ ಯಾವನು ತಾನೇ ಕನಸಿನಲ್ಲಿ ಕಂಡ ಕನಕವನ್ನು ಹುಡುಕಿಕೊಂಡು ಹೋಗುವನು?

೩೯. ಕನಸೆಂದು ತಿಳಿದಮೇಲೆ ಅದರಲ್ಲಿ ಆಸಕ್ತಿಯಿರುವುದೇನು? ಹಾಗೆಯೇ ತಿಳಿದ ಮೇಲೆ ದೃಶ್ಯದಲ್ಲಿ ಆಸಕ್ತಿಯು ಇಲ್ಲವಾಗುವುದು: ದ್ರಷ್ಟೃ–ದೃಶ್ಯ– ಉಂಟೆಂದು ಕೊಂಡಿರುವ ದೋಷ ಗ್ರಂಥಿಯು ಛಿಧ್ರವಾಗುವುದು

೪೦ ಯಾವನು ಬುದ್ಧಧೀಯೋ ಬೋಧಸಂಪನ್ನನೋ ಅವನು ಭೋಗ ಚಾಪಲ್ಯವಿಲ್ಲದ ನೀರಸನು: ಶಾಂತ ಮನನನು: ಅಹಂಕಾರವು ಇಲ್ಲದವನು:

ರಸೇ ನೀರಸತಾಂ ಯಾತೇ ವಾಸನಾ ಪ್ರವಿಲೀಯತೇ ।
ಶಿಖಾಯಾಂ ಪ್ರವಿಲೀನಾಯಾಂ ಪ್ರದೀಪಸ್ಯಾಂಶವೋ ಯಥಾ ॥ ೪೧ ॥

ಬೋಧಾದ್ದೀಪಾಂಶುಜಾಲಾಭಮಘನಂ ವ್ಯೋಮ ದೃಶ್ಯತೇ ।
ಭ್ರಾಂತಿರೂಪಂ ಜಗತ್ಕೃತ್ಸ್ನಂ ಗಂಧರ್ವನಗರಂ ಯಥಾ ॥ ೪೨ ॥

ನೈವಾತ್ಮಾನಂ ನಚಾಕಾಶಂ ನ ಶೂನ್ಯಂ ನ ಚ ವೇದನಂ ।
ಅತ್ಯಂತಪರಿಣಾಮೇನ ಪಸ್ಯನ್ಪಶ್ಯತಿ ತತ್ಪದಂ ॥ ೪೩ ॥

ಯತ್ರ ನಾತ್ಮಾ ನ ಶೂನ್ಯಂ ಚ ನ ಜಗತ್ಕಲನಾ ನಚ ।
ನ ಚಿತ್ತದೃಶ್ಯೋದಯಧೀಃ ಸರ್ವಂ ಚಾಸ್ತಿ ಯಥಾಸ್ಥಿತಂ ॥ ೪೪ ॥

---

ಕೃತಿಯು (ಮಾಡಬೇಕಾದುದನ್ನೆಲ್ಲ ಮಾಡಿದವನು.) ವೈರಾಗ್ಯವಂತನು: ಆಯಾಸ ವಿಲ್ಲದವನು. ಶಾಂತನಾಗಿರುವನು.

೪೧. ಭೋಗ ಚಾಪಲ್ಯವು ಶಾಂತವಾಗಲು ವಾಸನೆಯು ಇಲ್ಲವಾಗುವುದು. ದೀಪದ ಶಿಖೆಯೇ ಆರಿ ಹೋಗಲು ಕಿರಣಗಳೂ ಇರುವವೇನು ?

೪೨. ಜ್ಞಾನವು ಲಭಿಸಿದಾಗ ಈ ಜಗತ್ತೆಲ್ಲವೂ ಭ್ರಾಂತಿರೂಪವಾಗಿ, ಗಂಧರ್ವ ನಗರಾಕಾರವಾಗಿ, ದೀಪಕಿರಣಮಾಲೆಯಾಗಿ, ಮೋಡವಿಲ್ಲದ ಆಕಾಶವಾಗಿ, ಕಾಣುವುದು.

೪೩. ಎಲ್ಲವೂ ಅತ್ಯಂತ ಪರಿಣಾಮವಾಗುವುದರಿಂದ ತನ್ನನ್ನೇ ಆಗಲಿ, ಆಕಾಶವನ್ನಾಗಲಿ, ಶೂನ್ಯವನ್ನಾಗಲಿ, ವೇದನವನ್ನಾಗಲಿ ಕಂಡರೂ ತಿಳಿದರೂ ಕಾಣದಂತೆಯೋ ತಿಳಿಯದಂತೆಯೋ ಇರುವನು.

(ಸಪ್ತಮ ಭೂಮಿಕಾ ಸ್ಥಿತಿ ಲಕ್ಷಣೇನ ಅತ್ಯಂತ ಪರಿಣಾಮೇನ—ತಾ. ಪ್ರ.)

೪೪. ಎಲ್ಲಿ ಆತ್ಮನಾಗಲಿ, ಶೂನ್ಯನಾಗಲಿ, ಜಗತ್ತಾಗಲಿ, ಸಂಕಲ್ಪವಾಗಲಿ, ಚಿತ್ತವಾಗಲಿ ದೃಶ್ಯವು ಉದಿಯಿಸಿರುವುದೆಂಬ ಬುದ್ಧಿಯಾಗಲೀ ಇಲ್ಲವೋ ಅಲ್ಲಿ ಎಲ್ಲವೂ ಯಥಾ ಸ್ಥಿತವಾಗಿರುವುದು

ಭೂಮ್ಯಾದಿತಾಽಜ್ಞಸಂಬುದ್ಧಾ ಜ್ಞಾನಾದಸ್ತಮುಪಾಗತಾ ।
ಜ್ಞಸ್ಯ ಶೂನ್ಯೈವ ಸಂಪನ್ನಾ ಸಂಸ್ಥಿತಾಪಿ ನ ವಿದ್ಯತೇ　　॥ ೪೫ ॥

ಭವತ್ಯೇಕಸಮಾಧಾನ ಸೌಮ್ಯಾತ್ಮಾ ವ್ಯೋಮ–ನಿರ್ಮಲಃ ।
ತಿಷ್ಠತ್ಯಪಗತಾಸಂಗಃ ಸ್ಥಿತ ಏವಾಪ್ಯಸತ್ಸಮಃ　　॥ ೪೬

ಅಸ್ತಂಗತಮನಾ ಮೌನೀ ನಿರೋಧಪದವೀಂ ಗತಃ ।
ತೀರ್ಣಃ ಸಂಸಾರಜಲಧೇಃ ಕರ್ಮಣಾಮಂತಮಾಗತಃ　　॥ ೪೭ ॥

ತನುಭುವನಗಗನಗಿರಿಗಣ–
ಕರಣಪರಂ ಪರಮಮಜ್ಞಾನಂ ।
ವಿಗಲತಿ ಗಲಿತೇ ತಸ್ಮಿನ್
ಸಕಲಮಿದಂ ವಿದ್ಯಮಾನಮಪಿ　　॥ ೪೮ ॥

---

೪೫. ಅಜ್ಞಾನಿಗೆ ಗೋಚರವಾಗುವ ಭೂಮ್ಯಾದಿತೆಗಳೆಲ್ಲವೂ ಜ್ಞಾನದಿಂದ ಅಸ್ತಂಗತವಾಗಿರಲು, ಜ್ಞಾನಿಗೆ ಎಲ್ಲವೂ ಶೂನ್ಯವಾಗಿಯೇ ತೋರುವುದು. ಎದುರಿಗೆ ಇದ್ದರೂ ಇಲ್ಲದಂತಾಗುವುದು

೪೬ ಏಕ ಸಮಾಧಾನದಿಂದ ಸೌಮ್ಯಾತ್ಮನಾದವನು ವ್ಯೋಮದಂತೆ ನಿರ್ಮಲನಾಗುವನು. ಸಂಗದಿಂದ ಸಂಪೂರ್ಣವಾಗಿ ಮುಕ್ತನಾದ ಅವನು ಇದ್ದರೂ ಇಲ್ಲದಂತೆಯೇ ಇರುವನು

೪೭. ಯಾವುದರಲ್ಲಿಯೂ ಅಭಿನಿವೇಶವಿಲ್ಲದವನಾಗಿ, ಮೌನಿಯಾಗಿ, ನಿರೋಧ ಪದವಿಯನ್ನು ಹೊಂದಿದವನಾಗಿ, ಸಂಸಾರ ಜಲಧಿಯನ್ನು ದಾಟಿದವನಾಗಿ, ಸರ್ವ ಕರ್ಮಗಳ ಕೊನೆಯನ್ನೂ ಕಂಡವನಾಗುವನು.

೪೮. ದೇಹ, ಜಗತ್ತು, ಆಕಾಶ, ಗಿರಿಗಣ, ಕರಣ ಮೊದಲಾದವು ಉಂಟೆಂಬ ಪರಮ–ಅಜ್ಞಾನವು ಬಿದ್ದು (ಜೀರ್ಣವಾಗಿ) ಹೋಗುವುದು. ಅದು ಹೋಗಲು, ಇವೆಲ್ಲವೂ ಇದ್ದರೂ ಇಲ್ಲವಾಗುವುದು

(ತನೂನಾಂ ಚತುರ್ವಿಧ ಶರೀರಾಣಾಂ ತದಾಧಾರಣಾಂ ಭುವನಾನಾಂ ತದಾಧಾರಸ್ಯ ಗಗನಸ್ಯ ವಿಹಾರಸ್ಥಾನಾನಾಂ ಗಿರಿ ಗಣಾನಾಂ

ಸಂಶಾಂತಾಂತಃಕರಣೋ
ಗಲಿತವಿಕಲ್ಪಃ ಸ್ವರೂಪಸಾರಮಯಃ ।
ಪರಮಶಮಾಮೃತತೃಪ್ತ-
ಸ್ತಿಷ್ಠತಿ ವಿದ್ವಾನ್ನಿರಾವರಣಃ ॥ ೪೯ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ವಿಶ್ರಾಂತಿಯೋಗೋಪದೇಶೋ" ನಾಮ
ಏಕಪಂಚಾಶಃ ಸರ್ಗಃ

---

ತತ್ಸಾಧನಾನಾಂ ಕರಣಾನಾಂ ಚ ಪರಮುಪಾದಾನ ಕಾರಣಂ ಪರಮ
ಮಜ್ಞಾನಂ-ಮೂಲಾಜ್ಞಾನಮೇವ ನಾನ್ಯತ್ ।—ತಾ ಪ್ರ.)

೪೯. ಚೆನ್ನಾಗಿ ಶಾಂತವಾಗಿರುವ ಅಂತಃಕರಣದಲ್ಲಿ ಯಾವ ವಿಕಲ್ಪಗಳೂ ಇಲ್ಲದೆ ಎಲ್ಲವೂ ಹೋಗಿ ಸ್ವರೂಪಸಾರವೊಂದೇ ಉಳಿದವನಾಗಿ, ಉತ್ತಮವಾದ ಶಾಂತಿಯೆಂಬ ಅಮೃತದಿಂದ ತೃಪ್ತನಾಗಿ, ವಿದ್ವಾಂಸನು ನಿರಾವರಣನಾಗಿ ಇರುವನು.

(ನಿರಾವರಣ ಭೂಮಾನಂದ ಸ್ವಭಾವಃ—ತಾ ಪ್ರ )

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿಶ್ರಾಂತಿಯೋಗೋಪದೇಶ" ಎಂಬ
ಐವತ್ತೊಂದನೆಯ ಸರ್ಗವು

# ದ್ವಿಪಂಚಾಶಃ ಸರ್ಗಃ

ಶ್ರೀ ರಾಮ ಉವಾಚ:—

ಬೋಧೋ ಜಗದಿವಾಭಾತಿ ಮುನೇ ಯೇನ ಕ್ರಮೇಣ ಹ ।
ತಂ ಕ್ರಮೇಣ ಕ್ರಮಂ ಬ್ರೂಹಿ ಭೂಯೋ ಭೇದನಿವೃತ್ತಯೇ ॥ ೧ ॥

ಶ್ರೀ ವಸಿಷ್ಠ ಉವಾಚ:—

ವೃಕ್ಷಸ್ಯೇವ ವಿಮೂಢಸ್ಯ ಯದ್ದೃಷ್ಟ್ವಾ ತತ್ಸ್ವಚೇತಸಿ ।
ಯಸ್ನ ದೃಷ್ಟ್ವಾ ನ ತಚ್ಚಿತ್ತೇ ಭವತ್ಯಲ್ಪತರಸ್ಮೃತೇಃ ॥ ೨ ॥

# ಐವತ್ತೆರಡನೆಯ ಸರ್ಗವು

ಶ್ರೀರಾಮನು ಕೇಳಿದನು —

೧. ಎಲೈ ಮುನೀಂದ್ರನೆ, ಬೋಧವೇ ಜಗತ್ತಿನಂತೆ ಭಾಸವಾಗುವುದು ಎಂದೆಯಲ್ಲವೆ? ಅದು ಯಾವ ಕ್ರಮದಿಂದ ಆಗುವುದು ಎಂಬುದನ್ನು ಕ್ರಮವಾಗಿ ಇನ್ನೊಮ್ಮೆ ಹೇಳು ನನಗೆ ಭೇದ ನಿವೃತ್ತಿಯಾಗಲಿ.

(ಬೋಧಃ ಕೂಟಸ್ಥಚಿದಾತ್ಮಾ ವಾದ್ಯಂತರ ಕಲ್ಪನಾ ಭೇದ ಖಂಡನೈಃ ಸಮರ್ಥನ ಕ್ರಮೇಣ—ತಾ. ಪ್ರ.)

ಶ್ರೀ ವಸಿಷ್ಠನು ಹೇಳಿದನು:—

೨. ಮರದಂತೆ ಹರಡಿರುವ ಈ ಜಗತ್ತು ಯಾವುದು ಕಾಣಿಸುವುದೋ ಅದೇ ಮೂಢನ ಚಿತ್ತದಲ್ಲಿರುವುದು. ಯಾವುದು ಕಾಣಿಸುವುದಿಲ್ಲವೋ ಅದು ಮೂಢನ ಚಿತ್ತಕ್ಕೆ ಬರುವುದೇ ಇಲ್ಲ. ಏಕೆಂದರೆ ಅವನು ಅಲ್ಪವಾದ ಸ್ಮೃತಿಯುಳ್ಳವನು.

(ಚಿದಾತ್ಮನಃ ಜಗದ್ಭಾವೋಽಯಮ ನಿರ್ವಚಸೀಯ ಏವೇತ್ಯಸ್ಯಾರ್ಥಸ್ಯ ಸಮರ್ಥನಾಯ ಪ್ರಥಮಂ ದೃಷ್ಟಿ ಸೃಷ್ಟಿ ಪಕ್ಷಮವಲಂಬ್ಯ ದೃಷ್ಟಾನ್ತಯ ವ್ಯತಿ ರೇಕಾನು ವಿಧಾಯಿ ಸ್ಥಿತಿ ಕತ್ವಂ ತಸ್ಯದರ್ಶಯತಿ .ವಿಮೂಢಸ್ಯ.... ನಾನಾಕಾರಂ

ಭವ್ಯಃ ಪಶ್ಯತಿ ಶಾಸ್ತ್ರಾರ್ಥಮೇವ ಪೂರ್ವಾಪರಾನ್ವಿತಂ ।
ನ ದೃಷ್ಟಿವಿಷಯಂ ವಸ್ತು ಯತ್ಪಶ್ಯತಿ ಕರೋತಿ ತತ್ ॥ ೩ ॥

ಭಾವಾನುಷ್ಠಾನನಿಷ್ಠಃ ಸನ್ಶಾಸ್ತ್ರಾರ್ಥೈಕಮನಾ ಮುನಿಃ ।
ಭೂತ್ವೋಪದೇಶಂ ತ್ವಮಿಮಂ ಶೃಣು ಶ್ರವಣಭೂಷಣಂ ॥ ೪ ॥

ಇಯಂ ದೃಶ್ಯಭರಭ್ರಾಂತಿರ್ನನ್ವವಿದ್ಯೇತಿ ಚೋಚ್ಯತೇ ।
ವಸ್ತುತೋ ವಿದ್ಯತೇ ನೈಷಾ ತಾಪನದ್ಯಾಂ ಯಥಾ ಪಯಃ ॥ ೫ ॥

---

ಯಜ್ಜಗದ್ರೂಪಂತತ್ ದೃಷ್ಟೌ ಸತ್ಯಾಮೇವ ಅಸ್ತೀತಿ ಸ್ವಚೇತಸಿ ಪ್ರಸಿದ್ಧಂ ನಾನ್ಯಥಾ। ಅತ ಏವ ಹ್ಯಲ್ಪತರಮಪಿ ದೃಷ್ಟಮೇವ ಸ್ಮರ್ಯತೇ ನ ಬಹ್ವಪ್ಯದೃಷ್ಟಂ ತತ್ಸತಾಃಪ್ರಸಿದ್ಧೇರಿತ್ಯರ್ಥಃ—ತಾ. ಪ್ರ.)

೩. (ಮೂಢನಲ್ಲದ) ಭವ್ಯನು ಪೂರ್ವಾಪರಗಳು ಸೇರಿರುವ ಶಾಸ್ತ್ರಾರ್ಥವನ್ನು ನೋಡುವನು ದೃಷ್ಟಿ ವಿಷಯವಲ್ಲದ ವಸ್ತುವನ್ನೂ ತಿಳಿದು ತನ್ನದು ಮಾಡಿ ಕೊಳ್ಳುವನು

(ವಿದ್ವದವಿದುಷೋಃ ಶಾಸ್ತ್ರಾ ಶಾಸ್ತ್ರಾನುಸಾರಿ ಕ್ರಿಯಾ ವೈಲಕ್ಷಣ್ಯಾದರ್ಶನಾ ದಪಿ ತತ್ತದ್ದೃಷ್ಟ್ಯಾನುಸಾರ ವ್ಯವಸ್ಥಿತ್ಯೈವ ಜಗತ್ಸತ್ತಾ ಗಮ್ಯತ ಇತ್ಯಾಶಯೋ ನಾಹ-ಭವ್ಯ ಇತಿ। ದೃಷ್ಟೇರ್ನೇತ್ರಸ್ಯ ವಿಷಯಂ ಸನ್ನಿಕೃಷ್ಟಮಪಿ ನಿಷಿದ್ಧಂ ವಸ್ತು ಭೋಗ್ಯತಯಾ ನ ಪಶ್ಯತಿ।—ತಾ. ಪ್ರ.)

೪. ಭಾವವು ಕೂಡಿರುವ ಅನುಷ್ಠಾನ ಮಾಡುವವನಾಗಿ, ಶಾಸ್ತ್ರಾರ್ಥ ವೊಂದರಲ್ಲೇ ಮನಸ್ಸಿಟ್ಟು, ಮುನಿಯಾಗಿ, ಈ ಉಪದೇಶವನ್ನು ಕೇಳು. ಇದು ಶ್ರವಣ ಭೂಷಣವು

೫. ದೃಶ್ಯದಿಂದ ತುಂಬಿರುವ ಈ ಭ್ರಾಂತಿಯೇ ಅವಿದ್ಯೆಯೆಂದೂ ಹೇಳುತ್ತಾ ರಷ್ಟೆ? ಈ ಅವಿದ್ಯೆಯೆನ್ನುವುದೇ, ವಾಸ್ತವ್ಯವಾಗಿ ನೋಡಿದರೆ, (ಇದೊಂದು ಇದೆಯೇ ಎಂದು ಹುಡುಕಿ ನೋಡಿದರೆ), ತಾಪನದಿಯಲ್ಲಿ ಹೇಗೆ ನೀರೇ ಇಲ್ಲವೋ ಹಾಗೆಯೇ ಇದೂ ಇಲ್ಲವೇ ಇಲ್ಲ.

ಉಪದೇಶ್ಯೋಪದೇಶಾರ್ಥಮೇನಾಂ ಮದುಪರೋಧತಃ ।
ಸತ್ಯಾಮಿವ ಕ್ಷಣಂ ತಾವದಾಶ್ರಿತ್ಯ ಶ್ರೂಯತಾಮಿದಂ ॥ ೬ ॥

ಕುತ ಏಷಾ ಕಥಂ ಚೇತಿ ವಿಕಲ್ಪಾನನುದಾಹರನ್ ।
ನೇದಮೇಷಾ ನ ಚಾಸ್ತೀತಿ ಸ್ವಯಂ ಜ್ಞಾಸ್ಯಸಿ ಬೋಧತಃ ॥ ೭ ॥

ಯದಿದಂ ದೃಶ್ಯತೇ ಕಿಂಚಿಜ್ಜಗತ್ಸ್ಥಾವರಜಂಗಮಂ ।
ಸರ್ವಂ ಸರ್ವಪ್ರಕಾರಾಢ್ಯಂ ಕಲ್ಪಾಂತೇ ತದ್ವಿನಶ್ಯತಿ ॥ ೮ ॥

ಅಸ್ಯ ಭಾಗವಿಭಾಗಾತ್ಮಾ ನಾಶೋಽವಶ್ಯಮವಾರಿತಃ ।
ಬಿಂದುನಾ ಬಿಂದುನಾ ಬೋಧೇ ಉದ್ಧೃತಸ್ಯಾಸ್ತಿ ಹಿ ಕ್ಷಯಃ ॥ ೯ ॥

---

೬. ಉಪದೇಶ್ಯವಾದ ಅರ್ಥವನ್ನು ಉಪದೇಶಮಾಡಬೇಕಾಗಿರುವುದರಿಂದ, ನನ್ನ ಬಲವಂತಕ್ಕಾಗಿ, ಒಂದು ಕ್ಷಣಕಾಲ, ಅವಿದ್ಯೆಯು ಇದೆ ಎಂದುಕೊಂಡು ನಾನು ಹೇಳುವುದನ್ನು ಕೇಳು.

೭. ಇದು ಎಲ್ಲಿಂದ ಹೇಗೆ ಬಂತು ಎಂದು ಮುಂತಾದ ಸಂಶಯಗಳನ್ನು ನಾನು ಪರಿಹರಿಸದೆ ಇದ್ದರೂ, 'ಅವಿದ್ಯೆಯೆಂಬುದೊಂದು ಇಲ್ಲ' ಎಂದು ಜ್ಞಾನ ಬಲದಿಂದ ನೀನೇ ತಿಳಿಯುವೆ.

೮. ಈಗ ಸ್ಥಾವರ ಜಂಗಮಾತ್ಮಕವಾಗಿ ಕಾಣುತ್ತಿರುವ ಈ ಜಗತ್ತೆಲ್ಲವೂ, ನಾನಾ ಪ್ರಕಾರವಾಗಿರುವ ಈ ಸರ್ವವೂ, ಕಲ್ಪಾಂತದಲ್ಲಿ ವಿನಾಶವನ್ನು ಹೊಂದುವುದು

(ಇತ್ಥಂ ವಿವರ್ತಪಕ್ಷಮನುಭವ ಪರ್ಯವಸಿತಂ ಪ್ರದರ್ಶ್ಯ ಪಕ್ಷಾಂತರೇಷ್ವ ದೋಷಾನ್ ವಿವಕ್ಷುಃ ಸರ್ವಸ್ಯೈವ ಪ್ರಪಂಚಸ್ಯ ವೃಕ್ಷಶಾಖಾನ್ಯಾಯೇನ ಬ್ರಹ್ಮಾ ಭೇದಮಭ್ಯುಪಗಚ್ಛತಾಂ ಪಕ್ಷೇ ಬ್ರಹ್ಮಣಃ ಆನಂತ್ಯಹಾನಿಃ ಸ್ಯಾದಿತಿ ದೋಷಂ ವಕ್ತುಂ ಜಗತೋ ನಶ್ವರತ್ವಂ ಪ್ರತಿಜಾನೀತೇ—ತಾ. ಪ್ರ.)

೯. ಈ ಜಗತ್ತಿನ ಭಾಗ ವಿಭಾಗವಾಗಿರುವ ಯಾವ ಸ್ವರೂಪವುಂಟೋ ಅದು, ಜ್ಞಾನ ಲಾಭವಾದಾಗ ನಾಶವಾಗುವುದು ತಪ್ಪಿದ್ದಲ್ಲ : (ಮರಗಳ ಎಲೆಗಳ ಮೇಲೆ) ತೊಟ್ಟು ತೊಟ್ಟಾಗಿ ಇರುವ ನೀರು ಎಂದಿಗಾದರೂ ಉಳಿಯುವುದೇನು ?

ಏವಂ ಸ್ಥಿತೇ ದ್ರವ್ಯನಾಶೇ ಬ್ರಹ್ಮಣಸ್ತನ್ಮಯತ್ವತಃ ।
ನಾನಂತತ್ವಂ ನ ಚಾಸ್ತಿತ್ವಂ ನ ಚೈವ ಸಂಭವತ್ಯಲಂ ॥ ೧೦ ॥

ಮದಶಕ್ತಿರಿವ ಜ್ಞಾನಮಿತಿ ನಾಸ್ಮಾಸು ಸಿಧ್ಯತಿ ।
ದೇಹೋ ವಿಜ್ಞಾನತೋಽಸ್ಮಾಕಂ ಸ್ವಪ್ನವನ್ನತು ತತ್ತ್ವತಃ ॥ ೧೧ ॥

ನಶ್ಯತ್ಯೇವ ಚ ದೃಶ್ಯಶ್ರೀಃ ಸೈವ ನಾನ್ಯೈವ ನೈವ ಚ ।
ಇತ್ಥಂ ಭವೇತ್ಸಮುಚಿತಂ ಕೃತಂ ಶಾಸ್ತ್ರಂ ಚ ನಾನ್ಯಥಾ ॥ ೧೨ ॥

---

೧೦. ಹೀಗಾದರೆ, (ಭಾಗವಿಭಾಗವಾಗಿರುವ ಅಂಶ) ದ್ರವ್ಯಗಳೆಲ್ಲ ನಾಶವಾಗುವುದಾದರೆ, (ಅಂಶಿಯಾದ) ಬ್ರಹ್ಮವು ತನ್ಮಯವಾಗಿರುವುದರಿಂದ ಅದಕ್ಕೆ ಅನಂತತ್ವವೂ ಇಲ್ಲ: ಅಸ್ತಿತ್ವವೂ ಇಲ್ಲ. (ಅಥವಾ) ನಿರವಯವಿಯಾದ ಬ್ರಹ್ಮವು ಹೀಗೆ ಅವಯವಿಯಾಗಿದೆ ಎಂಬುದು ಸಂಭವಿಸುವುದಿಲ್ಲ ಎಂದಾಗಬೇಕಾದೀತು

(ಶಾಖಾದ್ಯವಯವನಾಶೇ ವೃಕ್ಷನಾಶವದಙ್ಕುರಾದಿ ದ್ರವ್ಯನಾಶೇ ಬ್ರಹ್ಮಣೋಽಪಿ ನಾಶ ಪ್ರಸಂಗೇ ಶ್ರುತ್ಯುಕ್ತಮನಂತತ್ವಂ ನ ಸಿದ್ಧ್ಯತಿ । ಅವಯವೇಭ್ಯಃ ಪೃಥಕ್ಕೃತಸ್ಯಾವಯವಿನೋ ವಿಮರ್ಶೇ ಅಸತ್ವಾದಸ್ತಿತ್ವಂಚ ನ ಸಿದ್ಧ್ಯತಿ । ನಚ ಚಿದೇಕರಸಂ ನಿರವಯವಂ ಚ ಬ್ರಹ್ಮ ಮೂರ್ತಾದಿ ಜಗದವಯವಕಂ ಸಂಭವತೀತ್ಯರ್ಥಃ ॥—ತಾ. ಪ್ರ.)

೧೧. "ಜ್ಞಾನವೆಂಬುದು ಕುಡಿದವನ ಮದಶಕ್ತಿಯಂತೆ" ಎಂಬುದು ನಮ್ಮಲ್ಲಿ ಸಿದ್ಧಿಸುವುದಿಲ್ಲ: (ಏಕೆಂದರೆ) ಮದಶಕ್ತಿಯು ಪ್ರಕಟವಾಗುವ ದೇಹವೇ, ಜ್ಞಾನವಂತರಾದ ನಮಗೆ, ಸ್ವಪ್ನದಂತಿರುವುದೇ ಹೊರತು ತತ್ತ್ವತಃ ಇಲ್ಲ.

೧೨. ದೃಶ್ಯಶ್ರೀಯು ಎಂದಿದ್ದರೂ ನಾಶವಾಗಲೇ ಬೇಕು. ಆ ದೃಶ್ಯಶ್ರೀಯು ಇಲ್ಲವೇ ಇಲ್ಲ: ಅದು ಬೇರೆಯೂ ಅಲ್ಲ: (ಅದು ಅವಿದ್ಯಾಮಾತ್ರ) ಎಂದು ಶಾಸ್ತ್ರವು ಮಾಡಿರುವುದು ಸಮುಚಿತವಾಗಿದೆ: ಆದರಿಂದ ಬೇರೆ ಯಾವುದೂ ಅಲ್ಲ.

(ಕಿಂಚ ಜಗತೋ ಬ್ರಹ್ಮಾಭೇದೇ ಉಚ್ಯಮಾನೇ ದೃಶ್ಯನಾಶಾದ್ಬ್ರಹ್ಮಣೋಂಶವತ್ತ್ವಾಶಂಕಾ ಸ್ಯಾತ್ । ಆಧ್ಯಾಸಿಕೇಂತ್ಯಭೇದೇ ಪ್ರತಿಯೋಗಿನ ಇವ ತನ್ನಾಶಸ್ಯಾಪಿ ವಸ್ತುತೋ ಬ್ರಹ್ಮಸಂಸ್ಪರ್ಶಾಭಾವಾನ್ನ ತತ್ಪ್ರಸಕ್ತಿಃ ಶಾಸ್ತ್ರಸಾಫಲ್ಯಂಚ ಇತ್ಯಾಶಯೇನಾಹ—ಯತಃ ಪುನಃ ಪುನರ್ನಷ್ಟಾ ಉದ್ಭವಂತೀ ದೃಶ್ಯ ಶ್ರೀಃ

ಸೈವೈತೀತ್ಯಸಮುಲ್ಲೇಖಂ ಕಥಂ ನಷ್ಟಸ್ಯ ಸಂಭವಃ ।
ತದ್ರೂಪಾನ್ಯೇತಿ ಯುಕ್ತಂ ಸ್ಯಾದನುಭೂತಾನುಗಾ ವಯಂ ॥ ೧೩ ॥

ಸೈವ ವ್ಯೋಮತಯೈವಾಸೀದಿತ್ಯಸತ್ಸೈವ ಸಾ ಕಥಂ ।
ತಥೈವ ವ್ಯೋಮಸಂಸ್ಥಾ ಚೇನ್ನಾಶಂ ತರ್ಹಿ ನ ಸಾ ಗತಾ ॥ ೧೪ ॥

ಕಾರ್ಯಕಾರಣಯೋರೇಕರೂಪತ್ವೈವಂ ಯದಾ ತದಾ ।
ಕಾರ್ಯಕಾರಣತಾಭಾವಾದ್ದೈಕ್ಯಮೇವಾಸ್ಮದಾಗಮಃ ॥ ೧೫ ॥

ಶೂನ್ಯತ್ವಮುಪಲಂಭತ್ವಂ ಯದ್ಗತಂ ನಷ್ಟಮೇವ ತತ್ ।
ಅನ್ಯಸ್ತರ್ಹಿ ಭವೇನ್ನಾಶಃ ಕೀದೃಶಃ ಕಿಲ ಕಥ್ಯತಾಂ ॥ ೧೬ ॥

---

ಸೈವನ । ಅನ್ಯೈವ ಸೈವೇತ್ಯನಿರ್ವಚನೀಯಂ ಅವಿದ್ಯಾಮಾತ್ರಂ । ಇತ್ಥಂಸತೀ । ವಿದ್ಯಯಾ ತದ್ಭೇದೇ ಶಾಸ್ತ್ರಂಕೃತಂ ಸಫಲಂ ಭವೇತ್ ಅನ್ಯಥಾ ಸತ್ಯಬಂಧ ನಿವೃತ್ತೌ ಶಾಸ್ತ್ರಸ್ಯಾನುಪಾಯತ್ವಾದ್ವ್ಯರ್ಥಮೇವ ಸ್ಯಾದಿತ್ಯರ್ಥಃ ।— ತಾ. ಪ್ರ )

೧೩. ನಷ್ಟವಾದುದು ಮತ್ತೆ ಹುಟ್ಟಿ ಬರುವುದೆಂತು? ಆದರಿಂದ ಪ್ರಲಯದಲ್ಲಿ ನಷ್ಟವಾದುದೇ ಮತ್ತೆ ಸೃಷ್ಟಿಯಲ್ಲಿ ಹುಟ್ಟಿ ಬಂತು ಎಂದು ಹೇಳುವುದೂ ಅಸಮುಲ್ಲೇಖವು (ಎಂದರೆ ಸಂಭಾವನಮಾಡಲು ಅಶಕ್ಯವು.) ಆದರಿಂದ ಪ್ರಲಯವಾದುದೂ ಸೃಷ್ಟಿಯಾದುದೂ ಎರಡನ್ನೂ ನೋಡಿ, ಇದೂ ಅದರಂತೆ ಇದ್ದರೂ ಬೇರೆಯೇ! ಎಂದು ಹೇಳುವುದು ಯುಕ್ತವಾದೀತು. ನಾವು ಅನುಭೂತಿಯನ್ನು ಹಿಡಿದವರು; ಅನುಭವ ವಿರೋಧವನ್ನು ಎಳ್ಳಷ್ಟೂ ಸಹಿಸುವವರಲ್ಲ.

೧೪. ನಷ್ಟವಾದುದು ವ್ಯೋಮವಾಗಿ ಇತ್ತು: ಆದರಿಂದ ಅದು ಅಸತ್ತೇ ಆಗಿತ್ತು. ಹೀಗಿರಲು ಅದೇ ಮತ್ತೆ ಸೃಷ್ಟಿಯಾಗಿ ಬಂತು ಎನ್ನುವುದೆಂತು? ಹಾಗೆ ಅದೇ ಬಂತು ಎನ್ನುವುದಾದರೆ ವ್ಯೋಮಸಂಸ್ಥವಾಗಿರುವುದಕ್ಕೆ ನಾಶವೆಲ್ಲಿಂದ ಬಂತು? ಆದರಿಂದ ಅದು ಹೋಗಿಯೇ ಇಲ್ಲ. (ಎನ್ನಬೇಕು)

೧೫. ಕಾರ್ಯಕಾರಣಗಳೆರಡೂ ಏಕರೂಪಗಳು ಎಂದು ಒಪ್ಪುವುದಾದರೆ, ಕಾರ್ಯಕಾರಣಗಳೆರಡೂ ಎಂದರೆ ಕಾರ್ಯವಾದ ಸೃಷ್ಟಿಯೂ ಕಾರಣವಾದ ಬ್ರಹ್ಮವೂ ಒಂದೇ ಎಂಬುದೇ ನಮ್ಮ ಸಿದ್ಧಾಂತವು.

೧೬. ಉಪಲಬ್ಧವಾಗಿರುವ (ದೊರೆತಿರುವ) ವಸ್ತುವು ಶೂನ್ಯವಾದಾಗ ಅದನ್ನು

ನಷ್ಟಂ ಭೂಯಸ್ತದುತ್ಪನ್ನಮಿತಿ ಯತ್ಪ್ರತ್ಯಯೇತಿ ಕಃ ।
ನಶ್ಯತ್ಯವಶ್ಯಂ ತೇನೇದಂ ಪುನರನ್ಯತ್ಪ್ರವರ್ತತೇ ॥ ೧೭ ॥

ಮಧ್ಯೇಮಧ್ಯೇ ಯದುತ್ಸೇಧಫಲಾದ್ಯವಯವೈಕಿಕಾ ।
ಆದೇಹಂ ಬೀಜಸತ್ತಾಸ್ತಿ ಕಾರ್ಯಕಾರಣತಾ ಕುತಃ ॥ ೧೮ ॥

ದೇಶಕಾಲಕ್ರಿಯಾತ್ಮೈಕಂ ಯಥಾದೃಷ್ಟಮಿಹ ಸ್ಥಿತಂ ।
ಬೀಜಮೇವೈಕಕರ್ಮಾತೋ ನ ಘಟಃ ಪಟಕಾರ್ಯಕೃತ್ ॥ ೧೯ ॥

---

ನಷ್ಟವೆನ್ನುವರು ನಾಶ ಎನ್ನುವುದು ಅದಲ್ಲ ಎನ್ನುವುದಾದರೆ, ಆ ನಾಶ ಎನ್ನುವುದ್ಯ ಏನು ಅದನ್ನಾದರೂ ಹೇಳು.

೧೭. ನಷ್ಟವಾದುದೇ ಮತ್ತೆ ಉತ್ಪನ್ನವಾಯಿತು ಎಂದು ಯಾವನಾದರೂ ನಂಬುವುದಾದರೆ, ಅವನಿಗೆ 'ಒಂದು ನಾಶವಾಯಿತು: ಇನ್ನೊಂದು ಹುಟ್ಟಿತು' ಎಂದೇ ಹೇಳಬೇಕು.

(ಆದೇ ಇದು ಎನ್ನುವುದು ಪ್ರತ್ಯಭಿಜ್ಞೆ: ಇದು ಅಕಾರಣವೋ ಸಕಾರಣವೋ ? ಎಂದು ಪ್ರಶ್ನೆ. ಭೂಯಃ ಸಮುತ್ಪತ್ತಿದರ್ಶನಾತ್, ಮಧ್ಯೇ ನಷ್ಟಸ್ಯಾಪಿ ಸತ್ತ್ವಂ ಕಲ್ಪತೇ ಇತಿಚೇತ್, ಭೇದೇನಾಪ್ಯುತ್ಪತ್ತ್ಯುಪಪತ್ತೇಃ । ಪ್ರತ್ಯಭಿಜ್ಞಾದೇರದರ್ಶನಾಚ್ಚ ನೈವಮಿತ್ಯಾಹ—ತಾ. ಪ್ರ.)

೧೮. ಮರಗಳಲ್ಲಿ ಇರುವಂತೆ, ಒಂದು ಕಡೆ ಎತ್ತರವಾಗಿ ಬೆಳೆದು ಇನ್ನೊಂದು ಕಡೆ ಹಣ್ಣು ಮೊದಲಾದವುಗಳನ್ನು ಬಿಟ್ಟು (ಈ ಸೃಷ್ಟಿಯೂ ಒಂದು ಕಡೆ ಇದ್ದು ಇನ್ನೊಂದು ಕಡೆ ಇನ್ನೊಂಧು ರೂಪವಾಗಿ ಇರುವುದು ಎಂದಾಗಲಿ ಎನ್ನುವುದಾದರೆ) ವೃಕ್ಷದಲ್ಲೆಲ್ಲಾ ಈ ಕೊನೆಯಿಂದ ಆ ಕೊನೆಯವರೆಗೂ ಒಂದೇ ಒಂದಾದ ಬೀಜಸತ್ತೆ ಇರುವುದರಿಂದ ಕಾರ್ಯಕಾರಣ ಭಾವವೇ ಇಲ್ಲವಾಗುವುದು.

೧೯. ಯಥಾ ದೃಷ್ಟವಾಗಿ ಎಲ್ಲರಿಗೂ ತಿಳಿದಂತೆ, ದೇಶ ಕಾಲ ಕ್ರಿಯಾತ್ಮಕವಾದ, ಬೀಜವು ಒಂದೇ ಆಗಿರಲಾಗಿ ಬೇರೆ ಬೇರೆಯಾದ ಕರ್ಮವೂ ಇಲ್ಲವಾಗುವುದು. ಘಟವು ಎಂದಿಗಾದರೂ ಪಟದ ಕಾರ್ಯವನ್ನು ಮಾಡುವುದೇನು ?

ಸರ್ವದರ್ಶನಸಿದ್ಧಾಂತೇ ನಾಸ್ತಿ ಭೇದೋ ನ ವಸ್ತುನಿ ।
ಪರಮಾರ್ಥಮಯೇ ತೇನ ವಿವಾದೇನ ಕಿಮತ್ರ ನಃ ॥ ೨೦ ॥

ಇದಂ ಶಾಂತಮನಾದ್ಯಂತಂ ತದ್ರೂಪತ್ವಾದ್ವಿಚಾರತಃ ।
ವ್ಯೋಮಾಭಂ ಬೋಧತಾಮಾತ್ರಮನುಭೂತಿಪ್ರಮಾಣತಃ ॥ ೨೧ ॥

ಯಥೈತನ್ನಾನುಭೂತಂ ಸದ್ಯಥೈತದನುಭೂಯತೇ ।
ಯಥೈತತ್ಸಿದ್ಧಿಮಾಪ್ನೋತಿ ತದಿದಂ ಕಥ್ಯತೇ ಕ್ರಮಾತ್ ॥ ೨೨ ॥

ಮಹಾಕಲ್ಪಾಂತ ಉನ್ನಷ್ಟೇ ಸರ್ವಸ್ಮಿನ್ದೃಶ್ಯಮಂಡಲೇ ।
ಆಮಹಾದೇವಪರ್ಯಂತಂ ಸಮನೋಬುದ್ಧಿಕರ್ಮಣಿ ॥ ೨೩ ॥

ವ್ಯೋಮನ್ಯಪಿ ಶಮಂ ಯಾತೇ ಕಾಲೇಽಪ್ಯಕಲಿತಸ್ಥಿತೌ ।
ವಾಯಾವಪಿ ತ್ವಪಗತೇ ತೇಜಸ್ಯತ್ಯಂತಮಸ್ಥಿತೇ ॥ ೨೪ ॥

ತಮಸ್ಯಪಿ ಗತೇ ಧ್ವಂಸಂ ವಾಯ್ವಾದೌ ಸುಚಿರಂ ಕ್ಷತೇ ।
ಅಲಮಂತಮನುಪ್ರಾಪ್ತೇ ಸರ್ವಶಬ್ದಾರ್ಥಸಂಚಯೇ ॥ ೨೫ ॥

---

೨೦. (ಅಥವಾ ವಸ್ತುವೊಂದೇ ಆಗಿದ್ದರೂ ಕಾರ್ಯಭೇದವುಂಟು ಎಂದಾಗಲಿ ಎಂದರೆ) ಅದು ಯಾವ ದರ್ಶನ ಸಿದ್ಧಾಂತದಲ್ಲಿಯೂ ಇಲ್ಲ. ಏಕೈಕವಾಗಿರುವ ವಸ್ತುವಿನಲ್ಲಿ ಯಾವ ಭೇದವೂ ಇಲ್ಲ. ಅದು ಪರಮಾರ್ಥಮಯವಾದುದು. ಅದರಲ್ಲಿ ಭೇದವು ಇರುವುದಾದರೂ ಎಂತು? ಆದರಿಂದ ಈ ವಿಚಾರದಲ್ಲಿ ವಿವಾದ ಮಾಡಿ ನಮಗೆ ಆಗ ಬೇಕಾದುದಾದರೂ ಏನು?

೨೧. ಆದರಿಂದ ವಿಚಾರಮಾಡಿ ನೋಡಲು ಉಳಿಯುವುದು ಯಾವುದೋ ಅದು ಶಾಂತವೂ ಅನಾದ್ಯಂತವೂ ಆದ ಒಂದೇ ಒಂದಾದ್ದರಿಂದ ಈ ದೃಶ್ಯವೂ ತದ್ರೂಪವೇ ಆದ್ದರಿಂದ, ಇದೆಲ್ಲವೂ ವ್ಯೋಮದಂತಿರುವುದು. ಅನುಭೂತಿಯನ್ನು ಹಿಡಿದು ನೋಡಿದರೆ ಅದು ವ್ಯೋಮದಂತಿದ್ದು ಬೋಧಮಾತ್ರವಾಗಿರುವುದು.

೨೨. ಅನುಭವಕ್ಕೆ ಸಿಕ್ಕದ ಈ ಸದ್ವಸ್ತುವು ಅನುಭವಕ್ಕೆ ಬರುವುದೆಂತು? ಅದು ಸಿದ್ಧಿಯಾಗುವುದೆಂತು? ಅದನ್ನು ಕ್ರಮವಾಗಿ ಹೇಳಲಾಗುವುದು.

೨೩–೨೪–೨೫–೨೬–೨೭. ಮಹಾಕಲ್ಪಾಂತದಲ್ಲಿ ದೃಶ್ಯವಾಗಿದ್ದ ಸರ್ವಸ್ವವೂ ನಷ್ಟವಾಗಿ ಹೋದಾಗ, ಮಹಾದೇವನೂ ಇಲ್ಲವಾಗಿ, ಮನೋ ಬುದ್ಧಿ ಕರ್ಮಗಳು

ಶಿಷ್ಯತೇ ಶಾಂತಬೋಧಾತ್ಮ ಸದಚ್ಛಂ ವಾನ್ಯವರ್ಜಿತಂ ।
ಅನಾದಿನಿಧನಂ ಸೌಮ್ಯಂ ಕಿಮಪ್ಯಮಲಮವ್ಯಯಂ ॥ ೩೬ ॥

ಅವಾಚ್ಯಮನಭಿವ್ಯಕ್ತಮತೀಂದ್ರಿಯಮನಾಮಕಂ ।
ಸರ್ವಭೂತಾತ್ಮಕಂ ಶೂನ್ಯಂ ಸದಸಚ್ಚ ಪರಂ ಪದಂ ॥ ೩೭ ॥

ತನ್ನ ವಾಯುರ್ನ ಚಾಕಾಶಂ ನ ಬುದ್ಧ್ಯಾದಿ ನ ಶೂನ್ಯಕಂ ।
ನ ಕಿಂಚಿದಪಿ ಸರ್ವಾತ್ಮ ಕಿಮಪ್ಯನ್ಯತ್ಪರಂ ನಭಃ ॥ ೩೮ ॥

ತದ್ವಿದಾ ತತ್ಪದಸ್ಥೇನ ತನ್ಮುಕ್ತೇನಾನುಭೂಯತೇ ।
ಅನ್ಯೈಃ ಕೇವಲಮಾಮ್ನಾತೈರಾಗಮೈರೇವ ವರ್ಣ್ಯತೇ ॥ ೩೯ ॥

---

ಮೊದಲಾಗಿ ಎಲ್ಲವೂ ನಷ್ಟವಾಗಿ ಹೋದಾಗ, ವ್ಯೋಮದಲ್ಲಿ ಎಲ್ಲವೂ ಶಾಂತವಾಗಿ ಹೋಗಿ, ಕಾಲವೂ ಇಲ್ಲವಾದಾಗ, ವಾಯುವೂ ಇಲ್ಲವಾಗಿ, ತೇಜಸ್ಸು ಅತ್ಯಂತ ವಾಗಿ ಇಲ್ಲದೆ ಹೋದಾಗ, ಎಲ್ಲವನ್ನೂ ಸುತ್ತಿಹಾಕಿಕೊಂಡಿರುವ ತಮಸೂ ಧ್ವಂಸವಾಗಿ ಹೋಗಿ, ವಾರಿ ಮೊದಲಾದ ಭೂತಗಳೆಲ್ಲವೂ ಮೊದಲೇ ಧ್ವಂಸವಾಗಿ ಹೋಗಿರುವಾಗ, ಸರ್ವಶಬ್ದಗಳೂ ಅವುಗಳ ಅರ್ಥಗಳೂ ಕೂಡ ಕೊನೆಯನ್ನು ಹೊಂದಿದಾಗ, ಶಾಂತವಾಗಿ ಕೇವಲ ಬೋಧಾತ್ಮವಾಗಿರುವ, ಅನ್ಯವಿವರ್ಜಿತವಾದ, ಅಚ್ಛವಾದ ಸದ್ವಸ್ತುವೊಂದೇ ಒಂದು ಉಳಿಯುವುದು. ಅದು ಆದಿ, ನಿಧನ, ಎಂಬ ಯಾವ ಅವಸ್ಥೆಯೂ ಇಲ್ಲದ್ದು ಸೌಮ್ಯವಾದುದು ಯಾವುದೊಂದೂ ವಿಕಾರವಿಲ್ಲದೆ ತಾನೇ ತಾನಾಗಿರುವುದು. ಅಲಂ–ಮತ್ತೊಂದರ ಅಪೇಕ್ಷೆಯಿಲ್ಲದ್ದಾಗಿ ಇರುವುದು. ಅದು ಇಂಥದು ಹೇಳಲಾಗದ್ದು. ಅದು ಅವಾಚ್ಯವು: ಅನಭಿವ್ಯಕ್ತವು: ಅತೀಂದ್ರಿಯವು: ಅನಾಮಕವು: ಸರ್ವಭೂತಗಳನ್ನೂ ತನ್ನಲ್ಲಿ ಉಳ್ಳದ್ದು : ಶೂನ್ಯವು: ಸತ್ ಎಂದರೂ ಅದೇ ! ಅಸತ್ ಎಂದರೂ ಅದೇ ! ಅದು ಎಲ್ಲಕ್ಕೂ ಸ್ಥಾನವಾದ "ಪದ'' ವಾದರೂ ಎಲ್ಲಕ್ಕೂ ಮೀರಿದ್ದಾದರಿಂದ "ಪರ''ವು

೩೮. ಅದು ವಾಯುವಲ್ಲ: ಆಕಾಶವಲ್ಲ. ಬುದ್ಧಿ ಮೊದಲಾದ ಯಾವುದೂ ಅಲ್ಲ: ಶೂನ್ಯವೂ ಅಲ್ಲ: ನಮಗೆ ತಿಳಿದ ಯಾವುದೂ ಅಲ್ಲದ ಅದು ಎಲ್ಲವೂ ಆಗಿ, ಏನೋ ಆಗಿ, ಈ ಆಕಾಶಕ್ಕಿಂತಲೂ ಸೂಕ್ಷ್ಮವಾದ ಇನ್ನೊಂದು ಆಕಾಶವು.

೩೯. ಅದನ್ನು ಬಲ್ಲವನಾಗಿ, ಅಲ್ಲಿಯೇ ಇರುವ ಮುಕ್ತನಿಗೆ ಅದು ಅನುಭವ ಗೋಚರವಾಗುವುದು. ಕೇವಲ ಆಮ್ನಾಯದಲ್ಲಿ ಹೇಳಿರುವುದನ್ನು ನೋಡಿ ಬಲ್ಲೆವೆಂದುಕೊಂಡವರು ಅದನ್ನು ಆಗಮಗಳಿಂದ ಮಾತ್ರ ವರ್ಣಿಸುವರು.

ನ ಕಾಲೋ ನ ಮನೋ ನಾತ್ಮಾ ನ ಸನ್ನಾಸನ್ನ ದೇಶದಿಕ್ ।
ನ ಮಧ್ಯಮೇತಯೋರ್ನಾಂತಂ ನ ಬೋಧೋ ನಾಪ್ಯಬೋಧಿತಂ ॥ ೩೦ ॥

ಕಿಮಪ್ಯೇವ ತದತ್ಯಚ್ಛಂ ಬುಧ್ಯತೇ ಬೋಧಪಾರಗೈಃ ।
ಶಾಂತಸಂಸಾರವಿಸರೈಃ ಪರಾಂ ಭೂಮಿಮುಪಾಗತೈಃ ॥ ೩೧ ॥

ಪ್ರತಿಷಿದ್ಧಾ ಮಯೈತೇ ತು ಯೇಽರ್ಥಾಃ ಸರ್ವತ್ರ ತೇ ಸ್ಥಿತಾಃ ।
ಅಸ್ಮದ್ಬುದ್ಧ್ಯಾ ಪರಿಚ್ಛೇದ್ಯಾಃ ಸೌಮ್ಯಾಂಭೋಧೇರಿವೋರ್ಮಯಃ ॥ ೩೨ ॥

ಯಥಾಸ್ಥಿತಂ ಸ್ಥಿತಾ ಸರ್ವೇ ಭಾವಾಸ್ತತ್ರ ಯಥಾತಥಾ ।
ಅನುತ್ಕೀರ್ಣಾ ಮಹಾಸ್ತಂಭೇ ವಿವಿಧಾಃ ಶಾಲಭಂಜಿಕಾಃ ॥ ೩೩ ॥

---

೩೦. ಅದು ಕಾಲವಲ್ಲ: ಮನವಲ್ಲ: ಆತ್ಮನಲ್ಲ: ಸತ್ ಅಲ್ಲ: ಅಸತ್ ಅಲ್ಲ: ದೇಶವಲ್ಲ: ದಿಕ್ಕಲ್ಲ: ಮಧ್ಯವಲ್ಲ: ಕೊನೆಯಲ್ಲ: ಬೋಧವಲ್ಲ: ಅಬೋಧಿತವಲ್ಲ.

(ತತ್ರ "ಕಾಲಸ್ಸ್ವಭಾವೋ ನಿಯತಿಃ ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಂ'' ಇತ್ಯಾದ್ಯಾಗಮ ಮರ್ಥತೋಽವರ್ಶಯತಿ ।—ತಾ. ಪ್ರ.)

೩೧ ಅದು ಏನೇ ಆಗಲಿ, ಅದು ಅತ್ಯಚ್ಛವು. ಶಾಂತವಾದ ಸಂಸಾರವುಳ್ಳವರಾಗಿ, ಪರಮ ಭೂಮಿಕೆಯನ್ನು ಹೊಂದಿದ, ಬೋಧಪಾರಂಗತರಿಗೆ ಅರಿವಾಗುವುದು.

೩೨. ನಾನು ಯಾವ ಅರ್ಥಗಳನ್ನು ಪ್ರತಿಷೇಧಮಾಡಿರುವೆನೋ ಅವು ಶ್ರುತಿಗಳಲ್ಲಿಯೂ ಪ್ರತಿಷಿದ್ಧಗಳಾಗಿರುವುವು: ಅವು ನಮ್ಮ ಬುದ್ಧಿಗೆ ನಿಲುಕದವು: ಎಂದರೆ ಸೌಮ್ಯವಾದ ಸಾಗರದಲ್ಲಿ ಇರುವ ಅಲೆಗಳಂತೆ ಇರುವುವು.

೩೩. ಮಹಾಸ್ತಂಭದಲ್ಲಿ ಕೆತ್ತುವುದಕ್ಕೆ ಮುಂಚೆ ಇರುವ ನಾನಾ ವಿಧಗಳಾದ ಶಾಲಭಂಜಿಕೆಗಳಂತೆ, ಸರ್ವಭಾವಗಳೂ ಆ ಬ್ರಹ್ಮದಲ್ಲಿ ಯಥಾತಥಗಳಾಗಿ, ಯಥಾಸ್ಥಿತಗಳಾಗಿ, ಇದ್ದೇ ಇರುವುವು.

ಏವಂ ತತ್ರ ಸ್ಥಿತಾಃ ಸರ್ವೇ ಭಾವಾ ಏವಂ ಚ ನ ಸ್ಥಿತಾಃ |
ಅಸರ್ವಾತ್ಮೈವ ಸರ್ವಾತ್ಮ ತದೇವ ನ ತದೇವ ಚ || ೩೪ ||

ಪದಂ ಯಥೈತತ್ಸರ್ವಾತ್ಮ ಸರ್ವಾರ್ಥಪರಿವರ್ಜಿತಂ |
ಯಥಾ ತತ್ರ ಚ ಪಶ್ಯಂತಿ ತತ್ರೈಕಪರಿಣಾಮಿನಃ || ೩೫ ||

ಸರ್ವಂ ಸರ್ವಾತ್ಮಕಂ ಚೈವ ಸರ್ವಾರ್ಥರಹಿತಂ ಪದಂ |
ಸರ್ವಾರ್ಥಪರಿಪೂರ್ಣಂ ಚ ತದಾದ್ಯಂ ಪರಿದೃಶ್ಯತೇ || ೩೬ ||

ತಸ್ಮೈತಾವನ್ಮಹಾಬುದ್ಧೇ ಸರ್ವಾರ್ಥೋಪಶಮಾತ್ಮಕಂ |
ನ ಸಮ್ಯಗಾಜ್ಞಾನಮುತ್ಪನ್ನಂ ಸಂಶಯೋಽತ್ರ ನಿದರ್ಶನಂ || ೩೭ ||

ಯಃ ಪ್ರಬುದ್ಧೋ ನಿರಾಭಾಸಂ ಪರಮಾಭಾಸಮಾಗತಃ |
ಸ್ವಚ್ಛಾಂತಃಕರಣಃ ಶಾಂತಸ್ತಂ ಸ್ವಭಾವಂ ಸ ಪಶ್ಯತಿ || ೩೮ ||

---

೩೪ ಹೀಗೆ ಅಲ್ಲಿ ಸರ್ವಭಾವಗಳೂ ಇದ್ದರೂ ಇಲ್ಲದಿದ್ದಂತೆಯೇ ಇರುವುವು: ಅದರಿಂದ ಆ ಬ್ರಹ್ಮವು ಅಸರ್ವಾತ್ಮವೂ ಅಹುದು: ಸರ್ವಾತ್ಮವೂ ಅಹುದು : ಇರುವುದೆಲ್ಲವೂ ಅದೇ : ಇರುವುದು ಯಾವುದೂ ಅದಲ್ಲ.

೩೫. ಆ ಬ್ರಹ್ಮವು ಸರ್ವಾತ್ಮಪದವು : ಆದರೂ ಸರ್ವಾರ್ಥ ಪರಿವರ್ಜಿತವು: ಏಕೆಂದರೆ, ಎಲ್ಲವೂ ಅಲ್ಲಿಯೇ ಪರಿಣಾಮುವನ್ನು ಹೊಂದುವುವು

೩೬. ಆ ಬ್ರಹ್ಮವು ಸರ್ವವು: ಸರ್ವಾತ್ಮಕವು: ಆದರೂ ಸರ್ವಾರ್ಥರಹಿತವೂ ಸರ್ವಾರ್ಥಪರಿಪೂರ್ಣವೂ ಆದ ಆ ವಸ್ತುವು ಆದ್ಯವು ಎಂಬುದೂ ಅನುಭವ ಗೋಚರವಾಗುವುದು.

೩೭. ಇದಿಷ್ಟನ್ನು ನೀನು ತಿಳಿದರೆ ಸಾಕು. ಎಲ್ಲಾ (ದೃಶ್ಯ) ಭಾವವೂ ಶಾಂತವಾಗುವುದು. ನಿನಗಿನ್ನೂ ಇದು ತಿಳಿದಿಲ್ಲ ಸಮ್ಯಗ್ಜ್ಞಾನವು ನಿನಗಿನ್ನೂ ಪ್ರಾಪ್ತವಾಗಿಲ್ಲ. ಅದು ಹೇಗೆಂದರೆ, ನಿನಗೆ ಸಂಶಯುವಿರುವುದೇ ಗುರುತು.

('ಛಿದ್ಯಂತೇ ಸರ್ವಸಂಶಯಾಃ' ಇತಿ ಶ್ರುತೇರ್ನಿಶ್ಚಿತೇ ತತ್ವೇ ಸಂಶಯಾ ನನುಭವಾಚ್ಚೇತಿ ಭಾವಃ |—ತಾ. ಪ್ರ.)

೩೮. ಯಾವ ಪ್ರಬುದ್ಧನು ದೃಶ್ಯಶಾಂತವಾದ್ದರಿಂದ ನಿರಾಭಾಸವಾಗಿರುವ ಪರಮ-ಆಭಾಸ (ಚರಮ ಸಾಕ್ಷಾತ್ಕಾರ)ವನ್ನು ಪಡೆದಿರುವನೋ, ಆತನು ಸ್ವಚ

ಅಯಂ ತ್ವಮಹಮಿತ್ಯಾದಿತ್ರಿಕಾಲಗಜಗದ್ಭ್ರಮಃ ।
ತತ್ರಾಸ್ತಿ ಹೇಮಪಿಂಡಾಂತರಿವ ರೂಪಕಜಾಲಕಂ ॥ ೩೯ ॥

ಹೇಮಪಿಂಡಾದ್ಯಥಾ ಭಾಂಡಜಾಲಂ ನಾನೋಪಲಭ್ಯತೇ ।
ತಥಾ ನ ಲಭ್ಯತೇ ಭಿನ್ನಂ ಪರಮಾರ್ಥಘನಾಜ್ಜಗತ್ ॥ ೪೦ ॥

ಸರ್ವದೈವ ಹಿ ಭಿನ್ನಾತ್ಮಾ ಸ್ವಾಂಗಭೂತೋಪಲಂಭದೃಕ್ ।
ಸ ಜಗತ್ ದ್ವೈತಮೇವೇದಂ ಹೇಮೇವಾಂಗದರೂಪಕಂ ॥ ೪೧ ॥

ರಿಕ್ತಂ ದೇಶಾದಿಶಬ್ದಾರ್ಥೈರ್ದೇಶಕಾಲಕ್ರಿಯಾತ್ಮಕಂ ।
ಯಥಾಸ್ಥಿತಮಿದಂ ತತ್ರ ಸರ್ವಮಸ್ತಿ ನ ವಾಸ್ತಿ ಚ ॥ ೪೨ ।

---

(ಸಂಶಯ-ಶೂನ್ಯ)ವಾದ ಅಂತಃಕರಣವುಳ್ಳವನು: ಶಾಂತನು: ಸ್ವಭಾವ (ದಲ್ಲಿರುವ ಬ್ರಹ್ಮ)ವನ್ನು ಆತನು ಕಾಣುವನು.

೩೯. ಇದು, ನೀನು, ನಾನು, ಎಂದು ಮೊದಲಾದ ತ್ರಿಕಾಲಸ್ಸಹಿತವಾದ ಜಗದ್ಭ್ರಮೆಯು ಅಲ್ಲಿ ಇರುವುವೇ ಎಂದರೆ ಹೇಮಪಿಂಡದಲ್ಲಿ ಇರುವ ರೂಪ (ಭೂಷಣ) ಜಾಲದಂತೆ (ಸಾಧ್ಯಾವಸ್ಥೆಯಲ್ಲಿ) ಇರುವುದು.

೪೦. ಹೇಮ ಪಿಂಡದಿಂದ ಭಾಂಡಜಾಲವು ನಾನಾ ಆಗಿ ದೊರೆಯು ವುದುಂಟು. ಆದರೆ ಪರಮಾರ್ಥ ಘನದಿಂದ ಪೃಥಕ್ಕಾರ ಜಗತ್ತು ಮಾತ್ರ ದೊರೆಯುವುದಿಲ್ಲ

೪೧. ಆತ್ಮನಿಂದ ತಾನು ಬೇರೆಯೆಂದುಕೊಂಡ ಭಿನ್ನಾತ್ಮನು ಯಾವಾಗಲೂ ತನ್ನ ದೇಹವನ್ನು ಬೇರೆಯಾಗಿ ಕಾಣುವನು. ಅದೇ ಜಗತ್ತು ಬೇರೆಯೆಂಬ ದ್ವೈತವು: ಆ ಭೇದವು ಸತ್ಯದಂತೆ ತೋರುತ್ತಿದ್ದರೂ ಚಿನ್ನಕ್ಕೂ ಅಂಗದಾದಿ ಗಳಿಗೂ ಇರುವ ಭೇದದಂತೆ ಕೇವಲ ತೋರಿಕೆಯು.

೪೨. ಆ ಬ್ರಹ್ಮವು ದೇಶ ಮೊದಲಾದ ಶಬ್ದಗಳ ಅರ್ಥವು ತನ್ನಲ್ಲಿಲ್ಲವಾದ್ದ ರಿಂದ ರಿಕ್ತವಾದರೂ ದೇಶ ಕಾಲಕ್ರಿಯಾತ್ಮಕವಾಗಿ ತೋರಿಸಿಕೊಳ್ಳುವುದು. ದೃಶ್ಯ ದೃಶ್ಯವಾಗಿ ತೋರುತ್ತಿರುವ ಈ ಜಗತ್ತೆಲ್ಲವೂ ಅದರಲ್ಲಿಯೇ ಇರುವುದು. (ಎಂಬುದು ಇನ್ನೊಂದು ದೃಷ್ಟಿಯು.)

ಯಥೋರ್ಮ್ಯಾದಿ ಸಮೇ ತೋಯೇ ಚಿತ್ರಂ ಚಿತ್ರಕೃದೀಹಿತೇ ।
ಭಾಂಡವೃಂದಂ ಮೃದಃ ಪಿಂಡೇ ತಥೇದಂ ಬ್ರಹ್ಮಣಿ ಸ್ಥಿತಂ ॥ ೪೩ ॥

ತಥೈತದತ್ರ ನೋ ಭಿನ್ನಂ ನಾಭಿನ್ನಂ ನಾಸ್ತಿ ಚಾಸ್ತಿ ಚ ।
ನಿತ್ಯಂ ತನ್ಮಯಮೇವಾಚ್ಛಂ ಶಾಂತೇ ಶಾಂತಮಿದಂ ತಥಾ ॥ ೪೪ ॥

ಅನಿಖಾತೈವ ಭಾಂತೀಯಂ ತ್ರಿಜಗಚ್ಛಾಲಭಂಜಿಕಾ ।
ಸ್ವರಸಸ್ಯೇವ ದೃಶ್ಯತ್ವಮಿತಾ ಬ್ರಹ್ಮಣಿ ದಾರುಣಿ ॥ ೪೫ ॥

ನಿಖಾತಾ ದೃಶ್ಯತಾಂ ಯಾಂತಿ ಸ್ತಂಭಸ್ಥಾಃ ಶಾಲಭಂಜಿಕಾಃ ॥ ೪೬ ॥

ಅಸ್ಮಿನ್ನಕ್ಷೋಭ್ಯ ಏವಾಂತಸ್ತರಂಗಾಃ ಸೃಷ್ಟಿದೃಷ್ಟಯಃ ।
ಸರಸ್ವತಿರಸೇ ಭಾಂತಿ ಚಿದ್ಘನಾವ್ಯತವೃಷ್ಟಯಃ ॥ ೪೭

ಅವಿಭಾಗೇ ವಿಭಾಗಸ್ಥಾ ಅಕ್ಷೋಭೇ ಕ್ಷುಭಿತಾ ಇವ
ಅವಿಭಾತಾ ವಿಭಾಂತೀವ ಚಿದ್ಘನೇ ಸೃಷ್ಟಿದೃಷ್ಟಯಃ ॥ ೪೮ ॥

ಪರಮಾಣೌ ಪರಮಾಣಾವತ್ರ ಸಂಸಾರಮಂಡಲಂ ।
ವಿಭಾತಿ ಭಾಸುರಾರಂಭಂ ನ ವಿಭಾತಿ ಚ ಕಿಂಚಿನ ॥ ೪೯ ॥

---

೪೩. ಶಾಂತವಾಗಿರುವ ನೀರಿನಲ್ಲಿ ತರಂಗಾದಿಗಳು ಹೇಗೋ ಹಾಗೆ, ಚಿತ್ರಕಾರನ ಮನಸ್ಸಿನಲ್ಲಿರುವ ಚಿತ್ರದಂತೆ, ಮಣ್ಣಿನ ಹೆಂಟೆಯಲ್ಲಿರುವ ಭಾಂಡಜಾಲದಂತೆ, ಈ ಜಗತ್ತು ಬ್ರಹ್ಮದಲ್ಲಿರುವುದು.

೪೪. ಹಾಗೆ ಇರುವ ಈ ಜಗತ್ತು ಬ್ರಹ್ಮದಿಂದ ಭಿನ್ನವೂ ಅಲ್ಲ: ಅಭಿನ್ನವೂ ಅಲ್ಲ: ಜಗತ್ತು ಉಂಟು: ಇಲ್ಲ. ಹೀಗಿರುವುದರಿಂದ ಜಗತ್ತೂ ಬ್ರಹ್ಮಮಯವೇ! ಸ್ವಚ್ಛವು ಶಾಂತವಾದ ಬ್ರಹ್ಮದಲ್ಲಿ ತಾನು ಶಾಂತವಾಗಿ ಇರುವುದು.
(ತತ್ವಜ್ಞಾನೇನ ಶಾಂತೇ ಬ್ರಹ್ಮಣಿ ಶಾಂತಾತ್ಮನೈವಸ್ಥಿತಂ—ತಾ ಪ್ರ.)

೪೫. ಬ್ರಹ್ಮವೆಂಬ ಮರದ ತುಂಡಿನಲ್ಲಿ ಕೆತ್ತದಿರುವ ಶಾಲಭಂಜಿಕೆಯಂತೆ ಈ ತ್ರಿಜಗದ್ದೃಶ್ಯವು ಇರುವುದು ಸ್ವರಸನಾದ ಏಕಾಂತದಲ್ಲಿ ಚಿಂತಿಸುತ್ತಿರುವ ಶಿಲ್ಪಿಯ ಮನಸ್ಸಿನಲ್ಲಿ ಕಾಣಿಸಿಕೊಳ್ಳುವ ದೃಶ್ಯದಂತಿರುವುದು.

೪೬–೪೯. ಕೆತ್ತಿದರೆ ಕಂಭದಲ್ಲಿ ಶಾಲಭಂಜಿಕೆಗಳು ಕಾಣಿಸಿಕೊಳ್ಳುವುವು. ರಸಪೂರ್ಣವಾಗಿದ್ದರೂ ಅಕ್ಷೋಭ್ಯವಾಗಿರುವ ಸರಸ್ಸಿನಲ್ಲಿ ಇರುವ, ಅಂತಸ್ತರಂಗಗಳೇ

ಆಕಾಶಕಾಲಪವನಾದಿ ಪದಾರ್ಥಜಾತ-
ಮಸ್ಯಾಂಗಮಂಗರಹಿತಸ್ಯ ತದಪ್ಯನಂಗಂ ॥
ಸರ್ವಾತ್ಮಕಂ ಸಕಲಭಾವವಿಕಾರಶೂನ್ಯ-
ಮಪ್ಯೇತದಾಹುರಜರಂ ಪರಮಾರ್ಥತತ್ತ್ವಂ ॥ ೫೦ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಬ್ರಹ್ಮಸ್ವರೂಪವರ್ಣನಂ" ನಾಮ
ದ್ವಿಪಂಚಾಶಃ ಸರ್ಗಃ

---

ಸೃಷ್ಟಿದೃಷ್ಟಿಗಳು ಅವೇ ಚಿದ್ಘನಾವೃತವೃಷ್ಟಿಗಳು, ಅವಿಭಾಗದಲ್ಲಿ ಆದ ವಿಭಾಗಗಳು: ಅಕ್ಷೋಭ್ಯದಲ್ಲಿ ಆದ ಕ್ಷೋಭಗಳು ಅವಿಭಾತವೇ ವಿಭಾತವೇ ಆದಂತೆ, ಚಿದ್ಘನದಲ್ಲಿ ಸೃಷ್ಟಿದೃಷ್ಟಿಗಳು. ಪರಮಾಣು ಪರಮಾಣುವಿನಲ್ಲಿಯೂ ಸಂಸಾರ ಮಂಡಲಗಳು ಉಂಟು. ಕೆಲವೆಡೆ ಅವು ಮನೋಹರವಾಗಿ ಕಾಣುವುವು: ಕೆಲವೆಡೆ ಅವು ಕಾಣದೆಯೇ ಹೋಗುವುವು.

೫೦. ಆಕಾಶ, ವಾಯು, ಕಾಲ, ಮೊದಲಾದ ಪದಾರ್ಥ ಪದಾರ್ಥಗಳಾಗಿ, ಕಾಣುವವೆಲ್ಲವೂ ಅನಂಗವಾದ ಬ್ರಹ್ಮದ ಅಂಗವು ಇಷ್ಟೆಲ್ಲಾ ಆದರೂ ಬ್ರಹ್ಮವು ಅನಂಗವಾಗಿಯೇ ಇರುವುವು. ಆ ಬ್ರಹ್ಮವು ಸರ್ವಾತ್ಮಕವಾದರೂ ಸಕಲಭಾವ ವಿಕಾರ ಶೂನ್ಯವು. ಆ ಬ್ರಹ್ಮವನ್ನು ಅಜರವು: ಪರಮಾರ್ಥವಾದ ತತ್ವವು ಎಂದು ಹೇಳುವರು

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಬ್ರಹ್ಮಸ್ವರೂಪ ವರ್ಣನ" ಎಂಬ
ಐವತ್ತೆರಡನೆಯ ಸರ್ಗವು.

## ತ್ರಿಪಂಚಾಶಃ ಸರ್ಗಃ

ಶ್ರೀರಾಮ ಉವಾಚ.—

ಯಥಾ ಚೇತ್ಯೇ ಚೇತನತಾ ಯಥಾ ಕಾಲೇ ಚ ಕಾಲತಾ ।
ಯಥಾ ಚ ವ್ಯೋಮತಾ ವ್ಯೋಮ್ನಿ ಯಥಾ ಚ ಜಡತಾ ಜಡೇ ॥ ೧ ॥

ಯಥಾ ವಾಯೌ ಚ ವಾಯುತ್ವಮಭೂತಾದಾವಭೂತತಾ ।
ಯಥಾ ಸ್ಪಂದಾತ್ಮನಿ ಸ್ಪಂದೋ ಯಥಾ ಮೂರ್ತೇ ಚ ಮೂರ್ತತಾ ॥ ೨ ॥

ಯಥಾ ಭಿನ್ನೇ ಚ ಭಿನ್ನತ್ವಂ ಯಥಾನಂತೇ ಹ್ಯನಂತತಾ ।
ಯಥಾ ದೃಶ್ಯೇ ಚ ದೃಶ್ಯತ್ವಂ ಯಥಾ ಸರ್ಗೇಷು ಸರ್ಗತಾ ॥ ೩ ॥

ಏತತ್ಕ್ರಮೇಣ ಹೇ ಬ್ರಹ್ಮನ್ವದ ಮೇ ವದತಾಂ ವರ ।
ಆದಿತಃ ಪ್ರತಿಪಾದ್ಯೈವ ಬೋಧ್ಯಂತೇ ಹ್ಯಲ್ಪಬೋಧಿನಃ ॥ ೪ ॥

---

## ಐವತ್ತಮೂರನೆಯ ಸರ್ಗವು

ಶ್ರೀ ರಾಮನು ಕೇಳಿದನು :—

೧–೪ ಚೇತ್ಯದಲ್ಲಿ ಚೇತನತೆಯು, ಕಾಲದಲ್ಲಿ ಕಾಲತೆಯು, ವ್ಯೋಮದಲ್ಲಿ ವ್ಯೋಮತೆಯು, ಜಡದಲ್ಲಿ ಜಡತೆಯು, ವಾಯುವಿನಲ್ಲಿ ವಾಯುತೆಯು, ಅಭೂತಾದಿಗಳಲ್ಲಿ ಅಭೂತತೆಯು,ಸ್ಪಂದಾತ್ಮದಲ್ಲಿ ಸ್ಪಂದವು,ಮೂರ್ತದಲ್ಲಿ ಮೂರ್ತತೆಯು, ಭಿನ್ನದಲ್ಲಿ ಭಿನ್ನತ್ವವು, ಅನಂತದಲ್ಲಿ ಅನಂತತೆಯು, ದೃಶ್ಯದಲ್ಲಿ ದೃಶ್ಯತೆಯು, ಸರ್ಗದಲ್ಲಿ ಸರ್ಗತೆಯು, ಎಂಬ ಕ್ರಮದಿಂದ, ಎಲೈ ವಾಗ್ಮಿ ಶ್ರೇಷ್ಠನಾದ ಬ್ರಹ್ಮನೆ, ಮೊದಲಿನಿಂದ ಹೇಳು, ತಿಳಿಯದವರಿಗೆ, ಕೊಂಚ ತಿಳಿದವರಿಗೆ, ತಿಳಿಸಬೇಕಲ್ಲವೆ ?

ಶ್ರೀ ವಸಿಷ್ಠ ಉವಾಚ:—

ತದನಂತಂ ಮಹಾಕಾಶಂ ಮಹಾಚಿದ್ಘನಮುಚ್ಯತೇ ।
ಅವೇದ್ಯಚಿದ್ರೂಪಮಯಂ ಶಾಂತಮೇಕಂ ಸಮಸ್ಥಿತಿ ॥ ೫ ॥

ಬ್ರಹ್ಮವಿಷ್ಣ್ವೀಶ್ವರಾದ್ಯಂತೇ ಮಹಾಪ್ರಲಯನಾಮನಿ ।
ಶಬ್ದಾರ್ಥೇ ರೂಢಿಮಾಪನ್ನೇ ಯಚ್ಛುದ್ಧಮವಶಿಷ್ಯತೇ ॥ ೬ ॥

ಸರ್ಗಸ್ಯ ಕಾರಣಂ ತತ್ರ ನ ಕಿಂಚಿದುಪಪದ್ಯತೇ ।
ಮಲಮಾಕಾರಬೀಜಾದಿ ಮಾಯಾಮೋಹಭ್ರಮಾದಿಕಂ ॥ ೭ ॥

ಕೇವಲಂ ಶಾಂತಮತ್ಯಚ್ಛಮಾದ್ಯಂತಪರಿವರ್ಜಿತಂ ।
ತದ್ವಿದ್ಯತೇ ಯತ್ರ ಕಿಲ ಖಮಪಿ ಸ್ಥೂಲಮಶ್ಮವತ್ ॥ ೮ ॥

---

ಶ್ರೀ ವಸಿಷ್ಠನು ಹೇಳಿದನು:—

೫. ಅನಂತವಾದ ಮಹಾಕಾಶವು ಯಾವದುಂಟೋ ಅದನ್ನು ಮಹಾಚಿದ್ಘನ ವೆನ್ನುವರು. ಇನ್ನು ಕೆಲವರು ಅದನ್ನು ಅವೇದ್ಯ ಚಿದ್ರೂಪಮಯವಾದ ಶಾಂತ ವೆಂದೂ ಇನ್ನು ಕೆಲವರು ಸಮಸ್ಥಿತಿಯೆಂದೂ ಹೇಳುವರು.

೬ ಬ್ರಹ್ಮ ವಿಷ್ಣು ಮಹೇಶ್ವರರು ಮೊದಲಾದವರಿಗೆಲ್ಲ ಕೊನೆಗಾಣಿಸುವ ಮಹಾಪ್ರಲಯವೆಂಬ ಹೆಸರಿನ ಶಬ್ದದ ಅರ್ಥವು ರೂಢಿಯಾಗಿರುವುದಲ್ಲವೆ ? ಅಂತಹ ಮಹಾ ಪ್ರಲಯದಲ್ಲಿಯೂ ಯಾವುದು ಶುದ್ಧವೋ ಅದು ಮಾತ್ರ ಉಳಿಯುವುದು.

೭ (ಆ ಬ್ರಹ್ಮದಲ್ಲಿ ಉಂಟಾಗುವ, ಸರ್ಗಕ್ಕೆ ಕಾರಣವು ಕಿಂಚಿತ್ತೂ ಇರು ವುದಿಲ್ಲ. ಸರ್ಗವೆಂಬುದು ಮಲವು; ಆಕಾರ ಅಲ್ಲಿಯೇ ಉಂಟು; ಅದೇ ಬೀಜ ವಾಗುವುದು: ಎಂಬ ನಾನಾ ವಾದಗಳೆಲ್ಲವೂ ಮಾಯಾ, ಮೋಹ, ಭ್ರಮಾದಿಗಳು ಕಾರಣವು ಎಂಬ ವಾದಗಳು ಎಲ್ಲವೂ ಭ್ರಾಂತಿಯೇ !

೮. ಕೇವಲವೂ ಶಾಂತವೂ ಆದ್ಯಂತಗಳಿಲ್ಲದುದೂ ಆದ ಅತ್ಯಚ್ಛ ಬ್ರಹ್ಮ ವಸ್ತುವು ಎಲ್ಲಿರುವುದೋ ಅಲ್ಲಿ (ಅದಕ್ಕೆ ಹೋಲಿಸಿದರೆ) ಆಕಾಶವು ಕಲ್ಲಿನಂತೆ ಸ್ಥೂಲವು.

ನಚ ನಾಸ್ತೀತಿ ತದ್ವಕ್ತುಂ ಯುಜ್ಯತೇ ಚಿದ್ವಪುರ್ಯದಾ ।
ನಚೈವಾಸ್ತೀತಿ ತದ್ವಕ್ತುಂ ಯುಕ್ತಂ ಶಾಂತಮಲಂ ತದಾ ॥ ೯ ॥

ನಿಮೇಷೇ ಯೋಜನಶತೇ ಪ್ರಾಪ್ತಾಯಾಮಾತ್ಮಸಂವಿದಿ ।
ಮಧ್ಯೇ ತಸ್ಯಾಸ್ತು ಯದ್ರೂಪಂ ರೂಪಂ ತಸ್ಯ ಪದಸ್ಯ ತತ್ ॥ ೧೦ ॥

ಸಬಾಹ್ಯಾಭ್ಯಂತರೇ ಶಾಂತೇ ವಾಸನಾವಿಷಯಭ್ರಮೇ ।
ಸರ್ವಚಿಂತಾವಿಹೀನಸ್ಯ ಪ್ರಬುದ್ಧಸ್ಯಾರ್ಧರಾತ್ರತಃ ॥ ೧೧ ॥

ಶಾಂತಂ ನಿಃಸುಖದುಃಖಸ್ಯ ಪುರುಷಸ್ಯೈವ ತಿಷ್ಠತಃ ।
ಯದಸ್ಪಂದಿ ಮನೋರೂಪಂ ರೂಪಂ ತಸ್ಯ ಪದಸ್ಯ ತತ್ ॥ ೧೨ ॥

ತೃಣಗುಲ್ಮಾಂಕುರಾದೀನಾಂ ಸತ್ತಾಸಾಮಾನ್ಯಮಾತತಂ ।
ಯದುದ್ಭಾವೋದ್ಭವಂ ರೂಪಂ ರೂಪಂ ತಸ್ಯ ಪದಸ್ಯ ತತ್ ॥ ೧೩ ॥

---

೯. ಚಿನ್ಮಾತ್ರವಾಗಿ ಇರುವಾಗ ಅದನ್ನು ಇಲ್ಲವೆಂದು ಹೇಳಲೂ ಆಗುವುದಿಲ್ಲ; ಶಾಂತಮಲವಾಗಿರುವುದರಿಂದ ಅದನ್ನು ಇದೆಯೆಂದೂ ಹೇಳಲಾಗುವುದಿಲ್ಲ.

೧೦. ಆತ್ಮಸಂವಿತ್ತು ಒಂದು ನಿಮಿಷದಲ್ಲಿ ಯೋಜನಶತವನ್ನು ಆಕ್ರಮಿಸುವುದಲ್ಲಾ, ಆಗ ಈ ಕೊನೆಗೂ ಆ ಕೊನೆಗೂ ನಡುವೆ ಯಾವ ರೂಪವಾಗಿ ಆ ಆತ್ಮಸಂವಿತ್ತಿರುವುದೋ ಅದು ಚಿತ್ಸ್ವರೂಪವು.

೧೧-೧೨. ವಾಸನಾ ಭ್ರಾಂತಿಯೂ ವಿಷಯ ಭ್ರಾಂತಿಯೂ ಬಾಹ್ಯಾಂಭ್ಯಂತರಗಳೆರಡರಲ್ಲೂ ಶಾಂತವಾಗಿರಲು, ಅರ್ಧ ರಾತ್ರಿಯವರೆಗೂ ನಿದ್ದೆ ಮಾಡಿ ಎದ್ದು ಯಾವ ಚಿಂತೆಯೂ ಇಲ್ಲದೆ, ಶಾಂತನಾಗಿ ಸುಖದುಃಖಗಳ ಯೋಚನೆಯೂ ಇಲ್ಲದೆ ಇರುವ ಪುರುಷನ ನಿರ್ವ್ಯಾಪಾರವಾದ ಮನಸ್ಸಿನ ರೂಪವು ಯಾವುದೋ ಅದೇ ಆ ಪರಮ ಪದದ ರೂಪವು.

೧೩. ಹುಲ್ಲು, ಮೆಳೆ, ಮೊಳೆ ಮೊದಲಾದವುಗಳಲ್ಲಿ ಸತ್ತಾ ಸಾಮಾನ್ಯವಾಗಿ ಇದ್ದುಕೊಂಡು, ಉದ್ಭವ ವೇಳೆಯಲ್ಲಿ ಪ್ರಕಟವಾಗುವ ಯಾವ ರೂಪವು ಉಂಟೋ ಅದೇ, ಆ ಪರಮ ಪದದ ರೂಪವು.

ತಸ್ಮಿನ್ಪದೇ ಜಗದ್ರೂಪಂ ಯದಿದಂ ದೃಶ್ಯತೇ ಸ್ಫುಟಂ ।
ಸಕಾರಣಮಿವಾಕಾರಕರಾಲಮಿವ ಭೇದವತ್ ॥ ೧೪ ॥

ತತ್ಸರ್ವಂ ಕಾರಣಾಭಾವಾನ್ನ ಜಾತಂ ನ ಚ ವಿದ್ಯತೇ ।
ನಾಕಾರಯುಕ್ತಂ ನ ಜಗನ್ನ ಚ ದ್ವೈತೈಕ್ಯಸಂಯುತಂ ॥ ೧೫ ॥

ಯದಕಾರಣಕಂ ತಸ್ಯ ಸತ್ತಾ ನೇಹೋಪಪದ್ಯತೇ ।
ಸ್ವಯಂ ನಿತ್ಯಾನುಭೂತೇಽರ್ಥೇ ಕೋಽತ್ರಾಪಹ್ನವಶಕ್ತಿಮಾನ್ ॥ ೧೬ ॥

ನಚ ಶೂನ್ಯಮನಾದ್ಯಂತಂ ಜಗತಃ ಕಾರಣಂ ಭವೇತ್ ।
ಬ್ರಹ್ಮಾಮೂರ್ತಂ ಸಮೂರ್ತಸ್ಯ ದೃಶ್ಯಸ್ಯಾಬ್ರಹ್ಮರೂಪಿಣಃ ॥ ೧೭ ॥

ತಸ್ಮಾತ್ತತ್ರ ಜಗದ್ರೂಪಂ ಯದಾಭಾತಂ ತದೇವ ತತ್ ।
ಸ್ವಯಮೇವ ತದಾಭಾತಿ ಚಿದಾಕಾಶಮಿತಿ ಸ್ಥಿತಂ ॥ ೧೮ ॥

---

೧೪-೧೫. ಆ ಪರಮಪದದಲ್ಲಿ ಜಗದ್ರೂಪವಾಗಿ ಸ್ಫುಟವಾಗಿ ಎಂದರೆ ಇಂದ್ರಿಯ ಗೋಚರವಾಗಿ, ಸಕಾರಣವಾಗಿ (ಎಂದರೆ ಕಾರ್ಯವೋ) ಎಂಬಂತೆ, ಆಕಾರದಿಂದ ಕೂಡಿ ಕರಾಲವಾಗಿರುವಂತೆ, ಭೇದವತ್ತಾಗಿ ಕಾಣಿಸುತ್ತಿರುವುದು ಯಾವುದುಂಟೋ ಅದೆಲ್ಲವೂ ಕಾರಣಾಭಾವವಾದ್ದರಿಂದ ಅದು ಹುಟ್ಟಲೂ ಇಲ್ಲ: ಇಲ್ಲವೂ ಇಲ್ಲ ಇದು ಆಕಾರಯುಕ್ತವೂ ಅಲ್ಲ: ದ್ವೈತ ಐಕ್ಯ ಸಂಯುಕ್ತವಾದ ಜಗತ್ತೂ ಅಲ್ಲ.

೧೬. ಯಾವುದು ಕಾರಣವಿಲ್ಲದ್ದೋ ಅದಕ್ಕೆ ಸ್ವತಂತ್ರವಾದ ಸತ್ತೆಯು ಉಂಟು ಎನ್ನುವುದು ಹೊಂದುವುದಿಲ್ಲ. ಯಾವಾಗಲೂ ಅನುಭವಕ್ಕೆ ತಾನಾಗಿ ಬರುತ್ತಿರುವ ಅರ್ಥವು ಇಲ್ಲವೆನ್ನಲು ಯಾರಿಗೆ ತಾನೆ ಸಾಧ್ಯವಾದೀತು?

೧೭. ಶೂನ್ಯವೂ ಆದ್ಯಂತರಹಿತವೂ ಆದುದು ಜಗತ್ತಿಗೆ ಕಾರಣವಾಗುವುದೆಂತು? ಬ್ರಹ್ಮವು ಅಮೂರ್ತವಾದುದು: (ಆಕಾರರಹಿತವಾದುದು) ಅಂತಹ ಬ್ರಹ್ಮವು ಸಮೂರ್ತವಾಗಿ ಅಬ್ರಹ್ಮರೂಪವಾಗಿರುವ ಜಗತ್ತಿಗೆ ಹೇಗೆ ಕಾರಣವಾದೀತು?

೧೮. ಅದರಿಂದ ಜಗದ್ರೂಪವಾಗಿ ಯಾವುದು ಭಾಸವಾಗುತ್ತಿದೆಯೋ ಅದೂ ಬ್ರಹ್ಮವೇ! ಚಿದಾಕಾಶವು ಸ್ವಯಂ ಹೀಗೆ ಜಗದ್ರೂಪವಾಗಿ ತೋರಿದರೂ ತನ್ನ ರೂಪವನ್ನು ಬಿಡದೆ ಇರುವುದು.

ಜಗಚ್ಚಿದ್ಬ್ರಹ್ಮಭಾವಾಚ್ಚ ತಥಾ ಭಾವೋ ಭ್ರಮಾದಿವ ।
ಸರ್ವಮೇಕಮಜಂ ಶಾಂತಮದ್ವೈತೈಕ್ಯಮನಾಮಯಂ ॥ ೧೯ ॥

ಪೂರ್ಣಾತ್ಪೂರ್ಣಂ ವಿಸರತಿ ಪೂರ್ಣೇ ಪೂರ್ಣಂ ವಿರಾಜತೇ ।
ಪೂರ್ಣಮೇವೋದಿತಂ ಪೂರ್ಣೇ ಪೂರ್ಣಮೇವ ವ್ಯವಸ್ಥಿತಂ ॥ ೨೦ ॥

ಶಾಂತಂ ಸಮಂ ಸಮುದಯಾಸ್ತಮಯೈರ್ವಿಹೀನ-
ಮಾಕಾರಮುಕ್ತಮಜಮಂಬರಮಚ್ಛಮೇಕಂ ॥
ಸರ್ವಂ ಸದಾ ಸದಸದೇಕತಯೋದಿತಾತ್ಮ ।
ನಿರ್ವಾಣಮಾದ್ಯಮಿದಮುತ್ತಮಬೋಧರೂಪಂ ॥ ೨೧ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ನಿರ್ವಾಣವರ್ಣನಂ" ನಾಮ
ತ್ರಿಪಂಚಾಶಃ ಸರ್ಗಃ

---

೧೯. ಜಗತ್ತು ಚಿತ್ಸ್ವರೂಪವಾದ ಬ್ರಹ್ಮವೇ ಆದ್ದರಿಂದ ಅದು ಪ್ರತ್ಯೇಕ ವಾಗಿ ಕಾಣುವುದು ಭ್ರಾಂತಿಯಿಂದಲೇ! ಯಾವ ಯಾವುದು ಇದೆಯೋ ಅದೆಲ್ಲವೂ ಏಕವಾದ ಅಜವು: ಶಾಂತವು: ದ್ವೈತರಹಿತವಾದ ಐಕ್ಯವು: ಅನಾಮಯವು.

೨೦. ಪೂರ್ಣದಿಂದ ಪೂರ್ಣವೇ ಬರುವುದು. ಪೂರ್ಣದಲ್ಲಿ ಪೂರ್ಣವೇ ವಿರಾಜಿಸುವುದು. ಪೂರ್ಣದಲ್ಲಿ ಪೂರ್ಣವೇ ಉದಯಿಸುವುದು. ಹಾಗೆ ಉದಯವಾದುದೂ ಪೂರ್ಣವಾಗಿಯೇ ಇರುವುದು

೨೧. ಶಾಂತವಾಗಿ, ಸಮವಾಗಿ ಉದಯಾಸ್ತಮಯಗಳಿಲ್ಲವಾದುದಾಗಿ, ಆಕಾರಹೀನವಾಗಿರುವ, ಅಜವೂ ಆಕಾಶದಂತೆ ಅಚ್ಛವೂ ಏಕವೂ ಆಗಿರುವ ಅದು ಸರ್ವವೂ ಯಾವಾಗಲೂ ತಾನೇ ಆಗಿರುವುದು. ಸತ್-ಅಸತ್ ಆಗಿ ತೋರುತ್ತಿದ್ದರೂ ಅದು ನಿರ್ವಾಣವು ಎಲ್ಲದಕ್ಕಿಂತಲೂ ಮುಂಚೆ ಇದ್ದ ಆದ್ಯವೇ "ಇದಂ" ಆಗಿ ತೋರಿದರೂ ಅದರ ನಿಜರೂಪವು ಉತ್ತಮ ಬೋಧವು.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ನಿರ್ವಾಣ ವರ್ಣನ" ಎಂಬ
ಐವತ್ಮೂರನೆಯ ಸರ್ಗವು.

## ಚತುಃಪಂಚಾಶಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಜಗನ್ನಾಮ ನಭಃಸ್ವಚ್ಛಂ ಸದ್ಬ್ರಹ್ಮ ನಭಸಿ ಸ್ಥಿತಂ ।
ನಭೋ ನಭಸಿ ಭಾತೀದಂ ಜಗಚ್ಛಬ್ದಾರ್ಥ ಇತ್ಯಜಂ ॥ ೧ ॥

ತ್ವಮಹಂ ಜಗದಿತ್ಯಾದಿ ಶಬ್ದಾರ್ಥೋ ಬ್ರಹ್ಮ ಬ್ರಹ್ಮಣಿ ।
ಶಾಂತಂ ಸಮಸಮಾಭಾಸಂ ಸ್ಥಿತಮಸ್ಥಿತಮೇವ ಸತ್ ॥ ೨ ॥

ಸಮುದ್ರಗಿರಿಮೇಘೋರ್ವೀವಿಸ್ಫೋಟಮಯಮಪ್ಯಜಂ ।
ಕಾಷ್ಠಮೌನವದೇವೇದಂ ಜಗದ್ಬ್ರಹ್ಮಾವತಿಷ್ಠತೇ ॥ ೩ ॥

---

## ಐವತ್ತನಾಲ್ಕನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಜಗತ್ತು ಎಂಬುದು ಶುದ್ಧವಾದ ಆಕಾಶವು; ಅದೇ ಸತ್ಸ್ವರೂಪವಾದ ಬ್ರಹ್ಮವು. ಅದು ಇರುವುದೂ ಆಕಾಶದಲ್ಲಿಯೇ ! ಆಕಾಶವು ಆಕಾಶದಲ್ಲಿ ಜಗತ್ತಾಗಿ ತೋರುವುದು; ಅದರಿಂದ ಜಗತ್ತು ಎಂಬ ಶಬ್ದದ ಅರ್ಥವೂ ಬ್ರಹ್ಮವೆಂದೇ !

೨. ತ್ವಂ, ಅಹಂ, ಜಗತ್, ಇತ್ಯಾದಿ ಶಬ್ದಗಳ ಅರ್ಥವು ಬ್ರಹ್ಮವೆಂದೇ ! ಅದು ಶಾಂತವಾಗಿ ಸಮಸಮವಾಗಿರುವ ಬ್ರಹ್ಮವೇ ! ಜಗದ್ರೂಪವಾಗಿ ಕಾಣುತ್ತಿದ್ದರೂ ಅದು ಸತ್ ಆದ ಬ್ರಹ್ಮವೇ! ಆದ್ದರಿಂದ ಜಗತ್ತಾಗಿ ಅದು ಇಲ್ಲವೇ ಇಲ್ಲ.

೩. ಸಮುದ್ರ, ಗಿರಿ, ಮೇಘ ಭೂಮಿ, ಮೊದಲಾದ ನಾನಾ ರೂಪವಾಗಿ ಕಾಣುತ್ತಿದ್ದರೂ ಇದೆಲ್ಲವೂ ಅಜವೇ ! ಇಷ್ಟು ಆರ್ಭಟವಾಗಿದ್ದರೂ ಈ ಜಗತ್ತು ಕಾಷ್ಠಮೌನವಾಗಿರುವ ಬ್ರಹ್ಮವೇ ಆಗಿರುವುದು.

ದ್ರಷ್ಟಾ ದ್ರಷ್ಟೃವ ದೃಶ್ಯಸ್ಯ ಸ್ವಭಾವಾತ್ಸ್ವಾತ್ಮನಿ ಸ್ಥಿತಃ ।
ಕರ್ತಾ ಕರ್ತೃರ್ವ ಕರ್ತವ್ಯಾಭಾವತಃ ಕಾರಣಾದೃತೇ ॥ ೪ ॥

ನ ಜ್ಞಾತೃತ್ವಂ ನ ಚ ಕರ್ತೃತ್ವಂ ನ ಜಡತ್ವಂ ನ ಭೋಕ್ತೃತಾ ।
ನ ಶೂನ್ಯತಾ ನ ಚಾರ್ಥತ್ವಮಿಹ ನಾಪಿ ನಭೋರ್ಥತಾ ॥ ೫ ॥

ಶಿಲಾಜಠರವತ್ಸತ್ಯಂ ಘನಮೇಕಮಜಂ ಕತಂ ।
ಸರ್ವಂ ಶಾಂತಮನಾದ್ಯಂತಮೇಕಂ ವಿಧಿನಿಷೇಧಯೋಃ ॥ ೬ ॥

ಮರಣಂ ಜೀವಿತಂ ಸತ್ಯಮಸತ್ಯಂ ಚ ಶುಭಾಶುಭಂ ।
ಸರ್ವಮೇಕಮಜಂ ವ್ಯೋಮ ವೀಚಿಜಾಲಜಲಂ ಯಥಾ ॥ ೭ ॥

ವಿಭಾಗ ಏವ ದೃಶ್ಯತ್ವಂ ದ್ರಷ್ಟೃತ್ವಂ ಚೈವ ಗಚ್ಛತಿ ।
ಏತಚ್ಚ ಕಲ್ಪನಂ ಸ್ವಪ್ನಪುರಾದಿಷ್ವನುಭೂಯತೇ ॥ ೮ ॥

---

೪. ದೃಶ್ಯವು ಸ್ವಭಾವವಾಗಿ ಆತ್ಮನಲ್ಲಿಯೇ ಇರುವುದರಿಂದ, ಆ ದೃಶ್ಯದ ದ್ರಷ್ಟೃವೂ ದ್ರಷ್ಟೃವಿನಂತೆ ಆತ್ಮನಲ್ಲಿಯೇ ಇರುವನು. ಕಾರಣವಲ್ಲದ ಮತ್ತೊಂದಿಲ್ಲವಾಗ ಕರ್ತವ್ಯವು ಇಲ್ಲವಾಯಿತು. ಕರ್ತವ್ಯವಿಲ್ಲದ ಮೇಲೆ ಕಾರ್ಯದ ಕರ್ತೃವೂ (ಬೇರೆ) ಇಲ್ಲವಾಗಿ ಕರ್ತೃವೂ ಆತ್ಮನಲ್ಲಿಯೇ ಇರಬೇಕಾಯಿತು

೫ ಜ್ಞಾತೃವಿಲ್ಲ: ಕರ್ತೃವಿಲ್ಲ: ಭೋಕ್ತೃವಿಲ್ಲ. ಶೂನ್ಯವಲ್ಲ: ಅರ್ಥವಲ್ಲ. ನಭ ಎಂಬ ಅರ್ಥವೂ (ಆ ಬ್ರಹ್ಮಕ್ಕೆ) ಹೊಂದುವುದಿಲ್ಲ

೬ ಶಿಲಾಜಠರದಲ್ಲಿರುವಂತೆ, ಸತ್ಯವು: ಘನವೆಂದರೆ ತಾನಲ್ಲದ ಇನ್ನೊಂದೂ ಇಲ್ಲದ್ದು. ಅದು ಏಕವು ಅಜವು. ಎಲ್ಲೆಲ್ಲಿಯೂ ತಾನೇ ಆಗಿ ಹರಡಿರುವುದು. ಸರ್ವವೂ ತಾನೇ ಆಗಿರುವುದು. ಶಾಂತ (ನಿಷ್ಕ್ರಿಯ)ವಾಗಿರುವುದು. ಆದ್ಯಂತ ರಹಿತವಾಗಿ ವಿಧಿ ನಿಷೇಧಗಳೆರಡೂ ಇಲ್ಲದ ಒಂದೇ ಆಗಿರುವುದು.

೭. ಮರಣ ಜೀವಿತಗಳೆರಡೂ ಅದೇ ! ಸತ್ಯ–ಅಸತ್ಯಗಳೂ ಅದೇ ! ಶುಭಾಶುಭಗಳೂ ಅದೇ ! ಸರ್ವವೂ ಏಕವೂ ಅಜವೂ ಆಗಿ ವ್ಯೋಮದಂತಿರುವುದು: ಅದು ತರಂಗತರಂಗದಲ್ಲಿಯೂ ಇರುವ ಜಲದಂತೆ ಇರುವುದು.

೮. ಭಾಗವಿಲ್ಲದ್ದಾದರೂ ದೃಶ್ಯತ್ವ, ದ್ರಷ್ಟೃತ್ವಗಳನ್ನು ಹೊಂದುವುದು. ಇದು ಶುದ್ಧವಾದ ಭ್ರಾಂತಿಯು. ಇದು ಸ್ವಪ್ನಪುರಗಳಲ್ಲಿ ಅನುಭವಕ್ಕೆ ಬರುವುದು.

ಏವಮುಚ್ಛಂ ಪರಾಕಾಶೇ ಸ್ವಪ್ನಪತ್ತನವಜ್ಜಗತ್ ।
ಭಾತಿ ಪ್ರಥಮಮೇವೇದಂ ಬ್ರಹ್ಮೈವೇತ್ಥಮತಃ ಸ್ಥಿತಂ ॥ ೯ ॥

ತದಿದಂ ತಾದೃಶಂ ವಿದ್ಧಿ ಸರ್ವಂ ಸರ್ವಾತ್ಮಕಂ ಚ ಯತ್ ।
ದೇಶಾದ್ದೇಶಾಂತರಪ್ರಾಪ್ತೌ ವಿದೋ ಮಧ್ಯಮನಂಕಿತಂ ॥ ೧೦ ॥

ಚಿದ್ವ್ಯೋಮ್ನಃ ಶಾಂತಶಾಂತಸ್ಯ ಮಧ್ಯಮೇ ಚೈವಮಾಸ್ಥಿತಂ ।
ಜಗತ್ತಥೈವ ಸಲಿಲಮೇವೋರ್ಮ್ಯಾದಿತಯಾ ಯಥಾ ॥ ೧೧ ॥

ಯದುದೇತ್ಯುದಿತಂ ಯಚ್ಚ ಯಚ್ಚ ನೋದೇತಿ ನೋದಿತಂ ।
ದೇಶಾದ್ದೇಶಾಂತರಪ್ರಾಪ್ತೌ ವಿದೋ ಮಧ್ಯಾನ್ನ ಭೇದಿತಂ ॥ ೧೨ ॥

ಅತಃ ಕಿಲಾಸ್ಯ ಸರ್ಗಸ್ಯ ಕಾರಣಂ ಶಶಶೃಂಗವತ್ ।
ಪ್ರಯತ್ನೇನಾಪಿ ಚಾನ್ವಿಷ್ಟಂ ನ ಕಿಂಚಿದುಪಲಭ್ಯತೇ ॥ ೧೩ ॥

---

೯. ಹೀಗೆ ಶುದ್ಧವಾದ ಪರಮಾಕಾಶದಲ್ಲಿ ಜಗತ್ತು ಸ್ವಪ್ನ ಪಟ್ಟಣದಂತೆ ಕಾಣಿಸುವುದು ಆದರಿಂದ ಮೊದಲೂ ಬ್ರಹ್ಮವೇ! ಆಮೇಲೂ ಬ್ರಹ್ಮವೇ!

೧೦. ಆದರಿಂದ ನಾನಾರೂಪವಾಗಿರುವ ಸರ್ವವನ್ನೂ ಒಳಗೊಂಡಿರುವ ಜಗತ್ತು ಯಾವುದುಂಟೋ ಅದು, ಮೊದಲಂತೆಯೇ ಬ್ರಹ್ಮವೇ ಆಗಿರುವುದು: ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸುವ ಸಂವಿತ್ತಿನಲ್ಲಿ ಈ ಕೊನೆ ಆ ಕೊನೆಗಳ ನಡುವೆಯು ಹೇಗೆ ಗುರುತಿಸಲು ಸಿಕ್ಕದಿರುವುದೋ ಹಾಗೆಯೇ ಗುರುತಿಸಲು ಸಿಕ್ಕದಿದ್ದರೂ ಅದು ಬ್ರಹ್ಮವೇ!

೧೧. ಶಾಂತ ಶಾಂತವಾದ ಚಿದಾಕಾಶದ ಮಧ್ಯದಲ್ಲಿ ಜಗತ್ತು ಇರುವುದು. ನೀರೇ ತರಂಗಾದಿಗಳಾಗುವಂತೆ ಆಕಾಶವು ಜಗತ್ತಾಗುವುದು.

೧೨. ಉದಿತವು ಉದಯಿಸುವುದು: ಅನುದಿತವಾದುದು ಅನುದಿತವಾಗಿಯೇ ಇರುವುದು. ಆದರೂ ಇವೆರಡೂ ಒಂದೆಡೆಯಿಂದ ಇನ್ನೊಂದೆಡೆಗೆ ಹೋಗುವ ಸಂವಿತ್ತು ಮಧ್ಯದಲ್ಲಿ ಹೇಗೆ ಬೇರೆಯಾಗುವುದಿಲ್ಲವೋ ಹಾಗೆಯೇ ಎನ್ನಬೇಕು.

೧೩. ಆದರಿಂದ, ಈ ಸೃಷ್ಟಿಗೆ ಕಾರಣವು ಮೊಲದ ಕೊಂಬಿನಂತೆ ಇದ್ದು, ಪ್ರಯತ್ನಪಟ್ಟು ಹುಡುಕಿದರೂ ಸಿಕ್ಕುವುದಿಲ್ಲ.

ಯದಕಾರಣಕಂ ಭಾತಿ ತದಭಾತಂ ಭ್ರಮಾತ್ಮಕಂ ।
ಭ್ರಮಸ್ಯಾಸತ್ಯರೂಪಸ್ಯ ಸತ್ಯತಾ ಕಥಮುಚ್ಯತೇ ॥ ೧೪ ॥

ಕಾರಣೇನ ವಿನಾ ಕಾರ್ಯಂ ಕಿಲ ಕಿಂ ನಾಮ ವಿದ್ಯತೇ ।
ಯದಪುತ್ರಸ್ಯ ಸತ್ಪುತ್ರದರ್ಶನಂ ಸ ಭ್ರಮೋ ನ ಸತ್ ॥ ೧೫ ॥

ಯಸ್ತ್ವಕಾರಣಕೋ ಭಾತಿ ಸ ಸ್ವಭಾವೋ ವಿಜೃಂಭತೇ ।
ಸರ್ವರೂಪೇಣ ಸಂಕಲ್ಪಗಂಧರ್ವನಗರಾದಿವತ್ ॥ ೧೬ ॥

ದೇಶಾದ್ದೇಶಾಂತರಪ್ರಾಪ್ತೌ ಕ್ಷಣಾನ್ಮಧ್ಯಂ ವಿದೋ ವಪುಃ ।
ಸ್ವರೂಪಮಜಹತ್ತ್ವೇವ ರಾಜತೇಽರ್ಥವಿವರ್ತವತ್ ॥ ೧೭ ॥

ಬೋಧ ಏವ ಕಚತ್ಯರ್ಥರೂಪೇಣ ಸ ಚ ಖಾದಣುಃ ।
ದೃಷ್ಟಾಂತೋಽತ್ರಾನುಭೂತೋಽಂತಃ ಸ್ವಪ್ನಸಂಕಲ್ಪಪರ್ವತಃ ॥ ೧೮ ॥

---

೧೪. ಯಾವುದು ಕಾರಣವಿಲ್ಲದೆ ಗೋಚರವಾಗುವುದೋ ಅದು ಗೋಚರವಾಗದಿದ್ದಂತೆಯೇ! ಆದ್ದರಿಂದ ಭ್ರಾಂತಿಯೆನ್ನಿಸಿಕೊಳ್ಳುವುದು. ಭ್ರಾಂತಿಯು ಅಸತ್ಯವಾದ್ದರಿಂದ ಅದನ್ನು ಸತ್ಯವೆನ್ನುವುದೆಂತು ?

೧೫ ಕಾರಣವಿಲ್ಲದ ಕಾರ್ಯವೂ ಉಂಟೇನು ? ಮಕ್ಕಳಿಲ್ಲದವರಿಗೆ ಮಕ್ಕಳುಂಟೆಂಬುದು ಭ್ರಮವಲ್ಲದೆ ಸತ್ಯವಲ್ಲ. (ಅಥವಾ)

೧೬ ಯಾವುದು ಅಕಾರಣವಾಗಿ ಕಾಣಿಸುವುದೋ ಅದನ್ನು ಸ್ವಭಾವವೇ ವಿಜೃಂಭಿಸಿದುದು ಎನ್ನಬೇಕು ಆ ಸ್ವಭಾವವೇ ಸಂಕಲ್ಪಪತ್ತನದಂತೆ, ಗಂಧರ್ವ ನಗರಾದಿಗಳಂತೆ, ಸರ್ವರೂಪದಿಂದಲೂ ವಿಜೃಂಭಿಸುವುದು

೧೭- ಒಂದೇ ಒಂದು ಕ್ಷಣದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವ ಸಂವಿತ್ತು ಮಧ್ಯದಲ್ಲಿ ತನ್ನ ದೇಹವನ್ನು ಬಿಟ್ಟಿರುವುದೇನು ? ಅದರಂತೆಯೇ ಬ್ರಹ್ಮವು ತನ್ನ ಸ್ವರೂಪವನ್ನು ಬಿಡದೆಯೇ ಅರ್ಥವಿವರ್ತನದಿಂದ ಜಗತ್ತಾಗಿ ರಾಜಿಸುವುದು.

೧೮ ಜ್ಞಾನವೇ ಜ್ಞೇಯ ವಸ್ತುವಾದ ಅರ್ಥವಾಗಿ ತೋರುವುದು : ಆ ಅರ್ಥವು ಜ್ಞಾನಕ್ಕೆ ಹೋಲಿಸಿದರೆ ಒಂದು ಅಣು ಮಾತ್ರವು: ಇದನ್ನು

ಶ್ರೀರಾಮ ಉವಾಚ:—

ವಿದ್ಯತೇ ವಟಬೀಜಾಂತರ್ಯಥಾ ಭಾವಿಮಹಾದ್ರುಮಃ ।
ಪರಮಾಣೌ ತಥಾ ಸರ್ಗೋ ಬ್ರಹ್ಮನ್ಕಸ್ಮಾನ್ನ ವಿದ್ಯತೇ　　　॥ ೧೯ ॥

ಶ್ರೀ ವಸಿಷ್ಠ ಉವಾಚ :—

ಯತ್ರಾಸ್ತಿ ಬೀಜಂ ತತ್ರ ಸ್ಯಾಚ್ಛಾಖಾ ವಿತತರೂಪಿಣೀ ।
ಜನ್ಯತೇ ಕಾರಣೈಃ ಸಾ ಚ ವಿತತಾ ಸಹಕಾರಿಭಿಃ　　　॥ ೨೦

ಸಮಸ್ತಭೂತಪ್ರಲಯೇ ಬೀಜಮಾಕಾರಿ ಕಿಂ ಭವೇತ್ ।
ಸಹಕಾರ್ಯಥ ಕಿಂ ತಸ್ಯ ಜಾಯತೇ ಯದ್ವಶಾಜ್ಜಗತ್　　　॥ ೨೧ ॥

ಯತ್ತು ಬ್ರಹ್ಮ ಪರಂ ಶಾಂತಂ ಕಾ ತತ್ರಾಕಾರಕಲ್ಪನಾ ।
ಪರಮಾಣುತ್ವಯೋಗೋಽಪಿ ನಾತ್ರ ಕೇವಾತ್ರ ಬೀಜತಾ　　　॥ ೨೨ ॥

---

ಅನುಭವಕ್ಕೆ ತಂದು ಕೊಡುವ ದೃಷ್ಟಾಂತವು ಸ್ವಪ್ನದಲ್ಲಿಯೂ ಸಂಕಲ್ಪದಲ್ಲಿಯೂ ಕಾಣುವ ಪರ್ವತವು

ಶ್ರೀ ರಾಮನು ಕೇಳಿದನು:—

೧೯. ವಟಬೀಜದಲ್ಲಿ ಮುಂದಿನ ಮಹಾವೃಕ್ಷವು ಇರುವಂತೆ ಪರಮಾಣುವಿನಲ್ಲಿಯೂ ಸರ್ಗವು, ಎಲೈ ಬ್ರಹ್ಮನೆ, ಏಕೆ ಇರಬಾರದು ?

ಶ್ರೀ ವಸಿಷ್ಠನು ಹೇಳಿದನು:—

೨೦. ಎಲ್ಲಿ ಬೀಜವಿರುವುದೋ ಅಲ್ಲಿ ಶಾಖೆಗಳು ಹರಡಿಕೊಂಡು ಕಾಣಿಸುವುವು : ಅಷ್ಟೇ ಅಲ್ಲ ಸಹಕಾರಿಕಾರಣಗಳಿಂದ ಆ ಶಾಖೆಯು ಹರಡಿಕೊಳ್ಳುವುದು.

೨೧. ಸಮಸ್ತ ಭೂತಗಳೂ ಪ್ರಲಯವಾಗಿ ಹೋಗುವಾಗ ಬೀಜರೂಪವಾಗಿ ನಿಲ್ಲುವುದು ಯಾವುದು ? ಅದನ್ನು ಬೆಳೆಸಲು ಸಹಾಯ ಮಾಡುವ ಸಹಕಾರಿ ಕಾರಣವಾದರೂ ಯಾವುದು ?

೨೨. ಬ್ರಹ್ಮವು ಪರಮಶಾಂತವಾಗಿರಲು, ಅದರಲ್ಲಿ ಆಕಾರ ಕಲ್ಪನೆಯಾವುದೂ ಎಂತು ಸಾಧ್ಯವು ? ಅದರಲ್ಲಿ ಪರಮಾಣುವೊಂದನ್ನೂ ಕಲ್ಪಿಸಲು ಸಾಧ್ಯವಿಲ್ಲದಿರಲು ಅದು ಬೀಜವಾಯಿತೆನ್ನುವುದೆಂತು ?

ಕಾರಣಸ್ಯೇತಿ ಬೀಜಸ್ಯ ಸತ್ಯಾಸತ್ಯೈಕಕಾರಿಣಃ ।
ಅಸಂಭವಾಜ್ಜಗತ್ಸತ್ತಾ ಕಥಂ ಕೇನ ಕುತಃ ಕ್ವ ಕಾ ॥ ೨೩ ॥

ಜಗದಾಸ್ತೇ ಪರಸ್ಯಾಣೋರಂತರಿತ್ಯಪಿ ನೋಚಿತಂ ।
ಸಾರ್ಷಪೇ ಕಣಕೇ ಮೇರುರಾಸ್ತ ಇತ್ಯಜ್ಞಕಲ್ಪನಾ ॥ ೨೪ ॥

ಸತಿ ಬೀಜೇ ಪ್ರವರ್ತಂತೇ ಕಾರ್ಯಕಾರಣದೃಷ್ಟಯಃ ।
ನಿರಾಕಾರಸ್ಯ ಕಿಂ ಬೀಜಂ ಕ್ವ ಜನ್ಯಜನಕಕ್ರಮಃ ॥ ೨೫ ॥

ಅತೋ ಯತ್ಪರಮಂ ತತ್ತ್ವಂ ತದೇವೇದಂ ಜಗತ್ಸ್ಥಿತಂ ।
ನೇಹ ಪ್ರಥಯತೇ ಕಿಂಚಿನ್ನ ಚ ಕಿಂಚಿದ್ವಿನಶ್ಯತಿ ॥ ೨೬ ॥

ಚಿದಾಕಾಶಶ್ಚಿದಾಕಾಶೇ ಹೃದಿ ಚಿತ್ತ್ವಾಜ್ಜಗದ್ಭ್ರಮಂ ।
ಅಶುದ್ಧವದಿವಾಶುದ್ಧೇ ಶುದ್ಧಂ ಶುದ್ಧೇ ಪ್ರಪಶ್ಯತಿ ॥ ೨೭ ॥

---

೨೩. ಸತ್ಯಾಸತ್ಯಗಳನ್ನು ನಿರ್ಣಯಿಸುವ ಕಾರಣವಾದ ಬೀಜವೇ ಅಸಂಭವವಾಗಿರಲು, ಜಗತ್ಸತ್ತೆಯು ಹೇಗೆ, ಯಾರಿಂದ, ಎಲ್ಲಿಂದ, ಎಲ್ಲಿ, ಯಾವುದು ಬಂದೀತು ?

೨೪. ಪರಮದ ಅಣುವೊಂದರಲ್ಲಿ ಜಗತ್ತು ಇದೆಯೆಂಬುದೂ ಉಚಿತವಲ್ಲ. ಸಾಸುವೆಯ ಕಣವೊಂದರಲ್ಲಿ ಮೇರು ಪರ್ವತವಿರುವುದು ಎನ್ನುವುದು ಅಜ್ಞರ ಕಲ್ಪನೆಯು.

೨೫. ಬೀಜವೊಂದಿರಲು, ಕಾರ್ಯಕಾರಣವೆಂಬ ದೃಷ್ಟಿಯು ಅಲ್ಲಿಗೆ ಹೊಂದೀತು. ಆದರೆ ನಿರಾಕಾರದ ಬೀಜವು ಯಾವುದು ? ಜನ್ಯ ಜನಕ ಕ್ರಮವಲ್ಲಿ ಹೇಗೆ ಹೊಂದುವುದು ?

೨೬. ಅದರಿಂದ ಪರಮವಾದ ತತ್ವವು ಯಾವುದೋ ಅದೇ ಜಗತ್ತಾಗಿ ಇರುವುದು ಎನ್ನಬೇಕು ಅದರಿಂದ ಅದಲ್ಲದ ಇನ್ನು ಯಾವುದೂ ಜಗತ್ತಾಗಿಲ್ಲ : ಅದರಿಂದ ಜಗತ್ತು ವಿನಾಶವಾಗುವುದೂ ಇಲ್ಲ.

೨೭. (ಹಾಗಾದರೆ ಇರುವಂತೆ ಕಾಣುವುದು ಯೇನು ? ಎಂದರೆ) ಚಿದಾಕಾಶದಲ್ಲಿ ಚಿದಾಕಾಶವಿರುವುದು ಅಷ್ಟೆ ! ಹೃದಯದಲ್ಲಿ ಚಿತ್ತ್ವವು ಜಗದ್ಭ್ರಮವಾಗಿ

ಖಮೇವಾಭಾಸತೇ ತಸ್ಯ ರೂಪಂ ಸ್ಪಂದ ಇವಾನಿಲೇ ।
ಸರ್ಗಶಬ್ದಾರ್ಥಕಲನಾ ನೇಹ ಕಾಶ್ಚನ ಸಂತಿ ನಃ ॥ ೨೮ ॥

ಯಥಾ ಶೂನ್ಯತ್ವಮಾಕಾಶೇ ದ್ರವತ್ವಂ ಚ ಯಥಾ ಜಲೇ ।
ಅನ್ಯತಾತ್ಮಮಯೀ ಶುದ್ಧಾ ಸರ್ಗತೇಯಂ ತಥಾತ್ಮನಿ ॥ ೨೯ ॥

ಭಾರೂಪಮಿದಮಾಶಾಂತಂ ಜಗದ್ಬ್ರಹ್ಮೈವ ನಸ್ತತಂ ।
ಅನಾದಿನಿಧನಂ ಸತ್ಯಂ ನೋದೇತಿ ನ ಚ ಶಾಮ್ಯತಿ ॥ ೩೦ ॥

ದೇಶಾದ್ದೇಶಾಂತರಪ್ರಾಪ್ತೌ ಕ್ಷಣಾನ್ಮಧ್ಯೇ ವಿದೋ ವಪುಃ ।
ಯತ್ತಜ್ಜಗದಿತೀವೇದಂ ವ್ಯೋಮಾತ್ಮನಿ ವ್ಯವಸ್ಥಿತಂ ॥ ೩೧ ॥

---

ತೋರುವುದು. ಚಿತ್ತ ಅಶುದ್ಧವಾದಂತಿದ್ದರೆ ಅಶುದ್ಧದಂತೆ, ಶುದ್ಧವಾಗಿದ್ದರೆ ಶುದ್ಧವಾಗಿ, ನೋಡುವುದು. (ಅಶುದ್ಧವಾದಾಗ ಜಗತ್ತೆಂದುಕೊಳ್ಳುವುದು ಶುದ್ಧವಾದಾಗ ಬ್ರಹ್ಮವೆಂದುಕೊಳ್ಳುವುದು).

೨೮. ಚಿದಾಕಾಶವು ತನ್ನ ಸ್ವರೂಪವಾದ ಚಿದಾಕಾಶವನ್ನೇ ವಾಯುವು ತನ್ನ ಸ್ಪಂದವನ್ನು (ತನಗಿಂತ ಬೇರೆಯಾಗಿ ಕಂಡಂತೆ) ಜಗತ್ತಾಗಿ ಕಾಣುವುದು. ಆದರೂ ನಮ್ಮಂತಹವರಿಗೆ ಸರ್ಗವೆಂಬ ಶಬ್ದಕ್ಕೆ ಅರ್ಥವಾಗಿ ಭಿನ್ನವಾದ ಒಂದು ವಸ್ತುವುಂಟೆಂಬ ಕಲ್ಪನೆಯೂ ಇಲ್ಲ

೨೯. ಆಕಾಶದಲ್ಲಿ ಆಕಾಶ ಸಹಜವಾದ ಶೂನ್ಯತ್ವವಿರುವಂತೆ, ಜಲದಲ್ಲಿ ಜಲ ಸಹಜವಾದ ದ್ರವತ್ವವಿರುವಂತೆ, ಅನ್ಯವಾಗಿ ಕಂಡರೂ ಆತ್ಮಮಯವೇ ಆಗಿರುವ ಸರ್ಗವು ಆತ್ಮನಲ್ಲಿ ಕಾಣುವುದು.

೩೦ "ಪ್ರಕಾಶರೂಪವಾಗಿರುವ ಬ್ರಹ್ಮವು ಜಗದ್ರೂಪವಾಗಿ ಹರಡಿರುವುದು" ಎಂದು ನಮ್ಮ ಮತವು. ಆ ಬ್ರಹ್ಮವು ಆದಿ, ನಿಧನಗಳಿಲ್ಲದುದು: ಸತ್ಯವಾದುದು: ಆದರಿಂದ ಅದು ಹುಟ್ಟುವುದೂ ಇಲ್ಲ ಶಾಂತವಾಗುವುದೂ ಇಲ್ಲ.

೩೧. ಒಂದು ಕಡೆಯಿಂದ ಇನ್ನೊಂದು ಕಡೆಗೆ ಕ್ಷಣಮಾತ್ರದಲ್ಲಿ ಹೋಗುವ ಸಂವಿತ್ತಿನ ದೇಹವು ನಡುವಿನೆಡೆಯಲ್ಲಿ ಇರುವಂತೆ, ಈ ಜಗತ್ತೂ ಚಿದಾಕಾಶದಲ್ಲಿ ಇರುವುದು (ಎಂದು ನಮ್ಮ ಮತವು )

ಯಥಾ ಸ್ಪಂದೋಽನಿಲೇ ತೋಯೇ ದ್ರವತ್ವಂ ವ್ಯೋಮ್ನಿ ಶೂನ್ಯತಾ ।
ತಥಾ ಜಗದಿದಂ ಭಾತಮನನ್ಯಾಶ್ಲೇಷಮಾತ್ಮನಿ ॥ ೩೨ ॥

ಸಂವಿನ್ನಭೋ ನನು ಜಗನ್ನಭ ಇತ್ಯನರ್ಕ–
ಮಾತ್ಮನ್ಯವಸ್ಥಿತಮನಸ್ತಮಯೋದಯಂ ಕ್ವ ।
ತತ್ತ್ವಂಗಭೂತಮಖಿಲಂ ತದನನ್ಯದೇವ
ದೃಶ್ಯಂ ನಿರಸ್ತಕಲನೋಽಂಬರಮಾತ್ರಮಾಸ್ಸ್ವ ॥ ೩೩ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಅದ್ವೈತೈಕ್ಯ ಪ್ರತಿಪಾದನಂ" ನಾಮ
ಚತುಃಪಂಚಾಶಃ ಸರ್ಗಃ

---

೩೨. ವಾಯುವಿನಲ್ಲಿ ಸ್ಪಂದದಂತೆ, ಜಲದಲ್ಲಿ ದ್ರವದಂತೆ, ಆಕಾಶದಲ್ಲಿ ಶೂನ್ಯದಂತೆ, ಅನನ್ಯಾಶ್ಲೇಷವಾಗಿ ಆತ್ಮನಲ್ಲಿ ಈ ಜಗತ್ತು ಭಾನವಾಗುವುದು.

೩೩. ಸಂವಿದಾಕಾಶವೇ ಜಗದಾಕಾಶವು. ಸೂರ್ಯನ ಬೆಳಕೂ ಬೀಳದ ಆ ಆತ್ಮನಲ್ಲಿ ಅಸ್ತೋದಯಗಳಿಲ್ಲದೆ ಈ ಸಂವಿದಾಕಾಶವಿರುವುದು ಎಂಬುದು ಪ್ರಸಿದ್ಧವಲ್ಲವೆ? ಆ ಬ್ರಹ್ಮದಲ್ಲಿ ಎಲ್ಲವೂ ಸೇರಿಕೊಂಡಿರುವುದು. ಅದು ಅನನ್ಯವಾಗಿರುವುದು. (ಅದರಿಂದ) ದೃಶ್ಯವೆಂಬ ಕಲ್ಪನವೂ ಅಲ್ಲಿಲ್ಲ. ಅದರಿಂದ ನೀನೂ ಚಿದಾಕಾಶಮಾತ್ರನಾಗಿ ಇರು.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಅದ್ವೈತೈಕ್ಯಪ್ರತಿಪಾದನ" ಎಂಬ
ಐವತ್ತನಾಲ್ಕನೆಯ ಸರ್ಗವು.

## ಪಂಚಪಂಚಾಶಃ ಸರ್ಗಃ

ಶ್ರೀ ವಸಿಷ್ಠ ಉವಾಚ.—

ಭಾವಾಭಾವಗ್ರಹೋತ್ಸರ್ಗಸ್ಥೂಲಸೂಕ್ಷ್ಮಚರಾಚರಾಃ ।
ಆದಾವೇವ ಹಿ ನೋತ್ಪನ್ನಾಃ ಸರ್ಗಾದೌ ಕಾರಣಂ ವಿನಾ ॥ ೧ ॥

ನ ತ್ವಮೂರ್ತೋ ಹಿ ಚಿದ್ಧಾತುಃ ಕಾರಣಂ ಭವಿತುಂ ಕ್ವಚಿತ್ ।
ಸ್ವಾತ್ಮಾ ಶಕ್ತಃ ಸ ಮೂರ್ತಾನಾಂ ಬೀಜಮುರ್ವೀರುಹಾಮಿವ ॥ ೨ ॥

ಸ್ವಭಾವಮೇವ ಸತತಂ ಭಾವಯನ್ಭಾವನಾತ್ಮಕಂ ।
ಆತ್ಮನ್ಯೇವ ಹಿ ಚಿದ್ಧಾತುಃ ಸರ್ವೋಽನುಭವವಾನ್ಸ್ಥಿತಃ ॥ ೩ ॥

## ಐವತ್ತೈದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಭಾವ, ಅಭಾವ, ಗ್ರಹ, ಉತ್ಸರ್ಗ, ಸ್ಥೂಲ, ಸೂಕ್ಷ್ಮ, ಚರಾಚರ ಮೊದಲಾದವುಗಳು ಯಾವವೂ ಮೊದಲಲ್ಲಿ ಇರಲಿಲ್ಲ. ಏಕೆಂದರೆ ಇವಕ್ಕೆ ಸರ್ಗಾದಿಯಲ್ಲಿ ಯಾವ ಕಾರಣವೂ ಇರಲಿಲ್ಲ.

೨. ಚಿದ್ಘನವು ಅಮೂರ್ತವು. ಆದರಿಂದ ಅದು ಯಾವುದಕ್ಕೂ ಕಾರಣವಾಗುವಂತಿಲ್ಲವಷ್ಟೆ ? ಮೂರ್ತಗಳಾದ ಮರಗಳಿಗೆ ಬೀಜವು ಹೇಗೋ ಹಾಗೆ ಆದರದರ ಆತ್ಮವು ಎಲ್ಲವನ್ನು ಮಾಡಿಕೊಳ್ಳಲು ಶಕ್ತನು.

೩. ಯಾವಾಗಲೂ ಸ್ವಭಾವವೇ ಭಾವನಾತ್ಮಕವಾಗಿ ಭಾವಿಸಿಕೊಳ್ಳುತ್ತ ಇರಲು, ಚಿದ್ಧಾತುವು ತನ್ನಲ್ಲಿಯೇ ಸರ್ವವನ್ನು ಅನುಭವಿಸುತ್ತಿರುವುದು.

ಆಸ್ವಾದಯತಿ ಯಂ ಭಾವಂ ಚಿದ್ಧಾತುರ್ಗಗನಾತ್ಮಕಃ ।
ಲಬ್ಧಃ ಸರ್ಗಃ ಪ್ರಲಾಪೇನ ಕ್ಷೀಬಃ ಕ್ಷುಬ್ಧತಯಾ ಯಥಾ ॥ ೪ ॥

ಯದಾ ಸರ್ವಮನುತ್ಪನ್ನಂ ನಾಸ್ತ್ಯೇವಾಪಿ ಚ ದೃಶ್ಯತೇ ।
ತದಾ ಬ್ರಹ್ಮೈವ ವಿದ್ಧೀದಂ ಸಮಂ ಶಾಂತಮಸತ್ಸಮಂ ॥ ೫ ॥

ಚಿನ್ನಭಶ್ಚಿನ್ನಭಸ್ಯೇವ ಪಯಸೀವ ಪಯೋದ್ರವಃ ।
ಚಿತ್ತ್ವಾತ್ಕಚತಿ ಯತ್ತೇನ ತದೇವೇದಂ ಜಗತ್ಕೃತಂ ॥ ೬ ॥

ಸ್ವಪ್ನೇ ತದೇವ ಜಗದಿತ್ಯುದೇತಿ ವಿಮಲಾ ಯಥಾ ।
ಕಾಚಕಸ್ಯೇವ ಕಚತಿ ತಥೇತ್ಥಂ ಸಾದಿಸರ್ಗ ಖೇ ॥ ೭ ॥

---

೪. ಆಕಾಶಾತ್ಮಕವಾದ ಚಿದ್ಧಾತುವು ಯಾವ ಭಾವವನ್ನು ಆಸ್ವಾದಿಸುವುದೋ ಅದು ಹಾಗೇ ಮೂರ್ತವಾಗಿ ಕಾಣಿಸಿಕೊಳ್ಳುವುದು. ಕುಡಿದವನು ಬುದ್ಧಿ ಕೆಟ್ಟಿರುವಾಗ ಅಳುತ್ತಾ ಏನೇನೋ ಕಾಣುವುದಿಲ್ಲವೆ ? ಹಾಗೆ ಇದೂ ಕೂಡ !

೫. ಯಾವಾಗ ಏನೂ ಇನ್ನೂ ಹುಟ್ಟದೆಯೇ ಇರುವುದೋ, ಯಾವುದೂ-ಇಲ್ಲವೇ ಇಲ್ಲವೋ, ಯಾವುದು ಗೋಚರವಾಗುವುದೇ ಇಲ್ಲವೋ, ಆಗ ಇರುವುದೆಲ್ಲವೂ ಬ್ರಹ್ಮವೆಂದೇ ತಿಳಿ. ಆ ಬ್ರಹ್ಮವು ಸಮವು ಶಾಂತವು ಇದ್ದರೂ ಇಲ್ಲದಂತೆಯೇ ಇರುವುದು.

೬. ಚಿದಾಕಾಶವು ಚಿದಾಕಾಶದಲ್ಲಿ ನೀರಿನಲ್ಲಿ ನೀರಿನ ದ್ರವವು ಹೇಗೋ ಹಾಗೆ, ತನ್ನ ಚಿತ್ವದಿಂದಲೇ ಕಚನ ಮಾಡುವುದು ಯಾವುದುಂಟೋ ಅದೇ ಈ ಜಗತ್ತಾಗುವುದು.

೭. ಆ ಶುದ್ಧವಾದ ಚಿತ್ತೇ ಜಗತ್ತಾಗಿ ಉದಯಿಸುವುದು ಹೇಗೆ ಎಂದರೆ ಸ್ವಪ್ನದಲ್ಲಿ ಹೇಗೋ ಹಾಗೆ ! ನೇತ್ರ ದೋಷವುಳ್ಳವನಿಗೆ–ಆಕಾಶವು ತುಂಡು ತುಂಡಾಗಿ ಹಾರಾಡುವಂತೆ ಕಾಣುವುದಿಲ್ಲವೆ ಹಾಗೆ ! ಆಕಾಶದಲಿ ಸರ್ಗವು ಆರಂಭಿಸುವುದೂ ಹೀಗೆ !

ಚಿತ್ತಾಚಕಸ್ಯ ಕಚನಂ ಯಥಾ ಸ್ವಪ್ನೇ ಜಗದ್ಭವೇತ್ ।
ತಥೈವ ಜಾಗ್ರದವಿಧಂ ತತ್ಖವಮಾತ್ರಮಿದಂ ಸ್ಥಿತಂ ॥ ೮ ॥

ಆದಿಸರ್ಗೇ ಹಿ ಚಿತ್ಸ್ವಪ್ನೋ ಜಾಗ್ರದಿತ್ಯಭಿಶಬ್ದ್ಯತೇ ।
ಅದ್ಯ ರಾತ್ರೌ ಚಿತೇಃ ಸ್ವಪ್ನಃ ಸ್ವಪ್ನ ಇತ್ಯಪಿ ಶಬ್ದ್ಯತೇ ॥ ೯ ॥

ಪೂರ್ವಪ್ರವೃತ್ತಾ ಸರಿತಾಂ ರೂಢಾದ್ಯಾಪಿ ಯಥಾಸ್ಥಿತಾ ।
ತರಂಗಲೇಖಾ ವೃಷ್ಟೀನಾಂ ಪದಾರ್ಥರಚನಾ ತಥಾ ॥ ೧೦ ॥

ಯಥಾ ವಾರಿತರಂಗಶ್ರೀಃ ಸರಿತಾಂ ರಚನಾಮಿತಾ ।
ತಥಾ ಚಿದ್ವ್ಯೋಮ್ನಿ ಚಿದ್ಬೀಜಸತ್ತಾಂತಃಸೃಷ್ಟಿತಾಮಿತಾ ॥ ೧೧ ॥

ಮೃತಸ್ಯಾತ್ಯಂತನಾಶಶ್ಚೇತ್ತನ್ನಿದ್ರಾಸುಖಮೇವ ತತ್ ।
ಭೂಯಶ್ಚೋದೇತಿ ಸಂಸಾರಸ್ತತ್ಸುಖಂ ಸಮಮೇವ ತತ್ ॥ ೧೨ ॥

---

೮. ನೇತ್ರದೋಷದಿಂದ ಕೇಶೋಂಡ್ರಕಗಳನ್ನು ಕಾಣುವವನಂತೆ ಕನಸು ಕಾಣುವವನಂತೆ, ಚಿತ್ತು ಜಗತ್ತಾಗಿ ತನ್ನನ್ನೇ ಆ ಜಗತ್ತಾಗಿ ಜಾಗ್ರತ್ತಿನಲ್ಲಿಯೂ ಕಂಡರೂ ಎಲ್ಲವೂ ಆಕಾಶಮಾತ್ರವಾಗಿ ಇರುವುದು

೯. ಮೊಟ್ಟಮೊದಲಲ್ಲಿ ಚಿತ್ತು ಕಂಡ ಕನಸು ಜಾಗ್ರತ್ತು ಎನ್ನಿಸಿಕೊಂಡಿರುವುದು ಈಗ ರಾತ್ರಿಯಲ್ಲಿ ಕಂಡುದು ಕನಸು ಎನ್ನಿಸಿಕೊಳ್ಳುವುದು.

೧೦. ಮೊದಲು ಹರಿಯುವುದಕ್ಕೆ ಆರಂಭಿಸಿದಾಗ ಕಂಡು, ಈಗ ರೂಢಿಯಾಗಿರುವ ಅಲೆಗಳ ಮಾಲೆಯು ಈಗಲೂ ಕಾಣುತ್ತಿರುವಂತೆ, ನಾನಾ ಭಾವಗಳಿಂದ ಆದ ಪದಾರ್ಥ ರಚನೆಗಳೂ ಈಗಲೂ (ಸೃಷ್ಟ್ಯಾದಿಯಲ್ಲಿದ್ದಂತೆಯೇ) ಕಾಣುತ್ತಿರುವುವು.

೧೧ ಜಲದಲ್ಲಿ ತರಂಗಲಕ್ಷ್ಮಿಯು ಹೇಗೆ ಪ್ರವಾಹರೂಪವಾಗಿ ಪ್ರತ್ಯಕ್ಷವಾಗುವಳೋ ಹಾಗೆಯೇ ಚಿದಾಕಾಶದಲ್ಲಿ ಚಿದ್ಬೀಜವು ತನ್ನ ಸತ್ತಾ ಬಲದಿಂದಲೇ ಸೃಷ್ಟಿರೂಪವಾಗಿ ಕಾಣಿಸುವುದು.

೧೨ ಮೃತನಾದವನು ಅತ್ಯಂತವಾಗಿ ನಾಶವಾಗುವನು ನಿಶ್ಶೇಷವಾಗಿ ನಾಶವಾಗುವನು ಎಂದರೆ, ಅದೂ ನಿದ್ರೆಯಂತೆಯೇ ಸುಖವಾಗಿಯೇ ಇರಬೇಕು.

ಕುಕರ್ಮಭ್ಯಸ್ತು ಚೇದ್ಭೀತಿಃ ಸಾ ಸಮೇಹ ಪರತ್ರ ಚ ।
ತಸ್ಮಾದೇತೇ ಸಮಸುಖೇ ಸರ್ವೇಷಾಂ ಮೃತಿಜನ್ಮನೀ ॥ ೧೩ ॥

ಮರಣಂ ಜೀವಿತಂ ವಾಸ್ತು ಸಹಜೇ ವಾಸನೇ ತಯೋಃ ।
ಇತಿ ವಿಶ್ರಾಂತಚಿತ್ತೋ ಯಃ ಸೋಂತಃಶೀತಲ ಉಚ್ಯತೇ ॥ ೧೪ ॥

ಸರ್ವಸಂವಿತ್ತಿವಿಗಮೇ ಸಂವಿದ್ರೋಹತಿ ಯಾದೃಶೀ ।
ಭೂಯತೇ ತನ್ಮಯೇನೈವ ತೇನಾಸೌ ಮುಕ್ತ ಉಚ್ಯತೇ । ೧೫ ॥

ಅತ್ಯಂತಾಭಾವಸಂವಿತ್ತ್ಯಾ ಸರ್ವದೃಶ್ಯಸ್ಯ ವೇದನಂ ।
ಉದೇತ್ಯಪಾಸ್ತಸಂವೇದ್ಯಂ ಸತಿ ವಾಸತಿ ಸರ್ಗಕೇ ॥ ೧೬ ॥

---

ಮತ್ತೆ ಸಂಸಾರವು ಹುಟ್ಟುವುದು ಎಂದರೆ, ಅದು ಒಂದು ಹೊಸ ಸುಖ ಚಕ್ರವನ್ನು ಆರಂಭಿಸುವುದು ಎನ್ನಬೇಕು.

೧೩. ಕುಕರ್ಮಗಳಿಂದ ಭೀತಿಯುಂಟಾಗುವುದು ಎನ್ನುವುದಾದರೆ, ಆ ಭೀತಿಯು ಇಹದಲ್ಲಿಯೇ ಆಗಲಿ ಪರದಲ್ಲಿಯೇ ಆಗಲಿ ಸಮಸಮವು ಅದರಿಂದ, (ಬ್ರಹ್ಮವಲ್ಲದ ಮತ್ತಾವುದೂ ನರಕದಲ್ಲಿಯೂ ಇಲ್ಲವಾಗಿ ಅಲ್ಲಿಯೂ ಸುಖವೇ ಇರಬೇಕಾಗಿರುವುದರಿಂದ) ಮರಣ ಜನನಗಳು ಎಂಬಿವು ಎಲ್ಲರಿಗೂ ಒಂದೇ ಪ್ರಕಾರವಾದ ಸುಖವನ್ನು ಕೊಡತಕ್ಕವಾಗಬೇಕು.

೧೪ "(ಆದರಿಂದ) ಮರಣವಾದರೂ ಆಗಲಿ ಜೀವಿತವಾದರೂ ಆಗಲಿ, ಸೃಷ್ಟಿಗೆ ಬಂದವನಿಗೆ ಅವು ಸಹಜ ವಾಸನಾಗಳು" ಎಂಬುದನ್ನು ತಿಳಿದು ಅದಕ್ಕಾಗಿ ತವಕಪಡದೆ, ಯಾವನು ವಿಶ್ರಾಂತಿ ಚಿತ್ತನಾಗಿರುವನೋ ಅವನು ಅಂತ ಶ್ಶೀತಲನೆನಿಸಿಕೊಳ್ಳುವನು.

೧೫ ಹೀಗೆ ದೃಶ್ಯ ಸಂವಿತ್ತಿಯೆಲ್ಲವೂ ಕಳೆದುಹೋದ ಮೇಲೆ ದೃಶ್ಯ ಸಂಬಂಧ ದಿಂದ ದೂಷಿತವಲ್ಲದ ಶುದ್ಧ ಸಂವಿತ್ತು ಯಾವುದು ಉದಯಿಸುವುದೋ, ಅದು ತಾನೇತಾನಾಗುವುದು. ಆಗ ಮುಕ್ತನೆನ್ನಿಸಿಕೊಳ್ಳುವನು (ಪ್ರಜ್ಞಾನ ಘನಾ ವಸ್ಥೆಯಿದು.)

೧೬. ಆಗ (ದೃಶ್ಯವಾಸನಾ ದೂಷಿತವಲ್ಲದಿರುವ ಸಂವಿತ್ತನ್ನು) ಅತ್ಯಂತ

ಯನ್ನ ಚೇತ್ಯಂ ನ ಚಿದ್ರೂಪಂ ಯಚ್ಚಿತೇರಪ್ಯಚೇತಿತಂ ।
ತದ್ಭಾವೈಕ್ಯಂ ಗತಾಸ್ತಜ್ಞಾಃ ಶಾಂತಾ ವ್ಯವಹೃತೌ ಸ್ಥಿತಾಃ ॥ ೧೭ ॥

ಚಿತ್ಕಾಚಕಾಚಕಚ್ಯಂ ಯಜ್ಜಗನ್ನಾಮ್ನಾ ತದುಚ್ಯತೇ ।
ಅತ್ಯಚ್ಛೇ ಪರಮಾಕಾಶೇ ಬಂಧಮೋಕ್ಷದೃಶಃ ಕುತಃ ॥ ೧೮ ॥

ಚಿನ್ನಭಃಸ್ಪಂದಮಾತ್ರಾತ್ಮ ಸಂಕಲ್ಪಾತ್ಮತಯಾ ಜಗತ್ ।
ಸದ್ಭೂತಮಯಮೇವೇದಂ ನ ಪೃಥ್ವ್ಯಾದಿಮಯಂ ಕ್ವಚಿತ್ ॥ ೧೯ ॥

ನೇಹ ದೇಶೋ ನ ಕಾಲೋಽಸ್ತಿ ನ ದ್ರವ್ಯಂ ನ ಕ್ರಿಯಾ ನ ಖಂ ।
ಸದಿವಾಖಿಲಮುಚ್ಛೂನಂ ವಾಪ್ಯನುಚ್ಛೂನಮಪ್ಯಸತ್ ॥ ೨೦ ॥

---

ಭಾವ ಸಂವಿತ್ತು (ಎನ್ನುವರು. ಅದು) ರೂಢವಾದಾಗ (ಯಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ ಎಂಬ ಶ್ರುತಿಯು ಹೇಳುವಂತೆ) ಸರ್ವ ದೃಶ್ಯ ಸಂವೇದನವು ಲಭಿಸುವುದು. ಆ ಸ್ಥಿತಿಯಲ್ಲಿ ಸರ್ಗವು ಇರಲಿ, ಇಲ್ಲದಿರಲಿ, ಸಂವೇದ್ಯವಾಗಿರುವುದಿಲ್ಲವಾಗಿ ಆ ಸ್ಥಿತಿಯು ಅಪಾಸ್ತ ಸಂವೇದ್ಯವು.

೧೭. ಯಾವುದು ಚೇತ್ಯವಲ್ಲವೋ, ಯಾವುದು ಚಿದ್ರೂಪವೂ ಅಲ್ಲವೋ, ಯಾವುದು ಚಿತ್ತಿನಿಂದ ಚೇತಿತವಾದುದೂ ಅಲ್ಲವೋ, ಅಂತಹ ಭಾವವನ್ನು ಹೊಂದಿದವರು ತಜ್ಞರು ಎನ್ನಿಸಿಕೊಳ್ಳುವರು ಅವರು ವ್ಯವಹಾರದಲ್ಲಿಯೂ ಶಾಂತರಾಗಿರುವರು

೧೮ ಚಿತ್ತೆಂಬ ಗಾಜು ಥಳಥಳಿಸುವುದು ಯಾವುದುಂಟೋ, ಅದೇ ಜಗತ್ತು ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ಹೀಗಿರಲು, ಅತ್ಯಚ್ಛವಾದ ಆ ಪರಮಾಕಾಶದಲ್ಲಿ (ಚಿತ್ತಿನಲ್ಲಿ) ಬಂಧ ಮೋಕ್ಷಗಳೆಂಬ ದೃಷ್ಟಿಗಳು ಎಲ್ಲಿಯವು ?

೧೯. ಚಿದಾಕಾಶದ ಸ್ಪಂದ ಮಾತ್ರವೇ, ಸಂಕಲ್ಪ ಮಾತ್ರವಾಗಿ ಜಗತ್ತಾಗಿರುವುದು. ಅದರಿಂದ ಇದೆಲ್ಲವೂ ಈ ದೃಶ್ಯವೆಲ್ಲವೂ ಸತ್ತೇ ಆಗಿರುವುದು. ಇಲ್ಲಿರುವುದು ಎಲ್ಲವೂ ಬ್ರಹ್ಮವೇ ಅಲ್ಲದೆ ಪೃಥಿವ್ಯಾದಿ ಪಂಚಭೂತಗಳಲ್ಲ.

೨೦. (ಅದರಿಂದ) ಅದರಿಂದ ಇಹವೆಂಬ ದೇಶವಿಲ್ಲ: ಕಾಲವಿಲ್ಲ: ದ್ರವ್ಯವಿಲ್ಲ: ಕ್ರಿಯೆಯಿಲ್ಲ: (ಭೂತಾದಿಯಾದ) ಆಕಾಶವೂ ಇಲ್ಲ ಸತ್ತೇ ಉಬ್ಬಿಕೊಂಡರೆ (ಉಚ್ಛೂನ)ಇದೆ ಎಂದರೂ ಆಯಿತು ಅಥವಾ ಅಸತ್ತು ಒಣಗಿಕೊಂಡಂತಾಯಿತು ಎಂದರೂ ಆಯಿತು.

ಭಾತಿ ಕೇವಲಮೇವೇತ್ಥಂ ಪರಮಾರ್ಥಘನಂ ಘನಂ ।
ಯನ್ನ ಶೂನ್ಯಂ ನ ವಾಽಶೂನ್ಯಮತ್ಯಚ್ಛಂ ಗಗನಾದಪಿ ॥ ೨೧ ॥

ಸಾಕಾರಮಪ್ಯನಾಕಾರಮಸದೇವಾತಿಭಾಸ್ವರಂ ।
ಅತಿಶುದ್ಧೈಕ ಚಿನ್ಮಾತ್ರಸ್ಫಾರಂ ಸ್ವಪ್ನಪುರಂ ಯಥಾ ॥ ೨೨ ॥

ನಿರ್ವಾಣಮೇವಮಿದಮಾತತಮಿತ್ಥಮಂತ-
ಶ್ಚಿದ್ವ್ಯೋಮ್ನಿ ಆವಿಲಮನಾವಿಲರೂಪಮೇವ ।
ನಾನೇವ ನ ಕ್ವಚಿದಪಿ ಪ್ರಸೃತಂ ನ ನಾನಾ
ಶೂನ್ಯತ್ವಮಂಬರ ಇವಾಂಬುನಿಧೌ ದ್ರವತ್ವಂ ॥ ೨೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು**
**ನಿರ್ವಾಣ ಪ್ರಕರಣೇ "ಜಗತಃಪರಮಾರ್ಥಮಯತ್ವವರ್ಣನಂ" ನಾಮ**
**ಪಂಚಪಂಚಾಶಃ ಸರ್ಗಃ**

---

೨೧. ಹೀಗೇ ಕೇವಲವಾಗಿ, ಘನವಾಗಿ (ಎಂದರೆ ಇನ್ನೇನೂ ಇಲ್ಲದೆ ತಾನೇ ತಾನಾಗಿರುವ) ಪರಮಾರ್ಥ ಘನವೇ.ಎಲ್ಲವೂ ಆಗಿರುವುದರಿಂದ, ಅದು ಶೂನ್ಯವೂ ಅಲ್ಲ. ಅಶೂನ್ಯವೂ ಅಲ್ಲ. ಆಕಾಶಕ್ಕಿಂತ ಸೂಕ್ಷ್ಮವಾದುದರಿಂದ, ಅಚ್ಛವಾದುದರಿಂದ (ಅದನ್ನು ಹೀಗೆ ಎಂದು ಹೇಳಲು ಆಗುವುದಿಲ್ಲ )

೨೨. ದೃಶ್ಯವೆಲ್ಲವೂ ಸಾಕಾರವೇ ಆದರೂ ನಿರಾಕಾರವು ಅಸತ್ತೇ ಆದರೂ ಅತಿ ಪ್ರಕಾಶಮಾನವಾದುದು. ಸ್ವಪ್ನ ನಗರದಂತೆ ಇದೂ ಅತಿ ಶುದ್ಧವೂ, ಏಕವೂ ಆದ ಚಿತ್ತಿನ ಹರಡುವಿಕೆಯು.

೨೩. ಚಿದಾಕಾಶದಲ್ಲಿ ನಿರ್ವಾಣವೇ ಹರಡಿಕೊಂಡು ಹೀಗೆ ದೃಶ್ಯವಾಗಿ ಕಾಣುತ್ತಿರುವುದು. ದೃಶ್ಯವಾಗಿರುವಾಗ ಇದು ವಾಚಿಯಂತೆ ಕಂಡರೂ, ನಿಜವಾಗಿ ಇದು ಹಾಗಲ್ಲವು. ನಾನಾ ಆಗಿ ಎಲ್ಲಿಯೂ ಯಾವುದೂ ಹುಟ್ಟಲಿಲ್ಲವಾಗಿ ಯಾವುದೂ ನಾನಾ ಅಲ್ಲ. ಆಕಾಶದಲ್ಲಿರುವ ಶೂನ್ಯತ್ವದಂತೆ, ಸಮುದ್ರದಲ್ಲಿರುವ ದ್ರವತ್ವದಂತೆ, (ಇದೂ ಇರುವುದು.)

**ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ**
**ನಿರ್ವಾಣ ಪ್ರಕರಣದಲ್ಲಿ "ಜಗತ್ತು ಪರಮಾರ್ಥ ಮಯತ್ವವರ್ಣನ" ಎಂಬ**
**ಐವತ್ತೈದನೆಯ ಸರ್ಗವು.**

# ಷಟ್‌ಪಂಚಾಶಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಸರ್ವತ್ರ ಸರ್ವಥಾ ಸರ್ವಂ ಸರ್ವದಾ ವ್ಯೋಮ್ನಿ ಚಿನ್ಮಯೇ ।
ಸಾಧು ಸಂಭವತಿ ಸ್ವಚ್ಛಂ ಶೂನ್ಯತ್ವಂ ಖ ಇವಾಖಿಲೇ ॥ ೧ ॥

ಯತ್ರ ಚಿತ್ತತ್ರ ಸರ್ಗಶ್ರೀರವ್ಯೋಮ್ನಿ ವ್ಯೋಮ್ನಿ ವಾಸ್ತಿ ಚಿತ್ ।
ಚಿನ್ಮಯತ್ವಾತ್ಪದಾರ್ಥಾನಾಂ ಸರ್ವೇಷಾಂ ನಾಸ್ತ್ಯಚಿತ್ಕ್ವಚಿತ್ ॥ ೨ ॥

ಪದಾರ್ಥಜಾತಂ ಶೈಲಾದಿ ಯಥಾ ಸ್ವಪ್ನೇ ಪುರಾದಿ ಚ ।
ಚಿದೇವೈಕಂ ಪರಂ ವ್ಯೋಮ ತಥಾ ಜಾಗ್ರತ್ಪದಾರ್ಥಭೂಃ ॥ ೩ ॥

---

# ಐವತ್ತಾರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧. ಅಖಿಲವೂ ಚಿನ್ಮಯವೂ ಆದ ಆಕಾಶದಲ್ಲಿ ಸರ್ವತ್ರ, ಸರ್ವಥಾ,ಸರ್ವದಾ, ಸರ್ವವೂ, ಆಕಾಶದಲ್ಲಿರುವ ಶೂನ್ಯತ್ವದಂತೆ, ಸಂಭವವು ಎಂಬುದೇ ಸಾಧುವು.

೨. ಯಾವುದು ಚಿತ್ತಲ್ಲವೋ ಅದು ಸರ್ಗಶ್ರೀಯೂ, ಅಲ್ಲ. ಚಿತ್ತು ವ್ಯೋಮದಲ್ಲಿರಲಿ, ಅವ್ಯೋಮ(ಪೃಥಿವ್ಯಾದಿ ಇತರ ಭೂತಗಳು)ದಲ್ಲಿರಲಿ, ಅದು ಚಿತ್ತೇ ! ಆದರಿಂದ ಸರ್ವ ಪದಾರ್ಥಗಳೆಲ್ಲವೂ ಚಿನ್ಮಯಗಳೇ ಆದ್ದರಿಂದ ಚಿತ್ತಲ್ಲದ್ದು ಎಲ್ಲೂ ಇಲ್ಲವೇ ಇಲ್ಲ

೩. ಚಿದಾಕಾಶವೊಂದೇ ಶೈಲಪತ್ತನ ಮೊದಲಾದ ಪದಾರ್ಥ ಜಾತಗಳಾಗಿ ಕನಸಿನಲ್ಲಿ ಕಾಣುವಂತೆ, ಪರಮಾಕಾಶವು ಜಾಗ್ರತ್ತಿನಲ್ಲಿ ಪದಾರ್ಥಗಳಾಗಿ ತೋರುವುದು.

ಪಾಷಾಣಾಖ್ಯಾನಮತ್ರೇದಂ ಶೃಣು ರಾಮ ರಸಾಯನಂ ।
ಪೂರ್ವಂ ಮಯ್ಯೈವ ಯದ್ದೃಷ್ಟಂ ಚಿತ್ರಂ ಪ್ರಕೃತಮೇವ ಚ ॥ ೪ ॥

ಅಹಂ ವಿದಿತವೇದ್ಯತ್ವಾತ್ಕದಾಚಿತ್ಪೂರ್ಣಮಾನಸಃ ।
ತ್ಯಕ್ತುಮಿಚ್ಛುರಿಮಂ ಲೋಕವ್ಯವಹಾರಂ ಘನಭ್ರಮಂ ॥ ೫ ॥

ಧ್ಯಾನೈಕತಾನತಾಮೇತ್ಯ ಶನೈರ್ವಿಶ್ರಾಂತಯೇ ಚಿರಂ ।
ತ್ಯಕ್ತ್ವಾ ಜವಂ ಜವೀಭಾವ ಏಕಾಂತಾರ್ಥೀ ಶಮಂ ವ್ರಜನ್ ॥ ೬ ॥

ಇದಂ ಚಿಂತಿತವಾನಸ್ಮಿ ಕಸ್ಮಿಂಶ್ಚಿದಮರಾಲಯೇ ।
ಸಂಸ್ಥಿತೋ ವಿವಿಧಾಃ ಪಶ್ಯನ್ಭಂಗುರಾ ಜಾಗತೀರ್ಗತೀಃ ॥ ೭ ॥

ವಿರಸಾ ಖಲ್ವಿಯಂ ಲೋಕಸ್ಥಿರಾಪಾತಸುಂದರೀ ।
ನ ಜಾತು ಸುಖದಾ ಮನ್ಯೇ ಕಸ್ಯಚಿತ್ಕೇನಚಿತ್ಕ್ವಚಿತ್ ॥ ೮ ॥

---

೪ ರಾಮ, ಈ ಅರ್ಥವು ಸಂಪೂರ್ಣವಾಗಿ ಮನಸ್ಸಿಗೆ ಹಿಡಿಯಲು) ಈ ಸಂದರ್ಭದಲ್ಲಿ ಪಾಷಾಣೋಪಾಖ್ಯಾನವನ್ನು ಕೇಳು. ಅದು ರಸಾಯನವು. ಅದು (ಕೇವಲ ಕಥೆಯಲ್ಲ) ನಾನೇ ಹಿಂದೆ ಕಂಡುದು ಚಿತ್ರವಾದುದು: ಇಲ್ಲಿಗೆ ಅನ್ವಯಿಸುವಂಥದು.

೫ ವಿದಿತ ವೇದ್ಯನಾದ್ದರಿಂದ ಪೂರ್ಣಮಾನಸನಾದ ನಾನು ಘನಭ್ರಮವಾದ ಲೋಕವ್ಯವಹಾರವನ್ನು ಬಿಡಬೇಕೆಂದು ಇಚ್ಛಿಸಿದೆನು.

೬ ಧ್ಯಾನದಲ್ಲಿ ಮಗ್ನನಾಗಿ, ಏಕಾಂತವನ್ನು ಜಯಿಸುವವನಾಗಿ, ಚಿರ ವಿಶ್ರಾಂತಿಯನ್ನು ಪಡೆಯಲು, ಎಲ್ಲ ಕರ್ಮಗಳನ್ನು ಬಿಟ್ಟು ಕ್ರಮವಾಗಿ ಶಮವನ್ನು ಹೊಂದಿದೆನು.

೭. ಆಗ ನಾನು ಯಾವುದೋ ಒಂದು ಸ್ವರ್ಗದಲ್ಲಿದ್ದೆನು. ಭಂಗುರಗಳಾದ ಜಗದ್ಗತಿಗಳು ನೂರಾರನ್ನು ನೋಡುತ್ತಿದ್ದೆನು. ಆಗ ನನಗೆ ಹೀಗೆ ಒಂದು ಯೋಚನೆಯು ಬಂದಿತು.

೮. ನೋಡುವುದಕ್ಕೆ ಬಹಳ ಸುಂದರವಾಗಿದ್ದರೂ ಈ ಲೋಕಸ್ಥಿತಿಯು ನಿಜವಾಗಿಯೂ ರಸವಿಲ್ಲದ್ದು. ಇದು ಯಾವಾಗಲೂ ಸುಖಪ್ರದವಲ್ಲವೆಂಬುದನ್ನು. ಯಾರಿಗೂ ಹೇಗೇಗೂ ಎಲ್ಲೆಲ್ಲೂ ಸುಖವನ್ನು ಕೊಡಲಾರದೆಂಬುದನ್ನು ಬಲ್ಲೆನು

ಉದ್ವೇಗಂ ಜನಯತ್ಯಂತಸ್ತೀವ್ರಸಂವೇಗ ಖೇದತಃ ।
ಇಮಾ ದೃಶ್ಯದೃಶೋ ದ್ರಷ್ಟುರಿಷ್ಟಾನಿಷ್ಟಫಲಪ್ರದಾಃ ॥ ೯ ॥

ಕಿಮಿದಂ ದೃಶ್ಯತೇ ಕಿಂವಾ ಪ್ರೇಕ್ಷತೇ ಕೋಽಹಮೇವ ವಾ ।
ಸರ್ವಂ ಶಾಂತಮಜಂ ವ್ಯೋಮ ಚಿನ್ಮಾತ್ರಾತ್ಮನಿ ರಿಂಗಕಂ ॥ ೧೦ ॥

ತಸ್ಮಾತ್ಸಮಸ್ತಸಿದ್ಧೇಂದ್ರದೇವದೈತ್ಯಾದಿದುರ್ಗಮಂ ।
ಸುಪ್ರದೇಶಮಿತೋ ಗತ್ವಾ ಸಂಗೋಪ್ಯಾತ್ಮಾನಮಾತ್ಮನಾ ॥ ೧೧ ॥

ಅದೃಶ್ಯಃ ಸರ್ವಭೂತಾನಾಂ ನಿರ್ವಿಕಲ್ಪಸಮಾಧಿಗಃ ।
ಸಮೇ ಸ್ವಚ್ಛೇ ಪದೇ ಶಾಂತೇ ಆಸೇ ವಿಗತವೇದನಂ ॥ ೧೨ ॥

ತಸ್ಮಾತ್ಕ್ವೋ ನು ಪ್ರದೇಶಃ ಸ್ಯಾದತ್ಯಂತಂ ಶೂನ್ಯತಾಂ ಗತಃ ।
ಯತ್ರೈತಾ ನಾನುಭೂಯಂತೇ ಪಂಚ ಬಾಹ್ಯಾರ್ಥವೇದನಾಃ ॥ ೧೩ ॥

---

೯. ಈ ದೃಶ್ಯದೃಷ್ಟಿಗಳು ದ್ರಷ್ಟೃವಿಗೆ ಇಷ್ಟಾನಿಷ್ಟ ಫಲಪ್ರದಗಳು: ಆದರಿಂದ ತೀವ್ರವಾದ ಸಂವೇಗವನ್ನು ಉಂಟುಮಾಡಿ ಖೇದಗೊಳಿಸುವುವು. ಆದರಿಂದ ಅಂತಃಕರಣದಲ್ಲಿ ಉದ್ವೇಗವನ್ನು ಜನಯಿಸುವುವು.

೧೦. ಕಾಣುವುದಾದರೂ ಏನು ? ನೋಡುವುದಾದರೂ ಏನು ? ನೋಡುವ ನಾನಾದರೂ ಏನು ? ದೃಶ್ಯ, ದರ್ಶನ, ದೃಕ್ಕು. ಇವೆಲ್ಲವೂ ಶಾಂತವೂ ಅಜವೂ ಆದ ವ್ಯೋಮವು. ಚಿನ್ಮಾತ್ರವಾದ ಆತ್ಮದಲ್ಲಿ ಆದ ಚಲನವು.

೧೧. ಆದರಿಂದ, ಸಿದ್ಧ, ಇಂದ್ರ, ದೇವ, ದೈತ್ಯ, ಮೊದಲಾದ ಯಾರಿಗೂ ಬರುವುದಕ್ಕಾಗದ ದುರ್ಗಮವಾದ ಒಂದು ಒಳ್ಳೆಯ ಪ್ರದೇಶಕ್ಕೆ ಹೋಗಿ ಒಬ್ಬನೇ ಇರುವೆನು.

೧೨. ಯಾವ ಪ್ರಾಣಿಗೂ ಕಾಣದೆ ಅದೃಶ್ಯನಾಗಿ, ನಿರ್ವಿಕಲ್ಪ ಸಮಾಧಿಯಲ್ಲಿದ್ದು ಬಿಡುವೆನು ಸಮವೂ ಸ್ವಚ್ಛವೂ ಶಾಂತವೂ ಆದ ಪರಮ ಪದದಲ್ಲಿ ವಿಗತ ವೇದನನಾಗಿ ಇದ್ದುಬಿಡುವೆನು.

೧೩. ಆದರಿಂದ ಅತ್ಯಂತ ಶೂನ್ಯವಾದ ಪ್ರದೇಶವು .ಯಾವುದೋ ಅದನ್ನು ಹುಡುಕುವೆನು. ಅಲ್ಲಿ ಪಂಚ ವಿಧವಾದ ಬಾಹ್ಯಾರ್ಥ ವೇದನಗಳು ಯಾವವೂ ಅನುಭವಕ್ಕೆ ಬರದಂತೆ ಇರಬೇಕು.

ಶಬ್ದಕಾನನವಾರ್ಯಬ್ದಭೂತೌಘಾಭಿಸಮಾಕುಲಾಃ ।
ಕ್ಷೋಭಯಂತ್ಯಥ ಸಂಕ್ಷುಬ್ಧಾಸ್ತಸ್ಮಾನ್ಮೇ ಗಿರಯೋಽರಯಃ ॥ ೧೪ ॥

ನಾನಾವಿಧಾ ನಗೇಂದ್ರಾಣಾಮಂತರಾವಲಿತಾ ಜನೈಃ ।
ದೇಶಾ ವಿಷಮಯಾ ಏವ ನಿಃಶೇಷಾ ವಿಷಯಾಹಿಭಿಃ ॥ ೧೫ ॥

ಜನೈರ್ಜಲಚರೈರ್ವ್ಯಾಪ್ತಾಃ ಸಾಗರಾ ನೀರಕುಕ್ಷಯಃ ।
ವಿವಿಧಾರಂಭಸಂಕ್ಷುಬ್ಧೈರ್ನಗರಾಣೀವ ನಾಗರೈಃ ॥ ೧೬ ॥

ತಟಾನ್ಯದ್ರ್ಯಂಬುರಾಶೀನಾಂ ಲೋಕಪಾಲಪುರಾಣಿ ಚ ।
ಭೂತಾಕುಲಾನಿ ಶೃಂಗಾಣಿ ಪಾತಾಲಕುಹರಾಣಿ ಚ ॥ ೧೭ ॥

ಗಾಯಂತ್ಯನಿಲಭಾಂಕಾರೈರ್ನೃತ್ಯಂತಿ ಲತಿಕಾಃ ಕರೈಃ ।
ಪುಷ್ಪೈರ್ಹಸಂತ್ಯಗೇಂದ್ರಾಣಾಂ ಗುಹಾ ಗಹನಕೋಟರಾಃ ॥ ೧೮ ॥

---

೧೪. ಬೆಟ್ಟಗಳಿಗೆ ಹೋಗೋಣವೆಂದರೆ ಶಬ್ದಗಳು, ಅರಣ್ಯಗಳು, ನೀರು, ಮೋಡ, ಪ್ರಾಣಿಗಳ ಗುಂಪುಗಳು, ಮುಂತಾದುವುಗಳಿಂದ ಕೂಡಿ, ಸಂಕ್ಷುಬ್ಧಗಳಾಗಿರುವ ಬೆಟ್ಟಗಳು ಶತ್ರುಗಳಂತೆ ನನ್ನನ್ನು ಕ್ಷೋಭಿಸುವುವು

೧೫. ಈ ಬೆಟ್ಟಗಳ ನಡುವೆ ಇರುವ ದೇಶಗಳು ನಾನಾ ವಿಧವಾಗಿದ್ದರೂ, ಭೋಗ ವಿಷಯಗಳನ್ನು ಆರಾಧಿಸುತ್ತಾ ಸರ್ಪಗಳಂತಿರುವ ಜನಗಳಿಂದ ಕೂಡಿಕೊಂಡು ವಿಷಮಯಗಳಾಗಿರುವುವು.

೧೬. ನಗರಗಳು ನಾಗರಜನಗಳಿಂದ ಕೂಡಿರುವಂತೆ, ನೀರಕುಕ್ಷಿಗಳಾದ ಸಾಗರಗಳೂ ಜಲಚರಗಳಿಂದ ಕೂಡಿರುವುವು ಅವು ನಾನಾ ಕಾರ್ಯಗಳನ್ನು ಮಾಡುತ್ತ ಆ ಸಾಗರಗಳನ್ನು ಸಂಕ್ಷುಬ್ಧಗೊಳಿಸಿರುವುವು.

೧೭. ಬೆಟ್ಟಗಳ, ಕಡಲುಗಳ, ತಡಿಗಳೂ, ಲೋಕಪಾಲಪುರಗಳೂ, ಬೆಟ್ಟಗಳ ಕೋಡುಗಳೂ, ಪಾತಾಲ ಕುಹರಗಳೂ ಎಲ್ಲವೂ ಪ್ರಾಣಿಗಳಿಂದ ಕೂಡಿರುವುವು.

೧೮. ಗಾಳಿಯು ಬೀಸುವಿಕೆಯಿಂದ ಹಾಡುತ್ತ, ಬಳ್ಳಿಗಳ ಬಾಹುಗಳಿಂದ ನರ್ತಿಸುತ್ತಾ, ಬೆಟ್ಟಗಳಲ್ಲಿ ಅರಳಿರುವ ಹೂಗಳಿಂದ ನಗುತ್ತಾ, ಗುಹೆಗಳು ಗಹನಕೋಟರಗಳಾಗಿ ಭಯಂಕರಗಳಾಗಿರುವುವು.

ಮೌನಿಮೀನಮುನಿಸ್ಪರ್ಶಕಂಪಿನಾಲಚಲಾಂಬುಜಾಃ ।
ಸರಸ್ಯೋ ವಿರಸಾ ಏವ ವಾರ್ಯಾವರ್ತವಿರಾವಿತಾಃ ॥ ೧೯ ॥

ಪವನಸ್ಪರ್ಶಸಂಕ್ಷುಬ್ಧತೃಣಪಾಂಸುಪತಾಕಿನೀ ।
ರಟತ್ಯನಿಲಭಾಂಕಾರೈರ್ನಿರ್ಝರೋರ್ವ್ಯಸಂಯತಾ ॥ ೨೦ ॥

ತಸ್ಮಾದಾಕಾಶಮಾಶೂನ್ಯಂ ಕಸ್ಮಿಂಶ್ಚಿದ್ದೂರಕೋಣಕೇ ।
ಅತ್ರ ತಿಷ್ಠಾಮ್ಯವಷ್ಟಭ್ಯ ಯೋಗಯುಕ್ತಿಮನಿಂದಿತಾಂ ॥ ೨೧ ॥

ಕಸ್ಮಿಂಶ್ಚಿದೇಕಕೋಣೇಽತ್ರ ಕೃತ್ವಾ ಕಲ್ಪನಯಾ ಕುಟೀಂ ।
ವಜ್ರೋದರದೃಢಂ ತಸ್ಯಾಮಂತಸ್ತಿಷ್ಠಾಮ್ಯವಾಸನಂ ॥ ೨೨ ॥

ಇತಿ ಸಂಚಿಂತ್ಯ ಯಾತೋಽಹಮಕಾಶಮಸಿ ನಿರ್ಮಲಂ ।
ಯಾದತ್ತದಪಿ ಪಶ್ಯಾಮಿ ಸಕಲಂ ವಿತತಾಂತರಂ ॥ ೨೩ ॥

---

೧೯. ಮೌನವಾಗಿರುವ ಮೀನುಗಳೆಂಬ ಮುನಿಗಳ ಸ್ಪರ್ಶದಿಂದ ಕಂಪಿಸುವ ನಾಲಗಳುಳ್ಳ, ಚಂಚಲವಾದ ಕಮಲಗಳನ್ನುಳ್ಳ, ಸರಸಿಗಳೂ ನೀರಿನ ಸುಳಿಗಳಿಂದ ಭಯಂಕರವಾಗಿ ಶಬ್ದಮಾಡುತ್ತ ವಿರಸಗಳಾದಂತೆ ಇರುವುವು.

೨೦ ಗಾಳಿಯ ಏಟಿನಿಂದ ಸಂಕ್ಷೋಭವನ್ನು ಪಡೆದ ತೃಣಗಳೂ ಪಾಂಸುವೂ ಮೇಲಕ್ಕೆದ್ದು ಧ್ವಜದಂತಿರಲು, ಗಾಳಿಯು ಭಾಂಕಾರದಿಂದ ಕೂಗುತ್ತಾ ಅಸಂಯುತ ವಾಗಿ ನಿರ್ಝರ ಭೂಮಿಗಳು ಆರ್ಭಟಿಸುವುವು.

೨೧. ಆದರಿಂದ, ಸಂಪೂರ್ಣವಾಗಿ ಶೂನ್ಯವಾಗಿರುವ ಆಕಾಶದಲ್ಲಿ ದೂರವಾ ಇರುವ ಯಾವದೋ ಒಂದು ಕೋಣದಲ್ಲಿ ಉತ್ತಮವಾದ ಯೋಗವನ್ನು ಅಭ್ಯಾಸ ಮಾಡುತ್ತಾ ಕುಳಿತುಕೊಳ್ಳುವೆನು.

೨೨. ಯಾವುದಾದರೊಂದು ಮೂಲೆಯಲ್ಲಿ ಒಂದು ಕುಟಿಯನ್ನು ಕಲ್ಪಿಸಿ ಕೊಂಡು, ಅಲ್ಲಿ ನನ್ನ ಕಲ್ಪನಾಸಾಮರ್ಥ್ಯದಿಂದ ಅವನ್ನು ವಜ್ರೋದರದಂತೆ ಗಟ್ಟಿ ಮಾಡಿ, ಅದರೊಳಗೆ ಅವಾಸನನಾಗಿ ಕುಳಿತುಕೊಳ್ಳುವೆನು.

೨೩. ಹೀಗೆ ಯೋಚಿಸಿಕೊಂಡು, ಅತಿ ನಿರ್ಮಲವಾದ ಆಕಾಶಭಾಗವನ್ನು ಹುಡುಕಿಕೊಂಡು ಹೋದೆನು. ಎಲ್ಲಿ ಹೋದರೂ ಅಲ್ಲೆಲ್ಲಾ ನಾನಾ ವಿಧ ವಿಕ್ಷೇಪ ಗಳು ಇದ್ದೇ ಇರುವುದು ಕಾಣಿಸಿತು.

ಕ್ವಚಿದ್ಭ್ರಮತ್ಸಿದ್ಧಗಣಂ ಕ್ವಚಿದುದ್ಗರ್ಜದಂಬುದಂ ।
ಕ್ವಚಿದ್ವಿದ್ಯಾಧರಾಗಾರಂ ಯಕ್ಷೋತ್ಕ್ಷಿಪ್ತಕ್ಷಯಂ ಕ್ವಚಿತ್ ॥ ೨೪ ॥

ಕ್ವಚಿದ್ಭ್ರಮತ್ಪುರವರಂ ಪ್ರಾರಬ್ಧಸಮರಂ ಕ್ವಚಿತ್ ।
ಕ್ವಚಿದ್ದ್ರವಜ್ಜಲಧರಂ ಕ್ವಚಿದುದ್ವೃತ್ತಯೋಗಿನಿ ॥ ೨೫ ॥

ಕ್ವಚಿದ್ದೈತ್ಯಪುರೋಡ್ಡೀನಸಗಂಧರ್ವಪುರಂ ಕ್ವಚಿತ್ ।
ಕ್ವಚಿದ್ಭ್ರಮದ್ಗ್ರಹಗಣಂ ತಾರಕಾಕುಲಿತಂ ಕ್ವಚಿತ್ ॥ ೨೬ ॥

ಕ್ವಚಿತ್ಖೇ ಖಗಸಂಘೃಷ್ಟಂ ಕ್ವಚಿತ್ಕ್ರುದ್ಧಮಹಾನಿಲಂ ।
ಕ್ವಚಿದುತ್ಪಾತವಲಿತಂ ಕ್ವಚಿನ್ಮಂಡಲಮಂಡಿತಂ ॥ ೨೭ ॥

ಕ್ವಚಿದಪೂರ್ವಭೂತೌಘಂ ನಾಗರಾವಲಿತಂ ಕ್ವಚಿತ್ ।
ಕ್ವಚಿದರ್ಕರಥಾಕ್ರಾಂತಂ ಕ್ವಚಿದನ್ಯರಥೋದ್ಧುರಂ ॥ ೨೮ ॥

ಕ್ವಚಿದಾದಿತ್ಯದಾಹಾಂತಂ ಶಶಿಶೈತ್ಯಾನ್ವಿತಂ ಕ್ವಚಿತ್ ।
ಕ್ವಚಿತ್ಕ್ಷುದ್ರಜನಾಸಹ್ಯಂ ಕ್ವಚಿದಗ್ನ್ಯೃಷ್ಟಿದುರ್ಗಮಂ ॥ ೨೯ ॥

ಕ್ವಚಿದುತ್ತಾಲವೇತಾಲಂ ಗರುಡೋಡ್ಡಾಮರಂ ಕ್ವಚಿತ್ ।
ಕ್ವಚಿತ್ಸಪ್ರಲಯಾಂಭೋದಂ ಕ್ವಚಿತ್ಸಪ್ರಲಯಾನಿಲಂ ॥ ೩೦ ॥

---

೨೪-೩೦. ಒಂದೆಡೆ ತಿರುಗುತ್ತಿರುವ ಸಿದ್ಧಗಣಗಳು, ಇನ್ನೊಂದೆಡೆ ಗರ್ಜಿಸುತ್ತಿರುವ ಮೇಘಗಳು, ಇನ್ನೊಂದೆಡೆ ವಿದ್ಯಾಧರ ಕ್ಷೇತ್ರ, ಮತ್ತೊಂದೆಡೆ ಯಕ್ಷರು ಮಾಡಿಕೊಂಡಿರುವ ಮನೆಗಳು: ಒಂದೆಡೆ ಒಂದು ದೊಡ್ಡ ನಗರವು ಬರುತ್ತಿರುವುದು: ಒಂದೆಡೆ ಒಂದು ಯುದ್ಧವು ಆರಂಭವಾಗಿರುವುದು: ಇನ್ನೊಂದೆಡೆ ಮಳೆಗರೆಯುತ್ತಿರುವ ಮೋಡವು: ಮತ್ತೊಂದೆಡೆ ಯೋಗಿನಿಯರು ಕುಣಿಯುತ್ತಿರುವರು; ದೈತ್ಯಪುರಗಳು ಹಾರಾಡುತ್ತಿರುವುದು ಒಂದೆಡೆಯಾದರೆ, ಗಂಧರ್ವಪುರವಿನ್ನೊಂದೆಡೆ: ಗ್ರಹಗಣಗಳ ಭ್ರಮಣವೊಂದೆಡೆಯಾದರೆ, ನಕ್ಷತ್ರಗಳು ಅಡಕಿರುವುದೊಂದೆಡೆ: ಒಂದುಕಡೆ ಹಕ್ಕಿಗಳ ಗುಂಪು: ಇನ್ನೊಂದು ಕಡೆ ರೇಗಿರುವ ಬಿರುಗಾಳಿ: ಇನ್ನೊಂದೆಡೆ ಉತ್ಪಾತಗಳಾದರೆ, ತೇಜೋಮಂಡಲಗಳು ತುಂಬಿರುವುದೊಂದೆಡೆ: ವಿಚಿತ್ರ ಭೂತಗಳ ಗುಂಪುಗಳು ಒಂದೆಡೆಯಾದರೆ, ನಗರಗಳ ಗುಂಪುಗಳಿನ್ನೊಂದೆಡೆ: ಸೂರ್ಯರಥದ ಆಕ್ರಮಣ ಒಂದೆಡೆಯಾದರೆ, ಮತ್ತೊಂದು ರಥದ ಆಕ್ರಮಣವಿನ್ನೊಂದೆಡೆ, ಒಂದು ಸ್ಥಲವು ಆದಿತ್ಯನ ತಾಪದಿಂದ ಕೊನೆಗಾಣುತ್ತಿದ್ದರೆ, ಚಂದ್ರ ಶೈತ್ಯದಿಂದ ಕೂಡಿರುವುದು ಇನ್ನೊಂದೆಡೆ, ಕ್ಷುದ್ರಜನರಿಂದ ಕೂಡಿ ಅಸಹ್ಯ

ತತೋ ಭೂತಗಣಾಂಸ್ತ್ಯಕ್ತ್ವಾ ದೂರಾದ್ದೂರತರಂ ಗತಃ ।
ಪ್ರಾಪ್ತವಾನಹಮೇಕಾಂತಂ ಶೂನ್ಯಮತ್ಯಂತವಿಸ್ತೃತಂ ॥ ೩೧ ॥

ಅತ್ಯಂತಮಂದಪವನಂ ಸ್ವಪ್ನೇಽಪ್ಯಪ್ರಾಪ್ಯಭೂತಕಂ ।
ಮಂಗಲೋತ್ಪಾತರಹಿತಮಗಮ್ಯಂ ವಿದ್ಧಿ ಸಂಸೃತೇಃ ॥ ೩೨ ॥

ಕಲ್ಪಿತಾಥ ಮಯಾ ತತ್ರ ಕುಟೀ ಪ್ರಕಟಕೋಟರಾ ।
ನೀರಂಧ್ರಕುಡ್ಯನಿಬಿಡಾ ಪದ್ಮಕುಡ್ಮಲಸುಂದರೀ ॥ ೩೩ ॥

ಘುಣಕ್ಷುಣ್ಣಾಂಗಪೂರ್ಣೇಂದುಬಿಂಬೋದರಮನೋಹರಾ ।
ಕಹ್ಲಾರಕುಂದಮಂದಾರಪುಷ್ಪಶ್ರೀಕೋಶಶೋಭಿತಾ ॥ ೩೪ ॥

---

ವಾಗಿರುವುದು ಒಂದು ಕಡೆಯಾದರೆ, ಬೆಂಕಿಯ ಬಿಸಿಯಿಂದ ಹತ್ತಿರಕ್ಕೂ ಹೋಗಲಾರದ ಕಡೆಯಿನ್ನೊಂದು. ಬೇತಾಲಗಳು ಕುಣಿಯುವಿಕೆಯೊಂದೆಡೆ: ಗರುಡರ ಹಾರಾಟವಿನ್ನೊಂದೆಡೆ: ಪ್ರಲಯಮೇಘಗಳ ಪ್ರತಾಪವಿನ್ನೊಂದೆಡೆ: ಪ್ರಲಯ ಮಾರುತರ ಆರ್ಭಟವು ಮತ್ತೊಂದೆಡೆ:

೩೧. ಹೀಗಿರಲು, ಅಲ್ಲಿದ್ದ ಭೂತಗಣಗಳನ್ನೆಲ್ಲಾ ಬಿಟ್ಟು ದೂರ ದೂರವಾಗಿ ಹೋಗಿ, ಅತ್ಯಂತ ವಿಸ್ತಾರವಾಗಿರುವ ಏಕಾಂತವಾಗಿರುವ ಶೂನ್ಯ ಸ್ಥಲವೊಂದನ್ನು ಕಂಡೆನು

೩೨. ಆ ಸ್ಥಲವು ಬಹು ಮಂದವಾದ ಗಾಳಿಯುಳ್ಳದ್ದಾಗಿ, ಭೂತಗಳು ಕನಸಿನಲ್ಲಿಯೂ ಹೋಗುವುದಕ್ಕೆ ಸಾಧ್ಯವಿಲ್ಲದ್ದಾಗಿ, ಮಂಗಲವೂ ಉತ್ಪಾತ ರಹಿತವೂ ಆಗಿ ಸಂಸಾರಕ್ಕೆ ಅಗಮ್ಯವಾಗಿತ್ತು.

೩೩. ಅಲ್ಲಿ ಒಳಕೋಣೆಯುಳ್ಳ ಕುಟಿಯೊಂದನ್ನು ಕಟ್ಟಿದೆನು. ತೂತುಗಳಿಲ್ಲದ ಗೋಡೆಯನ್ನು ಹಾಕಿ, ತಾವರೆಯ ಮೊಗ್ಗಿನಂತೆ ಸುಂದರವಾಗಿ ಮಾಡಿದೆನು.

೩೪. ಹುಳುಗಳು ಕೊರೆದು ತೂತು ಮಾಡಿರುವ ಪೂರ್ಣೇಂದು ಬಿಂಬದ ಗರ್ಭದಂತೆ ಮನೋಹರವಾಗಿ, (?) ಆ ಕುಟಿಯು ಕಲ್ಹಾರ, ಕುಂದ, ಮಂದಾರ ಪುಷ್ಪಗಳ ಗುಚ್ಛಗಳಿಂದ ಅಲಂಕೃತವಾಯಿತು.

ಸಮಸ್ತಭೂತಾಗಮ್ಯತ್ವಂ ತತ್ರ ಸಂಕಲ್ಪ್ಯ ಚೇತಸಾ ।
ಅಗಮ್ಯೇ ಸರ್ವಭೂತಾನಾಮಹಮಾಸಂ ತದಾ ತತಃ ॥ ೩೫ ॥

ಬದ್ಧಪದ್ಮಾಸನಃ ಶಾಂತಮನಾಃ ಪರಮಮೌನವಾನ್ ।
ಸಂವತ್ಸರಶತಾಂತೇನ ನಿರ್ಗಂತಯೋತ್ಥಾನಮಾತ್ಮನಃ ॥ ೩೬ ॥

ನಿರ್ವಿಕಲ್ಪಸಮಾಧಿಸ್ಥೋ ನಿದ್ರಾಮುದ್ರಾಮಿವಾಗತಃ ।
ಸಮಃ ಸೌಮ್ಯಮನಾಃ ಸ್ವಸ್ಥಃ ಸಮುತ್ಕೀರ್ಣ ಇವಾಂಬರಾತ್ ॥ ೩೭

ಚಿರಂ ಯದನುಸಂಧತ್ತೇ ಚೇತಃ ಪಶ್ಯತಿ ತತ್ಕ್ಷಣಾತ್ ।
ಚಿರೇಣ ಚಾಶಾಪವನವ್ಯಕ್ತಿವದ್ವಿತತಂ ಯದಾ ॥ ೩೮ ॥

ತದಾ ವರ್ಷಶತೇನಾತ್ರ ಬೋಧಬೀಜಂ ವೃತಾಂತರಂ ।
ಆಸೀನ್ಮೇ ಹೃದಯಕ್ಷೇತ್ರೇ ಕಾಲಮೇಕಂ ವಿಕಾಸತಃ ॥ ೩೯ ॥

ಸಂಪ್ರಬುದ್ಧೋಽಭವನ್ಮೇಽಥ ಜೀವಃ ಸಂಬುದ್ಧವೇದನಃ ।
ಶಿಶಿರಕ್ಷೀಣಗಾತ್ರಸ್ಯ ಮಧಾವಿವ ರಸಸ್ತರೋಃ ॥ ೪೦ ॥

---

೩೫. ಯಾವ ಭೂತಗಳೂ ಇಲ್ಲಿ ಬರದಿರಲಿ ಎಂದು ಸಂಕಲ್ಪ ಮಾಡಿ ಸರ್ವ ಭೂತಗಳಿಗೂ ಅಗಮ್ಯವಾಗಿರುವ ಆ ಕುಟಿಯಲ್ಲಿ ನಾನು ಇದ್ದೆನು.

೩೬-೩೭. ಬದ್ಧ ಪದ್ಮಾಸನನಾಗಿ, ಶಾಂತಮನಸ್ಕನಾಗಿ, ಪರಮ ಮೌನ ವನ್ನು ವಹಿಸಿ, ನೂರು ವರ್ಷಗಳಾದ ಮೇಲೆ ಬಹಿರ್ಮುಖನಾಗುವುದೆಂದು ಸಂಕಲ್ಪಿಸಿಕೊಂಡು, ಸಮನಾಗಿ, ಸೌಮ್ಯಮನನಾಗಿ, ಸ್ವ-ಸ್ಥನಾಗಿ, ಆಕಾಶದಲ್ಲಿ ಕೆತ್ತಿರುವ ಬೊಂಬೆಯೆಂಬಂತೆ, ನಿದ್ರಾಮುದ್ರೆಯನ್ನು ವಹಿಸಿದವನಂತೆ, ನಿರ್ವಿಕಲ್ಪ ಸಮಾಧಿಯಲ್ಲಿ ಕುಳಿತೆನು

೩೮-೩೯. ಮನಸ್ಸು ಬಹಳಕಾಲ ಯಾವುದನ್ನು ಕುರಿತು ಅನುಸಂಧಾನ ಮಾಡುವುದೋ, ಅದನ್ನು ಒಂದೇ ಕ್ಷಣದಲ್ಲಿ ಕಾಣುವುದು. ಅಲ್ಲಿ ಒಂದುನೂರು ವರ್ಷವಾದ ಮೇಲೆ ಚಿತ್ತವು ಆಶೆಯಂತೆ, ಪವನನಂತೆ ಸುಳಿದು ಹರಡಲು, ಬೋಧ ಬೀಜವು ಮೊಳೆಯಿತು. ಅದು ಕೆಲವು ಕಾಲ ನನ್ನ ಹೃದಯದಲ್ಲಿ ಮೆಲ್ಲಗೆ ಅರಳುತ್ತಿತ್ತು.

೪೦. ಆಗ ನನ್ನ ಜೀವನು ಸಂವೇದನವನ್ನು ಪಡೆದವನಾಗಿ ಸಂಪ್ರಬುದ್ಧ

ತಚ್ಛ್ರುತಂ ತತ್ರ ವರ್ಷಾಣಾಂ ನಿಮೇಷಮಿವ ಮೇ ಗತಂ ।
ಬಹ್ವ್ಯೋಽಪಿ ಕಾಲಗತಯೋ ಭವಂತ್ಯೇಕಧಿಯೋ ಮನಾಕ್ ॥ ೪೧ ॥

ವಿಕಾಸಮಾಗತೋ ಬಾಹ್ಯಂ ಗತೋ ಬುದ್ಧೀಂದ್ರಿಯಕ್ರಮಃ ।
ವಾಸಂತಃ ಪುಷ್ಪರೂಪೇಣ ಮದಸ್ಯೇವ ರಸೋ ಮಮ ॥ ೪೨ ॥

ಮಾಂ ಪ್ರಾಣಪೂರಿತಮುಪಾಗತಸಂವಿದಂಶ-
ಮಭ್ಯಾಗತಂ ತ್ವಹಮಿತಿ ಪ್ರಸೃತಃ ಪಿಶಾಚಃ ।
ಇಚ್ಛಾಂಗನಾವಿವಲಿತೋಽಥ ಕುತೋಪಿ ಸದ್ಯಃ ।
ಪ್ರೋನ್ನಾಮಸನ್ನಮನವಾಯುರಿವೋಗ್ರವೃಕ್ಷಂ ॥ ೪೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಆಕಾಶಮಂದಿರೇವಸಿಷ್ಠಸಮಾಧಾನವರ್ಣನಂ" ನಾಮ ಷಷ್ಠಪಂಚಾಶಃ ಸರ್ಗಃ**

---

ನಾದನು. ಶಿಶಿರ ರುತುವಿನಲ್ಲಿ ಒಣಗಿ ಹೋಗಿದ್ದ ರಸತರುವು ಮಧುವಿನಲ್ಲಿ ಮತ್ತೆ ಚಿಗುರುವಂತಾಯಿತು.

೪೧. ಆ ಸ್ಥಳದಲ್ಲಿ ನೂರು ವರ್ಷಗಳು ಒಂದು ಕ್ಷಣದಂತೆ ನನಗೆ ಕಳೆದು ಹೋಯಿತು. ಕಾಲಗತಿಗಳು ಅನೇಕವಾಗಿದ್ದರೂ, ಏಕಾಗ್ರಚಿತ್ತನಿಗೆ ಒಂದು ಕ್ಷಣವೇ ಆಗುವುವು

೪೨. ವಸಂತಕಾಲದಲ್ಲಿ ವೃಕ್ಷಗಳ ರಸವು ಹೊರಹೊಮ್ಮಿ ಹೂವಾಗಿ ಹರ್ಷ ಹೇತುವಾಗುವಂತೆ, ಬುದ್ಧಿಯಿಂದ ಇಂದ್ರಿಯಗಳವರೆಗೂ ಕ್ರಮವಾಗಿ ಎಲ್ಲವೂ ವಿಕಾಸವಾಗಿ ನನಗೆ ಬಾಹ್ಯಪ್ರಜ್ಞೆಯು ಲಭಿಸಿತು.

೪೩. ಪ್ರಾಣಗಳು ಸವ್ಯಾಪಾರಗಳಾಗಿ ಬಲಿತು, ಸಂವಿದಂಶವು ಪ್ರಕಟ ವಾಗಲು, ಅಹಮೆಂಬ ಪಿಶಾಚವು ಮತ್ತೆ ತಾನಾಗಿ ಬಂತು ಅದನ್ನು ತಬ್ಬಿ ಕೊಂಡು ಅದರ ಜೊತೆಯಲ್ಲಿಯೇ ಇಚ್ಛೆಯೆಂಬ ಅದರ ಹೆಂಡತಿಯೂ ಬಂತು. ಇವು ಎಲ್ಲಿಂದ ಬಂದುವೋ ನಾನು ಕಾಣೆ. ಎತ್ತರವಾಗಿರುವ ಮರಗಳನ್ನು ಬಗ್ಗಿ ಸುತ್ತಾ ವಾಯುವು ಬರುವುದಲ್ಲವೆ ? ಹಾಗಾಯಿತು.

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಆಕಾಶಮಂದಿರೇವಸಿಷ್ಠಸಮಾಧಾನವರ್ಣನ" ಎಂಬ ಐವತ್ತಾರನೆಯ ಸರ್ಗವು.**

## ಸಪ್ತಪಂಚಾಶಃ ಸರ್ಗಃ

ಶ್ರೀರಾಮ ಉವಾಚ:—

ತ್ವಾಮಪ್ಯುದಿತನಿರ್ವಾಣಮಹಂಕಾರಪಿಶಾಚಕಃ ।
ಬಾಧತೇ ಕಿಮಿತಿ ಬ್ರೂಹಿ ಮುನೇ ಸಂದೇಹಶಾಂತಯೇ ॥ ೧ ॥

ಶ್ರೀ ವಸಿಷ್ಠ ಉವಾಚ:—

ಅಹಂಭಾವಂವಿನಾ ದೇಹಸ್ಥಿತಿಸ್ತಜ್ಜ್ಞಾಜ್ಞಯೋರಿಹ ।
ಆಧೇಯಸ್ಯ ನಿರಾಧಾರಾ ನ ಸಂಸ್ಥೇಹೋಪಪದ್ಯತೇ ॥ ೨ ॥

ಅಯಂ ತ್ವತ್ರ ವಿಶೇಷಸ್ತಂ ಶೃಣು ವಿಶ್ರಾಂತಚೇತಸಃ ।
ಶ್ರುತೇನ ಯೇನಾಹಂಭಾವಪಿಶಾಚಃ ಶಾಂತಿಮೇತಿ ತೇ ॥ ೩ ॥

---

## ಐವತ್ತೇಳನೆಯ ಸರ್ಗವು

ಶ್ರೀ ರಾಮನು ಕೇಳಿದನು :—

೧. ಎಲೈ ಮುನೀಂದ್ರನೆ, ಜೀವನ್ಮುಕ್ತನಾಗಿ, ಉದಿತ-ನಿರ್ವಾಣನಾಗಿರುವ ನಿನ್ನನ್ನೂ ಅಹಂಕಾರಪಿಶಾಚವು ಬಾಧಿಸುವುದೇನು ? ಸಂದೇಹ ಶಾಂತಿಯಾಗಲೆಂದು ನನಗೆ ಹೇಳು.

ಶ್ರೀ ವಸಿಷ್ಠನು ಹೇಳಿದನು :—

೨ ಅಜ್ಞರಿಗೆ ಹೇಗೆಯೋ ತಜ್ಞರಿಗೂ ಅಹಂಭಾವವಿಲ್ಲದೆ ದೇಹದ ಸ್ಥಿತಿಯು ಇಲ್ಲವೇ ಇಲ್ಲ ಆ ಧೇಯವು ನಿರಾಧಾರವಾಗಿ ನಿಲ್ಲುವುದು ಎಂಬುದು ಲೋಕದಲ್ಲಿ ಎಲ್ಲಿಯೂ ಇಲ್ಲ

೩. ಹಾಗಾದರೆ ವಿಶ್ರಾಂತ ಚೇತಸನ (ಜೀವನ್ಮುಕ್ತನ) ವಿಶೇಷವೇನು ಎಂದರೆ ಅದನ್ನು ಹೇಳುವೆನು ಕೇಳು ಅದನ್ನು ಕೇಳಿದರೆ, ನಿನ್ನನ್ನು ಹಿಡಿದಿರುವ ಅಹಂಭಾವ ಪಿಶಾಚವು ಶಾಂತಿಯನ್ನು ಹೊಂದುವುದು.

ಅಹಂಭಾವಪಿಶಾಚೋಽಯಮಜ್ಞಾನಶಿಶುನಾಮುನಾ ।
ಅವಿದ್ಯಮಾನ ಏವಾಂತಃ ಕಲ್ಪಿತಸ್ತೇನ ಸಂಸ್ಥಿತಃ ॥ ೪ ॥

ಅಜ್ಞಾನಮಪಿ ನಾಸ್ತ್ಯೇವ ಪ್ರೇಕ್ಷಿತಂ ಯನ್ನ ಲಭ್ಯತೇ ।
ವಿಚಾರಿಣಾ ದೀಪವತಾ ಸ್ವರೂಪಂ ತಮಸೋ ಯಥಾ ॥ ೫ ॥

ಯಥಾಯಥಾ ವಿಲೋಕ್ಯತೇ ತಥಾತಥಾ ವಿಲೀಯತೇ ।
ಇಹಾಜ್ಞತಾಪಿಶಾಚಿಕಾ ತಥಾ ವಿಚಾರಿತಾ ಸತೀ ॥ ೬ ॥

ಕಿಲ ಸತ್ಯಾಮವಿದ್ಯಾಯಾಮಜ್ಞತೋದೇತಿ ಶಾಶ್ವತೀ ।
ಬುದ್ಧಿಮೋಹಾತ್ಮಿಕಾ ಯಕ್ಷೀ ನಿರ್ದೇಹೈವ ಯಥಾ ನಿಶಿ ॥ ೭ ॥

---

(ನ ಪ್ರಾರಬ್ಧಶೇಷ ಭೋಗಮಾತ್ರ ಪ್ರಯೋಜನ ದಗ್ಧ ಪಟಪ್ರಾಯ ದೇಹ ಧಾರಣ ನಿಮಿತ್ತಾಹಂಕಾರಾಭಾಸ ಪ್ರತೀತಿ ಮಾತ್ರೇಣ ಅಜ್ಞವತ್ ಜ್ಞಾನಿನೋ ಬಂಧ ಪ್ರಸಕ್ತಿರಿತಿ ದರ್ಶಯಿತುಂ ಅಜ್ಞಾಹಂಕಾರಾತ್ ತತ್ತ್ವಜ್ಞಾಹಂಕಾರೇ ನಿರ್ದೋಷತಾ ವಿಶೇಷ ಪ್ರದರ್ಶನೇನ ಉತ್ತರಮಾಹ—ತಾ. ಪ್ರ.)

೪. ಅಜ್ಞಾನವೆಂಬ ಶಿಶುವು ಈ ಅಹಂಕಾರವೆಂಬ ಪಿಶಾಚವನ್ನು ಅಂತಃಕರಣ ದಲ್ಲಿ ಕಲ್ಪಿಸಿಕೊಳ್ಳುವುದು. ಅವಿದ್ಯಮಾನವಾದ ಆ ಪಿಶಾಚವೂ ಅಂತಃಕರಣ ದಲ್ಲಿಯೇ ಇರುವುದು.

೫. (ಹೋಗಲಿ: ಅಹಂಕಾರಪಿಶಾಚವನ್ನು ಕಲ್ಪಿಸಿರುವ ಅಜ್ಞಾನವಾದರೂ ಇದೆಯೇ ? ಎಂದರೆ) ಆ ಅಜ್ಞಾನವೂ ಇಲ್ಲ: ಏಕೆಂದರೆ ಹುಡುಕಿದರೆ ಅದು ಸಿಕ್ಕು ವುದಿಲ್ಲ. ಕತ್ತಲೇನೆಂದು ವಿಚಾರ ಮಾಡಿ ನೋಡಬೇಕೆಂದು ದೀಪವನ್ನು ತೆಗೆದು ಕೊಂಡು ಹೊರಟವನಿಗೆ ಕತ್ತಲು ಸಿಕ್ಕುವುದೇನು ?

೬. ಈ ಅಜ್ಞಾನವೆಂಬ ಪಿಶಾಚವನ್ನು ಎಷ್ಟೆಷ್ಟುಮಟ್ಟಿಗೆ (ವಿಚಾರದಿಂದ) ನೋಡಲಾಗುವುದೋ ಅಷ್ಟಷ್ಟು ಮಟ್ಟಿಗೆ ವಿಲೀನವಾಗುವುದು.

೭. ಅವಿದ್ಯೆಯು ಇರುವಾಗ ಶಾಶ್ವತ ಎನ್ನಿಸಿಕೊಳ್ಳುವಂತಹ ಅಜ್ಞತೆಯು ಉದಯಿಸುವುದು. ನಿರ್ದೇಹಿಯಾಗಿದ್ದರೂ ಬುದ್ಧಿಯನ್ನು ಮೋಹಗೊಳಿಸುವ ಯಕ್ಷಿಯು ರಾತ್ರಿಯಲ್ಲಿ ಕಾಣಿಸಿಕೊಂಡಂತೆಯೇ ಇದೂ !

ಸತಿ ಸರ್ಗೇ ತ್ವವಿದ್ಯಾಯಾಃ ಸಂಭವೋ ನಾನ್ಯತಃ ಕ್ವಚಿತ್ ।
ಸತಿ ದ್ವಿತೀಯೇ ಶಶಿನಿ ದ್ವಿತಿಯೋ ವಿದ್ಯತೇ ಶಶಃ ॥ ೮ ॥

ಸರ್ಗಸ್ತ್ವಯಮಜಾತತ್ವಾದಜ್ಞ ಜ್ಞಾತೋ ನ ವಿದ್ಯತೇ ।
ನ ಜಾತಃ ಕಾರಣಾಭಾವಾತ್ಪೂರ್ವಮೇವ ಖವೃಕ್ಷವತ್ ॥ ೯ ॥

ಪರಮಾಕಾಶಕೋಶಾಂತರಾದಿಸರ್ಗೇ ನಿರಾಮಯೇ ।
ಪೃಥ್ವ್ಯಾದೇರುಪಲಂಭಸ್ಯ ಭವೇತ್ಕಿಮಿವ ಕಾರಣಂ ॥ ೧೦ ॥

ಮನಃಷಷ್ಠೇಂದ್ರಿಯಾತೀತಂ ಮನಃಷಷ್ಠೇಂದ್ರಿಯಾತ್ಮನಃ ।
ಸಾಕಾರಸ್ಯ ನಿರಾಕಾರಂ ಕಥಂ ಭವತಿ ಕಾರಣಂ ॥ ೧೧ ॥

ಬೀಜಾತ್ಕಾರಣತಃ ಕಾರ್ಯಮಂಕುರಃ ಕಿಲ ಜಾಯತೇ ।
ನ ಬೀಜಮಪಿ ಯತ್ರಾಸ್ತಿ ತತ್ರ ಸ್ಯಾದಂಕುರಃ ಕುತಃ ॥ ೧೨ ॥

---

೮. ಸರ್ಗವು ಇರಲಾಗಿ ಅವಿದ್ಯೆಯು ಸಂಭವಿಸುವುದು. ಅದು ಇನ್ನೆಲ್ಲಿಯೂ ಹುಟ್ಟುವುದಿಲ್ಲ. ಎರಡನೆಯ ಚಂದ್ರನಿದ್ದರೆ ಎರಡನೆಯ ಮೊಲವೂ ಇರುವುದು ಹೇಗೋ ಇದೂ ಹಾಗೇ!

(ಏವಂ ಕಾರಣಾವಿದ್ಯಾಪಿ ಕಾರ್ಯಾವಿದ್ಯೋದಯ ಕಾಲ ಮಾತ್ರ ವ್ಯವಹಾರತ್ವಾತ್ ತದುಪಾಧಿಕ ಜೀವ ಚಿದ್ವೇದ್ಯತ್ವಾಚ್ಚ ತದಧೀನೇತ್ಯಾಹ—ತಾ ಪ್ರ)

೯. ಈ ಸರ್ಗವೆಂಬುದು ಅಜ್ಞ ಜ್ಞಾತವೇ ಹೊರತು ವಾಸ್ತವವಾಗಿ ಇಲ್ಲ; ಏಕೆಂದರೆ ಇದು ಅಜಾತವು ಇದಕ್ಕೆ ಪೂರ್ವ ಕಾರಣವು ಇಲ್ಲವಾಗಿ ಇದು ಹುಟ್ಟಿಯೇ ಇಲ್ಲ. ಇದು ಇದೆಯೆನ್ನುವುದು ಆಕಾಶ ವೃಕ್ಷವಿದೆಯೆಂದಂತೆ!

೧೦. ನಿರಾಮಯದಲ್ಲಿ, ಪರಮಾಕಾಶದ ಕೋಷದೊಳಗೆ ತೋರುವ ಆದಿ ಸರ್ಗದಲ್ಲಿ ಪೃಥಿವ್ಯಾದಿಗಳು ಸಂಭವಿಸುವವಲ್ಲ ಅವಕ್ಕೆ ಏನು ಕಾರಣವಿದ್ದೀತು?

೧೧. ಮನಸ್ಷಷ್ಠವಾದ ಇಂದ್ರಿಯಗಳಿಗೆ ಅತೀತವಾದ ನಿರಾಕಾರವು, ಮನಷ್ಷಷ್ಠವಾದ ಇಂದ್ರಿಯಗಳೇ ಆತ್ಮವಾಗುಳ್ಳ ಸಾಕಾರಕ್ಕೆ ಕಾರಣವು ಹೇಗಾದೀತು?

೧೨. ಕಾರಣವಾದ ಬೀಜದಿಂದ ಕಾರ್‍ಯವಾದ ಅಂಕುರವು ಹುಟ್ಟುವುದು

ಕಾರಣೇನ ವಿನಾ ಕಾರ್ಯಂ ನ ಚ ನಾಮೋಪಪದ್ಯತೇ ।
ಕದಾ ಕ ಇವ ಖೇ ಕೇನ ದೃಷ್ಟೋ ಲಬ್ಧಃ ಸ್ಫುಟೋ ದ್ರುಮಃ ॥ ೧೩ ॥

ಸಂಕಲ್ಪೇನಾಂಬರೇ ಯದ್ವದ್ದೃಶ್ಯತೇ ವಿಟಪಾದಿಕಂ ।
ಸಸಂಕಲ್ಪಸ್ತಥಾಭೂತೋ ನ ತತ್ರಾಸ್ತಿ ಪದಾರ್ಥತಾ ॥ ೧೪ ॥

ಏವಂ ಯೇಯಂ ಚಿದಾಕಾಶೇ ಸರ್ಗಾದಾವನುಭೂಯತೇ ।
ಶೂನ್ಯರೂಪ ಇವಾಕಾಶೇ ಸರ್ಗಸ್ಥಿತಿರನರ್ಗಲಾ ॥ ೧೫ ॥

ಸಮ ಏವ ಚಿದಾಕಾಶಃ ಕಚತ್ಯಾತ್ಮನಿ ತತ್ತಥಾ ।
ಸ್ವಭಾವ ಏವ ಸರ್ಗಾಖ್ಯಶ್ಚಿತ್ತ್ವಾಚ್ಚೈತನ್ಯಮೀಶ್ವರಃ ॥ ೧೬ ॥

---

ಎನ್ನುವುದು ಪ್ರಸಿದ್ಧವು. ಬೀಜವು ಎಲ್ಲಿಲ್ಲವೋ ಅಲ್ಲಿ ಅಂಕುರವು ಹುಟ್ಟುವು ದೆಂತು ?

೧೩. ಕಾರಣವಿಲ್ಲದೆ ಕಾರ್ಯವು ಹುಟ್ಟುವುದು ಎನ್ನುವುದು ಸಂಭವವಲ್ಲ. ಆಕಾಶದಲ್ಲಿ ಹುಟ್ಟಿ ಬೆಳೆದ ಮರವು ಯಾವುದು ಯಾರಿಂದ ಯಾವಾಗ ನೋಡಲ್ಪಟ್ಟಿತು ?

೧೪. ಸಂಕಲ್ಪದಿಂದ ಆಕಾಶದಲ್ಲಿ ಮರ ಮೊದಲಾದವುಗಳನ್ನು ಕಾಣುವುದು ಯಾವದುಂಟೋ, ಅದನ್ನು ಸಂಕಲ್ಪದಿಂದ ಹಾಗಾಯಿತು ಎನ್ನಬೇಕಲ್ಲದೆ ಅಲ್ಲಿ ಪದಾರ್ಥತೆಯಿಲ್ಲ

೧೫. ಹೀಗೆ, ಚಿದಾಕಾಶದಲ್ಲಿ ಸರ್ಗದ ಆದಿಕಾಲದಲ್ಲಿ, ಯಾವ ಸರ್ಗ ಸ್ಥಿತಿಯು ಯಾವ ಅಡ್ಡಿಯೂ ಇಲ್ಲದೆ ಅನುಭವಕ್ಕೆ ಬರುವುದೋ ಅದು ಆಕಾಶದಲ್ಲಿ ಇರುವ ಶೂನ್ಯರೂಪಕ್ಕೆ ಸಮವಾದುದು.

೧೬. ಸಮವೇ ಆಗಿರುವ ಚಿದಾಕಾಶವು ಜಗದಾಕಾರವಾಗಿ ಕಚನ ಮಾಡು ವುದು. ಅದೇ ಸ್ವಭಾವವು ! ಅದಕ್ಕೇ ಸರ್ಗವೆಂದು ಹೆಸರು. ಈ ಸರ್ಗವೂ ಚಿತ್ತ್ವವೇ ಆದ್ದರಿಂದ ಚೈತನ್ಯವು ! ಅದೇ ಈಶ್ವರನು !

ಸ್ವಪ್ನಸರ್ಗೋಽತ್ರ ದೃಷ್ಟಾಂತಃ ಪ್ರತ್ಯಹಂ ಯೋಽನುಭೂಯತೇ ।
ಸ್ವಯಂ ಸಂವೇದನೇ ಸ್ವಪ್ನೇ ಸ್ಫುರತ್ಯದ್ರಿಪುರಾಕೃತಿಃ ॥ ೧೭ ॥

ಚಿತ್ಸ್ವಭಾವೇ ಯಥಾ ಸ್ವಪ್ನ ಆಸ್ತೇ ಸರ್ಗ ಇವೇಹ ಯಃ ।
ಅಸರ್ಗೇ ಸರ್ಗವದ್ಭಾತಿ ತಥಾಪೂರ್ವಂ ಮಹಾಂಬರೇ ॥ ೧೮

ಅವೇದ್ಯವೇದನಂ ಶುದ್ಧಮೇಕಂ ಭಾತ್ಯಜಮವ್ಯಯಂ ।
ಸರ್ಗಾದೌ ಯದನಾದ್ಯಂತಂ ಸ್ಥಿತಃ ಸರ್ಗಃ ಸ ಏವ ನಃ ॥ ೧೯ ॥

ನೇಹ ಸರ್ಗೋಽಸ್ತಿ ನೈವಾಯಂ ಪೃಥ್ವ್ಯಾದಿಗಣಗೋಲಕಃ ।
ಸರ್ವಂ ಶಾಂತಮನಾಲಂಬಂ ಬ್ರಹ್ಮೈವ ಬ್ರಹ್ಮಣಿ ಸ್ಥಿತಂ ॥ ೨೦ ॥

---

೧೭. ದಿನದಿನವೂ ಅನುಭವಿಸುವ ಸ್ವಪ್ನಸರ್ಗವೇ ಇದಕ್ಕೆ ಸಾಕ್ಷಿಯು. ಸ್ವಪ್ನ ಸಂವೇದನದಲ್ಲಿ ಅದ್ರಿಪುರ ಇವುಗಳ ಆಕೃತಿಯು ಸ್ವಯಂ ಸ್ಫುರಣವಾಗುವುದಲ್ಲವೆ ?

೧೮. ಚಿತ್ಸ್ವಭಾವದಲ್ಲಿ ಯಾವುದು ಸ್ವಪ್ನವೋ ಅದೇ ಇಲ್ಲಿ ಸರ್ಗವಾಗಿ ಇರುವುದು. ಯಾವುದು ಅಸರ್ಗದಲ್ಲಿಯೂ ಸರ್ಗದಂತೆ ಭಾಸವಾಗುವುದೋ ಅದು ಹಾಗೆಯೇ ಮಹಾಕಾಶದಲ್ಲಿ ಮೊದಲೇ ಇತ್ತು

೧೯. ವೇದ್ಯ ವೇದನಗಳೆರಡೂ ಅಲ್ಲದ ಶುದ್ಧವಾದ ಏಕವು ಅಜವಾಗಿ ಅವ್ಯಯವಾಗಿ ಬೆಳಗುತ್ತಿರುವುದು. ಸರ್ಗಾದಿಯಲ್ಲಿ ಅನಾದ್ಯಂತವಾಗಿ ಯಾವುದು ಇತ್ತೋ ಅದೇ ನಮಗೆ ಸರ್ಗವಾಗಿ ಕಾಣುವುದು

೨೦. (ನಿಜವಾಗಿಯೂ ನೋಡಿದರೆ) ಸರ್ಗವೆಂಬುದು ಇಲ್ಲ. ಪೃಥಿವೀ ಮೊದಲಾದ ಭೂತಗಣಮಂಡಲಗಳಿಲ್ಲ. ಇರುವುದೆಲ್ಲ ಶಾಂತವೂ ಆಲಂಬನ ರಹಿತವೂ ಆದ ಬ್ರಹ್ಮವೊಂದೇ ! ಅದು ಬ್ರಹ್ಮದಲ್ಲಿಯೇ ಇರುವುದು.

ಸರ್ವಶಕ್ತ್ಯಾತ್ಮ ತದ್ಬ್ರಹ್ಮ ಯಥಾ ಕಚತಿ ಯಾದೃಶಂ ।
ರೂಪಮತ್ಯಜದೇವಾಚ್ಛಂ ತಥಾ ಭವತಿ ತಾದೃಶಂ ॥ ೨೧ ॥

ಯಥಾ ಸ್ವಪ್ನಪುರಂ ಜಂತೋಶ್ಚಿನ್ಮಾತ್ರಪ್ರವಿಜೃಂಭಿತಂ ।
ತಥೈವ ಸರ್ಗಃ ಸರ್ಗಾದೌ ಶುದ್ಧಚಿನ್ಮಾತ್ರಜೃಂಭಿತಂ ॥ ೨೨ ॥

ಸ್ವಚ್ಛೇ ಚಿತ್ಪರಮಾಕಾಶೇ ಚಿತಾಕಾಶೋ ಯ ಆಸ್ಥಿತಃ ।
ಸ್ವಭಾವ ಏವ ಸರ್ಗೋಽಸಾವಿತಿ ತೇನೈವ ಭಾವಿತಃ ॥ ೨೩ ॥

ಭಾವ್ಯಭಾವಕಭಾವಾದಿಭೂಮೀನಾಂ ಭಾವನಂ ಭೃಶಂ ।
ಸರ್ವಂ ಚಿನ್ನಭ ಏವಾಚ್ಛಮಾತ್ಮನಾತ್ಮನಿ ಸಂಸ್ಥಿತಂ ॥ ೨೪ ॥

---

೨೧. ಆ ಬ್ರಹ್ಮವು ಸರ್ವಶಕ್ತ್ಯಾತ್ಮಕವಾದುದು: ಅದರಿಂದ ಅದು ಯಾವ ರೂಪವಾಗಿ ಹೇಗೆ ಕಚನ ಮಾಡುವುದೋ ಹಾಗೆ ಆ ರೂಪವಾಗಿ ಆದರೂ ಅದು ತನ್ನ ಬ್ರಹ್ಮತ್ವವನ್ನು ಬಿಡುವುದಿಲ್ಲ.

೨೨. ಜಂತು ಜಂತುವಿಗೂ ಕಾಣುವ ಸ್ವಪ್ನ ಪುರವು ಹೇಗೆ ಚಿನ್ಮಾತ್ರದ ವಿಜೃಂಭಣವೋ ಹಾಗೆಯೇ ಸರ್ಗವೂ ಸರ್ಗಾದಿಯಲ್ಲಿ ಆದ ಶುದ್ಧ ಚಿನ್ಮಾತ್ರದ ವಿಜೃಂಭಣವು.

೨೩. ಸ್ವಚ್ಛವಾದ ಚಿತ್ಪರಮಾಕಾಶದಲ್ಲಿ ಯಾವ ಚಿದಾಕಾಶವಿರುವುದೋ ಅದೇ ಸ್ವಭಾವವು: ಅದೇ ತಾನೇ ಸರ್ಗವೆಂದು ತನ್ನಷ್ಟಕ್ಕೆ ಭಾವಿಸಿಕೊಂಡಿತು

೨೪ ಭಾವ್ಯ, ಭಾವಕ, ಭಾವ, ಮೊದಲಾದ ಭೂಮಿಕೆಗಳ ಭಾವನವು ಯಾವುದುಂಟೋ ಅದೆಲ್ಲವೂ ನಿಜವಾಗಿ ಚಿದಾಕಾಶವೇ! ಅಚ್ಛವಾದ ಚಿದಾಕಾಶವೇ ಆತ್ಮನಾ ಆತ್ಮನಿ ಸಂಸ್ಥಿತವಾಗಿದ್ದು ಹೀಗೆಲ್ಲ ಕಾಣುತ್ತಿರುವುದು

ಏವಂ ಸ್ಥಿತೇ ಕುತಃ ಸರ್ಗಃ ಕುತೋ ವಿದ್ಯಾ ಕ್ವ ಚಾಜ್ಞತಾ ।
ಬ್ರಹ್ಮ ಶಾಂತಂ ಘನಂ ಸರ್ವಂ ಕ್ವಾಹಂಕಾರಾದಯಃ ಸ್ಥಿತಾಃ ॥ ೨೫ ॥

ಅಹಂಭಾವಸ್ಯ ಸಂಶಾಂತಿರೇಷಾಽಸೌ ಕಥಿತಾ ತವ ।
ಅಹಂಭಾವಃ ಪರಿಜ್ಞಾತಃ ಪಿಶಾಚ ಇವ ಶಾಮ್ಯತಿ ॥ ೨೬ ॥

ಮಯಾ ತ್ವೇವಮಹಂಭಾವಃ ಪರಿಜ್ಞಾತೋ ಯದಾಖಿಲಃ ।
ತದಾ ಮೇ ವಿದ್ಯಮಾನೋಽಪಿ ನಿಷ್ಫಲಃ ಶರದಭ್ರವತ್ ॥ ೨೭ ॥

ಚಿತ್ರಾಗ್ನಿದಾಹೋ ವಿಜ್ಞಾತೋ ಯಥಾ ದಾಹ್ಯೇಷು ನಿಷ್ಫಲಃ ।
ತಥಾಹಂಭಾವಸರ್ಗಾದಿ ಜ್ಞಾತಂ ನಿಷ್ಫಲತಾಮಿಯಾತ್ ॥ ೨೮ ॥

---

೨೫. ಹೀಗಿರಲು, ಸರ್ಗವೆನ್ನುವುದು ಎಲ್ಲಿಂದ ? ವಿದ್ಯೆಯೆನ್ನುವುದು ಯಾತರಿಂದ ? ಅಜ್ಞಾನವೆನ್ನುವುದು ಎಲ್ಲಿ ? ಎಲ್ಲವೂ ಶಾಂತವಾದ ಘನವಾದ ಬ್ರಹ್ಮವೇ ಆಗಿರಲು ಅಹಂಕಾರಾದಿಗಳು ಎಲ್ಲಿಂದ ಬಂದುವು ?

೨೬. ಅಹಂಭಾವದ ಸಂಶಾಂತಿಯೆಂಬುದು ಹೀಗೆ. ಇದನ್ನು ನಿನಗೆ ಹೇಳಿರುವೆನು. ಅಹಂಭಾವ ಎಂಬುದನ್ನು ತಿಳಿದರೆ ಸಾಕು, ಪಿಶಾಚವು ಹೇಗೋ ಹಾಗೇ ಅದೂ ಶಾಂತವಾಗುವುದು

೨೭. ಈ ಅಹಂಭಾವವನ್ನು ನಾನು ಯಾವಾಗ ಇದು ಹೀಗೆ ಎಂದು ಪೂರ್ಣವಾಗಿ ತಿಳಿದುಕೊಂಡೆನೋ ಆಗ ಅದು ನನಗೆ ಆಗ ಶರತ್ಕಾಲದ ಮೋಡದಂತೆ ಇದ್ದರೂ ಇಲ್ಲವಾಯಿತು

೨೮. ಚಿತ್ರಾಗ್ನಿಯಿದು ; ದಾಹರಹಿತವಾದುದು ಎಂದು ತಿಳಿದ ಮೇಲೆ ಆ ಬೆಂಕಿಯು ದಹನ ಕರ್ಮಕ್ಕೆ ಹೇಗೆ ಒದಗಲಾರದೆ ನಿಷ್ಫಲವಾಗುವುದೋ ಹಾಗೆಯೇ ಅಹಂಭಾವ ಸರ್ಗಾದಿಗಳನ್ನು ಇವೇನು ಎಂದು ತಿಳಿದುಕೊಂಡರೆ, ಅವು ನಿಷ್ಫಲಗಳಾಗುವುವು.

ಇತಿ ಮೇಽಹಂಕೃತೇಸ್ತ್ಯಾಗೇ ರಾಗೇ ಚ ಸಮತಾ ಯದಾ ।
ತದಾ ವ್ಯೋಮ್ನ ಇವಾವ್ಯೋಮ್ನಃ ಸರ್ಗೇ ಸರ್ಗೇ ಚ ಮೇ ಸ್ಥಿತಿಃ ॥ ೨೯ ॥

ಅಹಂಭಾವಸ್ಯ ನೈವಾಹಂ ನಾಹಂಭಾವೋ ಮಮೇತಿ ಚ ।
ತೇನ ವಿದ್ಧಿ ಚಿದಾಕಾಶಮೇವೇದಮಿತಿ ನಿರ್ಘನಂ ॥ ೩೦ ॥

ಯಥಾ ಮಮ ತಥಾನ್ಯೇಷಾಮಪಿ ಬೋಧವತಾಮಿಹ ।
ಅಗ್ನಿತ್ವಮಿವ ಚಿತ್ರಾಗ್ನೇರ್ನಾಸ್ತ್ಯಯಂ ಬೋಧವಿಭ್ರಮಃ ॥ ೩೧ ॥

ನಾಹಮಸ್ಮಿ ನಚಾನ್ಯೋಽಸ್ತಿ ಸರ್ವಂ ನಾಸ್ತೀತಿ ನಿಶ್ಚಯೀ ।
ಪ್ರಕೃತವ್ಯವಹಾರಸ್ತ್ವಂ ಶಿಲಾಮೌನಮಯೋ ಭವ ॥ ೩೨ ॥

---

೨೯. ಹೀಗೆಂದು ಅಹಂಕೃತಿಯ ಸ್ವರೂಪವನ್ನು ತಿಳಿದು ಅದು ಇದ್ದರೂ ಹೋದರೂ ಒಂದೇ ಎಂದಾಗಲೂ ಆಕಾಶಕ್ಕೆ ಹೇಗೆ ಎಂದಿಗೂ ನಾಶವಿಲ್ಲವೋ ಹಾಗೆಯೇ ನನಗೂ ಆಕಾರವಿಲ್ಲದಿದ್ದರೂ ನಾಶವು ಇಲ್ಲವಾಗಿ ಸರ್ಗ ಸರ್ಗದಲ್ಲಿಯೂ ಇರುವೆನು

೩೦. ಅಹಂಭಾವಕ್ಕೆ ನಾನೂ ಅಲ್ಲ; ನನಗೆ ಅಹಂಭಾವವೂ ಇಲ್ಲ. ಆದರಿಂದ (ನಾನೂ ಎಂಬ ಇರುವುದು) ನಿಬಿಡವಾಗಿ ತುಂಬಿರುವ ಚಿದಾಕಾಶವೇ ಹೊರತು ಇನ್ನೇನೂ ಅಲ್ಲವೆಂದು ತಿಳಿ.

೩೧. ನನಗೆ ಹೇಗೋ ಹಾಗೆಯೇ ಇತರ ಪ್ರಜ್ಞಾವಂತರಿಗೂ ಎಂದು ತಿಳಿ. ಚಿತ್ರಾಗ್ನಿಯ ಅಗ್ನಿತ್ವವು ಹೇಗೋ ಹಾಗೆ ಅಹಂಕಾರವೆಂಬುದು (ಕಾರ್ಯಕಾರಿಯಲ್ಲಿ) ಇಲ್ಲ ಹಾಗೆ ಅದು ಉಂಟು: ಅದು ಏನನ್ನಾದರೂ ಮಾಡುವುದು ಎಂಬುದು ಜ್ಞಾನಭ್ರಮವು

೩೨. ಅಹಂವೆಂಬುದಿಲ್ಲ: ಅನ್ಯವೂ ಇಲ್ಲ ಯಾವುದೂ ಇಲ್ಲ ಎಂಬ ನಿಶ್ಚಯದಲ್ಲಿದ್ದುಕೊಂಡು, ಒದಗಿಬಂದ ವ್ಯವಹಾರವನ್ನು ಮಾಡುತ್ತ ಶಿಲಾಮೌನಮಯನಾಗು.

ಆಕಾಶಕೋಶವಿಶದಾಕೃತಿರೇವ ತಿಷ್ಠ ।
ನಿರ್ದೇಶವಚ್ಚಿರಮುಪಹ್ಯುತಸರ್ವಭಾವಃ ॥
ಆದ್ಯಾದಿತಶ್ಚ ಕಿಲ ಚಿನ್ಮಯಮೇವ ಸರ್ವಂ ।
ನೋ ದೃಶ್ಯಮಸ್ತಿ ಶಿವಮೇವಮಶೇಷಮಿತ್ಥಂ ॥ ೩೩ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ವಿದಿತವೇದ್ಯಾಹಂಕಾರವಿಚಾರೋ" ನಾಮ
ಸಪ್ತಪಂಚಾಶಃ ಸರ್ಗಃ

೩೩. ಆಕಾಶಕೋಶದಂತೆ ನಿರ್ಮಲವಾದವನಾಗಿ ಇರು. ಸಾಕ್ಷಿಯಂತೆ ಸರ್ವ ಭಾವಗಳನ್ನು ಬಿಟ್ಟು ಇರು. ಸರ್ಗವು ಈಗಲೂ ಮೊದಲಲ್ಲಿಯೂ, ಕೂಡ ಎಲ್ಲವೂ ಚಿನ್ಮಯವಾಗಿಯೇ ಇತ್ತು. ನಿಜವಾಗಿಯೂ ದೃಶ್ಯವೆಂಬುದೊಂದಿಲ್ಲ ಶಿವವೇ ತಾನೇ ಎಲ್ಲವೂ ಆಗಿಯೇ ಇತ್ತು.

ಇಂತಿಮ ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿದಿತವೇದ್ಯಾಹಂಕಾರವಿಚಾರ" ಎಂಬ
ಐವತ್ತೇಳನೆಯ ಸರ್ಗವು.

## ಅಷ್ಟಪಂಚಾಶಃ ಸರ್ಗಃ

ಶ್ರೀರಾಮ ಉವಾಚ:—

ಅಹೋನು ವಿತತೋದಾರಾ ವಿಮಲಾ ವಿಪುಲಾಚಲಾ ।
ಭವತಾ ಭಗವನ್ಭೂತ್ಯೈ ಭೂಯೋ ದೃಷ್ಟಿರುದಾಹೃತಾ ॥ ೧ ॥

ಸರ್ವಥಾ ಸರ್ವದಾ ಸರ್ವಂ ಸರ್ವಂ ಸರ್ವತ್ರ ಸರ್ವದಾ ।
ಸದಿತ್ಯೇವ ಸ್ಥಿತಂ ಸತ್ಯಂ ಸಮಂ ಸಮನುಭೂತಿತಃ ॥ ೨ ॥

---

## ಐವತ್ತೆಂಟನೆಯ ಸರ್ಗವು

ಶ್ರೀ ರಾಮನು ಕೇಳಿದನು —

ಅಹಹಾ! ಎಲೈ ಭಗವಂತನೇ, ವಿಸ್ತಾರವೂ, ಉದಾರವೂ, ವಿಮಲವೂ, ವಿಪುಲವೂ, ಶಾಶ್ವತವೂ ಆದ ಜ್ಞಾನ ದೃಷ್ಟಿಯನ್ನು ನೀನು ಶ್ರೇಯಸ್ಸಾಗಲೆಂದು ಮತ್ತೆ ಉದಾಹರಿಸಿದೆ

೨. ಸರ್ವಥಾ (ಯಾವಯಾವ ರೀತಿಯಾಗಿ ನೋಡಿದರೂ) ಸರ್ವದಾ (ಯಾವ ಯಾವಾಗ ನೋಡಿದರೂ) ಸರ್ವವೂ (ಯಾವ ಯಾವದಾದರೂ) ಸರ್ವವಾಗಿ, ಸರ್ವತ್ರ, ಸರ್ವದಾ, ಸತ್ ಒಂದೇ ಒಂದಾಗಿ, ಸತ್ಯವಾಗಿ, ಸಮವಾಗಿ, ಇರುವುದು ಎಂಬುದು ಅನುಭವಗೋಚರವಾಗುವುದು.

(ಸಮಮ ವಿಷಮಮೇಕ ರಸಮೇವ ... ಸರ್ವಧರ್ಮಧರ್ಮಿಣಾಂ ದೇಶತಃ ಕಾಲತಃ ವಸ್ತುತಶ್ಚ ಸರ್ವಭಾವೇ ವ್ಯಾವೃತ್ತಿ ವ್ಯಾವರ್ತಕತಾದ್ಯಸಿದ್ಧೇರಿತಿ ಭಾವಃ —ತಾ ಪ್ರ.

ಅಯುಮಸ್ತಿ ಮಮ ಬ್ರಹ್ಮನ್ಸಂಶಯಸ್ತಂ ನಿವಾರಯ ।
ಕಿಮಿದಂ ಭಗನ್ನಾಮ ಪಾಷಾಣಾಖ್ಯಾನಮುಚ್ಯತೇ ॥ ೩ ॥

ಶ್ರೀ ವಸಿಷ್ಠ ಉವಾಚ:—

ಸರ್ವತ್ರ ಸರ್ವದಾ ಸರ್ವಮಸ್ತೀತಿ ಪ್ರತಿಪಾದನೇ ।
ಪಾಷಾಣಾಖ್ಯಾನದೃಷ್ಟಾಂತೋ ಮಯಾಯಂ ತವ ಕಥ್ಯತೇ ॥ ೪ ॥

ನೀರಂಧ್ರೈಕಘನಾಂಗಸ್ಯ ಪಾಷಾಣಸ್ಯಾಪಿ ಕೋಟರೇ ।
ಸಂತಿ ಸರ್ಗಸಹಸ್ರಾಣಿ ಕಥಯೇತಿ ಪ್ರದರ್ಶ್ಯತೇ ॥ ೫ ॥

ಭೂತಾಕಾಶೇ ಮಹತ್ಯಸ್ಮಿನ್ಸ್ವಶೂನ್ಯತ್ವಮನುಜ್ಝತಿ ।
ಸಂತಿ ಸರ್ಗಸಹಸ್ರಾಣಿ ಕಥಯೇತಿ ಪ್ರದೃಶ್ಯತೇ ॥ ೬ ॥

---

೩. ಆದರೂ, ಎಲೈ ಬ್ರಹ್ಮನೇ, ನನಗೊಂದು ಸಂಶಯವೊಂದು ಬಂದಿರುವುದು. ಎಲೈ ಭಗವಂತನೆ, ಈ ಪಾಷಾಣಾಖ್ಯಾನವೆಂಬುದು ಏನು ?

ಶ್ರೀ ವಸಿಷ್ಠನು ಹೇಳಿದನು:—

೪. "ಸರ್ವತ್ರ, ಸರ್ವದಾ, ಸರ್ವವೂ ಇರುವುದೆಂದು ಪ್ರತಿಪಾದನಮಾಡಲು, ಪಾಷಾಣಾಖ್ಯಾನದ ದೃಷ್ಟಾಂತವನ್ನು ನಿನಗೆ ಹೇಳಿದೆನು.

೫ ನೀರಂಧ್ರವಾಗಿ, ನಿಬಿಡವಾಗಿ, ತಾನಲ್ಲದ ಇನ್ನೊಂದೂ ಇಲ್ಲದೆ ಏಕ ಘನವಾಗಿರುವ ದೇಹವುಳ್ಳ ಪಾಷಾಣದಲ್ಲಿ ಎಲ್ಲಾದರೂ ಒಂದು ಇಷ್ಟು ಎಡೆಯಿದ್ದರೆ ಅಲ್ಲಿ ಒಂದು ಸಾವಿರ ಸರ್ಗಗಳು ಇರುತ್ತವೆ ಎಂಬುದನ್ನು ಕಥೆಯಾಗಿ ನಿನಗೆ ಹೇಳುತ್ತಿರುವೆನು.

೬. ತನ್ನ ಶೂನ್ಯತ್ವವನ್ನು ಬಿಡದ, ಮಹತ್ತಾದ ಈ ಭೂತಾಕಾಶದಲ್ಲಿ ಸರ್ಗ ಸಹಸ್ರಗಳು ಇವೆಯೆಂಬುದನ್ನು ಕಥೆಯಾಗಿ ಹೇಳುತ್ತಿರುವೆನು.

ಅಂತರ್ಗುಲ್ಮಾಂಕುರಾದೀನಾಂ ಪ್ರಾಣಿವಾಯ್ವಂಬುತೇಜಸಾಂ ।
ಸಂತಿ ಸರ್ಗಸಹಸ್ರಾಣಿ ಕಥಯೇತಿ ಪ್ರದೃಶ್ಯತೇ ॥ ೭ ॥

ಶ್ರೀ ರಾಮ ಉವಾಚ:—

ಕುಡ್ಯಾದೌ ಸಂತಿ ಸರ್ಗೌಘಾ ಇತಿ ಚೇತ್ಕಥ್ಯತೇ ಮುನೇ ।
ತತ್ಖೇ ವಿಭಾಂತಿ ಸರ್ಗೌಘಾ ಇತಿ ಕಿಂ ನ ಪ್ರದೃಶ್ಯತೇ ॥ ೮ ॥

ಶ್ರೀ ವಸಿಷ್ಠ ಉವಾಚ:—

ಏತತ್ತೇ ವರ್ಣಿತಂ ರಾಮ ಮುಖ್ಯಮೇವ ಮಯಾಖಿಲಂ ।
ಯೋಽಯಮಾಲಕ್ಷ್ಯತೇ ಸರ್ಗಃ ಸ ಖ ಏವ ಖಮಾಸ್ಥಿತಂ ॥ ೯ ॥

---

೭. ಗುಲ್ಮ ಅಂಕುರ ಆದಿಗಳನ್ನು ತಮ್ಮೊಳಗೆ ಇಟ್ಟುಕೊಂಡಿರುವ, ಪ್ರಾಣಿ ಪ್ರಾಣಿಯಲ್ಲಿಯೂ ಇರುವ ವಾಯು, ಅಗ್ನಿ, ಜಲಗಳಲ್ಲಿ, ಸರ್ಗ ಸಹಸ್ರಗಳು ಉಂಟೆಂಬುದನ್ನು ಕಥೆಯಾಗಿ ಹೇಳುತ್ತಿರುವೆನು.

ಶ್ರೀ ರಾಮನು ಕೇಳಿದನು —

೮. ಗೋಡೆಗಳು ಮುಂತಾದವುಗಳಲ್ಲಿ ಸರ್ಗ ಸಮೂಹಗಳು ಇರುವುವು ಎನ್ನುವುದಾದರೆ, ಎಲೈ ಮುನೀಂದ್ರನೆ, ಆಕಾಶದಲ್ಲಿಯೂ ಸರ್ಗಸಮೂಹಗಳು ಇರಬೇಕಲ್ಲಾ ! ಅವು ಏಕೆ ಕಾಣಿಸುವುದಿಲ್ಲ ?

ಶ್ರೀ ವಸಿಷ್ಠನು ಹೇಳಿದನು:—

೯. ರಾಮ, ಮುಖ್ಯವಾದುದನ್ನು ನಾನು ನಿನಗೆ ವರ್ಣಿಸಿ ಹೇಳಿದೆನು. ಈಗ ನಿನ್ನ ಕಣ್ಣಿಗೆ ಕಾಣಿಸುತ್ತಿರುವ ಈ ಸರ್ಗವೂ ಆಕಾಶದಲ್ಲಿಯೇ ಇರುವುದು.

(ಶುದ್ಧ ಚಿದಾಕಾಶಃ ಸಹಸಾ ನ ಪರಿಚೇತುಂ ಶಕ್ಯ ಇತಿ ತದುಪಾಯತಯಾ ಉಪಹಿತ ಚಿತ್ಯಪಿ ಪ್ರತ್ಯೇಕಂ ಸರ್ವಜಗದಧ್ಯಾಸೋ ದರ್ಶಿತ ಇತ್ಯಾಶಯೇನ ಉತ್ತರ ಮಾಹ—ತಾ. ಪ್ರ.)

ಆದಾವೇವ ಹಿ ಸೋತ್ಪನ್ನಮದ್ಯಾಪಿ ನ ಚ ವಿದ್ಯತೇ ।
ದೃಶ್ಯಂ ಯಚ್ಚಾವಭಾತೀದಂ ತದ್ಬ್ರಹ್ಮ ಬ್ರಹ್ಮಣಿ ಸ್ಥಿತಂ ॥ ೧೦ ॥

ನಾಸ್ತಿ ಭೂರಣುಮಾತ್ರಾಪಿ ಸರ್ಗೈರ್ನಿರ್ವಿವರಾ ನ ಯಾ ।
ನ ಚ ಕ್ವಚನ ವಿದ್ಯಂತೇ ಸರ್ಗಾ ಬ್ರಹ್ಮಖಮೇವ ತೇ ॥ ೧೧ ॥

ನ ತೇಜಸೋಽಣುರಪ್ಯಸ್ತಿ ಸರ್ಗೈರ್ನಿರ್ವಿವರೋ ನ ಯಃ ।
ನ ಚ ಕ್ವಚನ ಸರ್ಗಾಸ್ತೇ ಸಂತಿ ಬ್ರಹ್ಮಖಮೇವ ತತ್ ॥ ೧೨ ॥

ನ ವಾಯೋರಣುರಪ್ಯಸ್ತಿ ಸರ್ಗೈರ್ನಿರ್ವಿವರೋ ನ ಯಃ
ನ ಚ ಕ್ವಚನ ವಿದ್ಯಂತೇ ಸರ್ಗಾ ಬ್ರಹ್ಮಖಮೇವ ತತ್ ॥ ೧೩ ॥

ಖಂ ನಾಣುಮಾತ್ರಮಪ್ಯಸ್ತಿ ಸರ್ಗೈರ್ನಿರ್ವಿವರಂ ನ ಯತ್ ।
ನಚ ಕ್ವಚನ ವಿದ್ಯಂತೇ ಸರ್ಗಾಸ್ತೇಸಂತಿ ಬ್ರಹ್ಮಖಮೇವ ತತ್ ॥ ೧೪ ॥

---

೧೦. ಮೊದಲಲ್ಲಿ ಇದು ಹುಟ್ಟಲಿಲ್ಲ; ಈಗ ಇಲ್ಲ ದೃಶ್ಯವಾಗಿ ಕಾಣುಸುತ್ತಿರುವ ಈ ಯಾವ ಯಾವದು ಉಂಟೋ ಅದೆಲ್ಲವೂ ಬ್ರಹ್ಮವೇ! ಈ ಬ್ರಹ್ಮವು ಬ್ರಹ್ಮದಲ್ಲಿಯೇ ಸ್ಥಿತವಾಗಿರುವುದು.

(ಪರಮಾರ್ಥದೃಷ್ಟೇರಿತಿ ಭಾವಃ—ತಾ. ಪ್ರ.)

೧೧. ಎಲ್ಲಿಯೇ ಆಗಲಿ, ಸರ್ಗಪರಂಪರೆಗಳಿಂದ ತುಂಬಿ ಹೋಗದೆ ಇರುವ ಭೂಮಿಯು ಅಣುಮಾತ್ರವೂ ಇಲ್ಲ ಆ ಸರ್ಗಪರಂಪರೆಗಳಲ್ಲೂ ಬ್ರಹ್ಮಾಕಾಶವಲ್ಲದೆ ಬೇರೆಯಾದವು ಯಾವವೂ ಇಲ್ಲ.

೧೨. ಎಲ್ಲಿಯೇ ಆಗಲಿ ಸರ್ಗಪರಂಪರೆಗಳಿಂದ ತುಂಬಿ ಹೋಗದೆ ಇರುವ ತೇಜಸ್ಸು ಅಣುಮಾತ್ರವೂ ಇಲ್ಲ. ಹಾಗೆಯೇ ಬ್ರಹ್ಮಾಕಾಶವಲ್ಲದ ಸರ್ಗವೂ ಯಾವುದೂ ಇಲ್ಲ

೧೩. ಎಲ್ಲಿಯೇ ಆಗಲಿ ಸರ್ಗಭರಿತವಲ್ಲದ ವಾಯುವು ಅಣುವಿನಷ್ಟೂ ಇಲ್ಲ; ಅದರಂತೆಯೇ ಬ್ರಹ್ಮಾಕಾಶವಲ್ಲದ ಸರ್ಗವೂ ಇಲ್ಲ.

೧೪. ಆಕಾಶವೂ ಹಾಗೆಯೇ ಸರ್ಗ ಪ್ರಪೂರ್ಣವಲ್ಲದ್ದು ಅಣುವಿನಷ್ಟೂ ಇಲ್ಲ; ಅದರಂತೆಯೇ ಬ್ರಹ್ಮಾಕಾಶವಲ್ಲದ ಸರ್ಗವೂ ಇಲ್ಲ.

ನ ಸಾ ಮಹಾಭೂತತಾಸ್ತಿ ಸರ್ಗೈರ್ನಿರ್ವಿವರಾ ನ ಯಾ ।
ನಚ ಕ್ವಚನ ವಿದ್ಯಂತೇ ಸರ್ಗಾ ಬ್ರಹ್ಮಖಮೇವ ತತ್ ॥ ೧೫ ॥

ಶೈಲಾನಾಂ ನಾಣುರಪ್ಯಸ್ತಿ ಸ ಸರ್ಗೈರ್ಯೋ ನ ನಿರ್ಘನಃ ।
ನಚ ಕ್ವಚನ ವಿದ್ಯಂತೇ ಸರ್ಗಾ ಬ್ರಹ್ಮಖಮೇವ ತತ್ ॥ ೧೬ ॥

ಬ್ರಹ್ಮಣೋ ನಾಣುರಪ್ಯಸ್ತಿ ಸರ್ಗೈರ್ನಿರ್ವಿವರೋ ನ ಯಃ ।
ನಚ ಕ್ವಚನ ಸರ್ಗಾಸ್ತೇ ಸಂತಿ ಬ್ರಹ್ಮಖಮೇವ ತತ್ ॥ ೧೭ ॥

ಸರ್ಗೇಷು ನಾಣುರಪ್ಯಸ್ತಿ ನ ಬ್ರಹ್ಮಾತ್ಮೈವ ಯಃ ಸದಾ ।
ಬ್ರಹ್ಮಸರ್ಗಾಸ್ತಥೇತ್ಯೇಷ ವಾಚಿ ಭೇದೋ ನ ವಸ್ತುನಿ ॥ ೧೮ ॥

ಸರ್ಗಾ ಏವ ಪರಂಬ್ರಹ್ಮ ಪರಂ ಬ್ರಹ್ಮೈವ ಸರ್ಗತಾ ।
ಮನಾಗಪ್ಯಸ್ತಿ ನ ದ್ವೈತಮತ್ರಾಗ್ನ್ಯೌಷ್ಣ್ಯಯೋರಿವ ॥ ೧೯ ॥

---

೧೫. ಹಾಗೆಯೇ ಈ ಆಕಾಶಾದಿಗಳನ್ನೊಳಗೊಂಡ ಮಹಾಭೂತತೆಯು ಉಂಟಲ್ಲವೆ? ಅದೂ ಕೂಡ ಸರ್ಗಪರಂಪರಗಳನ್ನೊಳಗೊಳ್ಳದೆ ಇರುವುದು ಅಣುವಿನಷ್ಟೂ ಇಲ್ಲ. ಅಲ್ಲಿರುವ ಸರ್ಗಗಳೂ ಕೂಡ ಬ್ರಹ್ಮಾಕಾಶವೇ!

೧೬. ಶೈಲಗಳಲ್ಲಿಯೂ ಹಾಗೆಯೇ! ಸರ್ಗಗಳಿಂದ ತುಂಬಿರದೆ ಇರುವುದು ಅಣುವಿನಷ್ಟೂ ಇಲ್ಲ. ಅಲ್ಲಿರುವ ಸರ್ಗಗಳೂ ಬ್ರಹ್ಮಾಕಾಶವಲ್ಲದೆ ಮತ್ತೇನೂ ಅಲ್ಲ.

೧೭. ಹಾಗೆಯೇ ಬ್ರಹ್ಮದಲ್ಲಿಯೂ ಅಣು ಅಣುವಿನಲ್ಲಿಯೂ ಸರ್ಗಪರಂಪರೆಯು ತುಂಬಿರುವುದು. ಅವು ಕೂಡ ಬ್ರಹ್ಮಾಕಾಶವಲ್ಲದೆ ಮತ್ತೇನೂ ಅಲ್ಲ.

೧೮. ಈ ಸರ್ಗಗಳಲ್ಲಿಯೂ ಯಾವಾಗಲಾದರೂ ಒಂದು ಕ್ಷಣವಾದರೂ ಬ್ರಹ್ಮಾತ್ಮಕವಲ್ಲದ್ದು ಒಂದು ಅಣುವಿನಷ್ಟೂ ಇಲ್ಲ. ಆದರಿಂದ ಸರ್ಗವೆನ್ನುವುದು ಬ್ರಹ್ಮ. ಬ್ರಹ್ಮವೆನ್ನುವುದು ಸರ್ಗ ಎನ್ನಬೇಕು. ಏನು ಭೇದವಿದ್ದರೂ ಅದು ವಾಕ್ಕಿನಲ್ಲಿಯೇ ಹೊರತು ವಸ್ತುವಿನಲ್ಲಲ್ಲ.

೧೯. ಈ ಸರ್ಗಗಳೇ ಪರಬ್ರಹ್ಮ, ಪರಬ್ರಹ್ಮವೇ ಸರ್ಗ. ಆದರಿಂದ ಎಳ್ಳಷ್ಟೂ ದ್ವೈತವಿಲ್ಲ. ಬೆಂಕಿಯ ಬಿಸಿಗೂ ಸೂರ್ಯನ ಬಿಸಿಗೂ ಏನಾದರೂ ಭೇದವುಂಟೆ?

ಇಮೇ ಸರ್ಗಾ ಇದಂಬ್ರಹ್ಮ ತೇಽತ್ಯಂತಾವಾಚ್ಯದೃಷ್ಟಯಃ ।
ವಿದಾರ್ಯ ದಾರುರವವದ್ಭ್ರಾಂತ್ಯರ್ಥಪರಿವರ್ಜಿತಾಃ ॥ ೨೦ ॥

ದ್ವೈತಮೈಕ್ಯಂ ಚ ಯತ್ರಾಸ್ತಿ ನ ಮನಾಗಪಿ ತತ್ರ ತೇ ।
ಸರ್ಗಬ್ರಹ್ಮಾದಿ ಶಬ್ದಾರ್ಥಾಃ ಕಥಂ ಕಸ್ಯೇವ ಭಾಂತು ಕೇ ॥ ೨೧ ॥

ಶಾಂತಮೇಕಮನಾದ್ಯಂತಮಿದಮಚ್ಛಮನಾಮಯಂ ।
ವ್ಯವಹಾರವತೋಽಪ್ಯಂಗ ಜ್ಞಸ್ಯ ಮೌನಂ ಶಿಲಾಘನಂ ॥ ೨೨ ॥

೨೦ ಈ ಸರ್ಗಗಳು, ಈ ಬ್ರಹ್ಮ, ಇವುಗಳೆಲ್ಲವೂ ವಾಕ್ಕಿನಿಂದ ವಿವರಿಸುವುದಕ್ಕಾಗದ ಅವಾಚ್ಯ ದೃಷ್ಟಿಗಳು. ದಾರು, ವಿದಾರ್ಯ, ಎಂಬ ಶಬ್ದಗಳು ಎರಡೂ ಒಂದೇ ಧಾತುವಿನಿಂದ ಅರ್ಥವು ಕೊಂಚ ಭಿನ್ನವಾಗಿದೆ ಅದರಂತೆ, ಸರ್ಜನದಿಂದ ಸರ್ಗ, ಬೃಂಹಣದಿಂದ ಬ್ರಹ್ಮ ಎನ್ನಬೇಕಲ್ಲದೆ ಇನ್ನೇನೂ ವ್ಯತ್ಯಾಸ ಹೇಳುವಂತಿಲ್ಲ. ಅವೆರಡರಲ್ಲೂ ಅರ್ಥಭೇದವಾಗಲಿ ವಸ್ತುಭೇದವಾಗಲಿ ಎಳ್ಳಷ್ಟೂ ಇಲ್ಲ.

೨೧. ದ್ವೈತ, ಐಕ್ಯ, ಎಂಬ ಶಬ್ದಗಳ ಅರ್ಥವು ಎಲ್ಲಿ ಎಳ್ಳಷ್ಟೂ ಹೊಂದುವುದಿಲ್ಲವೋ ಅಲ್ಲಿ ಸರ್ಗ, ಬ್ರಹ್ಮ, ಮೊದಲಾದ ಶಬ್ದಗಳ ಅರ್ಥವು ಬೇರೆ ಬೇರೆಯೆಂದು ಹೇಗೆಹೇಗೆ, ಹೊಳದಾವು ?

೨೨. ಅದರಿಂದ ಶಾಂತವೂ, ಏಕವೂ, ಅನಾದ್ಯಂತವೂ, ಅಚ್ಛವೂ ಅನಾಮಯವೂ ಆದ ಬ್ರಹ್ಮವೊಂದೇ ಇರುವುದು. ಆದರಿಂದ ವ್ಯವಹಾರದಲ್ಲಿರುವವನಾದರೂ ಜ್ಞಾನಿಯ ಮೌನವು ಶಿಲಾಘನವು.

(ವ್ಯಾವಹಾರಿಕಸತ್ತೆಯು ಪ್ರತ್ಯೇಕವಾಗಿ ಒಂದುಂಟು ಎಂದು ಅದ್ವೈತಿಗಳು ಒಪ್ಪುವುದಿಲ್ಲ. ಅದಕ್ಕೆ ಅರ್ಥಕ್ರಿಯಾಕಾರಿತ್ವವುಂಟಲ್ಲವೇ ? ಎಂದರೂ ಬ್ರಹ್ಮವೊಂದೇ ಎಂದಾದ ಮೇಲೆ, ವ್ಯವಹಾರವೆಲ್ಲ ಕನಸೇ ಆದಂತಾಯಿತು. ನಮಗೆ ಬ್ರಹ್ಮವೊಂದೇ ಎಂಬ ವಾಕ್ಯಾರ್ಥವು ಪೂರ್ಣವಾಗಿ ತಿಳಿದರೆ, ಅದರಲ್ಲಿ ಶ್ರದ್ಧೆಯು ಹುಟ್ಟಿದರೆ, ಆಗ ವ್ಯಾವಹಾರಿಕ ಸತ್ತೆಯು ಪ್ರತ್ಯೇಕವಾಗಿಲ್ಲ ಎನ್ನುವುದು ಅರ್ಥವಾಗುವುದು.)

ನಿರ್ವಾಣಮೇವಮಖಿಲಂ ನಭ ಏವ ದೃಶ್ಯಂ ।
ತ್ವಂ ಚಾಹಮದ್ರಿನಿಚಯಾಶ್ಚ ಸುರಾಸುರಾಶ್ಚ ॥
ತಾದೃಗ್ಜಗತ್ಸಮವಲೋಕಯ ಯಾದೃಗಂಗ ।
ಸ್ವಪ್ನೇಽಥ ಜಂತುಮನಸಿ ವ್ಯವಹಾರಜಾಲಂ ॥ ೨೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು**
**ನಿರ್ವಾಣ ಪ್ರಕರಣೇ "ಸರ್ಗಬ್ರಹ್ಮೈಕ್ಯಪ್ರತಿಪಾದನಂ" ನಾಮ**
**ಅಷ್ಟಪಂಚಾಶಃ ಸರ್ಗಃ**

---

೨೩. ಆದರಿಂದ ಎಲ್ಲವೂ ನಿರ್ವಾಣವೇ ! ದೃಶ್ಯವೆಲ್ಲವೂ ಆಕಾಶವೇ ! ನೀನು, ನಾನು, ಈ ಬೆಟ್ಟಗಳ ಗುಂಪು, ಸುರಾಸುರರು, ಮೊದಲಾದವೂ ಅಷ್ಟೇ ! ಸ್ವಪ್ನವು ಕಳೆದು ಹೋದಮೇಲೆ, ಕನಸು ಕಂಡವನ ಮನಸ್ಸಿನಲ್ಲಿ ಕನಸಿನಲ್ಲಿ ನಡೆದುದೆಲ್ಲವೂ ಯಾವ ರೂಪವಾಗಿ ಇರುವುದೋ ಈ ಜಗತ್ತೆಲ್ಲವೂ ಅದೇ ರೂಪವಾಗಿ (ಕೇವಲ ಮಾನಸಿಕವೆಂದು) ಇರುವುದು ಎಂದು ನೋಡುವವನಾಗು.

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ**
**ನಿರ್ವಾಣ ಪ್ರಕರಣದಲ್ಲಿ "ಸರ್ಗಬ್ರಹ್ಮೈಕ್ಯಪ್ರತಿಪಾದನ" ಎಂಬ**
**ಐವತ್ತೆಂಟನೆಯ ಸರ್ಗವು.**

## ಏಕೋನಷಷ್ಟಿತಮಃ ಸರ್ಗಃ

**ಶ್ರೀ ರಾಮಉವಾಚ :—**

ಅನಂತರಂ ನಭಃಕೋಶಕುಟಿಕೋಟರತೋ ಮುನೇ ।
ತವ ಧ್ಯಾನಾತ್ಪ್ರಬುದ್ಧಸ್ಯ ವೃತ್ತಂ ವರ್ಷಶತೇನ ಕಿಂ ॥ ೧ ॥

**ಶ್ರೀ ವಸಿಷ್ಠ ಉವಾಚ:—**

ತತೋ ಧ್ಯಾನಾತ್ಪ್ರಬುದ್ಧೋಽಹಂ ಶ್ರುತವಾಂಸ್ತತ್ರ ನಿಃಸ್ವನಂ ।
ಮೃದು ವ್ಯಕ್ತಪದಂ ಹೃದ್ಯಂ ನಚ ವಾಚ್ಯನುಗೋ ಯತಃ ॥ ೨ ॥

ಸ್ತ್ರೀಸ್ವಭಾವಾದಿವ ಮೃದು ಮಧುರಂ ವಾ ನಿನಾದಿ ವಾ ।
ಸ್ವಲ್ಪಾಂಗತ್ವಾದನಿರ್ಹಾದಿ ಮಯಾ ತದ್ವಾಕ್ಯಮೂಹಿತಂ ॥ ೩ ॥

## ಐವತ್ತೊಂಭತ್ತನೆಯ ಸರ್ಗವು

**ಶ್ರೀ ರಾಮನು ಕೇಳಿದನು —**

೧ ಆ ಮೇಲೆ ಆಕಾಶ ಕೋಶದ ಗೋಡೆಯ ಟೊಳ್ಳಿನಲ್ಲಿ ಒಂದು ನೂರು ವರ್ಷಗಳು ಧ್ಯಾನಮಾಡುತ್ತ ಕುಳಿತಿದ್ದು ಬಹಿರ್ಮುಖನಾದ ನಿನಗೆ ಏನೇನಾಯಿತು?

**ಶ್ರೀ ವಸಿಷ್ಠನು ಹೇಳಿದನು :—**

೨. ಧ್ಯಾನದಿಂದ ಎದ್ದ ನನಗೆ ಒಂದು ಶಬ್ದವು ಕೇಳಿಸಿತು ಮೃದುವಾಗಿ, ಹಿತವಾಗಿ, ನುಡಿಗಳು ಕೇಳಿಸುತ್ತಿದ್ದರೂ ಅದು ಏನು ಹೇಳಿತು ಎಂಬುದು ಸ್ಪಷ್ಟವಾಗಿ ತಿಳಿಯಲಿಲ್ಲ

೩. ಅದು ಹೆಂಗುಸಿನ ಮಾತಿನಂತೆ ಮೃದುವಾಗಿ ಮಧುರವಾಗಿ ಗೊಣಗಿದ ಹಾಗೆ (ನಿನಾದಿ), ಮೆಲ್ಲಗೆ ಇದ್ದುದರಿಂದ, ನಾನು ಅದರ ಅರ್ಥವೇನಿರಬಹುದು ಎಂದು ಊಹಿಸಿದೆನು.

ಇಂದಿಂದಿರರುತಾಕಾರಂ ತಂತ್ರೀರಣಿತರಂಜನಂ ।
ನ ರೋದನಂ ಚ ಪಠನಂ ಬಿಸಕೋಶಸಮಸ್ವನಂ　　॥ ೪ ॥

ತದಾಕರ್ಣ್ಯಾಶು ತತ್ರೇದಮಹಂ ಚಿಂತಿತವಾನಥ ।
ಶಾಬ್ದಿಕಾನ್ವೀಕ್ಷಣಾತ್ಪಶ್ಯನ್ದಿಶೋ ದಶ ಸವಿಸ್ಮಯಃ　　॥ ೫ ॥

ವ್ಯೋಮ್ನೋಽಯಂ ಸಿದ್ಧಸಂಚಾರಮಾರ್ಗಶೂನ್ಯಾನ್ಯನಂತರಂ ।
ಭಾಗೋ ಯೋಜನಲಕ್ಷಾಣಿ ಸಮತಿಕ್ರಮ್ಯ ಸಂಸ್ಥಿತಃ　　॥ ೬ ॥

ತದಿಹೇದೃಗ್ವಿಧಸ್ಯ ಸ್ಯಾತ್ಕುತಃ ಶಬ್ದಸ್ಯ ಸಂಭವಃ ।
ಶಾಬ್ದಿಕಂ ನಚ ಪಶ್ಯಾಮಿ ಯತ್ನೇನಾಪಿ ವಿಲೋಕಯನ್　　॥ ೭ ॥

ಅನಂತಮಿದಮಾಶೂನ್ಯಂ ಪುರೋ ಮೇ ನಿರ್ಮಲಂ ನಭಃ ।
ಇಹ ಭೂತಂ ಪ್ರಯತ್ನೇನ ಪ್ರೇಕ್ಷ್ಯಮಾಣಂ ನ ದೃಶ್ಯತೇ　　॥ ೮ ॥

೪. ಅದು ತಂತಿಯನ್ನು ಮೀಟಿದ ಹಾಗಿತ್ತು; ದುಂಬಿಯ ಸದ್ದಿನಂತಿತ್ತು. ರೋದನವೂ ಅಲ್ಲ; ಪಠನವೂ ಅಲ್ಲ; ಕಮಲದಲ್ಲಿರುವ ದುಂಬಿಯ ಗಾನದಂತಿತ್ತು.

೫. ಅದನ್ನು ಕೇಳಿ, "ಯಾರು ಈ ಶಬ್ದವನ್ನು ಮಾಡಿದವರು?" ಎಂದು ವಿಸ್ಮಯದಿಂದ ಹತ್ತು ದಿಕ್ಕುಗಳನ್ನು ನೋಡುತ್ತ ಹೀಗೆ ಯೋಚಿಸಿದೆನು

೬. ನಾನು ಕುಳಿತಿರುವ ಈ ವ್ಯೋಮ ಖಂಡವು ಸಿದ್ಧ ಸಂಚಾರ ಮಾರ್ಗಗಳಿಂದ ಆಚೆಗೆ ಲಕ್ಷಾಂತರ ಯೋಜನ ದೂರದಲ್ಲಿರುವುದು.

೭. ಇಲ್ಲಿ ಈ ವಿಧವಾದ ಶಬ್ದವುಂಟಾಗುವುದಾದರೂ ಹೇಗೆ? ಈ ಶಬ್ದವನ್ನು ಮಾಡಿದವರೂ ಕೂಡ ಯತ್ನ ಮಾಡಿ ಹುಡುಕಿದರೂ ಕಾಣುವುದಿಲ್ಲವಲ್ಲ?

೮. ಈ ಆಕಾಶವು ನಿರ್ಮಲವಾಗಿ, ಅನಂತವಾಗಿ ಹರಡಿರುವುದು. ಪ್ರಯತ್ನಪಟ್ಟು ನೋಡಿದರೂ ಯಾವ ಪ್ರಾಣಿಯು ಕಾಣಿಸದಲ್ಲ!

ಯದೇತಿ ಚಿಂತಯಿತ್ವಾಹಂಭೂಯೋಭೂಯೋ ವಿಲೋಕಯನ್ ।
ಶಬ್ದೇಶ್ವರಂ ನ ಪಶ್ಯಾಮಿ ತದಾ ಚಿಂತಿತವಾನಿದಂ ॥ ೯ ॥

ಆಕಾಶ ಏವ ಭೂತ್ವಾಹಮಾಕಾಶೇನೈಕತಾಂ ಗತಃ ।
ಆಕಾಶಗುಣಶಬ್ದಾರ್ಥಾನ್ಕರೋಮ್ಯಾಕಾಶಕೋಶಕೇ ॥ ೧೦ ॥

ದೇಹಾಕಾಶಮಿಹ ಸ್ಥಾಪ್ಯ ಧ್ಯಾನೇನೇಹ ಯಥಾಸ್ಥಿತಂ ।
ಚಿದಾಕಾಸವಪುರ್ಭೂರ್ತ್ವಾ ಯಮ್ಯೈಕ್ಯಂ ವಾರಿವಾಂಬುನಾ ॥ ೧೧ ॥

ಚಿಂತಯಿತ್ವೇತ್ಯಹಂ ತ್ಯಕ್ತುಂ ದೇಹಂ ಪದ್ಮಾಸನಸ್ಥಿತಃ ।
ಆಸಂ ಸಮಾಧಿಮಾಧಾತುಂ ಪುನರಾಮೀಲಿತೇಕ್ಷಣಃ ॥ ೧೨ ॥

ತ್ಯಕ್ತ್ವಾ ಬಾಹ್ಯಾರ್ಥಸಂಸ್ಪರ್ಶಾನ್ಸೇಂದ್ರಿಯಾನಾಂತರಾನಪಿ ।
ಚಿತ್ತಾಕಾಶೋಽಹಮಭವಂ ಸಂವಿತ್ಸ್ಪಂದಮಯಾತ್ಮಕಃ ॥ ೧೩ ॥

೯. ಹೀಗೆ ಯೋಚಿಸುತ್ತಾ ಮತ್ತೆ ಮತ್ತೆ ನೋಡುತ್ತಿದ್ದರೂ ಶಬ್ದ ಮಾಡಿದವರು ಯಾರೂ ಕಾಣದಿರಲು ಹೀಗೆ ಚಿಂತಿಸಿದೆನು.

೧೦ ಆಕಾಶವೇ ಆಗಿ, ಆಕಾಶದೊಡನೆ ಬೆರೆತು ಹೋಗಿರುವ ನಾನೇ, ಆಕಾಶಗುಣವಾಗಿ ಅಲ್ಲಿರುವ ಶಬ್ದಾರ್ಥಗಳನ್ನು, ಆಕಾಶ ಕೋಶದಲ್ಲಿ ಮಾಡುತ್ತಿರುವೆನು. (ಅನುಭವಿಸುತ್ತಿರುವೆನು).

೧೧. ದೇಹಾಕಾಶವನ್ನು ಈಗ ಇರುವಂತೆಯೇ ಯಥಾಸ್ಥಿತವಾಗಿ ಇಟ್ಟು ಧ್ಯಾನದಿಂದ ಚಿದಾಕಾಶದೇಹಿಯಾಗಿ, ನೀರು ನೀರಿನಲ್ಲಿ ಸೇರುವಂತೆ ಈ ಆಕಾಶದಲ್ಲಿ ಐಕ್ಯವಾಗುವೆನು

೧೨. ಹೀಗೆಂದು ಯೋಚಿಸಿ, ದೇಹವನ್ನು ಬಿಡಬೇಕೆಂದು ಪದ್ಮಾಸನದಲ್ಲಿ ಕುಳಿತು, ಕಣ್ಣು ಮುಚ್ಚಿಕೊಂಡು ಸಮಾಧಿಗೆ ಹೋಗಬೇಕೆಂದುಕೊಂಡೆನು

೧೩. ಬಾಹ್ಯ ವಿಷಯಗಳಿಗೆ ಹೋಗದಂತೆ ಬಾಹ್ಯೇಂದ್ರಿಯಗಳನ್ನು ತಡೆದು, ವಿಷಯ ಧ್ಯಾನವಿಲ್ಲದಂತೆ ಅಂತರಿಂದ್ರಿಯಗಳನ್ನು ತಡೆದು ಸಂವಿತ್ಸ್ಪಂದಮಯನಾಗಿ ಚಿತ್ತಾಕಾಶನಾದೆನು.

ಕ್ರಮಾತ್ತದಪಿ ಸಂತ್ಯಜ್ಯ ಬುದ್ಧಿತತ್ತ್ವಪದಂ ಗತಃ ।
ಸಂಪನ್ನೋಽಹಂ ಚಿದಾಕಾಶೇ ಜಗಜ್ಜಾಲೈಕದರ್ಪಣಃ ॥ ೧೪ ॥

ತತಸ್ತೇನ ಸ್ವಭಾವೇನ ಭೂತವ್ಯೋಽಪ್ಯೈಕತಾಮಹಂ ।
ಸಂಪ್ರಯಾತೋಽಂಬುನೈವಾಂಬು ಸೌರಭಂ ಸೌರಭೇಣ ವಾ ॥ ೧೫ ॥

ಸಂಪನ್ನೋಽಥ ಮಹಾಕಾಶಂ ವ್ಯಾಪ್ಯಾನಂತೋಽಥ ಸರ್ವಗಃ ।
ಅನಾಕಾರೋಽಪ್ಯನಾಧಾರಃ ಸರ್ವಾರ್ಥಾಧಾರತಾಂ ಗತಃ ॥ ೧೬ ॥

ಅಹಂ ತ್ರೈಲೋಕ್ಯವೃಂದಾನಿ ಸಂಸಾರಾಣಾಂ ಶತಾನಿ ಚ ।
ತತ್ರ ಬ್ರಹ್ಮಾಂಡಲಕ್ಷಾಣಿ ಪಶ್ಯಾಮ್ಯಗಣಿತಾನ್ಯಪಿ ॥ ೧೭ ॥

ಪರಸ್ಪರ ಮದೃಷ್ಟಾನಿ ಮಿಥಃ ಶೂನ್ಯಮಲಾನಿ ಚ ।
ನಾನಾಚಾರವಿಚಾರಾಣಿ ಶೂನ್ಯಾನ್ಯೇವ ಪರಸ್ಪರಂ ॥ ೧೮ ॥

---

೧೪. ಕ್ರಮವಾಗಿ ಅದನ್ನು ಬಿಟ್ಟು ಬುದ್ಧಿತತ್ವವನ್ನು ಸೇರಿ ಅದನ್ನು ದಾಟಿ ಚಿದಾಕಾಶವನ್ನು ಸೇರಿ, ಜಗಜ್ಜಾಲಗಳನ್ನೆಲ್ಲಾ ಪ್ರತಿಬಿಂಬಿಸುವ ಏಕದರ್ಪಣ ನಾದೆನು

೧೫. ಅಲ್ಲಿ ಆ ಸ್ವ-ಭಾವವಾಗಿ, ನೀರಿನೊಡನೆ ನೀರೂ ಪರಿಮಳದೊಡನೆ ಪರಿಮಳವೂ ಬೆರೆಯುವಂತೆ, ಭೂತಾಕಾಶದೊಡನೆ ಐಕ್ಯವನ್ನು ಹೊಂದಿದೆನು

೧೬ ಅಲ್ಲಿಂದ ಮಹಾಕಾಶವನ್ನು ಸೇರಿ ಅಲ್ಲಿ ವ್ಯಾಪ್ತಿಯನ್ನು ಪಡೆದು ಅನಂತನೂ, ಸರ್ವಗತನೂ, ಆಕಾಶರಹಿತನೂ ಆಗಿ ನಿರಾಧಾರನಾಗಿ ಸರ್ವಾರ್ಥಾ ಧಾರನಾದೆನು.

೧೭. ಅಲ್ಲಿ ಗುಂಪುಗುಂಪಾಗಿರುವ,ತ್ರೈಲೋಕ್ಯಗಳು ನೂರಾರು ಸಂಸಾರಗಳು (ಸೃಷ್ಟಿಗಳು), ಲಕ್ಷಾಂತರವಾಗಿ, ಲೆಕ್ಕವಿಲ್ಲದಿರುವ ಬ್ರಹ್ಮಾಂಡಗಳು, ನನಗೆ ಕಾಣಿಸಿದುವು.

೧೮. ಅವು ಒಂದನ್ನೊಂದು ಕಾಣವು: ಕಂಡರೂ ಅವು ನಿರ್ಮಲವಾದ ಆಕಾಶವಾಗಿ ಕಾಣುವುವು. ಅವುಗಳಲ್ಲೆಲ್ಲಾ ಆಚಾರವಿಚಾರಗಳು ಬೇರೆ ಬೇರೆ

ಸ್ವಪ್ನರೂಪಾಣಿ ಸುಪ್ತಾನಾಂ ತುಲ್ಯಕಾಲಂ ನೃಣಾಮಿವ ।
ಮಹಾರಂಭಾನುವೃಷ್ಟಾನಿ ಶೂನ್ಯಾನಿ ಚ ಪರಸ್ಪರಂ ॥ ೧೯ ॥

ಜಾಯಮಾನಾನಿ ನಶ್ಯಂತಿ ವರ್ಧಮಾನಾನಿ ಭೂರಿಶಃ ।
ವರ್ತಮಾನಾನ್ಯತೀತಾನಿ ಭವಿಷ್ಯಂತಿ ಚ ಸರ್ವಶಃ ॥ ೨೦ ॥

ಅನೇಕಚಿತ್ರಜಾಲಾನಿ ಮಹಾಭಿತ್ತೀನಿ ಖಾನಿ ಚ ।
ಮನಸೇವೋಗ್ರರಾಜ್ಯಾನಿ ಕೃತಾನಿ ವಿವಿಧೈರ್ಜನೈಃ ॥ ೨೧ ॥

ನಿರಾವರಣರೂಪಾಣಿ ತಥೈಕಾವರಣಾನಿ ಚ ।
ಪಂಚಾವರಣಯುಕ್ತಾನಿ ಷಡೇಕಾವರಣಾನಿ ಚ ॥ ೨೨ ॥

ದಶಾವರಣಚಿತ್ರಾಣಿ ಷೋಡಶಾವರಣಾನಿ ಚ
ಚತುರ್ವಿಂಶತ್ಯಾವೃತೀನಿ ಷಟ್‌ತ್ರಿಂಶತ್ಯಾವೃತಾನಿ ಚ ॥ ೨೩ ॥

ಶೂನ್ಯಾನಿ ಭೂತಪೂರ್ಣಾನಿ ಪಂಚಭೂತಮಯಾನ್ಯಪಿ ।
ಏಕಪೃಥ್ವ್ಯಾದಿಭೂತಾನಿ ಚತುಃ ಪೃಥ್ವ್ಯಾದಿಕಾನಿ ಚ ॥ ೨೪ ॥

---

ಯಾಗಿರುವುವು. ಆದರೂ ಒಂದರ ದೃಷ್ಟಿಗೆ ಇನ್ನೊಂದು ಶೂನ್ಯವಾಗಿ ಕಾಣುವುವು

೧೯. ಒಂದೇ ಕಾಲದಲ್ಲಿ ಒಂದೇ ಕಡೆ ಮಲಗಿರುವ ಜನರಿಗೆ ಒಬ್ಬೊಬ್ಬರಿಗೂ ಬೇರೆ ಬೇರೆಯಾಗಿ ಕಾಣುವ ಕನಸಿನಂತೆ ಅವು : ಅವರವರಿಗೆ ಬೇಕಾದಷ್ಟು ಕಾರ್ಯಗಳಿಂದ ತುಂಬಿದ್ದರೂ ಪರಸ್ಪರವಾಗಿ ಶೂನ್ಯವಾಗಿರುವಂತೆ ಇವೆ.

೨೦. ಅವು ಎಷ್ಟೋ ಹುಟ್ಟಿ ಬೆಳೆದು ನಾಶವಾಗುತ್ತಿರುವುವು: ಇರುವವೆಲ್ಲವೂ ಎಲ್ಲಾ ವಿಧದಲ್ಲೂ ಅತೀತವಾಗುತ್ತಿರುವುವು.

೨೧. ಆ ಬ್ರಹ್ಮಾಂಡಗಳು ಅನೇಕಾನೇಕ ಚಿತ್ರವಿಚಿತ್ರಗಳಿಂದ ಕೂಡಿರುವುವು, ಭಾರಿಯಾದ ಮಹಾ ಭಿತ್ತಿಗಳುಳ್ಳವು. ಆಕಾಶಮಯವಾದವು. ಅಲ್ಲಿರುವ ವಿವಿಧರಾದ ಜನಗಳ ಮನೋವೃತ್ತಿಗಳಿಂದ ಉಗ್ರವಾಗಿ ಪರಿಣತವಾದವು.

೨೨–೨೩. ಕೆಲವು ಆವರಣಗಳಿಲ್ಲದುವು: ಕೆಲವು ಆವರಣವುಳ್ಳವು. ಐದು, ಏಳು ಆವರಣಗಳುಳ್ಳವು ಇನ್ನು ಕೆಲವು. ದಶಾವರಣ ಚಿತ್ರಗಳು ಕೆಲವು. ಷೋಡಶಾ

ತ್ರಿಃಪೃಥ್ವ್ಯಾದೀನಿ ಚಾನ್ಯಾನಿ ದ್ವಿಃಪೃಥ್ವ್ಯಾದೀನ್ಯಥಾಪಿ ಚ ।
ತಥಾ ಸಪ್ತಮಹಾಭೂತಾನ್ಯೇಕಜಾತಿಮಯಾನಿ ಚ ॥ ೨೫ ॥

ತ್ವಾದೃಶಾನುಭವಾಭೋಗವಿರುದ್ಧಾತಿದಶಾನಿ ತು ।
ತಥಾ ನಿತ್ಯಾಂಧಕಾರಾಣಿ ಸೂರ್ಯಾದಿರಹಿತಾನಿ ಚ ॥ ೨೬ ॥

ತಥಾ ಮೀಲಿತಸರ್ಗಾಣಿ ಏಕನಾಥಾವೃತಾನಿ ಚ ।
ವಿಲಕ್ಷಣಪ್ರಜೇಶಾಂಶವಿಚಿತ್ರಾಚಾರವಂತಿ ಚ ॥ ೨೭ ॥

ತಥಾ ನಿರ್ವೇದಶಾಸ್ತ್ರಾಣಿ ನಿಃಶಾಸ್ತ್ರಾಣಿ ತಥೈವ ಚ ।
ಕೃಮಿಕ್ರಮಸಮಾರಂಭದೇವಾದಿಪ್ರಾಣಿಮಂತಿ ಚ ॥ ೨೮ ॥

---

ವರಣದವು ಕೆಲವು. ಇಪ್ಪತ್ತನಾಲ್ಕು, ಮೂವತ್ತಾರು ಆವರಣಗಳುಳ್ಳವು ಕೆಲವು. ಶೂನ್ಯಗಳು ಕೆಲವು. ಪ್ರಾಣಿಗಳಿಂದ ಕೂಡಿದವು ಕೆಲವು. ಪಂಚಭೂತಮಯ ಗಳಾದವು ಕೆಲವು. ಪೃಥಿವ್ಯಾದಿ ಒಂದೊಂದೇ ಭೂತವುಳ್ಳವು ಕೆಲವು. ಪೃಥಿವ್ಯಾದಿ ಚತುರ್ಭೂತಗಳುಳ್ಳವು ಕೆಲವು. ಆದರಂತೆ ಮೂರು ಭೂತಗಳು, ಎರಡು ಭೂತಗಳು, ಉಳ್ಳವೂ ಉಂಟು. ಆದರಂತೆಯೇ ಏಕ ಜಾತಿಗಳಾದ ಭೂತಗಳು, ಸಪ್ತ ಮಹಾಗಳೂ ಉಳ್ಳವೂ ಉಂಟು.

೨೬. ನಿಮ್ಮಂಥವರ ಅನುಭವಕ್ಕೆ ವಿರುದ್ಧವಾಗಿ, ಊಹೆಗೂ ಎಟಕದಂಥ ಸೂರ್ಯಾದಿಗಳೇ ಇಲ್ಲದೆ ನಿತ್ಯಾಂಧಕಾರವುಳ್ಳವು ಇನ್ನೂ ಕೆಲವು.

೨೭. ಹಾಗೆಯೇ (ಪ್ರಲಯ ಸುಷುಪ್ತಿ ಪ್ರಾಯಗಳಾಗಿರುವ) ಮೀಲಿತ ಸ್ವರ್ಗಗಳು ಅಷ್ಟು, ಅವು ಹುಟ್ಟಿ ಬಂದಂದಿನಿಂದಲೂ ಒಬ್ಬನೇ ನಾಥನಾಗಿರುವ ಏಕನಾಥ ಬ್ರಹ್ಮಾಂಡಗಳಷ್ಟು, ವಿಲಕ್ಷಣರಾದ ಪ್ರಜೇಶರಿಂದ ಹುಟ್ಟಿ ಬಂದ ವಿಚಿತ್ರಾಚಾರಗಳನ್ನುಳ್ಳ ಪ್ರಜೆಗಳಿರುವ ಬ್ರಹ್ಮಾಂಡಗಳಿನ್ನಷ್ಟು.

೨೮. ಅವುಗಳಲ್ಲಿ ಕೆಲವು ವೇದಶಾಸ್ತ್ರಗಳಿಲ್ಲದವು: ಯಾವ ಶಾಸ್ತ್ರಗಳೂ ಇಲ್ಲದವು ಇನ್ನು ಕೆಲವು: ಕೃಮಿಗಳಿಂದ ಹಿಡಿದು ದೇವತೆಗಳವರೆಗೂ ಇರುವ ಪ್ರಾಣಿ ಗಳುಳ್ಳವು ಇನ್ನು ಕೆಲವು.

ಜಾತ್ಯಾ ತು ಪಾರಂಪರ್ಯೇಣ ಸಂಕೇತಾಚಾರವಂತಿ ಚ ।
ತಥಾ ನಿತ್ಯಪ್ರಕಾಶಾನಿ ಜ್ವಲಿತಾಗ್ನಿಮಯಾನಿ ಚ ॥ ೨೯ ॥

ತಥಾ ಜಲೈಕಪೂರ್ಣಾನಿ ಪವನೈಕಮಯಾನಿ ಚ ।
ಸ್ತಬ್ಧಾನಿ ಪರಮಾಕಾಶೇ ವಹಂತಿ ಚ ತಥಾನಿಶಂ ॥ ೩೦ ॥

ಜಾಯಮಾನಾನಿ ಪುಷ್ಯಂತಿ ಪರಿಪುಷ್ಟಾನಿ ಚಾಭಿತಃ ।
ತಿರ್ಯಗ್ಗಚ್ಛಂತಿ ಚಾನ್ಯಾನಿ ಪೂರ್ಣಸರ್ವಮಯಾನ್ಯಪಿ ॥ ೩೧ ॥

ದೇವಮಾತ್ರೈಕಸರ್ಗಾಣಿ ನರಮಾತ್ರಮಯಾನಿ ಚ ।
ದೈತ್ಯವೃಂದಮಯಾನ್ಯೇವ ಕೃಮಿನಿರ್ವಿವರಾಣಿ ಚ ॥ ೩೨ ॥

ಅಂತರಂತಸ್ತದಂತಶ್ಚ ಸ್ವಕೋಟೇಃ ಸ್ವಣುಕಂಪ್ರತಿ ।
ಜಾತಾನಿ ಜಾಯಮಾನಾನಿ ಕದಲೀದಲಪೀಠವತ್ ॥ ೩೩ ॥

ಪರಸ್ಪರಮದೃಷ್ಟಾನಿ ನಾನುಭೂತಾನಿ ವೈ ಮಿಥಃ ।
ಸೈನಿಕಸ್ವಪ್ನಜಾಲಾನಿ ಜಾತಾನೀವ ಮಹಾಂತ್ಯಪಿ ॥ ೩೪ ॥

---

೨೯–೩೦. ಜಾತಿಯಿಂದಲೂ ಪರಂಪರೆಯಿಂದಲೂ ಸಂಕೇತವಾದ ಆಚಾರವುಳ್ಳ ಪ್ರಜೆಗಳುಳ್ಳವು ಕೆಲವು. ಅಗ್ನಿ ಕುಂಡಗಳಂತೆ ಉರಿಯುತ್ತಾ ಯಾವಾಗಲೂ ಪ್ರಕಾಶಿಸುತ್ತಿರುವವು ಕೆಲವು. ಇನ್ನು ಕೆಲವು ಜಲಪೂರ್ಣವಾದವು. ಬರಿಯ ವಾಯುವಿನಿಂದಲೇ ತುಂಬಿರುವವು ಇನ್ನು ಕೆಲವು. ಇನ್ನು ಕೆಲವು ಸ್ತಬ್ಧವಾಗಿ ನಿಂತಿರುವವು: ಇನ್ನು ಕೆಲವು ಪರಮಾಕಾಶದಲ್ಲಿ ಯಾವಾಗಲೂ ತಿರುಗುತ್ತಲೇ ಇರುವುವು.

೩೧. ಕೆಲವು ಹುಟ್ಟುತ್ತಿವೆ. ಕೆಲವು ಹುಟ್ಟಿ ಬೆಳೆಯುತ್ತಿವೆ ಇನ್ನು ಕೆಲವು ಬೆಳೆದು ನಿಂತಿವೆ ಪೂರ್ಣವೂ ಸರ್ವಮಯವೂ ಆಗಿದ್ದರೂ ಕೆಳಕ್ಕೆ ಇಳಿಯುತ್ತಿರುವವು ಇನ್ನು ಕೆಲವು

೩೨. ಬರಿಯ ದೇವತೆಗಳಿಂದ ತುಂಬಿದವು ಕೆಲವು: ಬರಿಯ ಮನುಷ್ಯರಿಂದ ತುಂಬಿದವು ಇನ್ನು ಕೆಲವು: ಹೀಗೆಯೇ ಕೇವಲ ದೈತ್ಯರಿಂದ, ಕೃಮಿಗಳಿಂದ ತುಂಬಿದವು ಇನ್ನು ಕೆಲವು.

೩೩–೩೪. ಒಂದರೊಳಗೆ ಒಂದು, ಅದರೊಳಗೆ ಇನ್ನೊಂದು, ಅಣುವಿ

ವಿವಿಧಾನ್ಯನ್ಯಸಂತಾನಿ ಸ್ವಚ್ಛಾಕಾಶಾತ್ಮಕಾನ್ಯಲಂ ।
ಅನ್ಯೋಽನ್ಯಮನ್ಯವೃತ್ತೀನಿ ನ ಮಿಥೋನ್ಯಸ್ಥಿತೀನಿ ಚ ॥ ೨೫ ॥

ಮಿಥಶ್ಚಾನ್ಯಾನ್ಯಶಾಸ್ತ್ರಾಣಿ ಮಿಥೋಽನಂತಾನಿ ಯಾನಿ ಚ ।
ಅನ್ಯೋಽನ್ಯಸಂನಿವೇಶಾನಿ ಮಿಥೋಽನ್ಯೋಽನ್ಯಾನಿ ಯಾನಿ ಚ ॥ ೨೬ ॥

ಅನ್ಯೋಽನ್ಯಂ ಪರಲೋಕಾನಿ ಮಿಥಃ ಸಿದ್ಧಪುರಾಣಿ ಚ ।
ಅನ್ಯಾದೃಶಮಹಾಭೂತಾನ್ಯನ್ಯಾದೃಗ್ಗಿರೀಣಿ ಚ ॥ ೨೭ ॥

ತ್ವಾದೃಶಾನುಭವೇಹಾನಾಮಗಮ್ಯಾಭ್ಯಾಗಕಾನಿ ಚ ।
ಅಸಮಂಜಸರೂಪಾಣಿ ಕಥ್ಯಮಾನಾನಿ ಮಾದೃಶೈಃ ॥ ೨೮ ॥

ಅಣುವತ್ಸ್ಫೂರ್ಯಮಾಣಾನಿ ಚಿದಾದಿತ್ಯಾಂಶುಮಂಡಲೇ ।
ಪರಮಾರ್ಥತ್ರಿಯೋ ವ್ಯೋಮ್ನಿ ರಶ್ಮಿಜಾಲಾನಿ ಕುಂಡಲೇ ॥ ೨೯ ॥

ನಲ್ಲಿಯೂ ಬಾಳೆಯ ಬುಡದಂತೆ ಜಾತಗಳೂ ಜಾಯಮಾನಗಳೂ ಆದ ನಾನಾ ಬ್ರಹ್ಮಾಂಡಗಳು, ಪರಸ್ಪರ ಅದೃಷ್ಟಗಳಾಗಿ, ಅನನುಭೂತಗಳಾಗಿ, ಸೈನಿಕರ ಸ್ವಪ್ನಗಳಂತೆ ಹುಟ್ಟಿದ್ದರೂ ಮರಣಾಂತಗಳಾಗಿರುವವು ಎಷ್ಟೋ ಉಂಟು.

೨೫-೨೬. ಆ ಬ್ರಹ್ಮಾಂಡಗಳು ವಿಚಿತ್ರಗಳು. ಅನಂತಗಳು, ಸ್ವಚ್ಛವಾದ ಆಕಾಶದಂತಿರುವುವು. ಒಂದಕ್ಕೊಂದು ಹೊಂದಿಕೆಯಿಲ್ಲದೆ, ಅನ್ಯವೃತ್ತಿಗಳೂ ಅನ್ಯಸ್ಥಿತಿಗಳೂ ಉಳ್ಳವು ಅನಂತಗಳಾಗಿ ಅನ್ಯೋನ್ಯಗಳೂ ಅನ್ಯಾನ್ಯಗಳೂ ಆದ ಸಂನಿವೇಶಗಳೂ ಶಾಸ್ತ್ರಗಳೂ ಉಳ್ಳವು ಅವು

೨೭. ಅವುಗಳಲ್ಲಿ ಒಂದಕ್ಕೆ ಇನ್ನೊಂದು ಪರಲೋಕವೂ ಸಿದ್ಧಪುರವೂ ಆದವೂ ಉಂಟು. (ಇಲ್ಲಿ ಸತ್ತು ಅಲ್ಲಿ ಹುಟ್ಟುವ ಹಾಗಿರುವುದು ಪರಲೋಕ: ಇಲ್ಲಿ ಮಾಡಿದ ತಪಃಫಲವನ್ನು ಅಲ್ಲಿ ಅನುಭವಿಸುವ ಹಾಗಿರುವುದು ಸಿದ್ಧಪುರ.( ಪರಸ್ಪರಂ ಪ್ರತಿ ಅಂತರ್ಧಾನ ಶಕ್ತಿಯೋಗಾನ್ಮಿಥಃ ಸಿದ್ಧನಗರ ಪ್ರಾಯಾಣಿ.) ಇನ್ನೆಲ್ಲಿಯೂ ಇಲ್ಲದ ಮಹಾಭೂತಗಳೂ ಇನ್ನೆಲ್ಲಿಯೂ ಕಾಣದ ವಿಕ್ಷರ್ವತಗಳೂ ಉಳ್ಳವೂ ಉಂಟು

೨೮-೨೯. ನಿಮ್ಮಂತಹವರ ಅನುಭವ, (ಊಹೆ) ಈಹೆಗಳಿಗೂ ಅಗಮ್ಯವಾದವು ಕೆಲವು· ಗಮ್ಯವಾದವು ಕೆಲವು. ಅಸಮಂಜಸವಾದವು ಕೆಲವು. ನಮ್ಮಂಥ

ಕಾನಿಚಿತ್ತಾನಿ ತಾನ್ಯೇವ ಭೂತ್ವಾ ಭೂತ್ವಾ ಭವತ್ಯಲಂ ।
ಕಾನಿಚಿತ್ತಾದೃಶಾನ್ಯೇವ ಜಾತಾನಿ ವನಪರ್ಣವತ್ ॥ ೪೦ ॥

ಅನ್ಯೋನ್ಯತ್ವಾಚ್ಚ ಸದೃಶಾನ್ಯನ್ಯಾನಿ ಸದೃಶಾನ್ಯಪಿ ।
ಕಂಚಿತ್ಕಾಲಂ ಸುಸದೃಶಾನ್ಯನ್ಯಾನ್ಯೇವ ಚ ಕಾನಿಚಿತ್ ॥ ೪೧ ॥

ಫಲಾನಿ ತಾನ್ಯಸಂತಾನಿ ಪರಮಾರ್ಥಮಹಾತರೋಃ ।
ಅನನ್ಯಾನ್ಯೇವ ಚಾನ್ಯಾನಿ ತನ್ಮಯಾನ್ಯೇವ ವೈ ತತಃ ॥ ೪೨ ॥

ಕಾನಿ ಚಿತ್ಸ್ವಲ್ಪಕಲ್ಪಾನಿ ದೀರ್ಘಕಲ್ಪಾನಿ ಕಾನಿಚಿತ್ ।
ಅನ್ಯಾನ್ಯನಿಯತಂ ಭೂರಿ ನಿಯತಂ ಭೂರಿ ಕಾನಿಚಿತ್ ॥ ೪೩ ॥

ಅನ್ಯಾನ್ಯಜ್ಞಾತಕಾಲಾನಿ ಯದೃಚ್ಛಾವಶತಃ ಸ್ವಯಂ ।
ಜಾಯಮಾನಾತಿ ಪುಷ್ಪಾನಿ ಸುಸ್ಥಿರಾಣಿ ಸ್ಥಿತಾನಿ ಚ ॥ ೪೪ ॥

ತಾನಿ ಶೂನ್ಯತ್ವಜಾಲಾನಿ ಪರಮಾಕಾಶಕೋಶಕೇ ।
ಅಪರಿಜ್ಞಾತಕಾಲಾನಿ ರೂಢಾನ್ಯಜ್ಞಾತದೋಶಕೇ ॥ ೪೫ ॥

---

ವರು ಹೇಳಿದಂಥವು ಕೆಲವು ಚಿದಾದಿತ್ಯನ ಕಿರಣ ಮಂಡಲದಲ್ಲಿ ಅಣುವಂತೆ ಇರುವುವು ಕೆಲವು. ಪರಮಾರ್ಥ ಲಕ್ಷ್ಮಿಯ ಕುಂಡಲದಂತೆ ಇರುವ ಆಕಾಶದಲ್ಲಿ ಕಿರಣಜಾಲಗಳಂತೆ ಇರುವವು ಇನ್ನು ಕೆಲವು

೪೦-೪೧. ಕೆಲವು ಅವೇ ಅವೇ ಹಾಗೆ ಹಾಗೇ ಹುಟ್ಟಿ ಹುಟ್ಟಿ ಸಾಯುತ್ತಿರುವುವು. ಇನ್ನು ಕೆಲವು ಎಲೆಗಳಂತೆ ಸಜಾತೀಯವಾಗಿ ಹುಟ್ಟಿ ಹುಟ್ಟಿ ಸಾಯುತ್ತಿರುವುವು. ಅನ್ಯೋನ್ಯ ಸದೃಶಗಳು ಕೆಲವು. ಸದೃಶಗಳು ಕೆಲವು ಕೆಲವು ಕಾಲ ಅನ್ಯೋನ್ಯ ಸದೃಶಗಳಾಗಿರುವವು ಕೆಲವು. ಕೆಲವು ಕಾಲ ಅನ್ಯೋನ್ಯ ಅಸದೃಶಗಳಾಗಿರುವವು ಕೆಲವು

೪೨-೪೩. ಅವೆಲ್ಲವೂ ಪರಮಾರ್ಥ ಮಹಾ ತರುವಿನ ಫಲಗಳು ಅನನ್ಯಗಳು ಕೆಲವು: ಅನ್ಯಗಳು ಕೆಲವು. ತನ್ಮಯಗಳು ಕೆಲವು ಕೆಲವು ಸ್ವಲ್ಪ ಕಲ್ಪಗಳು: ಕೆಲವು ದೀರ್ಘ ಕಲ್ಪಗಳು: ಇನ್ನು ಕೆಲವು ಯಾವ ನಿಯತಿಯೂ ಇಲ್ಲದವು. ನಿಯತಿಯುಳ್ಳವು ಇನ್ನು ಕೆಲವು

೪೪-೪೫. ಸ್ವಚ್ಛಂದವಾಗಿ ಇರಬಲ್ಲ ಕೆಲವು ಕಾಲ ನಿಯತಿಗೆ ಒಳ ಪಡದೆ

ಅಬ್ಧ್ಯರ್ಕಾಕಾಶಮೇರ್ವಾದಿ ಶತೈರಾವಲಿತಾಸ್ಯಲಂ ।
ಚಿತ್ಚಮತ್ಕಾರಖೇ ಸ್ವಪ್ನಜಾಲಾನ್ಯಾಭಾಂತಿ ಚಾವಿಲಂ ॥ ೪೬

ಅನುಭೂತೇರ್ಭ್ರಮಾತ್ಮತ್ವಾತ್ಕಾರಣಾನಾಮಭಾವತಃ ।
ಪೃಥ್ವ್ಯಾದೀನಾಮಹೇತೂನಾಮತ್ಯಂತಂ ಸಂತ್ಯಸಂತಿ ಚ ॥ ೪೭ ॥

ಮೃಗತೃಷ್ಣಾಂಬುಭರವದ್ದ್ವಿಚಂದ್ರವ್ಯೋಮವರ್ಣವತ್ ।
ಸಂಪನ್ನಾನಿ ನ ಸತ್ಯಾನಿ ಸತ್ಯಾನ್ಯಸ್ಯಾನುಭೂತಿತಃ ॥ ೪೮ ॥

ಚಿತ್ಸಂಕಲ್ಪನಭಸ್ಯೇವ ಭಾಸಮಾನಾನಿ ಭೂರಿಶಃ ।
ವಾಸನಾವಾತನುನ್ನಾನಿ ವಿಲುಠಂತ್ಯಾತ್ಮಚೇಷ್ಟಿತೈಃ ॥ ೪೯ ॥

---

ಇರುವುವು. ಜಾಯಮಾನಗಳೂ ಪುಷ್ಪಗಳೂ ಸುಸ್ಥಿರಗಳಾಗಿ ಆದವು ಇನ್ನು ಕೆಲವು. ಸೂಕ್ಷ್ಮಗಳಾಗಿ ಅಜ್ಞಾನವೆಂಬ ದೋಷವೊಂದೇ ಇರುವ ಪರಮಾಕಾಶ ಕೋಶದಲ್ಲಿ ಅನಾದಿ ಕಾಲದಿಂದಲೂ ಇರುವವು ಇನ್ನು ಕೆಲವು.

೪೬–೪೭ ಇವೆಲ್ಲವೂ ಅಬ್ಧಿ, ಅರ್ಕ, ಆಕಾಶ, ಮೇರು ಆದಿ ನೂರಾರು ಪದಾರ್ಥಗಳಿಂದ ಕೂಡಿದವಾಗಿ, ಚಿತ್ತಿನ ಚಮತ್ಕಾರದಿಂದ ಆದ ಆಕಾಶದಲ್ಲಿ ಸ್ವಪ್ನಗಳಂತೆ ಕಾಣಿಸುತ್ತಿರುವುವು. ಅಹೇತುಗಳಾದ ಪೃಥಿವ್ಯಾದಿಗಳ ಅನುಭವವು ಭ್ರಮಾತ್ಮಕವಾಗಿರುವುದರಿಂದಲೂ, ಕಾರಣಗಳು ಇಲ್ಲವಾದ್ದರಿಂದಲೂ, ಈ ಬ್ರಹ್ಮಾಂಡಗಳೆಲ್ಲಾ (ಅವುಗಳಲ್ಲಿ ಇರುವವರ ದೃಷ್ಟಿಯಿಂದ) ಇರುವುವು (ಸತ್ಯದೃಷ್ಟಿಯಿಂದ) ಇಲ್ಲದಿರುವುವು

೪೮. ಅಲ್ಲಿರುವವರ ಅನುಭೂತಿಯ ದೃಷ್ಟಿಯಿಂದ ಅವು ಸತ್ಯಗಳೇ ಆದರೂ ಅವು (ಕನಸಿನಂತೆ) ಅಸತ್ಯಗಳು. ಮೃಗತೃಷ್ಣಾ ಜಲದ ಪ್ರವಾಹದಂತೆ, ದ್ವಿಚಂದ್ರರಂತೆ, ವ್ಯೋಮದಲ್ಲಿ ಕಾಣುವ ವರ್ಣದಂತೆ, ಇವುಗಳ ಇರುವಿಕೆಯು

೪೯. ಚಿತ್ತಿನ ಸಂಕಲ್ಪದ ಆಕಾಶದಲ್ಲಿಯೇ ಇವೆಲ್ಲವೂ ಬೇಕಾದ ಹಾಗೆ ವಿರಾಜಿಸುತ್ತಿರುವುವು ವಾಸನಾ ಎಂಬ ಮಹಾ ವಾಯುವು ಇವುಗಳನ್ನು ಹೊತ್ತುಕೊಂಡು ತಿರುಗಿಸುತ್ತಿರಲು, ತಮ್ಮ ತಮ್ಮ ವ್ಯಾಪಾರಗಳಿಂದ ಹೊರಳಾಡುತ್ತಿರುವುವು.

ಸುರಾಸುರಾದಿಮಶಕಾ ಬಹುಶೋದುಂಬರದ್ರುಮೇ ।
ಫಲಾನಿ ರಸಪೂರ್ಣಾನಿ ಘೂರ್ಣಮಾನಾನಿ ಮಾರುತೈಃ ॥ ೫೦ ॥

ಅಭಿಜಾತಸ್ವಭಾವಸ್ಯ ಸರ್ಗಾರಂಭಕರಸ್ಯ ಚ ।
ಶುದ್ಧಚಿತ್ತತ್ತ್ವಬಾಲಸ್ಯ ಸಂಕಲ್ಪನಗರಾಣಿ ಖೇ ॥ ೫೧ ॥

ತ್ವಮಹಂ ಸ ಇದಂ ಚೇತಿ ಧಿಯಾ ಬಲದೃಢಾನ್ಯಲಂ ।
ಸಂಪನ್ನಾನ್ಯರ್ಕದೀಪ್ತ್ಯೇವ ಪಂಕಕ್ರೀಡನಕಾನಿ ಚ ॥ ೫೨ ॥

ವೃತ್ತಾನಿ ರಸಶಾಲಿನ್ಯಾ ನಿಯತ್ಯಾ ನಿತ್ಯತೃಪ್ತಯಾ ।
ವನಾನ್ಯಗ್ರಫಲಾನೀವ ವಸಂತರಸಲೇಖಯಾ ॥ ೫೩ ॥

ಮಹಾಕರ್ತೃಣ್ಯಕರ್ತೃಣಿ ನ ಕೃತಾನ್ಯೇವ ಖಾನಿ ವಾ ।
ಸ್ವಯಂ ಸಂಪನ್ನರೂಪಾಣಿ ಚಿದ್ವ್ಯೋಮ್ನೈವ ಕೃತಾನಿ ವಾ ॥ ೫೪ ॥

---

೫೦. ಈ (ಚಿತ್ತೆಂಬ)ಔದುಂಬರದ್ರುಮದಲ್ಲಿ ಸುರಾಸುರಾದಿಗಳು ಮಶಕಗಳು. ಬ್ರಹ್ಮಾಂಡಾದಿಗಳು ರಸಪೂರ್ಣವಾದ ಫಲಗಳು ಈ ಮಶಕಗಳು ಆ ಫಲಗಳಿಗೆ ಮುತ್ತಿರುವುವು.

೫೧. ಅಭಿಜಾತ ಸ್ವಭಾವನಾ ಸರ್ಗವೆಂಬ ಆಟವಾಡಲು ಹೊರಟಿರುವ ಶುದ್ಧ ಚಿತ್ತತ್ವವೆಂಬ ಬಾಲನ ಸಂಕಲ್ಪನಗರಗಳು ಇವು.

೫೨. ನೀನು, ನಾನು, ಅವನು, ಇದು, ಎಂಬ ಬುದ್ಧಿಯು ಇರುವವರೆಗೂ ಇವೆಲ್ಲವೂ ಬಲವಾಗಿ ದೃಢವಾಗಿ ಇರುವುವು. ಸೂರ್ಯನ ಬಿಸಿಲಿನಿಂದ ಆದ ಕೆಸರು ನೀರಿನ ಆಟದ ಕೊಳಗಳಂತೆ (?) ಇವೂ ಆದವು.

೫೩. ರಸಶಾಲಿನಿಯೂ ನಿತ್ಯತೃಪ್ತಳೂ ಆದ ನಿಯತಿಯು, ವನಗಳನ್ನು ಚಿಗುರಿಸುವ ವಸಂತರಸದಂತೆ, ಇವುಗಳನ್ನೆಲ್ಲಾ ಚಿಗುರಿಸುತ್ತಿರುವಳು.

೫೪. ಇವು ಬ್ರಹ್ಮವನ್ನೇ ಕರ್ತೃವಾಗಿ ಉಳ್ಳವು (ಒಂದು ದೃಷ್ಟಿಯಿಂದ): ಇನ್ನೊಂದು ದೃಷ್ಟಿಯಿಂದ ಅಕರ್ತೃಗಳಾದ್ದರಿಂದ ಕೃತಗಳೂ ಅಲ್ಲದ ಆಕಾಶ ಖಂಡಗಳು: ಸ್ವಯಂ ಸಂಪನ್ನರೂಪಗಳು: ಚಿದ್ವ್ಯೋಮದಿಂದ ಕೃತಗಳೂ ಅಹುದು.

ಪರಮಾರ್ಥಮಯಾನ್ಯೇವ ತದನ್ಯದ್ವೋದಿತಾನ್ಯಪಿ ।
ಅಲಬ್ಧಾನ್ಯೇವ ಲಬ್ಧಾನಿ ಸದಾಽಸಂತ್ಯೇವ ಸಂತಿ ಚ ॥ ೫೫ ॥

ಚತುರ್ದಶದಶೈಕಾದಿವಿಧಭೂತಗಣಾನಿ ಚ ।
ಪುನಸ್ತಾನ್ಯೇವ ತಾನ್ಯಂತರನ್ಯಾನ್ಯನ್ಯಾನ್ಯಥೋ ಬಹಿಃ ॥ ೫೬ ॥

ನರಕಸ್ವರ್ಗಪಾತಾಲಬಂಧುಮಿತ್ರಮಯಾನ್ಯಪಿ ।
ಮಹಾರಂಭಮಯಾನ್ಯೇವ ಶೂನ್ಯಾನಿ ಪರಮಾರ್ಥತಃ ॥ ೫೭ ॥

ಕ್ಷೀರಾಂಬುಧೇರ್ಜಲಾನೀವ ಸ್ನೇಹಸಾರಾಣಿ ಸರ್ವತಃ ।
ತರಂಗಭಂಗುರಾಣ್ಯಂತರ್ಬಹಿಶ್ಚಾವೃತ್ತಿಮಂತಿ ಚ ॥ ೫೮ ॥

---

೫೫. ಅವು ಬೇರೆಯೆಂದು ಅನೇಕರು ತಿಳಿದುಕೊಂಡಿದ್ದರೂ, ಅವೆಲ್ಲವೂ ಪರಮಾರ್ಥಮಯಗಳೇ ! ಅವು ಇಂದ್ರಿಯಗೋಚರವಾಗುತ್ತಿವೆಯಾದರೂ ಅವು ಅಸತ್ಯಗಳೇ ! ಅವು ಯಾವಾಗಲೂ ಅಸಂತಿಗಳಾಗಿಯೇ ಇರುವುವು.

೫೬. (ಭುವನ ಸಂಖ್ಯೆಯಿಂದ, ಚತುರ್ದಶವಿಧವೂ (ದೇವಯೋನಿಮಾತ್ರ ಸಂಖ್ಯೆಯಿಂದ) ದಶವಿಧವೂ (ಮನುಷ್ಯಾದಿ) ಏಕ ಜಾತಿಯೂ ಆಗಿರುವ ಭೂತ ಗಣಗಳೂ, ಅಲ್ಲಿ ಅಂತಃ ಬಹಿಃ, ತಾವೇ ತಾವಾಗಿ, ಬೇರೆಯಾಗಿ, ಯಥಾ ಸಂಭವ ವಾಗಿ ಇರುವುವು.

೫೭. ನರಕ, ಸ್ವರ್ಗ, ಪಾತಾಲಗಳು ಬಂಧು ಮಿತ್ರಮಯಗಳಾಗಿ, ಮಹಾ ಸಂಭ್ರಮದಿಂದ ವ್ಯಾಪಾರಮಾಡುತ್ತಿದ್ದರೂ ಪರಮಾರ್ಥ ದೃಷ್ಟಿಯಿಂದ ಶೂನ್ಯಗಳೇ !

೫೮ ಸ್ನೇಹಸಾರಗಳಾದ ಕ್ಷೀರಾಬ್ಧಿ ಜಲಗಳಂತೆ, ಈ ಬ್ರಹ್ಮಾಂಡಗಳು ಎಲ್ಲೆಲ್ಲೂ ತರಂಗ ಭಂಗುರಗಳಾಗಿ ಆ ವೃತ್ತಿಗಳುಳ್ಳವಾಗಿ ಅಂತರ್ಬಹಿ ತುಂಬಿರುವುವು.

ಆಭಾಸಮಾತ್ರರೂಪಾಣಿ ತೇಜಸ್ಯಾತ್ಮವಿವಸ್ವತಃ ।
ಜಾತಾನೀವ ಸ್ವತಸ್ತಾನಿ ಸ್ಪಂದನಾನಿ ನಭಸ್ವತಃ ॥ ೧೯ ॥

ವೃಕ್ಷರೂಪಾಣಿ ಪತ್ರಾಣಾಂ ಬುದ್ಧ್ಯಹಂಕಾರಚೇತಸಾಂ ।
ಅಸತಾಮಪ್ಯಸಂತ್ಯೇವ ಸ್ವಪ್ನೇ ಸ್ಯಸ್ತನೃಣಾಮಿವ ॥ ೨೦ ॥

ಪುರಾಣವೇದಸಿದ್ಧಾಂತಕಲ್ಪನಾತಲ್ಪಪಾಲಿಷು ।
ಘನನಿದ್ರಾಣಿ ಸುಪ್ತಾನಿ ಬಿಭ್ರಂತಿ ಶವತಾಮಿವ ॥ ೨೧ ॥

ಪರಮಾರ್ಥಮಹಾರಣ್ಯೇ ಚಿದ್ಗಂಧರ್ವಕೃತಾನಿ ವೈ ।
ಸೂರ್ಯದೀಪಕದೀಪ್ತಾನಿ ಗೃಹಾಣಿ ಗಹನಾತ್ಮನಿ ॥ ೨೨ ॥

---

೧೯. ಇವೆಲ್ಲವೂ ಆಭಾಸಮಾತ್ರ ರೂಪಗಳು. ಆತ್ಮಸೂರ್ಯನ ತೇಜಸ್ಸಿನಲ್ಲಿ (ಕಾಣುವ ಅಣುಗಳಂತೆ) ಸ್ವತಃ ಹುಟ್ಟಿ, ವಾಯುವಿನ ಪ್ರೇರಣೆಯಿಂದ ವ್ಯಾಪಾರ ಮಾಡುತ್ತಿರುವುವು.

೨೦ ಮನೋಬುದ್ಧ್ಯಹಂಕಾರಗಳೆಂಬ ಪತ್ರಗಳಿಗೆ ಇವು ವೃಕ್ಷಗಳಂತಿರುವುವು. ಅವೂ ಅಸತ್: ಅವಕ್ಕೆ ಆಶ್ರಯವಾದ ಇವೂ ಅಸತ್: ಇವೆಲ್ಲವೂ ಕನಸಿನಲ್ಲಿ ಕಂಡ ಮಾನವರಂತೆ:

೨೧ ಪುರಾಣ ವೇದ ಸಿದ್ಧಾಂತಗಳ ಕಲ್ಪನೆಗಳನ್ನು ಪಾಲಿಸುತ್ತ ಆತ್ಮ ಜ್ಞಾನವನ್ನು ಪಡೆಯದೆ, ಅವುಗಳಲ್ಲಿಯೇ ದೃಢವಿಶ್ವಾಸವುಳ್ಳವರಿಗೆ, ಇವು (ಇರುವಂತೆ ಕಾಣುವುವು. ನಿಜವಾಗಿ ನೋಡಿದರೆ) ಇವು ಘನ ನಿದ್ರೆಯಲ್ಲಿ ಮಲಗಿ ಹೆಣದಂತೆ ಕಾಣುವುವು.

೨೨. ಪರಮಾರ್ಥವೆಂಬ ಮಹಾರಣ್ಯದಲ್ಲಿ ಗಹನವಾದ ಆತ್ಮನಲ್ಲಿ, ಚಿತ್ತೆಂಬ ಗಂಧರ್ವನು ಮಾಡಿರುವ ಸೂರ್ಯನೆಂಬ ದೀಪಗಳಿಂದ ಬೆಳಗುತ್ತಿರುವ ಮನೆಗಳಿವು.

ಪ್ರಜಾಯಮಾನಾನಿ ನಭಸ್ಯನಂತೇ
ವಿಶೀರ್ಯಮಾಣಾನಿ ಚ ನಿರ್ನಿಮಿತ್ತಂ ।
ತದಾ ತ್ವಹಂ ವೈ ತಿಮಿರಾಕ್ಷದೃಷ್ಟ-
ಕೇಶೋಂಡ್ರಕಾನೀವ ಜಗಂತ್ಯಪಶ್ಯಂ ॥ ೬೩ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಜಗಜ್ಜಾಲವರ್ಣನಂ" ನಾಮ
ಏಕೋನಷಷ್ಟಿತಮಃ ಸರ್ಗಃ

---

೬೩. ಅನಂತವೆಂಬ ನಭದಲ್ಲಿ ಹುಟ್ಟುವುವು; ಅಲ್ಲಿಯೇ ನಿರ್ನಿಮಿತ್ತವಾಗಿ ಜೀರ್ಣವಾಗುವುವು; ಇಂತಹ ಬ್ರಹ್ಮಾಂಡಗಳನ್ನು ತಿಮಿರ ದೋಷದಿಂದ ಕಾಣುವ ಕೇಶೋಂಡ್ರಕಗಳನ್ನು ಹೇಗೋ ಹಾಗೆ ನೋಡಿದೆನು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜಗಜ್ಜಾಲವರ್ಣನ" ಎಂಬ
ಐವತ್ತೊಂಭತ್ತನೆಯ ಸರ್ಗವು.

## ಷಷ್ಟಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ತತೋಽಹಮಭಿತೋ ಭ್ರಾಂತಸ್ತಾದೃಶಂ ಪ್ರವಿಚಾರಯನ್ ।
ಬಹುಕಾಲಮಸಂರುದ್ಧಸಂವಿದಾಕಾಶತಾಂ ಗತಃ ॥ ೧ ॥

ಶಬ್ದಂ ಪಶ್ಚಾತ್ತಮಶ್ರೌಷಮಹಂ ವೀಣಾಸ್ವನೋಪಮಮ್ ।
ಕ್ರಮಾತ್ಸ್ಫುಟಪದಂ ಜಾತಂ ತತ ಆರ್ಯಾತ್ವಮಾಗತಂ ॥ ೨ ॥

ಶಬ್ದದೇಶಪತದ್ದೃಷ್ಟಿರ್ದೃಷ್ಟವಾನ್ವನಿತಾಮಹಂ ।
ಪಾರ್ಶ್ವೇ ಕನಕನಿಷ್ಪಂದಪ್ರಭಯಾ ಭಾಸಿತಾಂಬರಾಂ ॥ ೩ ॥

ಆಲೋಲಮಾಲ್ಯವಸನಾಮಲಕಾಕುಲಲೋಚನಾಂ ।
ಲೋಲದ್ಧಮ್ಮಿಲ್ಲವಲನಾಮನ್ಯಾಂ ಶ್ರಿಯಮಿವಾಗತಾಂ ॥ ೪ ॥

ಕಾಂತಕಾಂಚನಗೌರಾಂಗೀಂ ಮಾರ್ಗಸ್ಥನವಯೌವನಾಂ ।
ವನದೇವೀಮಿವಾಮೋದಿಸರ್ವಾವಯವಸುಂದರೀಂ ॥ ೫ ॥

---

## ಅರವತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು :—

೧. ಅನಂತರದಲ್ಲಿ ಹೀಗೆ ವಿಚಾರ ಮಾಡುತ್ತ, ಸರ್ವಪ್ರಕಾರದಿಂದಲೂ ಭ್ರಾಂತನಾಗಿ, ಬಹು ಕಾಲವಿದ್ದು, ಕೊನೆಗೆ ಅಪರಿಚ್ಛಿನ್ನ ಚಿದಾಕಾಶವನ್ನು ಸೇರಿದೆನು

೨ ಅನಂತರ ವೀಣೆಯ ನಾದದಂತಿರುವ ಶಬ್ದವನ್ನು ಕೇಳಿದೆನು ಅದು ಕ್ರಮವಾಗಿ ಸ್ಪಷ್ಟವಾಯಿತು ಅನಂತರ ಅದು ಆರ್ಯಾಛಂದವಾಯಿತು

೩-೪-೫ ಶಬ್ದವು ಬಂದ ಕಡೆ ತಿರುಗಿ ನೋಡಿದೆನು ಅಲ್ಲಿ ಒಬ್ಬ ಹೆಂಗುಸು ಕಣ್ಣಿಗೆ ಬಿದ್ದಳು. ಆಕೆಯು ಚಿನ್ನದ ಕಾಂತಿಯಂತಿರುವ ಪ್ರಭೆಯಿಂದ ಕೂಡಿ,

ಸಾ ಪೂರ್ಣಚಂದ್ರವದನಾ ಪುಷ್ಪಪ್ರಕರಹಾಸಿನೀ ।
ಯೌವನೋದ್ದಾಮವದನಾ ಪಕ್ಷ್ಮಲಕ್ಷಣಶಾಲಿನೀ ॥ ೬ ॥

ಆಕಾಶಕೋಶಸದನಾ ಶಶಾಂಕಕರಸುಂದರೀ ।
ಮುಕ್ತಾಕಲಾಪರಚನಾ ಕಾಂತಾ ಮದನುಸಾರಿಣೀ ॥ ೭ ॥

ಸ್ವರೇಣ ಮಧುರೇಣೈವಮಾಯುರ್ಮಾಯುರ್ವಿಲಾಸಿನೀ ।
ಷಮಾರಾಕರಿಸಂ ವಾಮಾ ಮತ್ಪಾರ್ಶ್ವೇ ಮೃದುಹಾಸಿನೀ ॥ ೮ ॥

ಅಸಮುಚಿತರಿಕ್ತಚೇತನ-
ಸಂಸೃತಿಸರಿತಿ ಪ್ರಮುಹ್ಯಮಾನಾನಾಂ ।
ಅವಲಂಬನತಟವಿಟಪಿನ-
ಮಭಿನೌಮಿ ಭವಂತಮೇವ ಮುನೇ ॥ ೯ ॥

---

ಉತ್ತಮವಾದ ವಸ್ತ್ರವನ್ನುಟ್ಟು ಪಾರ್ಶ್ವದಲ್ಲಿಯೇ ನಿಂತಿದ್ದಳು. ಆಕೆಯು ಧರಿಸಿದ್ದ ಹೂವಿನ ಮಾಲೆಗಳೂ ವಸ್ತ್ರಗಳೂ ಆಲೋಲವಾಗಿದ್ದುವು. ಆಕೆಯ ಕುರುಳುಗಳು ಕನ್ನೆಗೆ ಕವಿಯುತ್ತಿದ್ದುವು. ಆಕೆಯ ಕೇಶಧಾಮವು ಲೋಲವಾಗಿತ್ತು. ನೋಡಿದರೆ ಎರಡನೆಯ ಮಹಾಲಕ್ಷ್ಮಿಯೇ ಬಂದಳೋ ಎಂಬಂತಿತ್ತು. ಆಕೆಯು ಕಾಂತವಾದ ಕಾಂಚನದಂತಿರುವ ಗೌರಾಂಗಿಯು. ನವಯೌವ್ವನವತಿಯು ವನದೇವಿಯಂತೆ ಸರ್ವಾಂಗಗಳಿಂದಲೂ ಸೌರಭವನ್ನು ಬೀರುತ್ತಿರುವ ಸುಂದರಿಯು ಎದುರಿಗೇ ನಿಂತಿದ್ದಳು

೬-೭-೮ ಯೌವನವು ಎದ್ದು ಕಾಣುತ್ತಿರುವ ಮುಖವುಳ್ಳವಳು ಲಕ್ಷಣವಾದ ಕಣ್ಣುರೆಪ್ಪೆಗಳುಳ್ಳ ಆಕೆಯ ಪೂರ್ಣಚಂದ್ರವದನದಲ್ಲಿ ಉದ್ದಾಮವಾದ ಯೌವನವು ಎದ್ದು ಕಾಣುತ್ತಿತ್ತು. ಹೂವಿನ ಗೊಂಚಲಿನಂತೆ ನಗೆಯು ಅಲ್ಲಿ ಮೆರೆಯುತ್ತಿತ್ತು. ಆ ಚಂದ್ರ ಸುಂದರಿಯು ಆಕಾಶಕೋಶದಲ್ಲಿ ನೆಲಸಿದ್ದವಳು' ಮುತ್ತುಗಳ ಒಡವೆಗಳನ್ನು ಧರಿಸಿದ್ದ ಆ ಕಾಂತೆಯು ನನಗೆ ಅನುಕೂಲಳಾಗಿದ್ದಳು. ಯೋಗ್ಯವಾದ ಚೇಷ್ಟೆಗಳುಳ್ಳ, ಆ ಸುಂದರಿಯು ನನ್ನ ಪಾರ್ಶ್ವದಲ್ಲಿ ನಿಂತು ಮೃದುವಾಗಿ ನಗುತ್ತ ಮಧುರವಾದ ಸ್ವರದಿಂದ ಆಕರಿಸವಾಗಿ, ಆಯುರ್ವೃವನ್ನು ಹರಿಸಿದಳು.

೯. ಅನಭ್ಯದಲ್ಲಿ ಕಾಣುವ ದೋಷಗಳೊಂದೂ ಇಲ್ಲದ ಮನಸ್ಸಿನ ಎತ್ತೆ ಮುನೀಂದ್ರನೆ, ಸಂಸಾರವೆಂಬ ನದಿಯಲ್ಲಿ ಬಿದ್ದು ಮೈಮರೆಯುವವರಿಗೆ, ತಟದಲ್ಲಿ

ಶ್ರೀ ವಸಿಷ್ಠ ಉವಾಚ:—

ಇತ್ಯಾಕರ್ಣ್ಯಾಹಮಾಲೋಕ್ಯ ತಾಂ ಚಾರುವದನಸ್ವನಾಂ ।
ಲಲನೇಯಂ ಕಿಮನಯೇತ್ಯನಾದೃತ್ಯೈವ ತಾಂ ಗತಃ ॥ ೧೦ ॥

ತತೋ ಜಗದ್ವೃಂದಮಯೀಂ ಮಾಯಾಂ ಸಂಪ್ರೇಕ್ಷ್ಯ ವಿಸ್ಮಿತಃ ।
ಅನಾದೃತ್ಯೈವ ತಾಂ ವ್ಯೋಮ್ನಿ ವಿಹರ್ತುಮಹಮುದ್ಯತಃ ॥ ೧೧ ॥

ತತಸ್ತಾಂ ತತ್ಕೃತಾಂ ಚಿಂತಾಮಲಮುತ್ಸೃಜ್ಯ ಖೇ ಸ್ಥಿತಾಂ ।
ಜಗನ್ಮಾಯಾಂ ಕಲಯಿತುಂ ವ್ಯೋಮಾತ್ಮಾಹಂ ಪ್ರವೃತ್ತವಾನ್ ॥ ೧೨ ॥

ಯಾವತ್ತಾನಿ ತಥೋಗ್ರಾಣಿ ಜಗಂತಿ ಸಕಲಾನಿ ಖಂ ।
ಶೂನ್ಯಮೇವ ಯಥಾ ಸ್ವಪ್ನೇ ಸಂಕಲ್ಪೇ ಕಥನೇ ತಥಾ ॥ ೧೩ ॥

ರುವ ವೃಕ್ಷದಂತೆ ಆಶ್ರಮವನ್ನು ಕೊಡುವ ಮಹಾಪುರುಷನಾದ ನಿನ್ನನ್ನು ನಮಸ್ಕರಿಸುವೆನು

ಶ್ರೀ ವಸಿಷ್ಠನು ಹೇಳಿದನು.—

೧೦. ಹೀಗೆಂದುದನ್ನು ಕೇಳಿ, ಚಾರುವದನವೂ ಕಂಠವೂ ಉಳ್ಳ ಆಕೆಯನ್ನು ನೋಡಿ, ಈ ಲಲನೆಯಿಂದ ನಮಗೆ ಏನಾಗಬೇಕು ಎಂದು ಆಕೆಯನ್ನು ಆದರಿಸದೆ ಮುಂದೆ ಹೋದೆನು

೧೧. ಆಕೆಯು ಜಗದ್ವೃಂದಮಯಿಯಾದ ಮಾಯೆಯು. ಆಕೆಯನ್ನು ಕಂಡು ವಿಸ್ಮಿತನಾಗಿ, ಆದರೂ ಆಕೆಯನ್ನು ಆದರಿಸದೆ ಆಕಾಶದಲ್ಲಿ ವಿಹಾರ ಮಾಡಲು ಹೊರಟೆನು.

೧೨. ಆಕೆಯನ್ನೂ ಆಕೆಯು ಮಾಡಿದ ವ್ಯಾಪಾರವನ್ನೂ ಸಾಕೆಂದು ಬಿಟ್ಟು ಆಕಾಶಗತಳಾಗಿರುವ ಜಗನ್ಮಾಯೆಯನ್ನು ನೋಡಲು ಚಿದಾಕಾಶ ಸ್ವರೂಪನಾದ ನಾನು ಹೊರಟೆನು.

೧೩. ಆ ಜಗನ್ಮಾಯೆಯಿಂದಲೇ ಈ ಬ್ರಹ್ಮಾಂಡಗಳೆಲ್ಲವೂ ಹುಟ್ಟಿರುವುದು. ಸ್ವಪ್ನದಲ್ಲಿಯೂ ಸಂಕಲ್ಪದಲ್ಲಿಯೂ ಹೇಗೆ ಆಕಾಶವಲ್ಲದೆ ಇನ್ನೇನೂ ಇಲ್ಲವೋ ಕಥನದಲ್ಲಿಯೂ ಹಾಗೆಯೆ !

ನ ಪಶ್ಯಂತಿ ನ ಶೃಣ್ವಂತಿ ಕದಾಚಿತ್ಕಾಸಿಚಿತ್ಕ್ವಚಿತ್ ।
ತಾನಿ ಕಲ್ಪಮಹಾಕಲ್ಪಮಹಾಜನ್ಮೈಕತಾಸ್ತಥ　　॥ ೧೪ ॥

ಪ್ರಮತ್ತಪುಷ್ಕರಾವರ್ತಾಸುಸ್ಮೃತ್ಯೋತ್ಪಾತಮಾರುತಾನ್ ।
ಸ್ಫುಟಿತಾದ್ರೀಂದ್ರಥಾಂಕಾರಘಟಿತಬ್ರಹ್ಮಮಂಡಪಾನ್　　॥ ೧೫ ॥

ಜ್ವಲತ್ಕಲ್ಪಾಗ್ನಿವಿಸ್ಫೋಟಚಟದ್ವೈತವಿಹಾಸ್ಪದಾನ್ ।
ಪ್ರತಪದ್ದ್ವಾದಶಾಕಾರಕಂದುಮಾರ್ತಂಡಮಂಡಲಾನ್　　॥ ೧೬ ॥

ಲುಠತ್ಸುರಪುರವ್ರಾತವಿತತಾಕ್ರಂದಘೋರ್ಘರಾನ್
ರಣತ್ಸರ್ವಾದ್ರಿಕಟಕಶ್ರೇಣೀಸಿಗಿರಣೋದ್ಭಟಾನ್　　॥ ೧೭ ॥

ಕಲ್ಪಾಗ್ನಿಜ್ವಲನೋಲ್ಲಾಸಪಟತ್ಪಟಪಟಾರವಾನ್ ।
ಆತ್ಮಭ್ರಂಶಬೃಹತ್ಕ್ಷೋಭಕ್ಷುಬ್ಧಾಂಬರಮಹಾರ್ಣವಾನ್　　॥ ೧೮ ॥

೧೪. ಆ ಬ್ರಹ್ಮಾಂಡಗಳನ್ನು ಕಲ್ಪ ಮಹಾಕಲ್ಪಗಳಾದರೂ ಮಹಾಸೃಷ್ಟಿಗಳಾದರೂ ಯಾರೂ ಎಲ್ಲಿಯೂ ಯಾವಾಗಲೂ ನೋಡಿಲ್ಲ; ಅವುಗಳ ವಿಚಾರವನ್ನು ಕೇಳಿಲ್ಲ.

೧೫-೧೬. ಮದಿಸಿದ ಪುಷ್ಕರಾವರ್ತಗಳೆಂಬ ಪ್ರಲಯ ಮೇಘಗಳನ್ನು ಮದಿಸಿದ ಉತ್ಪಾತಮಾರುತಗಳನ್ನು ಒಡೆದ ಮಹಾ ಪರ್ವತಗಳ ಥಾಂಕಾರದಿಂದ ಕೂಡಿರುವ ಬ್ರಹ್ಮಾಂಡಗಳನ್ನೂ, ಉರಿಯುತ್ತಿರುವ ಕಲ್ಪಾಗ್ನಿಯಿಂದ ಒಡೆದು ಶಬ್ದ ಮಾಡುತ್ತಿರುವ ಕುಬೇರನರಮನೆಗಳನ್ನೂ ಒಂದೇ ಸಮನಾಗಿ ಸುಡುತ್ತಿರುವ ಹನ್ನೆರಡು ಚೆಂಡುಗಳಂತಿರುವ ಸೂರ್ಯರ ಮಂಡಲಗಳನ್ನೂ,

೧೭-೧೮. ಉರುಳುತ್ತ ಆಕ್ರಂದನದಿಂದ ಘೋರವಾಗಿರುವ ಸ್ವರ್ಗಗಳನ್ನೂ, ಶಬ್ದ ಮಾಡುತ್ತ ಸಮಸ್ತ ಪರ್ವತಗಳ ಭಾಗಗಳನ್ನು ನುಂಗುತ್ತ ಪಟಪಟನೆ ಶಬ್ದ ಮಾಡಿಕೊಂಡು ಉಲ್ಲಾಸದಿಂದ ಮುಂದೆ ನಗುತ್ತಿರುವ ಕಲ್ಪಾಗ್ನಿ ಜ್ವಾಲೆಗಳನ್ನೂ ತಾವು ಸ್ವಸ್ಥಾನದಿಂದ ಕದಲಿ ಮಹಾಕ್ಷೋಭದಿಂದ ಕ್ಷುಬ್ಧವಾಗಿರುವ ಆಕಾಶ ಸಮುದ್ರಗಳನ್ನೂ

ದೇವಾಸುರನರಾಗಾರಘರ್ಘರಾಕ್ರಂದಕರ್ಕಶಾನ್ ।
ಸಪ್ತಾರ್ಣವಮಹಾಪೂರಪೂರಿತಾರ್ಕೇಂದುಮಂಡಲಾನ್ ॥ ೧೯ ॥

ನ ವಿಜೇತಂತಿ ಕಲ್ಪಾಂತಾನ್ಸರ್ವಾಣ್ಯೇವ ಪರಸ್ಪರಂ ।
ಏಕಮಂದಿರಸಂಸುಪ್ತಾಃ ಸ್ವಪ್ನೇ ರಣರಯಾನಿವ ॥ ೨೦ ॥

ತತ್ರ ರುದ್ರಸಹಸ್ರಾಣಿ ಬ್ರಹ್ಮಕೋಟಿಶತಾನಿ ಚ ।
ದೃಷ್ಟಾನಿ ವಿಷ್ಣುಲಕ್ಷಾಣಿ ಕಲ್ಪವೃಂದಾನ್ಯಲಂ ಮಯಾ ॥ ೨೧ ॥

ತತ್ರ ಕ್ವಚಿದನಾದಿತ್ಯೇ ನಿರಹೋರಾತ್ರಭೂತಲೇ ।
ಅಕಲ್ಪಯುಗವರ್ಷಾಂತೇ ಜಗತ್ಯೂಹ್ಯೈಃ ಕ್ಷಯೋದಯಃ ॥ ೨೨ ॥

ಚಿತಿ ಸರ್ವಂ ಚಿತಃ ಸರ್ವಂ ಚಿತ್ಸರ್ವಂ ಸರ್ವತಶ್ಚ ಚಿತ್ ।
ಚಿತ್ಸತ್ಸರ್ವಾತ್ಮಿಕೇತ್ಯೇತದ್ದೃಷ್ಟಂ ತತ್ರ ಮಯಾಖಿಲಂ ॥ ೨೩ ॥

---

೧೯-೨೦. ಉಳ್ಳುವಾಗಿ ಪರಸ್ಪರವಾಗಿ ನಾಶಕಗಳಾಗಿರುವ ಆ ಬ್ರಹ್ಮಾಂಡಗಳನ್ನೂ ಯಾರೂ ತಿಳಿಯಲೂಲಾರರು. ಒಂದೇ ಮನೆಯಲ್ಲಿ ಮಲಗಿದ್ದರೂ ಒಬ್ಬರ ಕನಸ್ಸಿನಲ್ಲಾಗುವ ರಣರಂಗದ ಮಹಾ ಶಬ್ದವನ್ನು ಇತರರು ಕೇಳಲಾಗುವುದೇ ?

೨೧ ಆ ವ್ಯೋಮದಲ್ಲಿ ರುದ್ರಸಹಸ್ರಗಳನ್ನೂ ಶತಕೋಟಿ ಬ್ರಹ್ಮರನ್ನೂ ವಿಷ್ಣುಲಕ್ಷಗಳನ್ನೂ ಬೇಕಾದಷ್ಟು ಕಲ್ಪವೃಂದಗಳನ್ನೂ ಕಂಡೆನು.

೨೨. ಅಲ್ಲಿ ಒಂದೆಡೆ ಆದಿತ್ಯನಿಲ್ಲ; ಅಹೋರಾತ್ರಿಗಳಿಲ್ಲ. ಕಲ್ಪಯುಗ ವರ್ಷ ಮೊದಲಾದ ಎಣಿಕೆಯಿಲ್ಲ. ಆ ಜಗತ್ತಿನಲ್ಲಿ ಊಹೆಗಳಿಂದಲೇ ಕ್ಷಯವೂ ಉದಯವೂ ನಡೆಯುವುದು.

೨೩. ಚಿತ್ತಿನಲ್ಲಿಯೇ ಎಲ್ಲವೂ ಇರುವುದು; ಚಿತ್ತಿನಿಂದಲೇ ಸರ್ವವೂ ಬರುವುದು. ಚಿತ್ತೇ ಸರ್ವವೂ ಆಗಿರುವುದು. ಎಲ್ಲೆಲ್ಲಿಯೂ ಚಿತ್ತೇ ಇರುವುದು. ಚಿತ್ತೇ ಸತ್ಯವು ಸರ್ವಾತ್ಮಕವು ಎಂಬುದನ್ನು ಅಲ್ಲಿ ಸಂಪೂರ್ಣವಾಗಿ ಕಂಡೆನು.

ಕ್ತ್ವಂ ಕಿಂಚಿದಿತಿ ಚೇದ್ವಕ್ಷಿ ತತ್ರ ಕಿಂ ಚಿದಿವಾಂಗ ಚಿತ್ ।
ಸಾ ಹಿ ಶೂನ್ಯತಮಾ ವ್ಯೋಮ್ನೋ ನ ಚ ನಾಮ ನ ಕಿಂಚನ ॥ ೨೪ ॥

ತದಾಕಾಶಮಿದಂ ಭಾತಿ ಜಗದಿತ್ಯಭಿಶಬ್ದಿತಂ ।
ತೇನೈವ ಶಬ್ದ ನಭಸಾ ಸರ್ವಂ ಹಿ ಪರಮಂ ನಭಃ ॥ ೨೫ ॥

ದೃಶ್ಯದೃಷ್ಟಿರಿಯಂ ಭ್ರಾಂತಿರಾಕಾಶತರುಮಂಜರೀ ।
ಚಿದ್ವ್ಯೋಮಾಂಗಕಮೇವೇತಿ ತತ್ರಾಹಮನುಭೂತವಾನ್ ॥ ೨೬ ॥

---

೨೪. ಚಿತ್ತಿನಂತೆ ಇನ್ನೇನಾದರೂ ಒಂದು ಇದೆಯೆಂದು ನೀನು ಹೇಳುವು ದಾದರೆ ಅದೂ ಚಿತ್ತೇ. ಆ ಚಿತ್ತು ವ್ಯೋಮಕ್ಕಿಂತಲೂ ಶೂನ್ಯತಮವು ಅದನ್ನು ಬಿಟ್ಟು ಇನ್ನೇನೂ ಇಲ್ಲ. ಇರುವುದೆಲ್ಲ ಅದೊಂದೇ ಒಂದು.

೨೫. ಜಗತ್ತು ಎಂದು ಶಬ್ದಿತವಾಗಿರುವುದು ಯಾವುದೋ ಅದು ಆಕಾಶ ವಾಗಿಯೇ ವಿರಾಜಿಸುತ್ತಿರುವುದು ಆ ಶಬ್ದ (ಗುಣವುಳ್ಳ) ಆಕಾಶದಿಂದಲೇ ಎಲ್ಲವೂ ಆಗಿರುವುದು. ಆದರಿಂದ ಸರ್ವವೂ ನಭವೇ!

(ನಾಮರೂಪಾದಿ ವ್ಯವಹಾರಯೋಗ್ಯವಾಗಿರುವುದು ಜಗತ್ತು ಇದು ಪಂಚ ಭೂತಗಳಿಂದ ಆದುದು. ಅದಕ್ಕೆ ಶ್ರುತಿ ಪ್ರಮಾಣವುಂಟು ಹೀಗೆ ಮಿಕ್ಕ ನಾಲ್ಕು ಭೂತಗಳೂ ಆಕಾಶದಿಂದಲೇ ಬಂದವು. ಆ ಆಕಾಶವು ಶಬ್ದ ಗುಣವುಳ್ಳದು. ಆದರಿಂದಲೇ ಶಬ್ದ ರೂಪವಾದ ವೇದವೂ ಬಂದಿರುವುದು ಆ ವೇದದಲ್ಲಿ ಇರುವ "ಅಹಂಬ್ರಹ್ಮಾಸ್ಮಿ, ತತ್ವಮಸಿ, ನೇಹನಾನಾಸ್ತಿ ಕಿಂಚನ" ಈ ಮಹಾವಾಕ್ಯಗಳೂ ಶಬ್ದಾತ್ಮಗಳೇ! ಆದರಿಂದ ಸರ್ವವೂ ನಭವೇ!—ತಾ. ಪ್ರ)

೨೬. ದೃಶ್ಯವೆಂಬುದೊಂದು (ಪ್ರತ್ಯೇಕವಾಗಿ) ಉಂಟು ಎಂಬ ಭ್ರಾಂತಿಯು. ಅದು ಆಕಾಶವೆಂಬ ಮರದಲ್ಲಿ ತೋರುವ ಹೂವಿನ ಗೊಂಚಲು ಆ ದೃಶ್ಯವನ್ನು ಬಿಟ್ಟ ಮೇಲೆ ಉಳಿಯುವ ಯಾವ ಚಿದ್ವ್ಯೋಮವುಂಟೋ ಅದು 'ಕ' ಎಂದರೆ ಸುಖವು ಎಂಬುದನ್ನು ಅಲ್ಲಿ ನಾನು ಅನುಭವಿಸಿದೆನು.

ಬುದ್ಧ್ಯಾಕಾಶೈಕರೂಪೇಣ ವ್ಯಾಪಿನಾ ಬೋಧರೂಪಿಣಾ ।
ತತ್ರಾನಂತೇನ ಸಂಕಲ್ಪಮನುಭೂತಮಿದಂ ಮಯಾ ॥ ೨೭ ॥

ಬ್ರಹ್ಮವ್ಯೋಮ ಜಗಜ್ಜಾಲಂ ಬ್ರಹ್ಮವ್ಯೋಮ ದಿಶೋದಶ ।
ಬ್ರಹ್ಮವ್ಯೋಮ ಕಲಾಕಾಲದೇಶದ್ರವ್ಯಕ್ರಿಯಾದಿಕಂ ॥ ೨೮ ॥

ತತ್ರಾಹಮಿವ ಸಂಸಾರಶತೇ ಭಾತೇ ಮುನೀಶ್ವರಾಃ ।
ದೃಷ್ಟಾ ವಸಿಷ್ಠನಾಮಾನೋ ಬ್ರಹ್ಮಪುತ್ರಾಃ ಸದುತ್ತಮಾಃ ॥ ೨೯ ॥

ಬ್ರಹ್ಮನ್ದ್ವಾಸಪ್ತತಿಸ್ತ್ರೇತಾಃ ಸರ್ವಾ ಏವ ಸರಾಘವಾಃ ।
ತತ್ರ ದೃಷ್ಟಂ ಕೃತಶತಂ ದ್ವಾಪರಾಣಾಂ ಶತಂ ತಥಾ ॥ ೩೦ ॥

೨೭. ವ್ಯಾಪಿಯಾಗಿ ಬೋಧೈಕರೂಪವಾಗಿರುವ, ಅನಂತವಾಗಿರುವ ಬುದ್ಧ್ಯಾಕಾಶದ ರೂಪದಿಂದ ಈ (ಮುಂದೆ ಹೇಳುವ) ಸಂಕಲ್ಪವನ್ನೂ ನಾನು ಅನುಭವಿಸಿದೆನು

(ಬುದ್ಧಿಶ್ಚಿರಸಸಾಕ್ಷಾತ್ಕಾರವೃತ್ತಿಃ ತದ್ರೂಪೋ ಯ ಆಕಾಶಃ ತತ್ರ ಆವಿರ್ಭಾವಾತ್ ತದೇಕರೂಪಿಣಾ ವ್ಯಾಪಿನಾ ಪೂರ್ಣೇನ ಅನಂತೇನ ತ್ರಿವಿಧ ಪರಿಚ್ಛೇದ ರಹಿತೇನ ಮಯಾ ತತ್ರ ತಸ್ಮಿನ್ ನ ಸಂಕಲ್ಪಂ ನಿಃಸಂಕಲ್ಪಂ ಇದಂ ವಕ್ಷ್ಯಮಾಣ ಮನುಭೂತಂ—ತಾ. ಪ್ರ )

೨೮. ಬ್ರಹ್ಮಾಕಾಶವೇ ಜಗಜ್ಜಾಲವಾಗಿರುವುದು. ಬ್ರಹ್ಮಾಕಾಶವೇ ಹತ್ತು ದಿಕ್ಕುಗಳಾಗಿರುವುದು: ಬ್ರಹ್ಮಾಕಾಶವೇ ಕಲಾ, ಕಾಲ, ದೇಶ, ದ್ರವ್ಯ, ಕ್ರಿಯಾದಿಕ ವಾಗಿರುವುದು

೨೯. ಅಲ್ಲಿ ನನ್ನಂತೆಯೇ ಇರುವ ಮುನೀಶ್ವರರು ನೂರಾರು ಸಂಸಾರಗಳಲ್ಲಿ ಇರುವರು ಅವರಿಗೂ ವಸಿಷ್ಠನೆಂದೇ ಹೆಸರಿರುವುದು ಅವರೂ ಬ್ರಹ್ಮಪುತ್ರರು, ಅವರು, ಸಜ್ಜನರು. ಉತ್ತಮರು.

೩೦. ಎಲೈ ಬ್ರಹ್ಮನೇ, ತ್ರೇತಾಯುಗಗಳು ಎಪ್ಪತ್ತೆರಡನ್ನೂ ಕಂಡೆನು. ಅವು ಒಂದೊಂದರಲ್ಲಿಯೂ ರಾಮರಿದ್ದರು. ಕೃತಯುಗಗಳು ನೂರನ್ನೂ ದ್ವಾಪರಯುಗ ನೂರನ್ನೂ ಕಂಡೆ

ಭೇದೋದಯೇನ ವೈ ದೃಷ್ಟಾಸ್ತಾಸ್ತಾಃ ಸರ್ಗದಶಾಸ್ತಥಾ ।
ಬೋಧೇನ ಚೇತ್ತದತ್ಯಚ್ಛಮೇಕಂ ಬ್ರಹ್ಮ ನಭಸ್ತತಂ ॥ ೩೧ ॥

ನೇದಂ ಬ್ರಹ್ಮಣಿ ನಾಮಾಸ್ತಿ ಜಗದ್ಬ್ರಹ್ಮಣ್ಯಥ ಕ್ವಿದಂ ।
ಬ್ರಹ್ಮೈವಾಜಮನಾದ್ಯಂತಂ ತತ್ಸರ್ವಂ ತತ್ವದಾದಿಕಂ ॥ ೩೨ ॥

ಪಾಷಾಣಮೌನಪ್ರತಿಮಂ ನ ಕಿಂಚಿದಭಿಶಬ್ದಿತಂ ।
ಯತ್ತತ್ಕಿಂಚಿದಿತಿ ದ್ಯೋತರೂಪಂ ಬ್ರಹ್ಮ ಜಗತ್ಸ್ಮೃತಂ ॥ ೩೩ ॥

ವಿಭಾತ್ಯಚೇತ್ಯಂ ಚಿದ್ವ್ಯೋಮ್ನಿ ಸ್ವಸತ್ತೈವ ಜಗತ್ತಯಾ ।
ನಿರಾಕಾರೇ ನಿರಾಕಾರಾ ಸ್ವಪ್ನಾನುಭವಸಂನಿಭಾ ॥ ೩೪ ॥

ಅನನ್ಯಮಾತ್ಮನೋ ಬ್ರಹ್ಮ ಸರ್ವಂ ಭಾಮಾತ್ರರೂಪಕಂ ।
ಪ್ರಕಾಶನಮಿವಾಲೋಕಃ ಕರೋತಿ ನಕರೋತಿ ಚ ॥ ೩೫ ॥

---

೩೧. ಭೇದವಾಸನೆಯು ಉದಯವಾಗುತ್ತಲೂ ಸರ್ಗದಶೆಗಳು ಬಹುವಾಗಿ ಕಂಡುವು. ಬೋಧವು ಉದಯವಾಗುತ್ತಲೂ ಅವೆಲ್ಲವೂ ಇಲ್ಲವಾಗಿ ಸ್ವಚ್ಛವೂ ಏಕವೂ ಆಗಿ ಹರಡಿರುವ ಬ್ರಹ್ಮಾಕಾಶವೊಂದೇ.

೩೨. ಬ್ರಹ್ಮದಲ್ಲಿ ನಾಮವಿಲ್ಲ; ಈ ಜಗತ್ತು ಬ್ರಹ್ಮದಲ್ಲಿ ಇಲ್ಲ; ಇರುವುದೆಲ್ಲ ಬ್ರಹ್ಮವೊಂದೇ ! ಅದು ಅಜವು : ಅದು ಅನಾದ್ಯಂತವು: ಅದೇ ಸರ್ವವೂ ! ಅದೇ ತತ್ವಾದಿಕವೆಲ್ಲವೂ !

೩೩. ಪಾಷಾಣಮೌನಕ್ಕೆ ಸಮವಾಗಿರುವ ಅಲ್ಲಿ ಯಾವ ಶಬ್ದವೂ ಇಲ್ಲದಿರಲು ನಾಮಗಳೆಲ್ಲಿ ಉಂಟು? ಏನೋ ಎಂತೋ ಆಗಿ ರೂಪವಾಗಿ ತೋರುವ ಈ ಜಗತ್ತೂ ಬ್ರಹ್ಮವೇ ಎಂದು ಹೇಳುವರು.

೩೪. ಚಿದಾಕಾಶದಲ್ಲಿ ಚಿತ್ಸತ್ತೆಯೇ ಅಚೇತ್ಯವಾಗಿ ಜಗತ್ತಾರೂಪದಿಂದ ಭಾಸವಾಗುವುದು. ನಿರಾಕಾರವಾದ ಚಿತ್ತಿನಲ್ಲಿ ಕಾಣುವ ಈ ಜಗತ್ತೂ ಕೂಡ ನಿರಾಕಾರವೇ! ಇದು ಸ್ವಪ್ನಾನುಭವದಂತೆ!

೩೫. ಬ್ರಹ್ಮವೂ ಆತ್ಮನಿಂದ ಬೇರೆಯಲ್ಲ. ಎಲ್ಲವೂ ಬರಿಯ "ಭಾ" ಮಾತ್ರ ರೂಪವಾದುದು : ಬೆಳಕು ಪ್ರಕಾಶನ ಮಾಡುವಂತೆ, (ಬ್ರಹ್ಮವು) ಸರ್ವವನ್ನೂ ಮಾಡುವುದು. ಮಾಡುವುದಿಲ್ಲ.

ಕೇಷು ನಾಮಾನುಭೂಯಂತೇ ಜಗಲ್ಲಕ್ಷೇಷು ತತ್ರ ವೈ ।
ಉಷ್ಣಾನಿ ಚಂದ್ರಬಿಂಬಾನಿ ಸೂರ್ಯಾಃ ಶೀತಲಮೂರ್ತಯಃ ॥ ೩೬ ॥

ಪ್ರಜಾಸ್ತಮಸಿ ಪಶ್ಯಂತಿ ಪಶ್ಯಂತೇವ ನ ತೇಜಸಿ ।
ಉಲೂಕಸ್ಯ ಸಮಾಚಾರಾಸ್ತಸ್ಯೈವ ಸದೃಶಸ್ವರಾಃ ॥ ೩೭ ॥

ಇತಃ ಶುಭೇನ ನಶ್ಯಂತಿ ಯಾಂತಿ ಪಾಪೈಸ್ತಥಾ ದಿವಂ ।
ವಿಷಾಶನೇನ ಜೀವಂತಿ ಮ್ರಿಯಂತೇಽಮೃತಭೋಜನೈಃ ॥ ೩೮ ॥

ಯದ್ಯಥಾ ಬುದ್ಧ್ಯತೇ ಬೋಧೇ ಯಥೋದೇತ್ಯಥವಾ ಸ್ವತಃ ।
ತಥಾಶು ಸ್ಫುಟತಾಮೇತಿ ಸದ್ವಾಸದ್ವಾ ತದೇವ ತತ್ ॥ ೩೯ ॥

---

(ಯಥಾಲೋಕಃ ಪ್ರಕಾಶನಂ ಕರೋತಿ, ಸ್ವಾತಿರಿಕ್ತ ಪ್ರಕಾಶನಾ ಪ್ರಸಿದ್ಧೇಃ ನ ಕರೋತಿ ಚ ತದ್ವತ್ ॥—ತಾ. ಪ್ರ.)

೩೬. (ಬ್ರಹ್ಮದಿಂದಾದ) ಆ ಜಗಲ್ಲಕ್ಷಗಳಲ್ಲಿ ನಾಮವೊಂದೇ ಅನುಭವಕ್ಕೆ ಬರುವುದು. (ಅದರ ಜೊತೆಯಲ್ಲಿರುವ ರೂಪ ಗುಣಕಾರ್ಯ ಮೊದಲಾದವು ವ್ಯತ್ಯಾಸವಾಗಬಹುದು) ಅಲ್ಲಿ ಬಿಸಿಯಾದ ಚಂದ್ರ ಬಿಂಬಗಳೂ, ಶೀತಲಮೂರ್ತಿಗಳಾದ ಸೂರ್ಯರೂ ಉಂಟು.

೩೭. ಕೆಲವು ಜಗತ್ತುಗಳಲ್ಲಿ ಪ್ರಜೆಗಳು ಕತ್ತಲಿನಲ್ಲಿ ನೋಡುವರು: ಬೆಳಕಿನಲ್ಲಿ ನೋಡಲಾರರು. ಉಲೂಕದಂತೆ ಆಚಾರವುಳ್ಳವರಾಗಿ, ಅದರಂತೆಯೇ ಸ್ವರವುಳ್ಳವರಾಗುವರು.

೩೮. ಅಲ್ಲಿ ಶುಭಾಚಾರವುಳ್ಳವರು ನಾಶವಾಗುವರು: ಪಾಪಮಾಡಿದವರಿಗೆ ಸ್ವರ್ಗವು ಸಿಕ್ಕುವುದು ವಿಷವನ್ನು ತಿಂದು ಬದುಕುವರು. ಭೋಜನ ಅಮೃತ ಮಾಡಿದವರು ಸಾಯುುವರು.

(ಮನಃ ಕಲ್ಪನಾಯಾಃ ನಿರಂಕುಶತ್ವಾದಿಯ ಮುಕ್ತಿರ್ನತು ವಸ್ತುತಃ । ವೇದಾಪ್ರಾಮಾಣ್ಯಾಪಾದಕತ್ವಾದಿತಿ ಭೋಧ್ಯಂ ।—ತಾ ಪ್ರ.)

೩೯. ಬೋಧದಲ್ಲಿ ಹೇಗೆ ಹೇಗೆ ಬೋಧವಾದರೆ, ಅಥವಾ ತಾನಾಗಿ ಹೇಗೆ ಹೇಗೆ ಉದಯವಾದರೆ ಅದು ಹಾಗೆ ಹಾಗೆಯೇ ಸ್ಫುಟವಾಗುವುದು. ಅದು ಸತ್ ಆದರೂ ಆಗಬಹುದು: ಅಸತ್ ಆದರೂ ಆಗಬಹುದು.

ವಿಟಪಾಕಾರಮೂಲೌಘದರ್ಶನಾದ್ವಜ್ರಕೋಟಿಭಿಃ ।
ಘೂರ್ಣತೇ ಪತ್ರಪುಷ್ಪಾಢ್ಯೈಃ ಪಾದಪೈರ್ವ್ಯೋಮ್ನಿ ಕಾನನಂ ॥ ೪೦ ॥

ಸಿಕತಾಃ ಪೀಡಿತಾಃ ಸತ್ಯಃ ಸ್ರವಂತಿ ಸ್ನೇಹಜಂ ರಸಂ ।
ಶಿಲಾಫಲಕಕೇಭ್ಯಶ್ಚ ಜಾಯಂತೇ ಕಮಲಾನ್ಯಲಂ ॥ ೪೧ ॥

ದಾರುಣ್ಯಶ್ಮನಿ ಭಿತ್ತೌ ಚ ಚಂಚಲಾಃ ಶಾಲಭಂಜಿಕಾಃ ।
ದೇವಾಂಗನಾಭಿಃ ಸಹಿತಂ ಗಾಯಂತಿ ಕಥಯಂತಿ ಚ ॥ ೪೨ ॥

ಮೇಘಾನ್ಪರಿದಧತ್ಯುಚ್ಚೈರ್ಭೂತಾನ್ಯುಚ್ಚೈಃ ಪಟಾನಿವ ।
ಪ್ರತಿವರ್ಷಂ ವಿಜಾತೀಯಾನ್ಯುತ್ಪದ್ಯಂತೇ ಫಲಾನ್ಯಗೇ ॥ ೪೩ ॥

---

(ಚಿರಾಭ್ಯಾಸ ದೃಢೀಕೃತೇ ಬೋಧೇ ಯದ್ವಸ್ತು ಹಿತಾಹಿತ ಸಾಧನತ್ವೇನ ಯಥಾ ಬುಧ್ಯತೇ ತಥೈವ ಭೋಜಕಾದೃಷ್ಟವಶಾದುದೇತಿ । ಯಥೋದೇತಿ ತಥೈವ ಭೋಗಕಾಲೇಽಪಿ ಸ್ಫುಟತಾ ಮೇತಿ । ಅನ್ಯತ್ರ ಸದ್ವಾ ಅಸದ್ವಾಸ್ತು ನ ವಿಶೇಷಃ । ಯತಸ್ತದ್ವ್ಯಕ್ತ್ಯೈವ ತದ್ವಾಸನಾ ಕರ್ಮಾನುಸಾರೇಣ ವಿವರ್ತತ ಇತ್ಯರ್ಥಃ । —ತಾ. ಪ್ರ.)

೪೦. (ಆ ಬ್ರಹ್ಮಾಂಡಾಂತರಗಳಲ್ಲಿ) ಕೊಂಬೆಗಳಂತಿರುವ ಬುಡಗಳೂ, ವಜ್ರದಂತೆ ಹೊಳೆಯುವ ಪತ್ರಪುಷ್ಪಗಳೂ ಉಳ್ಳ ಮರಗಳು ಕಾಡಾಗಿ ಆಕಾಶದಲ್ಲಿ ಬೆಳೆದಿರುವುವು.

೪೧. (ಅಲ್ಲಿ) ಮರಳನ್ನು ಹಿಂಡಿದರೆ ಎಣ್ಣೆಯು ಬರುವುದು. ಕಲ್ಲು ಹಲಗೆಗಳಲ್ಲಿ ಕಮಲಗಳು ಅರಳುವುವು.

೪೨ ಮರದಲ್ಲಿ, ಕಲ್ಲಿನಲ್ಲಿ, ಗೋಡೆಯಲ್ಲಿ ಕೆತ್ತಿದ, ಕೊರೆದ, ಬರೆದ, ಬೊಂಬೆಗಳು ಆಟವಾಡಿ, ದೇವಾಂಗನೆಯರೊಡನೆ ಹಾಡುವುವು: ಮಾತನಾಡುವುವು.

೪೩. ಅಲ್ಲಿರುವ ಪ್ರಾಣಿಗಳು ಮೇಘಗಳನ್ನು ಬಟ್ಟೆಗಳಂತೆ ಉಟ್ಟುಕೊಳ್ಳುವುವು. ಅಲ್ಲಿರುವ ಮರಗಳಲ್ಲಿ ವರ್ಷ ವರ್ಷವೂ ಬೇರೆ ಬೇರೆ ಜಾತಿಯ ಹಣ್ಣುಗಳು ಬಿಡುವುವು

ಸಂಸಿವೇಶೈರ್ನ ನಿಯತೈರಂಗಾನಾಂ ವಿವಿಧಾಂಗಕೈಃ ।
ಶಿರೋಭಿಃ ಸರ್ವಭೂತಾನಿ ಪರಿಕ್ರಾಮಂತಿ ಭೂಮಿಗೈಃ ॥ ೪೪ ॥

ಶಾಸ್ತ್ರವೇದವಿಹೀನಾನಿ ನಿರ್ಧರ್ಮಾಣ್ಯೇವ ಕಾನಿಚಿತ್ ।
ಯತ್ಕಿಂಚನೈಕಕಾರೀಣಿ ತಿರ್ಯಗ್ಗಚ್ಛಂತಿ ಜಗತ್ಯಂಧಃ ॥ ೪೫ ॥

ಕಾಮಸಂವಿತ್ತಿಹೀನಾನಿ ನಿಃಸ್ತ್ರೀಜಾತಾನಿ ಕಾನಿಚಿತ್ ।
ಭೂತೈಃ ಸಂಶುಷ್ಕಹೃದಯೈರ್ವ್ಯಾಪ್ತಾನ್ಯಶ್ಮಮಯೈರಿವ ॥ ೪೬ ॥

ಪವನಾಶನಭೂತಾನಿ ಸಮರತ್ನಾಶ್ಮಕಾನಿ ಚ
ಅಜಾತಾರ್ಥಾನ್ಯಲುಬ್ಧಾನಿ ನಿಗರ್ವಾಣೀವ ಕಾನಿ ಚ ॥ ೪೭ ॥

---

೪೪. ಇಂತಿಂತಹ ಅಂಗವು ಹೀಗೆ ಹೀಗೆ ಇಲ್ಲಿಯೇ ಇರಬೇಕೆಂಬ ನಿಯಮ ವಿಲ್ಲದೆ, ವಿವಿಧವಾಗಿರುವ ಅಂಗಗಳೂ ಶಿರಸ್ಸುಗಳೂ ಉಳ್ಳವರಾಗಿ ಅಲ್ಲಿ ನೆಲದ ಪ್ರಾಣಿಗಳು ಇರುವುವು.

೪೫ ಕೆಲವು ಬ್ರಹ್ಮಾಂಡಗಳು ಶಾಸ್ತ್ರವೇದವಿಹೀನಗಳು. ಧರ್ಮವೇ ಇಲ್ಲದವು. ಒಂದೇ ಕೆಲಸವನ್ನು ಮಾಡುವ ಪಶ್ವಾದಿಗಳಿಂದ ಪೂರ್ಣವಾದವು ಕೆಲವು. ಅಧೋ ಲೋಕಗಳು ಇರುವುವು

೪೬. ಕಾಮ ಜ್ಞಾನವೇ ಇಲ್ಲದವು ಕೆಲವು : ಸ್ತ್ರೀಯೇ ಇಲ್ಲದೆ ಹುಟ್ಟಿದವು ಕೆಲವು · ಹೃದಯವೇ ಇಲ್ಲದವು ಇನ್ನು ಕೆಲವು: ಇಂತಹ, ಬರಿಯ ಕಲ್ಲುಗಳೇ ತುಂಬಿರುವ ಜಗತ್ತುಗಳೂ ಉಂಟು.

೪೭. ವಾಯುವನ್ನೇ ಆಹಾರಮಾಡಿಕೊಂಡು, ರತ್ನವೂ ಕಲ್ಲೂ ಒಂದೇ ಎಂದುಕೊಂಡು, ಸಂಪತ್ತು ಎನ್ನುವುದನ್ನೇ ಅರಿಯದೆ, ಲೋಭವೂ ಗರ್ವವೂ ಇಲ್ಲದ ಪ್ರಾಣಿಗಳುಳ್ಳ ಲೋಕಗಳು ಕೆಲವು.

ಕ್ವಚಿತ್ತ್ವತ್ಯೇಕಮಾತ್ಮಾನಂ ಪಶ್ಯತ್ಯಾಪ್ನೋತಿ ನೇತರತ್ ।
ಬಹುಭೂತಕಮಪ್ಯಸ್ತಿ ಜಗದಿತ್ಯೇಕಭೂತಕಂ ॥ ೪೮ ॥

ನಖಕೇಶಾದಿಕೇ ಯದ್ವತ್ತದ್ವದನ್ಯತ್ರ ಸಂಸ್ಥಿತಃ ।
ಆತ್ಮವತ್ಸರ್ವಭೂತಾನಾಮೇಕೀಭೂತಾತ್ಮಭಾವನಾ ॥ ೪೯ ॥

ಅನಂತಾಪಾರಪರ್ಯಂತಂ ಶೂನ್ಯಮೇವ ಬಹು ಕ್ವಚಿತ್ ।
ಯತ್ನತಃ ಸಂಪದಾಪ್ನೋತಿ ತಸ್ಯಾಂತೇನ ಜಗತ್ಪುನಃ ॥ ೫೦ ॥

ಅತ್ಯಂತಾಬುದ್ಧ ಬುದ್ಧಾನಿ ಮೋಕ್ಷಶಬ್ದಾರ್ಥದೃಷ್ಟಿಷು ।
ದಾರುಯಂತ್ರಮಯಾಕೀಲಭೂತೌಘಾನೀವ ಕಾನಿಚಿತ್ ॥ ೫೧ ॥

---

೪೮–೪೯. ಇನ್ನು ಕೆಲವು ಜಗತ್ತುಗಳಲ್ಲಿರುವ ಪ್ರಾಣಿಗಳು ಆತ್ಮವನ್ನಲ್ಲದೆ ಇನ್ನೇನನ್ನೂ ಕಾಣವು. ಬಹುಪ್ರಾಣಿಗಳಿರುವ ಜಗತ್ತೂ ಉಂಟು; ಏಕಜಾತಿಯ ಪ್ರಾಣಿಗಳಿರುವ ಜಗತ್ತೂ ಉಂಟು. ನಖಕೇಶಾದಿಗಳಲ್ಲಿ ಹೇಗೆ ನಮಗೆ ಆತ್ಮ ಭಾವವುಂಟೋ ಹಾಗೆಯೇ ಸರ್ವಭೂತಗಳನ್ನೂ ಆತ್ಮವತ್ ಕಂಡು ಏಕೀಭೂತವಾದ ಆತ್ಮಭಾವನೆಯಿಂದ ವರ್ತಿಸುವ ಪ್ರಾಣಿಗಳು.

೫೦. ಅನಂತವಾಗಿ ಅಪಾರವಾಗಿ ಹರಡಿದ್ದರೂ ಶೂನ್ಯವೇ ಶೂನ್ಯವಾಗಿರುವ ಬ್ರಹ್ಮಾಂಡಗಳೂ ಕೆಲವುಂಟು. ಅಲ್ಲಿ ಅವು ಉಂಟು ಎಂದು ತಿಳಿಯಬೇಕಾದರೆ ಎಷ್ಟೋ ಪ್ರಯತ್ನಮಾಡಬೇಕು. ಅಂತಹ ಜಗತ್ತುಗಳು ಮುಗಿದ ಮೇಲೆ ಬೇರೆಯ ಜಗತ್ತು ಇರುವುದು.

೫೧. ಮೋಕ್ಷ ಶಬ್ದಾರ್ಥ ದೃಷ್ಟಿಯಿಂದ ಅತ್ಯಂತ ಅಬುದ್ಧಗಳಾದ ಪ್ರಾಣಿಗಳು, ಬುದ್ಧರಾದ ಪ್ರಾಣಿಗಳೂ, ಮರದಿಂದಾದ ಕೀಲು ಬೊಂಬೆಗಳಂತಿರುವ ಪ್ರಾಣಿಗಳೂ ಉಳ್ಳ ಬ್ರಹ್ಮಾಂಡಗಳೂ ಉಂಟು.

ಋಕ್ಷಚಕ್ರವಿಹೀನಾನಿ ನಿಷ್ಕಾಲಕಲನಾನಿ ಚ |
ಮೂಕಸಂಕೇತಸಾರಾಣಿ ಭೂತಜಾಲಾನಿ ಕಾನಿಚಿತ್ ॥ ೫೨ ॥

ಕಾನಿಚಿದ್ವರ್ಜಿತಾನ್ಯೇವ ನೇತ್ರಶಬ್ದಾರ್ಥಸಂವಿದಾ |
ವ್ಯರ್ಥದೀಪ್ತಾತ್ಮತೇಜಾಂಸಿ ಭೂತಾನೀತ್ಯೇಕಚಿಂತಯಾ ॥ ೫೩ ॥

ಪ್ರಾಣಸಂವಿದ್ವಿಹೀನಾನಿ ವ್ಯರ್ಥಾಮೋದಾನಿ ಕಾನಿಚಿತ್ |
ಮೂಕಾನಿ ಶಬ್ದವೈಯರ್ಥ್ಯಾಚ್ಛ್ರುತಿಹೀನಾನಿ ಕಾನಿಚಿತ್ ॥ ೫೪ ॥

ವಾಕ್ಯಸಂವಿದ್ವಿಹೀನತ್ವಾನ್ಮೂಕಾನ್ಯನ್ಯಾನಿ ಕಾನಿಚಿತ್ |
ಸ್ಪರ್ಶಸಂವಿದ್ವಿಹೀನತ್ವಾದಶ್ಮಾಂಗಾನೀವ ಕಾನಿಚಿತ್ ॥ ೫೫ ॥

ಸಂವಿನ್ಮಾತ್ರಮಯಾನ್ಯೇವ ದೃಷ್ಟಾನ್ಯಪಿ ಚ ಕಾನಿಚಿತ್ |
ವ್ಯವಹಾರೀಣ್ಯಪ್ಯಗ್ರಾಹ್ಯಾಣ್ಯೇವ ನಿತ್ಯಂ ಪಿಶಾಚವತ್ ॥ ೫೬ ॥

---

೫೨–೫೩. ಕೆಲವು ನಕ್ಷತ್ರ ಮಂಡಲವಿಲ್ಲದವು. ಕಾಲವೆಂಬ ಲೆಕ್ಕವೇ ಇಲ್ಲದವು ಕೆಲವು ಇನ್ನು ಕೆಲವು ಮೂಕವಾಗಿ ಬರಿಯ ಸನ್ನೆಗಳಿಂದಲೇ ವ್ಯವಹಾರ ಮಾಡುವ ಪ್ರಾಣಿಗಳುಳ್ಳವು. ಇನ್ನು ಕೆಲವು ಕಣ್ಣುಎನ್ನುವುದೇ ಇಲ್ಲದವು. ವ್ಯರ್ಥವಾಗಿ ತಮ್ಮ ತೇಜಸ್ಸನ್ನು ಹರಡುತ್ತಿರುವ ಪ್ರಾಣಿಗಳುಳ್ಳವು ಕೆಲವು (ಇಷ್ಟನ್ನೂ ನನ್ನ) ಸಮಾಧಿಯಿಂದ (ಕಂಡೆನು.)

೫೪. ಪ್ರಾಣವಿದೆಯೆನ್ನುವುದನ್ನೇ ತಿಳಿಯದೆ, ಸುಖವೇನೆಂಬುದನ್ನೇ ತಿಳಿಯದೇ ಇರುವ ಪ್ರಾಣಿಗಳು ಇರುವವು ಕೆಲವು. ಕಿವಿಗಳಿಲ್ಲದೆ, ಶಬ್ದವನ್ನೇ ಅರಿಯದೆ, ಮೂಕವಾಗಿರುವ ಪ್ರಾಣಿಗಳುಳ್ಳವು ಇನ್ನೂ ಕೆಲವು

೫೫. ಇನ್ನು ಕೆಲವು ಶಬ್ದಗಳು ಇದ್ದರೂ ವಾಕ್ಯ ಸಂವಿತ್ತಿಲ್ಲದೆ ಮೂಕವಾಗಿರುವ ಪ್ರಾಣಿಗಳುಳ್ಳವು. ಇನ್ನು ಕೆಲವು ಸ್ಪರ್ಶೇಂದ್ರಿಯವಿಲ್ಲದ್ದರಿಂದ ಕಲ್ಲಿನಂತೆ ಇರುವ ಅಂಗಗಳುಳ್ಳ ಪ್ರಾಣಿಗಳುಳ್ಳವು

೫೬. ಕೇವಲ ಸಂವಿನ್ಮಾತ್ರಮಯಗಳಾದ ಪ್ರಾಣಿಗಳುಳ್ಳ ಬ್ರಹ್ಮಾಂಡಗಳನ್ನು ಕೆಲವನ್ನು ನೋಡಿದೆನು ಪಿಶಾಚಗಳಂತೆ ವ್ಯವಹಾರ ಮಾಡುತ್ತಿದ್ದರೂ ಅಗ್ರಾಹ್ಯಗಳಾದ ಪ್ರಾಣಿಗಳುಳ್ಳ ಬ್ರಹ್ಮಾಂಡಗಳು ಇನ್ನೂ ಕೆಲವು

ಭೂಮಯಾನ್ಯೇಕನಿಷ್ಠಾನಿ ನಿಷ್ಪಿಂಡಾನ್ಯೇವ ಕಾನಿಚಿತ್ ।
ಕಾನಿಚಿದ್ವಾರಿಪೂರ್ಣಾನಿ ವಹ್ನಿಪೂರ್ಣಾನಿ ಕಾನಿಚಿತ್ ॥ ೫೭ ॥

ಕಾನಿಚಿದ್ವಾತಪೂರ್ಣಾನಿ ಸರ್ವಾಕಾರಾಣಿ ಕಾನಿಚಿತ್ ।
ಜಗಂತಿ ವ್ಯೋಮರೂಪಾಣಿ ಬತ ತತ್ರ ಕಚಂತಿ ಖೇ ॥ ೫೮ ॥

ಧರಾಪೀಠೈಕಪೂರ್ಣೇಷು ತಿಷ್ಠಂತ್ಯನ್ಯೇಷು ದೇಹಿನಃ ।
ಭೇಕಾ ಇವ ಶಿಲಾಕೋಶೇ ಕೀಟಾ ಇವ ಧರೋದರೇ ॥ ೫೯ ॥

ಜಲೈಕಪರಿಪೂರ್ಣೇಷು ತಿಷ್ಠಂತ್ಯುರ್ವೀವನಾದ್ರಿಷು ।
ಭ್ರಮಂತ್ಯನ್ಯೇಷು ಭೂತಾನಿ ನಿತ್ಯಮೇವೋಗ್ರಮೀನವತ್ ॥ ೬೦ ॥

ಅನ್ಯೇಷ್ವಗ್ನ್ಯೇಕಪೂರ್ಣೇಷು ಜಲಾದಿರಹಿತಾನ್ಯಪಿ ।
ಭೂತಾನ್ಯಗ್ನಿಮಯಾನ್ಯೇವ ಸ್ಫುರಂತ್ಯಲಮಲಾತವತ್ ॥ ೬೧ ॥

ಅನ್ಯೇಷ್ವನಿಲಪೂರ್ಣೇಷು ಭೂತಾನ್ಯಸ್ತೀತರಾಣ್ಯಪಿ ।
ವಾತಮಾತ್ರಮಯಾಂಗಾನಿ ಸ್ಫುರಂತ್ಯರ್ಜುನವಾತವತ್ ॥ ೬೨ ॥

---

೫೭ ೫೮. ಭೂಮಯಗಳಾಗಿ, ಏಕನಿಷ್ಠಗಳಾದ ಪ್ರಾಣಿಗಳುಳ್ಳವು ಕೆಲವು ನಿಷ್ಪಿಂಡಪ್ರಾಣಿಗಳು ಕೆಲವು. ಕೆಲವು ಜಲಮಯಪ್ರಾಣಿಗಳು, ಇನ್ನೂ ಕೆಲವು ಅಗ್ನಿಪೂರ್ಣಪ್ರಾಣಿಗಳು. ವಾತಪೂರ್ಣ ಪ್ರಾಣಿಗಳು ಕೆಲವು. ಸರ್ವಾಕಾರ ಪ್ರಾಣಿಗಳು ಕೆಲವು. ಹೀಗೆ ವ್ಯೋಮರೂಪಗಳಾದ ಜಗತ್ತುಗಳು ಆಕಾಶದಲ್ಲಿ ಅಲ್ಲಲ್ಲಿ ಕಾಣುವುವು.

೫೯–೬೦–೬೧ ಕೇವಲ ಭೂತವೇ ತುಂಬಿರುವ ಕೆಲವು ಲೋಕಗಳುಂಟು. ಅಲ್ಲಿ ಪ್ರಾಣಿಗಳು ಶಿಲಾಕೋಶದಲ್ಲಿರುವ ಕಪ್ಪೆಗಳಂತೆಯೂ ನೆಲದೊಳಗೆ ಇರುವ ಕೀಟಗಳಂತೆಯೂ ಇರುವುವು. ಜಲಭೂತವೇ ತುಂಬಿರುವ ನೆಲ, ಕಾಡು, ಬೆಟ್ಟಗಳುಳ್ಳ ಜಲಲೋಕದಲ್ಲಿ ಪ್ರಾಣಿಗಳು ಮೀನುಗಳಂತೆ ಸಂಚರಿಸುವುವು. ಅಗ್ನಿಭೂತವೇ ತುಂಬಿ ನೀರು ಮೊದಲಾದ್ದು ಇಲ್ಲದೇ ಇರುವ ಅಗ್ನಿಲೋಕಗಳಲ್ಲಿ ಅಗ್ನಿಮಯ ಪ್ರಾಣಿಗಳು, ಅಲಾತ (ಬೆಂಕಿಯ ಚಕ್ರ)ದಂತೆ ಇರುವವು.

೬೨. ಅನಿಲಪೂರ್ಣಗಳಾದ ವಾಯುಲೋಕದಲ್ಲಿ ವಾತಮಾತ್ರಮಯವಾದ ಅಂಗಗಳುಳ್ಳ ಪ್ರಾಣಿಗಳು ಅರ್ಜುನವಾತ ಹಿಡಿದವರಂತೆ ತಿರುಗುವುವು.

ಅನ್ಯೇಷು ವ್ಯೋಮಮಾತ್ರಾತ್ಮದೇಹೇಷು ವ್ಯೋಮರೂಪಿಣಃ ।
ಪ್ರಾಣಿನಃ ಸಂತಿ ಸರ್ಗೇಷು ದರ್ಶನವ್ಯವಹಾರಿಣಃ ॥ ೬೩ ॥

ಪಾತಾಲಪಾತಿಷು ತಥಾಂಬರಮುತ್ಪತತ್ಸು
ತಿಷ್ಠತ್ಸು ವಿಭ್ರಮಪದೇಷ್ವಥ ದಿಗ್ಭ್ರಮೇಷು ॥
ನಾನಾಜಗತ್ಸು ಕಿಮಿವಾಸ್ತಿ ಮಯಾ ನ ದೃಷ್ಟಂ ।
ಯನ್ನಾಮ ಚಿಜ್ಜಲಧಿಚಂಚಲಬುದ್ಬುದೇಷು ॥ ೬೪ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಜಗಜ್ಜಾಲವರ್ಣನಂ" ನಾಮ
ಷಷ್ಟಿತಮಃ ಸರ್ಗಃ

---

(ಅರ್ಜುನ ವಾತವೆನ್ನುವುದು ರೋಗವಿಶೇಷ: ಅದುಳ್ಳವರು ಆಕಾಶದಲ್ಲಿ ತಿರುಗುವರು ಎಂದು ದೇಶಾಂತರದಲ್ಲಿ ಪ್ರಸಿದ್ಧವು—ತಾ. ಪ್ರ.)

೬೩. ವ್ಯೋಮಲೋಕದಲ್ಲಿ ವ್ಯೋಮಾಂಗರಾಗಿ ವ್ಯೋಮರೂಪಿಗಳಾಗಿರುವ ಪ್ರಾಣಿಗಳು ದರ್ಶನಮಾತ್ರದಿಂದಲೇ ವ್ಯವಹಾರ ಮಾಡುವವರಾಗಿ ಇರುವರು.

೬೪. ಪಾತಾಲದಲ್ಲಿ ಬಿದ್ದಿರುವ, ಆಕಾಶದಲ್ಲಿ ಹಾರಾಡುತ್ತಿರುವ, ನಿಂತಿರುವ, ದಿಗಂತಗಳಲ್ಲಿ ಸುತ್ತುತ್ತಿರುವ, ನಾನಾ ಜಗತ್ತುಗಳು ಉಂಟು. ಅವೆಲ್ಲವೂ ಚಿತ್ತೆಂಬ ಸಮುದ್ರದ ಚಂಚಲವಾದ ಬುದ್ಬುದಗಳು. ಅದಷ್ಟನ್ನೂ ಬಿಟ್ಟು ಇನ್ನೇನನ್ನ ವಲ್ಲಿಯೂ ನಾನು ಕಾಣಲಿಲ್ಲ

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜಗಜ್ಜಾಲವರ್ಣನ" ಎಂಬ
ಅರವತ್ತನೆಯ ಸರ್ಗವು.

## ಏಕಷಷ್ಟಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚಃ—

ಚಿದಾಕಾಶಾಚ್ಚಿದಾಕಾಶೇ ಪಯಸೀವ ಪಯೋಽರಯಃ ।
ಚಿತ್ತ್ವಾಜ್ಜೀವಾಃ ಸ್ಫುರಂತ್ಯೇತೇ ಏತ ಏವ ಮನಾಂಸಿ ನಃ ॥ ೧ ॥

ವಿಶದಾಕಾರರೂಪಾಣಿ ತಾನ್ಯೇವ ಚ ಮನಾಂಸಿ ನಃ ।
ಜಗಂತಿ ತಾನ್ಯನಂತಾನಿ ಸಂಪನ್ನಾನ್ಯಭಿತಃ ಸ್ವಯಂ ॥ ೨ ॥

## ಅರವತ್ತೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು :—

೧. ನೀರಿನಲ್ಲಿ ನೀರಿನ ಪ್ರವಾಹವು ಕಾಣುವಂತೆ, ಚಿದಾಕಾಶದಿಂದ ಚಿದಾಕಾಶದಲ್ಲಿ ಚಿತ್ತ್ವದಿಂದ ಈ ಜೀವಗಳು ಕಾಣಿಸಿಕೊಳ್ಳುವುವು. ಇದೇ ನಮ್ಮ ಮನಸ್ಸುಗಳು.

೨. ನಮ್ಮ ಮನಸ್ಸುಗಳೂ ಸ್ಪಷ್ಟವಾಗಿ ತೋರುವ ವಿಶದ-ಆಕಾರದ ರೂಪಗಳೇ ! ಅನಂತಗಳಾಗಿ ಕಂಡ ಆ ಜಗತ್ತುಗಳೆಲ್ಲವೂ ಸ್ವ-ತಃ ಸಂಪನ್ನವಾದವೇ !

(ಜೀವಾಃ ಪ್ರಾಣೋಪಾಧಿ ಪರಿಚ್ಛಿನ್ನಾಃ ಸ್ಫುರಂತಿ ಅನಾದಿತಾದೃಶ ವಾಸನೋದ್ಭವಾತ್ ಭಾಸಂತೇ । ತ ಏವ ಉತ್ತರೋತ್ತರಂ ಸಂಕಲ್ಪವಿಕಲ್ಪ ಸಹಸ್ರೈಃ ಸಂಸರಣ ಬೀಜತ್ವಾತ್ ಸ್ವಾತ್ಮನಿಕರ್ಣ ಭಾವಮಿವ ಆಪದ್ಯಮಾನಾನಿ ಮನಾಂಸಿ ಇತ್ಯುಚ್ಯಂತೇ—ತಾನ್ಯೇವಮನಾಂಸಿ ಸ್ವಾಂತರ್ಗತ ಭೋಗ್ಯ ಜಗದ್ವಾಸನಾನಾಂ ಜಗದಾಕಾರೇಣ ವಿಕಾಸಾದನಂತಾನಿ ಜಗಂತಿ ಸಂಪನ್ನಾನಿ —ತಾ. ಪ್ರ.)

ಶ್ರೀ ರಾಮ ಉವಾಚ :—

ಸರ್ವಭೂತಗಣೇ ಮೋಕ್ಷಂ ಮಹಾಕಲ್ಪಕ್ಷಯೇ ಗತೇ ।
ಪುನಃ ಕಸ್ಯ ಕಥಂ ಸರ್ಗಸಂವಿತ್ತಿರುಪಜಾಯತೇ ॥ ೩ ॥

ಶ್ರೀ ವಸಿಷ್ಠ ಉವಾಚ.—

ಮಹಾಪ್ರಲಯಪರ್ಯಂತೇ ಕ್ಷಿತಿಜಲಪವನಹುತಾಶಾಕಾಶಾ–ಶೇಷವಿಶೇಷ ವಿನಾಶೇ ಆಬ್ರಹ್ಮಸ್ಥಾವರಾಂತೇಷು ಮುಕ್ತೌಪರಿಣತೇಷು ಭೂಯೋ ಯಥೇದಂ ಜಗದನುಭೂಯತೇ ತಥಾ ಶೃಣು । ಅವ್ಯಪದೇಶ್ಯಂ ಯತ್ಪರಮಾರ್ಥಘನಂ ಬ್ರಹ್ಮ ಚಿನ್ಮಾತ್ರಮಿತ್ಯಾಚಕ್ಷತೇ ಮುನಯಃ ತಸ್ಯ ಹೃದಯಮಿದಂ ಜಗತ್ತಸ್ಮಾದವ್ಯತಿರಿಕ್ತಮೇವ ಸ ಏವ ಚ ದೇವಸ್ತದಾತ್ಮೀಯಂ ಹೃದಯಂ ಸ್ವಭಾವಂ ಜಗದಿತ್ಯವಗಚ್ಛತಿ ಚ ವಿನೋದೇನೈವ ನತು ವಾಸ್ತವೇನ ರೂಪೇಣ ಜಗದಿತಿ ಕಿಂಚಿದುಪಲಭಾಮಹೇ॥ ವಿಚಾರಯಂತಸ್ಮಾತ್ಕಿಮಿವ ನಶ್ಯತಿ ಕಿಮಿವ ಜಾಯತೇ ಯಥಾ ಪರಮಕಾರಣಮವಿನಾಶಿ ತಥಾ ತದ್ಧೃದಯಮವಿನಾಶ್ಯಂ ಚ॥ ಮಹಾಕಲ್ಪಾದಯಶ್ಚ ತದವಯವಾಏವ ಅಪರಿಜ್ಞಾನಮಾತ್ರಮತ್ರ ಕೇವಲಂ ಭೇದಾಯೈವ ತದಪಿ ಪ್ರೇಕ್ಷ್ಯಮಾಣಂ ನ ಲಭ್ಯತ ಏವ ॥ ೪ ॥

---

ಶ್ರೀ ರಾಮನು ಕೇಳಿದನು:—

೩. ಮಹಾಕಲ್ಪವು ಕ್ಷಯವಾಗಲು ಸರ್ವಪ್ರಾಣಿಗಳೂ ಮೋಕ್ಷವನ್ನು ಹೊಂದುವುವು ಅಲ್ಲವೆ? ಆಗ ಮತ್ತೆ ಯಾರಿಗೆ, ಹೇಗೆ, ಸರ್ಗ ಸಂವಿತ್ತು ಹುಟ್ಟುವುದು ?

('ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ' ಇತಿ ಶ್ರುತೇಃ ಸರ್ವ ಮುಕ್ತೇರವಶ್ಯವಾಚ್ಯತ್ವಾದಿತಿ ಭಾವಃ—ತಾ. ಪ್ರ.)

ಶ್ರೀ ವಸಿಷ್ಠನು ಹೇಳಿದನು:—

೪. ಮಹಾಪ್ರಲಯದವರೆಗೂ ಇದ್ದ ಭೂಮಿ, ಜಲ, ಅಗ್ನಿ, ವಾಯು, ಆಕಾಶಗಳೆಂಬ ವಿಶೇಷಗಳೆಲ್ಲವೂ ನಿಶ್ಶೇಷವಾಗಿ ವಿನಾಶವಾಗಲು, ಚತುರ್ಮುಖ (ಹಿರಣ್ಯಗರ್ಭ) ನಿಂದ ಹಿಡಿದು ಸ್ಥಾವರಗಳವರೆಗಿನ ಸರ್ವವೂ ಮುಕ್ತಿಯಲ್ಲಿ ಸೇರಿ ಹೋಗಲು, ಮತ್ತೆ ಈ ಜಗತ್ತು ಹೇಗೆ ಅನುಭವಕ್ಕೆ (ಸೃಷ್ಟಿಗೆ) ಬರುವುದು ಎಂಬುದನ್ನು ಹೇಳುವೆನು ಕೇಳು

ತಸ್ಮಾನ್ನ ಕಸ್ಯಚಿತ್ಕಿಂಚಿತ್ಕದಾಚಿನ್ನಶ್ಯತಿ ಕ್ವಚಿತ್ ।
ನ ಚೈವ ಜಾಯತೇ ಬ್ರಹ್ಮ ಶಾಂತಂ ದೃಶ್ಯಮಜಂ ಸ್ಥಿತಂ　　॥ ೫ ॥

---

"ಬ್ರಹ್ಮವು ಅವ್ಯಪದೇಶ್ಯವು (ಗುರುತು ಇಲ್ಲದ್ದು.) ಪರಮಾರ್ಥಘನವು ತಾನಲ್ಲದ ಇನ್ನೇನೂ ಇಲ್ಲದ್ದು) ಚಿನ್ಮಾತ್ರವು." ಎಂದು ಮುನಿಗಳು ಹೇಳುವರು. ಆ ಬ್ರಹ್ಮದ ಹೃದಯವೇ ಜಗತ್ತು. ಆದರಿಂದ ಅದಕ್ಕಿಂತಲೂ ಅವ್ಯತಿರಿಕ್ತವು (ಬೇರೆಯಲ್ಲ) ಆ ದೇವನಾದ ಬ್ರಹ್ಮವು ತನ್ನ ಹೃದಯವನ್ನು, ತನ್ನ ಸ್ವಭಾವವನ್ನೇ ಜಗತ್ತು ಎಂದುಕೊಳ್ಳುವನು. ಅದು ಒಂದು ವಿನೋದ. ವಾಸ್ತವವಾಗಿ ಜಗತ್ತು ಎಂದು ಬೇರೆಯಾಗಿ ಅಲ್ಲಿ ಯಾವುದೂ ಇಲ್ಲ.

ವಿಚಾರಿಗಳಾದವರು, ಆದರಿಂದ, "ಯಾವುದು ನಾಶವಾಗುವುದು ? ಯಾವುದು ಹುಟ್ಟುವುದು? ಪರಮ ಕಾರಣವು ಅವಿನಾಶಿಯಾಗಿರಲು, ಅದರ ಹೃದಯವೂ ಅವಿನಾಶ್ಯವೇ ಆಗಿರಬೇಕಲ್ಲವೆ ? ಮಹಾಕಲ್ಪಾದಿಗಳೂ ಕೂಡ ಅದರ (ಆ ಜಗತ್ತಿನ) ಅವಯವಗಳೇ ! ಈ ಜ್ಞಾನವಿಲ್ಲದಿರುವಿಕೆಯೇ ಭೇದವಿದೆ ಎನ್ನುವುದಕ್ಕೆ ಕಾರಣವು. ಆ ಭೇದವೂ ಹುಡುಕಿ ನೋಡಿದರೆ ಇಲ್ಲವಾಗುವುದು " ಎನ್ನುವರು.

(ಯದ್ಯಪಿ ಮುಕ್ತ ದೃಷ್ಟ್ಯಾ ಸರ್ವಜೀವನ್ಮುಕ್ತಿರೇವ ನ ಕಸ್ಯ ಚಿತ್ ಕಿಂಚಿತ್ ಪರಿಶಿಷ್ಯತೇ ತಥಾಪ್ಯನ್ಯೇಷಾಂ ಪ್ರತ್ಯೇಕಂ ತತ್ವಜ್ಞಾನೋದಯಾ ಭಾವಾತ್ ತದ್ದೃಶಾ ಸ್ವಸ್ವಾವಿದ್ಯಾನ ನಷ್ಟೈವೇತಿ ಬಂಧಾನು ಭವ ಏವ । ಯಥಾ ಚಂದ್ರಲೋಕಸ್ಥಾನಾಂ....ದೃಷ್ಟ್ಯಾ ಅತ್ಯಂತಾ ಸದಪಿ ಚಂದ್ರ ಪ್ರಾದೇಶಿಕತ್ವಂ ಭೂಮಿಷ್ಠಾನಾಂ ದೃಶಾ ತಥ್ಯೈವಾಸ್ತೇ ತದ್ವದಿತಿ—ತಾ. ಪ್ರ.)

(ಮಹಾಕಲ್ಪಾದಿಗಳು ಕಾಲ ತರಂಗಗಳು. ಆದರಿಂದ ಆ ಕಾಲವೇ ನಾಶ ಮಾಡಿದರೆ, ಕಾಲವೇ ಹುಟ್ಟಿಸುವುದು ಮುಕ್ತಿಯು ಕಾಲವನ್ನು ದಾಟುವಿಕೆಯು ಈ ಕಲ್ಪಾದಿಗಳಿಂದ ಆದ ಆಗುವ ನಾಶ ಸೃಷ್ಟಿಗಳು ಕಾಲನ ಅಧೀನದಲ್ಲಿರುವವು.)

೫. ಆದರಿಂದ ಯಾವುದಕ್ಕೂ, ಎಷ್ಟು ಮಾತ್ರವೂ, ಯಾವಾಗಲೂ ಎಲ್ಲಿಯೂ ನಾಶವೆನ್ನುವುದೇ ಇಲ್ಲ. ಅಲ್ಲದೆ ಅದು ಬೇರೆಯಾಗಿ ಹುಟ್ಟುವುದು ಎನ್ನುವುದೇ ಇಲ್ಲ. ಆದರಿಂದ ಶಾಂತವಾದ ಬ್ರಹ್ಮವೇ ದೃಶ್ಯವಾಗಿ ಇರುವುದು (ಎನ್ನಬೇಕು)

ಆಕಾಶಪರಮಾಣುಸಹಸ್ರಾಂಶಮಾತ್ರೋऽಪಿ ಯಾ । ಶುದ್ಧ ಚಿನ್ಮಾತ್ರಸತ್ತಾ
ವಿದ್ಯತೇ ॥ ೬ ॥

ವಪುರ್ಜಗದಿದಂ ತಸ್ಯಾ ನನು ನಾಮ ಮಹಾಚಿತೇಃ ।
ಕಥಂ ನಶ್ಯತ್ಯನಷ್ಟಾಯಾಂ ತಸ್ಯಾಂ ನಾ ಚ ನ ನಶ್ಯತಿ ॥ ೭ ॥

ಸಂವಿದೋ ಹೃದಯಂ ಸ್ವಪ್ನೇ ಯಥಾ ಭಾತಿ ಜಗತ್ತಯಾ ।
ವ್ಯೋಮಾತ್ಮೈವ ತಥೈವಾದಿಸರ್ಗಾತ್ಪ್ರಭೃತಿ ಭಾಸತೇ ॥ ೮ ॥

ಚಿದ್ವ್ಯೋಮಾವಯವಃ ಸರ್ಗಃ ಸರ್ಗಸ್ಯೇತಾದೃಶಾಃ ಕ್ಷಯಾಃ ।
ಉದಯಾಶ್ಚೇತಿ ಖಂ ಸರ್ವಂ ಕಿಂ ನಾಶಿ ಕಿಮನಾಶಿ ಚ ॥ ೯ ॥

ಏಷಾ ಹಿ ಪರಮಾರ್ಥಸಂವಿದಚ್ಛೇದ್ಯಾ ಅದಾಹ್ಯಾऽಕ್ಲೇದ್ಯಾऽಶೋಷ್ಯಾ ಸಾ ಹ್ಯತದ್ವಿದಾಮದೃಶಾ ತಸ್ಯಾ ಯದ್ಧೃದಯಂ ತತ್ತದೇವ ಭವತಿ ಯಥಾಸೌ ನ ನಶ್ಯತಿ ತದಂತರ್ವರ್ತಿ ಜಗದಾದ್ಯನುಭವೋ ನ ಜಾಯತೇನ ನ ನಶ್ಯತ್ಯೇವೇತಿ ಕೇವಲಂ ಸ್ಮರಣವಿಸ್ಮರಣವಶೇನ ಸ್ವಭಾವರೂಪೇಣಾನುಭವಾನನುಭವೌ ಕಲ್ಪಯತೀವ॥ ೧೦ ॥

---

೬. ಆಕಾಶ ಪರಮಾಣುವಿನ ಸಾವಿರದ ಒಂದು ಪಾಲಿನಲ್ಲಿಯೂ ಶುದ್ಧ ಚಿನ್ಮಾತ್ರಸತ್ತಾ ಇರುವುದು.

೭. ಈ ಜಗತ್ತೆಂಬುದು ಆ ಆಕಾಶಪರಮಾಣುವಿನ ಅಂಶವೊಂದರಲ್ಲಿರುವ ಶುದ್ಧ ಚಿತ್ತಿನ ವಪುವು: ಮಹಾಚಿತ್ತಿನದಲ್ಲ. ಆ ಶುದ್ಧ ಚಿತ್ತು ಅನಷ್ಟವಾಗುವವರೆಗೆ ಅದರ ವಪುವೆಂತು ನಷ್ಟವಾಗುವುದು ? ಅದಂತೂ ನಷ್ಟವಾಗುವುದೇ ಇಲ್ಲ.

೮. ಸಂವಿತ್ತಿನ ಹೃದಯವು ಸ್ವಪ್ನದಲ್ಲಿ ಜಗತ್ತಾರೂಪವಾಗಿ ತೋರುವಂತೆ, ವ್ಯೋಮಾತ್ಮವೇ ಆದಿ ಸರ್ಗದಿಂದಲೂ ಜಗತ್ತಾಗಿ ಭಾಸವಾಗುತ್ತಿರುವುದು

೯. ಚಿದ್ವ್ಯೋಮದ ಅವಯವವೇ ಸರ್ಗವು ಸರ್ಗದ ಕ್ಷಯಗಳು ಎನ್ನುವುದೂ ಹೀಗೆಯೇ ! ಉದಯಗಳೂ ಹೀಗೆಯೇ ! ಎಲ್ಲವೂ ಆಕಾಶವೇ ಆಗಿರಲು, ನಾಶವಾಗುವುದು ಯಾವುದು : ಅವಿನಾಶವಾಗಿರುವುದು ಯಾವುದು ?

೧೦ ಈ ಪರಮಾರ್ಥಸಂವಿತ್ತು ಯಾವಾಗಲೂ ಅಚ್ಛೇದ್ಯವು, ಅದಾಹ್ಯವು, ಅಕ್ಲೇದ್ಯವು: ಅಶೋಷ್ಯವು. ಅದನ್ನು ತಿಳಿಯದವರಿಗೆ ಅದು ಅದೃಶ್ಯವು ಅದರ ಹೃದಯವು ಯಾವುದುಂಟೋ ಅದು ಏನು ಸಂಕಲ್ಪಿಸಿದರೆ ಅದು ಆ ಕೂಡಲೇ

ಯದ್ಯದ್ಯದಾತ್ಮಕಂ ತತ್ತ್ವಂ ತದ್ವಿನಾಶಂ ವಿನಾಽಕ್ಷಯಿ ।
ತಸ್ಮಾದ್ಬ್ರಹ್ಮಾತ್ಮಕಂ ದೃಶ್ಯಂ ವಿದ್ಧಿ ಬ್ರಹ್ಮವದಕ್ಷಯಂ　　॥ ೧೧ ॥

ಮಹಾಪ್ರಲಯಾದಯಸ್ತದವಯವಾ ಏವ　　॥ ೧೨ ॥

---

ಆಗುವುದು. ಆ ಹೃದಯದಲ್ಲಿರುವ ಜಗದಾದಿಗಳನ್ನು ಅನುಭವಿಸುವ ಅನುಭವ (ಅಜ್ಞಾನ)ವು ಯಾವುದುಂಟೋ ಅದು ಜನಿಸುವುದೂ ಇಲ್ಲ; ನಶಿಸುವುದೂ ಇಲ್ಲ. (ಹಾಗಾದರೆ ಅದು ಇಲ್ಲವೇ ಇಲ್ಲವೇ ಎಂದರೆ) ಕೇವಲವಾದ ಸ್ಮರಣ ವಿಸ್ಮರಣ ವಶವಾಗಿ, ಸ್ವಭಾವರೂಪದಿಂದಲೇ ಅನುಭವ ಅನನುಭವಗಳನ್ನು ಕಲ್ಪಿಸುವುದೋ ಎನ್ನುವಂತಿರುವುದು.

(ಗೀತೆಯಲ್ಲಿ ಹೇಳಿರುವ "ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟಃ ಮತ್ತಃ ಸ್ಮೃತಿ ಜ್ಞಾನಮ ಪೋಹನಂಚ" ಎಂಬುದನ್ನು ಇಲ್ಲಿ ಚಿಂತಿಸಿ. ಜೊತೆಗೆ ವಿಕಾರವಾಗು ವುದೆಲ್ಲ ಕ್ಷೇತ್ರ, ನಿರ್ವಿಕಾರಿಯು ಕ್ಷೇತ್ರಜ್ಞ ಎಂಬುದನ್ನೂ ವಿಕಾರಿಯಾದರೂ ಕ್ಷೇತ್ರವೂ ಪುರುಷ ಎಂಬುದನ್ನು ಚಿಂತಿಸಿ.

ವೇದಾಂತವನ್ನು ಮನನಮಾಡುವಾಗ ಖಂಡ-ಅಖಂಡ ಪ್ರಶ್ನವನ್ನು ಮೊದಲು ವಿಮರ್ಶಮಾಡಬೇಕು. ಮನನವು ತೀವ್ರವಾದ ಹಾಗೆಲ್ಲಾ ಇಂದ್ರಿಯಾ ತೀತವಾದ ಶಕ್ತಿಯು ಪ್ರಕಟವಾಗುವುದೂ ಹೆಚ್ಚುವುದು. ಆ ಶಕ್ತಿಯು ಸತ್ಯದ ಸಾಕ್ಷಾತ್ಕಾರವನ್ನು ಮಾಡಿಕೊಡುವುದು.)

೧೧ ಯಾವ ಯಾವ ರೂಪವಾಗಿ ಕಂಡರೂ ತತ್ವವು ವಿನಾಶವಿಲ್ಲದು ಅಕ್ಷಯವಾಗಿಯೇ ಇರುವುದು; ಆದರಿಂದ "ದೃಶ್ಯವೂ ಬ್ರಹ್ಮಾತ್ಮಕವೇ! ದೃಶ್ಯವೂ ಬ್ರಹ್ಮದಂತೆಯೇ ಅಕ್ಷಯವು' ಎಂದು ತಿಳಿ.

(ಜಗತಃ ಶಾಶ್ವತೇನಾತ್ಮನಾ ಸಾತ್ಮಕತ್ವಾದಪಿ ನ ನಶ್ವರತಾ—ತಾ. ಪ್ರ.)

೧೨ ಮಹಾಪ್ರಲಯಾದಿಗಳೆಲ್ಲವೂ ಆ ಬ್ರಹ್ಮದ ಅವಯವಗಳು.

ಚಿನ್ಮಾತ್ರೇ ಪರಮೇ ವ್ಯೋಮ್ನಿ ಕುತ ಏವ ಭವಾಭವೌ ।
ಕುತೋ ಭಾವವಿಕಾರಾದಿಃ ಕಥಂ ವ್ಯೋಮ್ನಿ ನಿರಾಕೃತೇ ॥ ೧೩ ॥

ಮಹಾಕಲ್ಪಾದಯೋ ಭಾವಾ ನಾಮ್ನೈತಾನಿ ಜಗಂತಿ ಚ ।
ಬ್ರಹ್ಮಾತ್ಮಕತಯೈವಾಸ್ಮಿನ್ಸಂವಿದ್ಬ್ರಹ್ಮಣಿ ಸಂಸ್ಥಿತಂ ॥ ೧೪ ॥

ನಿರಾಕೃತ್ಯಚ್ಛಚಿನ್ಮಾತ್ರಂ ದೃಶ್ಯಂ ಸಂಕಲ್ಪ್ಯ ತದ್ವಶಂ ।
ಯಾತಿ ಯೇನೈವ ಘಟಿತೋ ಯಕ್ಷಸ್ತದ್ಧೃಯೋ ಕಿಲ ॥ ೧೫ ॥

ಯಥಾವಯವಿನೋ ವೃಕ್ಷಸ್ಯ ಶಾಖಾವಿಟಪಫಲಪಲ್ಲವಪುಷ್ಪಾದಯೋಽವಯುವಾಸ್ತಥಾ ಪರಮಾರ್ಥಘನಸ್ಯಾಕಾಶಾದಪ್ಯಚ್ಛರೂಪಸ್ಯಾಪ್ಯಪ ದೇಶ್ಯಸ್ಯ ಪ್ರಲಯು ಮಹಾಪ್ರಲಯನಾಶೋದ್ಭೇದಭಾವಾಭಾವಾಸುಖದುಃಖ – ಜನನಮರಣಸಾಕಾರ ನಿರಾಕಾರತ್ವಾದಯೋಽವಯವಾಃ । ಯಥೈವ ಚಾಸಾವವಯವ್ಯ ನಾಶೋಽವ್ಯ ತಥೈವ ತ ಇತಿ ॥ ೧೬ ॥

---

೧೩. ಚಿನ್ಮಾತ್ರವಾದ ಪರಮಾಕಾಶದಲ್ಲಿ ಭವಾಭವಗಳು ಎಲ್ಲಿಯವು? ಎಲ್ಲವೂ ಆಕಾಶವೇ ಆಗಿರುವಾಗ ನಿರಾಕಾರಿಯಾದ ಆ ಆಕಾಶದಲ್ಲಿ ಭಾವವಿಕಾ ಪದೇಶ್ಯಶ್ಚ ರಾದಿಗಳು ಎಲ್ಲಿಯವು?

೧೪. ಮಹಾಕಲ್ಪಾದಿಗಳಾದ ಭಾವಗಳೂ ಈ ಜಗತ್ತುಗಳೂ ಬ್ರಹ್ಮಾತ್ಮಕವೇ. ಆದ್ದರಿಂದ, ಸಂವಿತ್ಸ್ವರೂಪವಾದ ಬ್ರಹ್ಮದಲ್ಲಿ ಸಂಸ್ಥಿತಗಳಾಗಿವೆ.

(ನನು ಅಚೇತನ ಸರ್ಗ ಪ್ರಲಯಾದಿ ಅನಂತಾವಯವ ಘಟಿತಂ ಕಥಂ ಚಿದೇಕರಸಂ ಸ್ಯಾದಿತಿ ಚೇತ್, ಗಿರಿವೃಕ್ಷ ನಗರಾದ್ಯನೇಕ ಪ್ರತಿಬಿಂಬ ಘಟಿತ ಸ್ಫಟಿಕ ಶಿಲಾಯಾಂ ಸ್ವಚ್ಛಶಿಲೈಕರಸತ್ವವತ್, ಇತ್ಯಾಶಯಃ—ತಾ. ಪ್ರ.)

೧೫. ಶುದ್ಧಚಿತ್ತು ನಿರಾಕೃತಿಯಾದುದು: ದೃಶ್ಯವೆಂದು ಸಂಕಲ್ಪಮಾಡಿ, ತನ್ನ ಸಂಕಲ್ಪಕ್ಕೆ ತಾನೇ ವಶವಾಗಿ, (ಒದ್ದಾಡುವುದು.) ಯಕ್ಷನು ಉಂಟು ಎಂದು ಕೊಂಡು, ಆ ಸಂಕಲ್ಪ ಬಲದಿಂದ ತನ್ನ ಮನಸ್ಸಿನಲ್ಲಿಯೇ ಹುಟ್ಟಿದ ಯಕ್ಷನನ್ನು ಹೊರಗೆ ಕಣ್ಣಿನಿಂದ ಕಾಣುವಂತೆ ಇದು.

೧೬. ಅವಯವಿಯಾದ ವೃಕ್ಷಕ್ಕೆ ಶಾಖಾ, ವಿಟಪ, ಫಲ, ಪಲ್ಲವ, ಪುಷ್ಪಾದಿ ಗಳೆಲ್ಲ ಅವಯವಗಳೋ ಹಾಗೆಯೇ, ಪರಮಾರ್ಥಘನವಾಗಿ, ಆಕಾಶಕ್ಕಿಂತಲೂ

ಅವಯವಾವಯವಿನೋರ್ದೃಶ್ಯಯೋರ್ವಾಸ್ಯದೃಶ್ಯಯೋಃ ।
ಏಕಾತ್ಮನೋರೇವ ಸದಾ ಭೇದೋಽಸ್ತಿ ನ ಕದಾಚನ ॥ ೧೭ ॥

ಯಥಾ ತರೋಃ ಸಂವಿನ್ಮೂಲಂ ತಥಾ ಪರಮಾರ್ಥಘನಸ್ಯ ಕ್ವಚಿತ್ಕಿಂಚಿತ್ತ್ವಂ ಕ್ವಚಿತ್ಸರ್ಗಸ್ತಂಬಃ ಕ್ವಚಿಲ್ಲೋಕಾಂತರವಿಟಪಾಃ ಕ್ವಚಿದ್ವ್ಯವಸ್ಥಾಃ ಶಾಖಾಃ ಕ್ವಚಿತ್ಪದಾರ್ಥಪಲ್ಲವಾಃ ಕ್ವಚಿತ್ಪ್ರಕಾಶಕುಸುಮಂ ಕ್ವಚಿದಂಧಕಾರಕಾರ್ಷ್ಣ್ಯಂ ಕ್ವಚಿನ್ನಭಃಕೋಟರಂ ಕ್ವಚಿತ್ಪ್ರಲಯಗುಲ್ಮಾಃ ಕ್ವಚಿನ್ಮಹಾಪ್ರಲಯಗುಲ್ಮಾಃ ಕ್ವಚಿದ್ಧರಿಹರಾದಿಗುಲುಚ್ಛಕಾಃ ಕ್ವಚಿಜ್ಜಾಡ್ಯತ್ವಕ್ ಏವಮನಾಕಾರಂ ವ್ಯೋಮರೂಪಮೇವ ಸಂವಿದಾತ್ಮನಿ ಬ್ರಹ್ಮಣಿ ಬ್ರಹ್ಮಸದೃಶಭಾವಾದವ್ಯತಿರಿಕ್ತಮೇವೈತತ್ಸ್ಥಿತಂ ॥ ೧೮ ॥

---

ಅಚ್ಛವಾದ ರೂಪವುಳ್ಳ, ಗುರುತು ಹಿಡಿಯುವುದಕ್ಕೂ ಸಾಧ್ಯವಿಲ್ಲದ, ಬ್ರಹ್ಮಕ್ಕೆ ಪ್ರಲಯ, ಮಹಾ ಪ್ರಲಯ, ನಾಶ, ಉಚ್ಛೇದ, ಮೊದಲಾದ ಭಾವ-ಅಭಾವಗಳೂ ಸುಖದುಃಖ ಜನನ ಮರಣ, ಸಾಕಾರ, ನಿರಾಕಾರ, ಮೊದಲಾದವುಗಳು, ಎಲ್ಲವೂ ಅವಯವಗಳೇ! ಅವಯವಿಯು ಅವಿನಾಶಿ, ಅವ್ಯಪದೇಶ್ಯ. ಎಂದ ಮೇಲೆ, ಅವಯವಗಳೂ ಹಾಗೆಯೇ!

೧೭. ಅವಯವಗಳು ದೃಶ್ಯಗಳು; ಅವಯವಿಯು ಅದೃಶ್ಯವು. ಆದರೂ ಎರಡೂ ಆತ್ಮವು ಒಂದೇ! ಆದರಿಂದ ಇವುಗಳಿಗೆ ಯಾವಾಗಲೂ ಬೇಧವೆಂಬುದೇ ಇಲ್ಲ

೧೮. ವೃಕ್ಷಕ್ಕೆ ವೃಕ್ಷಸಂವಿತ್ತೇ ಮೂಲವು ಹೇಗೋ ಹಾಗೇ ಪರಮಾರ್ಥ ಘನವಾದ ಬ್ರಹ್ಮಕ್ಕೆ ಒಮ್ಮೆ ಕಿಂಚಿತ್ತ್ವವು ಬರುವುದು ಆಗ ಅದೂ ಬ್ರಹ್ಮಾಂಡ ವೃಕ್ಷವಾಗುವುದು. ಆ ವೃಕ್ಷಕ್ಕೆ ಸರ್ಗವು ಸ್ತಂಭವು ಲೋಕಾಂತರಗಳೆಂಬ ಅಳ್ಳಿ ಗೊಂಬೆಗಳು. ಕೆಲವೆಡೆ ವ್ಯವಸ್ಥಿತವಾದ ಶಾಖೆಗಳು. ಕೆಲವೆಡೆ ಪದಾರ್ಥಗಳೆಂಬ ಪಲ್ಲವಗಳು. ಕೆಲವೆಡೆ ಪ್ರಕಾಶಗಳೆಂಬ ಕುಸುಮಗಳು. ಇನ್ನು ಕೆಲವೆಡೆ ಕತ್ತಲಿನ ಕಪ್ಪು. ಕೆಲವೆಡೆ ಆಕಾಶಗಳೆಂಬ ಬಯಲುಗಳೂ ಕೆಲವೆಡೆ ಮಹಾಪ್ರಲಯಗಳೆಂಬ ಗುಲ್ಮ(ಪೊದೆ)ಗಳು ಇನ್ನು ಕೆಲವೆಡೆ ಮಹಾ ಪ್ರಲಯಗಳೆಂಬ ಮಹಾ ಗುಲ್ಮಗಳು. ಆರಿಸುವುದೂ ಗಾಳಿಯೇ! ಇನ್ನು ಕೆಲವೆಡೆ ಹರಿಹರಮೊದಲಾದ ಗೊಂಚಲುಗಳು. ಇನ್ನು ಕೆಲವೆಡೆ ಜಡವಾದ ತೊಗಟೆ, ಹೀಗೆ ಅನಾಕಾರವಾಗಿ ವ್ಯೋಮರೂಪವಾಗಿರುವ ಸಂವಿತ್ಸ್ವರೂಪ ಬ್ರಹ್ಮದಲ್ಲಿ. ಬ್ರಹ್ಮಭಾವಕ್ಕೆ ಸದೃಶವಾಗಿ, ಅವ್ಯತಿರಿಕ್ತವಾಗಿ, ಎಲ್ಲವೂ ಇರುವುದು.

ಇತೋ ಭಾವ್ಯ ಇತೋ ಭಾವ ಇತಃ ಸರ್ಗ ಇತಃ ಕ್ಷಯಃ ।
ಸ್ವಭಾವ ಏವಾನುಭವ ಇತಿ ಬ್ರಹ್ಮಾಚಲಂ ಸ್ಥಿತಂ ॥ ೧೯ ॥

ಏವಂಮಯೇಽಪಿ ಪರಮೇ ಬ್ರಹ್ಮಾಕಾಶೇ ನ ರಂಜನಾಃ ।
ಕಾಶ್ಚಿದೇವಾಂಗ ಸಂತೀಂದುಬಿಂಬೇ ವಿಮಲತಾ ಯಥಾ ॥ ೨೦ ॥

ನಿರ್ಮಲೇ ಪರಮಾಕಾಶೇ ಕ್ವ ಭಾವಾಭಾವರಂಜನಾಃ ।
ಕ್ವಾದಿಮಧ್ಯಾಂತಕಲನಾಃ ಕ್ವ ಲೋಕಾಂತರವಿಭ್ರಮಾಃ ॥ ೨೧ ॥

ಅಪರಿಜ್ಞಾನಮೇವೈಕಂ ತತ್ರ ದೋಷವದುತ್ಥಿತಂ ।
ಕೇವಲಂ ತತ್ಪರಾವೃತ್ಯ ಪ್ರೇಕ್ಷಣಾತ್ಪರಿಶಾಮ್ಯತಿ ॥ ೨೨ ॥

ಅಜ್ಞಾನಂ ಜ್ಞಪ್ತಿಬೋಧೇನ ಪರಾಮೃಷ್ಟಂ ಪ್ರಣಶ್ಯತಿ ।
ಯೇನೈವಾಭ್ಯುದಿತಸ್ತೇನ ಪವನೇನೇವ ದೀಪಕಃ ॥ ೨೩ ॥

---

೧೯. ಒಂದೆಡೆ ಭಾವ್ಯ (ಭವಿಷ್ಯತ್)ವಾಗಿ ಇನ್ನೊಂದೆಡೆ ಭಾವ (ವರ್ತಮಾನ) ವಾಗಿ, ಒಂದೆಡೆ ಸರ್ಗವಾಗಿ ಇನ್ನೊಂದೆಡೆ ಪ್ರಲಯವಾಗಿ, ಸ್ವಭಾವವೇ ಅನುಭವ ವಾಗಿ ಬ್ರಹ್ಮಾಚಲವು ಇರುವುದು.

೨೦. ಹೀಗೆ ಎಲ್ಲವೂ ತುಂಬಿರುವ ಬ್ರಹ್ಮದಲ್ಲಿ ಭಾವ-ಅಭಾವಾದಿ ವಿಕಾರ (ರಂಜನ) ಗಳು ಯಾವಯಾವವೂ ಇಲ್ಲ: ಇಂದು ಬಿಂಬದಲ್ಲಿ ವಿಮಲತೆ (ನಿಷ್ಕಲಂಕತೆ)ಯು ಯಾವಾಗಲಾದರೂ ಉಂಟೇನು ?

೨೧ ನಿರ್ಮಲವಾದ ಪರಮಾಕಾಶದಲ್ಲಿ ಭಾವ-ಅಭಾವಗಳೆಂಬ ರಂಗುಗಳು ಎಲ್ಲಿಂದ ಬಂದಾವು? ಆದಿ ಮಧ್ಯ ಅಂತಗಳೆಂಬ ಕಲ್ಪನೆಗಳೂ, ಲೋಕಲೋಕಾಂತರ ಗಳೆಂಬ ಭ್ರಾಂತಿಗಳೂ ಎಲ್ಲಿಯವು ?

೨೨. ಒಂದೇ ಒಂದಾಗಿರುವ ಬ್ರಹ್ಮದ ಸ್ವರೂಪವನ್ನು ತಿಳಿಯದೆ ಇರುವುದ ರಿಂದ, ಅದರ ದೋಷವೆಂಬಂತೆ, ಈ (ಭಾವ ಭಾವ) ಭ್ರಾಂತಿಯು ತಲೆದೋರಿರು ವುದು ಅದನ್ನು ಹಿಂತಿರುಗಿಸಿದರೆ, ಏಕತ್ವವನ್ನು ಕಂಡರೆ ಈ ಭ್ರಾಂತಿಯೆಲ್ಲವೂ ಬಯಲಾಗುವುದು.

೨೩ ಅಜ್ಞಾನವನ್ನು ಜ್ಞಪ್ತಿಬೋಧರಿಂದ ಪರಾಮರ್ಶೆಮಾಡಿದರೆ ಅದು ಪ್ರಣಾಶನವನ್ನು ಹೊಂದುವುದು ದೀಪವನ್ನು ಉರಿಸುವುದೂ ಗಾಳಿಯೇ !

ಅಜ್ಞಾನಂ ಸಂಪರಿಜ್ಞಾತಂ ನಾಸೀದೇವೇತಿ ಬುಧ್ಯತೇ ।
ಅಬಂಧಮೋಕ್ಷಂ ಬ್ರಹ್ಮೈವ ಸರ್ವಮಿತ್ಯವಗಮ್ಯತೇ　　॥ ೨೪ ॥

ಏವಂ ಬೋಧಾದಯೋ ರಾಮ ಮೋಕ್ಷ ಉಕ್ತಾಃ ಸ್ವಸಂವಿದಾ ।
ವಿಚಾರಯತ್ನೋ ಲಭತೇ ನಾತ್ರ ಕಶ್ಚನ ಸಂಶಯಃ　　॥ ೨೫ ॥

ಇದಂ ಜಗಜ್ಜಾಲಮನಾದ್ಯಜಾತಂ ।
ಬ್ರಹ್ಮಾರ್ಥಮಾಭಾತಮಿತೀಹ ದೃಷ್ಟ್ವಾ ॥
ವಿಚಾರದೃಷ್ಟ್ಯಾಷ್ಟಗುಣೇಶ್ವರತ್ವಂ ।
ಪಶ್ಯಂಸ್ತೃಣಂ ಸ್ವಾತ್ಮನಿ ಜೀವ ಆಸ್ತೇ　　॥ ೨೬ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು**
**ನಿರ್ವಾಣ ಪ್ರಕರಣೇ "ಜಗದಾಕಾಶೈಕಬೋಧೋ" ನಾಮ**
**ಏಕಷಷ್ಟಿತಮಃ ಸರ್ಗಃ**

---

೨೪. ಅಜ್ಞಾನವನ್ನು ಚೆನ್ನಾಗಿ ವಿಮರ್ಶೆಮಾಡಿ ನೋಡಿ ತಿಳಿದುಕೊಂಡರೆ, ಅದು ಇರಲೇ ಇಲ್ಲವೆನ್ನುವುದು ತಿಳಿಯುವುದು. ಆದರಿಂದ ಬಂಧ, ಮೋಕ್ಷಗಳೆಂಬ ಪ್ರಸಕ್ತಿಯಿಲ್ಲದ, ಬ್ರಹ್ಮವೊಂದೇ ಸರ್ವವೂ ಎಂದು ತಿಳಿದು ಬರುವುದು.

೨೫. ಹೀಗೆ, ಬೋಧಾದಿಗಳು, ಮೋಕ್ಷೋಪಾಯಗಳು ಎಂದು ಹೇಳಿದೆನಲ್ಲವೇ? ಅವೆಲ್ಲವನ್ನೂ ವಿಚಾರವೆಂಬ ಪ್ರಯತ್ನಮಾಡಿದವನು ಪಡೆಯುವನು. ಇದರಲ್ಲಿ ಯಾವ ಸಂಶಯವೂ ಇಲ್ಲ.

೨೬. ಈ ಜಗಜ್ಜಾಲವೆಲ್ಲವೂ ಅನಾದಿಯು: ಅಜಾತವು. ಬ್ರಹ್ಮಾರ್ಥವಾಗಿಯೇ ಇದು ಇಲ್ಲಿ ಆಭಾತವಾಗಿರುವುದು ಎಂಬುದನ್ನು ಮನಗಂಡು, ವಿಚಾರಮಾಡಿನೋಡಿ ಅಷ್ಟ ಗುಣವಾಗಿರುವ ಈಶ್ವರತ್ವವನ್ನೂ ತೃಣವೆಂದು ಕಂಡುಕೊಂಡು, ಜೀವನು ಆತ್ಮಸ್ಥಿತನಾಗಿರುವನು.

(ಬ್ರಹ್ಮೈವಾರ್ಥಯತೇ ಪ್ರಾರ್ಥಯತೇ ಭೋಗಮೋಕ್ಷಾವಿತ್ಯರ್ಥಃ)

(ಅಂತಃಕರಣ ಧರ್ಮಗಳನ್ನು ಹಿಡಿದಾಗ ಭೋಗಃ. ಅಂತಃಕರಣದ ಸಾಕ್ಷಿಯಾಗಿ ನಿಂತಾಗ ಪೂರ್ಣಕಾಮತ್ವ )

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ**
**ನಿರ್ವಾಣ ಪ್ರಕರಣದಲ್ಲಿ "ಜಗದಾಕಾಶೈಕಬೋಧ" ಎಂಬ**
**ಅರವತ್ತೊಂದನೆಯ ಸರ್ಗವು.**

## ದ್ವಿಷಷ್ಟಿತಮಃ ಸರ್ಗಃ

ಶ್ರೀ ರಾಮ ಉವಾಚ.—

ಯದೇತದ್ಭವತಾ ದೃಷ್ಟಂ ಚಿದ್ವ್ಯೋಮವಪುಷಾ ತದಾ ।
ತದೇಕದೇಶಸಂಸ್ಥೇನ ಕಿಮುತ ಭ್ರಮತಾಂಬರೇ ॥ ೧ ॥

ಶ್ರೀ ವಸಿಷ್ಠ ಉವಾಚ :—

ಸಂಪನ್ನೋಽಹಮನಂತಾತ್ಮಾ ವ್ಯಾಪೀ ವ್ಯೋಮ ತದಾ ಕಿಲ ।
ಸ್ಯಾತಾಂ ತಸ್ಯಾಮವಸ್ಥಾಯಾಂ ಕೀದೃಶೌ ತೌ ಗಮಾಗಮೌ ॥ ೨ ॥

ನೈಕಸ್ಥಾನಸ್ಥಿತಮಯೋ ನಾಹಂ ಗತಿಮಯೋಽಭವಂ ।
ತದನೇನ ಸ್ವ ಏವಾಸ್ಮಿನ್ದೃಷ್ಟಮೇತನ್ಮಯಾತ್ಮನಿ ॥ ೩ ॥

---

## ಅರವತ್ತೆರಡನೆಯ ಸರ್ಗವು

ಶ್ರೀರಾಮನು ಕೇಳಿದನು.—

೧. ನೀನು ಚಿದ್ವ್ಯೋಮದ ದೇಹವಾಗಿ ಕಂಡುದನ್ನೆಲ್ಲಾ ಹೇಳಿದೆಯಲ್ಲವೆ? ಅದೆಲ್ಲವನ್ನು ಒಂದೇ ಕಡೆ ಕುಳಿತು ನೋಡಿದೆಯಾ? ತಿರುಗುತ್ತಾ ನೋಡಿದೆಯಾ?

ಶ್ರೀ ವಸಿಷ್ಠನು ಹೇಳಿದನು:—

೨. ಆಗ ನಾನು ಅನಂತಾತ್ಮನಾಗಿ ಆಕಾಶವನ್ನೆಲ್ಲಾ ವ್ಯಾಪಿಸಿದ್ದೆನಲ್ಲವೆ? ಹೀಗಿರಲು ಆ ಅವಸ್ಥೆಯಲ್ಲಿ ಗಮ–ಆಗಮವೆಂಬುವು ಎಲ್ಲಿಂದ ಆದಾವು?

೩. ನಾನು ಒಂದು ಕಡೆ ಕುಳಿತಿದ್ದವನೂ ಅಲ್ಲ: ತಿರುಗುತ್ತಿದ್ದವನೂ ಅಲ್ಲ: ಆದರಿಂದ ತನ್ಮಯನಾಗಿದ್ದ ನಾನು, ಆ ಆಕಾಶದಲ್ಲಿಯೇ, ನನ್ನಲ್ಲಿಯೇ ಇದೆಲ್ಲವನ್ನು ಕಂಡೆನು.

ಯಥಾಂಗಾನಿ ಶರೀರಸ್ಥೇ ಪಶ್ಯಾಮ್ಯಾಪಾದಮಸ್ತಕಂ ।
ಚಿನ್ನೇತ್ರೇ ನಾಕ್ಷ್ಯನೇತ್ರೇಣ ತಥೈತದ್ದೃಷ್ಟವಾನಹಂ ॥ ೪ ॥

ಅನಾಕೃತೇರ್ನಿರವಯವಸ್ಥಿತೇಸ್ತದಾ ।
ತಥಾ ಭವದ್ವಿಮಲಚಿದಂಬರಾತ್ಮನಃ ॥
ಜಗಂತಿ ತಾನ್ಯವಯವಜಾಲಕಾನಿ ಮೇ ।
ಯಥಾ ಸ್ವತೋ ನ ವಿಗಲಿತಾ ನ ವಸ್ತುತಾ ॥ ೫ ॥

ಪ್ರಮಾಣಮತ್ರ ತೇ ಸ್ವಪ್ನದೃಷ್ಟೋಽಭುವನವಿಭ್ರಮಃ ।
ಸ್ವಪ್ನೇಽನುಭೂಯತೇ ದೃಶ್ಯಂ ನ ಚ ಕಿಂಚಿತ್ಖಮೇವ ತತ್ ॥ ೬ ॥

ಯಥಾ ಪಶ್ಯತಿ ವೃಕ್ಷಃ ಸ್ವಂ ಪತ್ರಪುಷ್ಪಫಲಾದಿಕಂ ।
ಸ್ವಸಂವೇದನನೇತ್ರೇಣ ತಥೈತದ್ದೃಷ್ಟವಾನಹಂ ॥ ೭ ॥

---

೪. ನನ್ನ ಶರೀರದಲ್ಲಿ ಆಪಾದಮಸ್ತಕವಾಗಿ ಅಂಗಗಳನ್ನೆಲ್ಲ ಕಾಣುವ ಹಾಗೆ, ನೇತ್ರವಾದರೂ ನೇತ್ರವಲ್ಲದ ಚಿನ್ನೇತ್ರದಿಂದ ಇದೆಲ್ಲವನ್ನು ಕಂಡೆನು.

೫. ಆಕೃತಿಯೇ ಇಲ್ಲದ ನಿರವಯವನಾಗಿ; ವಿಮಲ ಚಿದಾಕಾಶಮಯನಾಗಿದ್ದ ನನಗೆ, ಆ ಜಗತ್ತುಗಳೆಲ್ಲವೂ ಅವಯವಗಳಾಗಿದ್ದುವು. ಅವು ನನಗಿಂತ ಬೇರೆಯಾಗಿಯೂ ಇರಲಿಲ್ಲ: ನನ್ನಲ್ಲಿ ಇದ್ದಂತೆಯೂ ಇರಲಿಲ್ಲ.

೬. ಇದಕ್ಕೆ ಪ್ರಮಾಣವೇನು ಎಂದರೆ ಸ್ವಪ್ನದಲ್ಲಿ ಕಾಣುವ ಅ-ಭುವನ-ಭ್ರಾಂತಿಯು. ಕನಸಿನಲ್ಲಿ ದೃಶ್ಯವನ್ನು ಕಂಡರೂ, ದೃಶ್ಯವು ಅನುಭವಕ್ಕೆ ಬಂದರೂ ಅದು ಆಕಾಶವಲ್ಲದೆ ಇನ್ನೇನೂ ಅಲ್ಲವಲ್ಲವೆ? (ಅಭುವನ ಭ್ರಾಂತಿ-ಜಾಗ್ರತ್ತಿನ ಜಗತ್ತು ಅಲ್ಲಿಲ್ಲದಿದ್ದರೂ ಅದರಂತಹ ಇನ್ನೊಂದು ಜಗತ್ತು ಇದೆಯೆಂದು ನಂಬಿ ವ್ಯವಹರಿಸುವಿಕೆ.)

೭. ವೃಕ್ಷವು ತನ್ನ ಪತ್ರಪುಷ್ಪಫಲಾದಿಗಳನ್ನು ತಾನೇ ನೋಡಿಕೊಳ್ಳುವಂತೆ, ಸ್ವ-ಸಂವೇದನ-ನೇತ್ರದಿಂದ ಇದೆಲ್ಲವನ್ನೂ ನೋಡಿದೆನು.

ಯಥಾಂಬುಧಿರನಂತಾತ್ಮಾ ವೇತ್ತಿ ಸರ್ವಾಂಜಲೇಚರಾನ್ ।
ತರಂಗಾವರ್ತಫೇನಾಂಶ್ಚ ತಥೈತದ್ಬುದ್ಧವಾನಹಂ ॥ ೮ ॥

ಅವಯವಾನ್ಸ್ವಾನವಯವೀ ಯಥಾವೇತ್ತಿ ನಿಜಾತ್ಮನಿ ।
ಅನನ್ಯಾನಾತ್ಮನಃ ಸರ್ಗಾಂಸ್ತಥೈತಾನ್ಬುದ್ಧವಾನಹಂ ॥ ೯ ॥

ಅದ್ಯಾಪಿ ತಾನಹಂ ದೇಹೇ ವ್ಯೋಮ್ನಿ ಶೈಲೇ ಜಲೇ ಸ್ಥಲೇ ।
ತಥೈವ ಸರ್ಗಾನ್ಪಶ್ಯಾಮಿ ರಾಮ ಬೋಧೈಕತಾಂ ಗತಃ ॥ ೧೦ ॥

ಪುರೋಽಸ್ಮಾಕಮಿದಂ ವಿಶ್ವಂಗೃಹಸ್ಯಾಂತರ್ಬಹಿಸ್ತಥಾ ।
ಪೂರ್ಣಮೇತಜ್ಜಗದ್ವೃಂದೈರ್ವೇದ್ಮಿ ಬೋಧೈಕತಾಂ ಗತಃ ॥ ೧೧ ॥

ಯಥಾಂಭೋ ರಸತಾಂ ವೇತ್ತಿ ಶೈತ್ಯಂ ವೇತ್ತಿ ಯಥಾ ಹಿಮಂ ।
ಸ್ಪಂದಂ ವೇತ್ತಿ ಯಥಾ ವಾಯುಸ್ತಥೈತದ್ವೇತ್ತಿ ಶುದ್ಧಧೀಃ ॥ ೧೨ ॥

---

೮. ಅನಂತವಾಗಿರುವ ಅಂಬುಧಿಯು ತನ್ನಲ್ಲಿರುವ ಜಲಚರಗಳೆಲ್ಲವನ್ನೂ ತರಂಗ, ಆವರ್ತ ಫೇನಗಳನ್ನೂ ನೋಡುವಂತೆ, ನಾನೂ ಇದೆಲ್ಲವನ್ನು ಕಂಡೆನು.

೯. ಅವಯವಿಯು ತನ್ನ ಅವಯವಗಳನ್ನು ತನ್ನಲ್ಲಿಯೇ ಕಂಡುಕೊಳ್ಳುವಂತೆ, ನನ್ನಿಂದ ಬೇರೆಯಲ್ಲದ ಆ ಸರ್ಗಗಳೆಲ್ಲವನ್ನೂ ಕಂಡೆನು.

೧೦. ಈಗಲೂ ಬೋಧೈಕ್ಯವನ್ನು ಪಡೆದಾಗ, ದೇಹದಲ್ಲಿ ವ್ಯೋಮದಲ್ಲಿ, ಶೈಲದಲ್ಲಿ, ಜಲದಲ್ಲಿ, ಸ್ಥಲದಲ್ಲಿ, ಎಲ್ಲೆಂದರಲ್ಲಿ, ರಾಮ, ಆ ಸರ್ಗಗಳನ್ನೆಲ್ಲ ನೋಡುತ್ತಿರುವೆನು.

೧೧. ಬೋಧೈಕ್ಯವನ್ನು ಪಡೆದಾಗ ನಮ್ಮ ಮುಂದುಗಡೆಯೇ, ಮನೆಯ ಒಳಗೆ, ಹೊರಗೆ, ವಿಶ್ವವೆಲ್ಲ ಜಗದ್ವೃಂದಗಳಿಂದ ಪೂರ್ಣವಾಗಿರುವುದನ್ನು ಕಾಣುವೆನು.

೧೨. ನೀರು ತನ್ನ ರಸತ್ವವನ್ನು ತಿಳಿಯುವಂತೆ, ಹಿಮವು ತನ್ನ ಶೈತ್ಯವನ್ನು ತಿಳಿಯುವಂತೆ, ವಾಯುವು ತನ್ನ ಸ್ಪಂದವನ್ನು ತಿಳಿಯುವಂತೆ ಶುದ್ಧಜ್ಞಾನಸಂಪನ್ನನು ಇದನ್ನು ತಿಳಿಯುವನು.

ಯೋ ಯೋ ನಾಮ ವಿವೇಕಾತ್ಮ ಶುದ್ಧ ಬೋಧೈಕತಾಂ ಗತಃ ।
ಸಮ ಏವ ಮಯ್ಯೈಕಾತ್ಮಾ ವೇದ್ಮಿ ಸ್ವಾತ್ಮಾನಮೀದೃಶಂ ॥ ೧೩ ॥

ಅಸ್ಯಾ ದೃಷ್ಟೇಃ ಪರಿಣತೇರ್ವೇತ್ತೃವೇದನವೇದ್ಯಧೀಃ ।
ನ ಕಾಚಿದಸ್ತ್ಯಭ್ಯುದಿತಾ ವಿಜ್ಞಾನಾತ್ಮೈಕತಾ ಯತಃ ॥ ೧೪ ॥

ದಿವ್ಯಾ ದೃಗದ್ರಿಸಂಸ್ಥಸ್ಯ ತಥಾ ಯೋಜನಕೋಟಿಗಾನ್ ।
ಭಾವಾನ್ವೇತ್ತಿ ಬಹಿಶ್ಚಾಂತರೇವಂ ತದ್ಬುದ್ಧವಾನಹಂ ॥ ೧೫ ॥

ಯಥಾ ಭೂಮಂಡಲಂ ಭಾವಾನ್ನಿಧಿಧಾತುರಸಾದಿಕಾನ್ ।
ವೇತ್ತ್ಯೇವಂ ತನ್ಮಯಾ ಬುದ್ಧಮನನ್ಯದ್ದೃಶ್ಯಮಾತ್ಮನಃ ॥ ೧೬ ॥

---

೧೩. ವಿವೇಕಸಂಪನ್ನರಾದವರಿಗೆಲ್ಲ ಬೋಧೈಕ್ಯವು ಬರುವುದು. ಅವರೆಲ್ಲರೂ ನನಗೆ ಸಮರು. ನಾನೂ ಅವರೂ ಏಕಾತ್ಮರು. ಆ ರೂಪವಾಗಿರುವವರೂ ನಾನೇ ಎಂದು ನಾನು ತಿಳಿಯುವೆನು.

೧೪ ಈ ದೃಷ್ಟಿಯು ಲಭಿಸಿದರೆ, ಈ ವಿಜ್ಞಾನಾತ್ಮೈಕತೆಯು ಲಭಿಸಿದರೆ, ಆಗ ವೇತ್ತೃ, ವೇದನ, ವೇದ್ಯ, ಎಂಬ ಬುದ್ಧಿಯು ಯಾವುದೂ ಇರುವುದಿಲ್ಲ.

(ತ್ರಿಪುಟೀ ಭೇದವಾದರೆ ಬ್ರಹ್ಮದರ್ಶನವೆಂದು ಹಿಂದೆ ಹೇಳಿರುವುದನ್ನು ಚಿಂತಿಸಿ.)

೧೫. ಬೆಟ್ಟದ ಮೇಲೆ ನಿಂತಿರುವವನನು ಸುತ್ತಲೂ ಇರುವುದನ್ನೆಲ್ಲ ನೋಡು ವಂತೆ, ದಿವ್ಯದೃಷ್ಟಿಯಿಂದ ಕೂಡಿದರೆ, ಬಹಿಃ ಅಂತಃ ಇರುವ ಭಾವಭಾವಗಳನ್ನೆಲ್ಲ ಅರಿಯುವನು. ನಾನು ಅದರಂತೆಯೇ ಇವೆಲ್ಲವನ್ನು ಕಂಡೆನು.

(ಏಕಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ ಎಂಬ ಶ್ರುತಿ ವಾಕ್ಯವನ್ನು ಪರಿಭಾವಿಸಿ ನೋಡಿ. ಗೀತೆಯ ವಿಶ್ವರೂಪಾಧ್ಯಾಯವನ್ನು ಇಲ್ಲಿ ಚಿಂತಿಸಿ.) :

೧೬. ಭೂಮಂಡಲವು ತನ್ನಲ್ಲಿರುವ ನಿಧಿ ಧಾತು, ರಸ, ಮೊದಲಾದ ಭಾವ ಗಳನ್ನು ತಿಳಿಯುವಂತೆ, ನನ್ನನ್ನು ಅಲ್ಲದೆ ಬೇರೆ ಏನನ್ನೂ ಕಾಣದ ನಾನು ಇದೆಲ್ಲ ವನ್ನೂ ತಿಳಿದೆನು.

ಶ್ರೀ ರಾಮ ಉವಾಚ :—

ಬ್ರಹ್ಮನ್ನನುಭವತ್ಯೇವಂ ತ್ವಯಿ ತಾಮರಸೇಕ್ಷಣ ।
ಸಾ ಕಿಂ ಕೃತವತೀ ಬ್ರೂಹಿ ಕಾಂತಾಯಾರ್ಯಾಪಾಠಪಾರಿನೀ ॥ ೧೭ ॥

ಶ್ರೀ ವಸಿಷ್ಠ ಉವಾಚ :—

ತಾಮೇವಾರ್ಯಾಂ ಪಠಂತೀ ಸಾ ತಥೈವಾನುನಯಾನ್ವಿತಾ ।
ಮತ್ಸಮೀಪೇ ನಭೋದೇಹಾ ವ್ಯೋಮ್ನಿ ದೇವೀವ ಸಂಸ್ಥಿತಾ ॥ ೧೮ ॥

ಯಥಾಹಮಾಕಾಶವಪುಸ್ತಥೈವಾಸೌ ಖರೂಪಿಣಿ ।
ತೇನ ದೃಷ್ಟಾ ನ ಸಾ ಪೂರ್ವಂ ದೇಹೇನ ಲಲನಾ ಮಯಾ ॥ ೧೯ ॥

ಅಹಮಾಕಾಶಮಾತ್ರಾತ್ಮಾ ಸಾ ಖಮಾತ್ರಶರೀರಿಣೀ ।
ಜಗಜ್ಜಾಲಂ ಖಮಾತ್ರಂ ತದಿತಿ ತತ್ರ ತದಾ ಸ್ಥಿತಂ ॥ ೨೦ ॥

---

ಶ್ರೀ ರಾಮನು ಕೇಳಿದನು :—

೧೭. ತಾಮರಸೇಕ್ಷಣನಾದ ಬ್ರಹ್ಮನ್, ನೀನಿಂತು ಬ್ರಹ್ಮಾಂಡ ದರ್ಶನ ಮಾಡುತ್ತಿದ್ದಾಗ ಆ ಆರ್ಯೆಯನ್ನು ಹಿಡಿದ ಆ ಕಾಂತೆಯು, ಏನು ಮಾಡಿದಳು ?

ಶ್ರೀ ವಸಿಷ್ಠನು ಹೇಳಿದನು —

೧೮. ಅದೇ ಆರ್ಯೆಯನ್ನು ಪಠಿಸುತ್ತ, ಅದೇ ಅನುನಯದಿಂದ, ಆಕಾಶ ದೇಹಿಯಾದ ಆಕೆಯು ಆಕಾಶದಲ್ಲಿ ದೇವಿಯಂತೆ ನಿಂತಿದ್ದಳು.

೧೯. ನಾನು ಆಕಾಶ ದೇಹಿಯಾಗಿದ್ದಂತೆ ಅವಳು ಆಕಾಶ ದೇಹಿಯು. ಅದರಿಂದ ನನಗೆ ಮೊದಲು ಅವಳು ಕಾಣಿಸಲಿಲ್ಲ.

೨೦. ನಾನೂ ಆಕಾಶಾತ್ಮನಾಗಿದ್ದೆನು ಅವಳೂ ಆಕಾಶಾತ್ಮಳೇ ಆಗಿದ್ದಳು. ಜಗಜ್ಜಾಲವೆಲ್ಲವೂ ಆಕಾಶಮಾತ್ರವೇ ಆಗಿ ಅಲ್ಲಿ ಆಗ ಇತ್ತು.

ಶ್ರೀ ರಾಮ ಉವಾಚ:—

ಶರೀರಸ್ಥಾನಕರಣಪ್ರಯತ್ನ ಪ್ರಾಣಸಂಭವೈಃ ।
ಯದುದೇತಿ ವಚೋ ವರ್ಣೈಸ್ತತ್ಕಥಂ ಸಾದೃಶಾಕೃತೇಃ ॥ ೨೧ ॥

ರೂಪಾಲೋಕಮನಸ್ಕಾರಃ ಕುತೋ ನಾಮಾತ್ಮನಾಮಿತಿ ।
ಬ್ರೂಹಿ ಮೇ ಭಗವಂಸ್ತತ್ತ್ವಂ ಯಥಾವೃತ್ತಶ್ಚ ನಿಶ್ಚಯಂ ॥ ೨೨ ॥

ಶ್ರೀ ವಸಿಷ್ಠ ಉವಾಚ:—

ರೂಪಾಲೋಕಮನಸ್ಕಾರಾಃ ಶಬ್ದಪಾರವಚಾಂಸಿ ಚ ।
ಯಥಾ ಸ್ವಪ್ನೇ ನಭಸ್ಯೇವ ಸಂತಿ ತತ್ರ ತಥಾಂಬರೇ ॥ ೨೩ ॥

ರೂಪಾಲೋಕಮನಸ್ಕಾರೈಃ ಸ್ವಪ್ನೇ ಚಿನ್ನಭ ಏವ ತೇ ।
ಯಥೋದೇತಿ ತಥಾ ತತ್ರ ತದ್ದೃಶ್ಯಂ ಪಾತ್ಮಕಂ ಸ್ಥಿತಂ ॥ ೨೪ ॥

---

ಶ್ರೀ ರಾಮನು ಕೇಳಿದನು :—

೨೧. ಶರೀರ, ಸ್ಥಾನ, ಕರಣ, ಪ್ರಯತ್ನ, ಪ್ರಾಣ, ಇಷ್ಟೂ ಇದ್ದರೆ ಮಾತ್ರ ಹುಟ್ಟುವ ವರ್ಣಾತ್ಮಕವಾದ ಮಾತು ಆಕಾಶಮಾತ್ರಶರೀರಿಯಾದ ಅವಳಲ್ಲಿ ಹೇಗೆ ಹುಟ್ಟುವುದು ?

೨೨. ರೂಪಾಲೋಕ, ಮನಸ್ಕಾರಗಳು ಆತ್ಮನಿಗೆ ಎಲ್ಲಿಂದ ಬಂತು ? ಭಗವಂತನೆ ಇದು ಹೇಗೆ ನಡೆಯಿತು ಎಂಬುದನ್ನು ನಿಶ್ಚಿತವಾಗಿ ಅಲ್ಲಿ ನಡೆದಂತೆ ನನಗೆ ಹೇಳು.

(ಬಾಹ್ಯಾರೂಪಾಲೋಕಾ, ಅಂತರಾಮನಸ್ಕಾರಾಶ್ಚ—ತಾ ಪ್ರ ಶ್ಲೋಕ ೨೨—ಸರ್ಗ—೯೯—ಪೂರ್ವಾರ್ಧ—ನಿರ್ವಾಣಪ್ರಕರಣ)

ಶ್ರೀ ವಸಿಷ್ಠನು ಹೇಳಿದನು :—

೨೩. ರೂಪಾಲೋಕ ಮನಸ್ಕಾರಗಳೂ ಶಬ್ದಪಾರವುಳ್ಳ ಮಾತುಗಳೂ ಕನಸಿನಲ್ಲಿ ಇರುವಂತೆ, ಆಕಾಶದಲ್ಲಿಯೂ ಇರುವುವು.

೨೪. ಕನಸಿನಲ್ಲಿ ಚಿದಾಕಾಶವೇ ರೂಪಾಲೋಕ ಮನಸ್ಕಾರಗಳಾಗಿ ಕಾಣುವಂತೆ, ಅಲ್ಲಿ ಕಂಡುದೆಲ್ಲವೂ ಆಕಾಶಮಯವೇ ಆಗಿತ್ತು.

ನ ಕೇವಲಂ ತು ತದ್ದೃಶ್ಯಂ ಯಾವತ್ತು ವಿಷಯಂ ವಯಂ ।
ಜಗಚ್ಚೇದಂ ಖಮೇವಾಚ್ಛಂ ಯಥಾ ತನ್ನಸ್ತಥಾಖಿಲಂ ॥ ೨೫ ॥

ಪರಮಾರ್ಥಮಹಾಧಾತುರ್ವೇದ್ಯನಿರ್ಮುಕ್ತಚಿದ್ವಪುಃ ।
ಏವಂ ನಾಮ ಸ್ವಯಂ ಭಾತಿ ಸ್ವಭಾವಸ್ಯೈವ ನಿಶ್ಚಯಃ ॥ ೨೬ ॥

ಶರೀರಸ್ಥಾನಕರಣಸತ್ತಾಯಾಂ ಕಾ ತವ ಪ್ರಮಾ ।
ಯಥೈವ ತೇಷಾಂ ದೇಹಾದಿ ತಥಾಸ್ಮಾಕಮಿದಂ ಸ್ಥಿತಂ ॥ ೨೭ ॥

---

೨೫. ದೃಶ್ಯವು ಮಾತ್ರವಲ್ಲ: ಇಂದ್ರಿಯಗೋಚರವಾಗುವ ವಿಷಯಗಳು ಯಾವ ಯಾವುದುಂಟೋ ಈ ಜಗತ್ತು ಯಾವುದುಂಟೋ ಅದೆಲ್ಲವೂ ಶುದ್ಧವಾದ ಆಕಾಶವೇ! ನಮಗೆ ಅದರಂತೆಯೇ ಮಿಕ್ಕುದೂ ಎಲ್ಲಾ ಆಕಾಶವೇ!

೨೬. ಪರಮಾರ್ಥಮಹಾಧಾತುವು, ಚಿತ್ತೇ ಶರೀರವಾಗಿ ಉಳ್ಳುದು: ವೇದ್ಯ ನಿರ್ಮುಕ್ತವು: ಹೀಗೆಂದು ಶ್ರುತಿಯೂ ವಿದ್ವದನುಭವವೂ ಒಪ್ಪಿರುವುದು. ಅದು ಅಕಾರಣವಾಗಿ ತಾನಾಗಿ ಭಾನವಾಗುವುದು.

(ಸ್ವಭಾವಸ್ಯ ಜಗದ್ವಾಸನೋಪಹಿತ ಚಿತ್ಸ್ವಭಾವಸ್ಯ) ಜಗತ್ತು ಬೇರೆಯಾಗಿ ಒಂದುಂಟು ಎನ್ನುವುದು ಲೋಕವಾಸನೆಯನ್ನು ಅಂಗೀಕರಿಸಿರುವ ಸ್ವಭಾವದ ನಿಶ್ಚಯವು.

೨೭. ಶರೀರದ ಅಂಗಾಂಗಗಳನ್ನೂ ಇಂದ್ರಿಯಗಳನ್ನೂ ಮಾಡುವ ಸತ್ತೆಯೊಂದು ಪ್ರತ್ಯೇಕವಾಗಿದೆಯೆಂಬ ಪ್ರಮಾ (ನಿಶ್ಚಯಜ್ಞಾನವು) ನಿನಗೆ ಯಾವುದು? (ಎಲ್ಲಿಂದ ಬಂತು?) ಮಿಕ್ಕವರಿಗೆ ದೇಹಾದಿಗಳು ಹೇಗೋ ಹಾಗೆಯೇ ನಮಗೂ (ಪ್ರತ್ಯೇಕವಾಗಿವೆ ಎಂಬ ಭ್ರಾಂತಿಯಿರುವಂತೆ) ಇದಂರೂಪವಾದ ಜಗತ್ತು ಪ್ರತ್ಯೇಕವೆಂಬ ಭ್ರಾಂತಿಯು.

("ಅಶರೀರಂ ಶರೀರೇಷು ಅನವಸ್ಥೇಷು ಅವಸ್ಥಿತಂ" ಇತ್ಯಾದಿ ಶ್ರುತಿವಿಧಿ **ತದ್ವಾದಿತಿಭಾವಃ—ತಾ ಪ್ರ.**)

ಯಥೈವ ತತ್ತಥೈವೇದಂ ತಥೈವೇದಂ ಯಥೈವ ತತ್ ।
ಅಸತ್ಸತ್ತಾಮಿವ ಗತಂ ಸಚ್ಚಾಸದಿವ ಚ ಸ್ಥಿತಂ ॥ ೨೮ ॥

ಯಥಾ ಸ್ವಪ್ನೇ ಧರಾಧ್ವಾದ್ರಿಪೃಷ್ಠ್ಯವಹೃತಿರ್ನಭಃ ।
ತದಾ ಹ್ಯಹಂ ಚ ತ್ವಂ ಸಾ ಚ ತದಿದಂ ಚ ತಥಾ ನಭಃ ॥ ೨೯ ॥

ಯಥಾ ಸ್ವಪ್ನೇ ನೃಭಿರ್ಯುದ್ಧಕೋಲಾಹಲಗಮಾಗಮಾಃ ।
ಅಸಂತೋಽಪ್ಯನುಭೂಯಂತೇ ಸಂಸಾರನಿಕರಾಸ್ತಥಾ ॥ ೩೦ ॥

ಪಶ್ಚೇ ಚೇತ್ಸ್ವಪ್ನವೃತ್ತ್ಯಾತ್ರೀಃ ತಸ್ಮಾತ್ತದಸಮಂಜಸಂ ।
ಅವಾಚ್ಯಮೇತಪ್ಫೇತುರ್ನ ನಾನ್ಯೋಽಸ್ತ್ಯನುಭವಸ್ಥಿತೇಃ ॥ ೩೧ ॥

೨೮. ಚಿತ್ ಹೇಗೋ ಇದೂ ಹಾಗೆ! ಇದು ಹೇಗೋ ಚಿತ್ತೂ ಹಾಗೇ! ಸತ್ತು ಅಸತ್ತು ಆದ ಹಾಗೆ ಕಾಣುವುದು. ಅಸತ್ ಸತ್ ಆದ ಹಾಗೆ ಕಾಣುವುದು.

(ಸತ್ ನಿರ್ವಿಶೇಷಾತ್ಮತತ್ವಂ ಚಾನೃತತ್ವಾದಸದಿವ ಅತ್ಯಂತಾ ಪ್ರಸಿದ್ಧಮಿವ ಸ್ಥಿತಂ । ಚಕಾರಃ ಚಿದಾನಂದ ಸ್ವಭಾವ ವ್ಯತ್ಯಾಸೋಽಪ್ಯೇವಮಿತಿ ಅನುಕ್ತ ಸಮುಚ್ಚಯಃ—ತಾ. ಪ್ರ)

೨೯. ಕನಸಿನಲ್ಲಿ ಆಕಾಶವೇ ಭೂಮಿ, ಬೆಟ್ಟ, ದಾರಿ, ಮೊದಲಾದವೆಲ್ಲವೂ ಆಗಿ ತೋರುವಂತೆ, ಹಾಗೆಯೇ ನಾನು, ನೀನು, ಅವಳು, ಅದು, ಇದು ಮೊದಲಾದವೂ ಆಕಾಶವೇ!

೩೦. ಕನಸಿನಲ್ಲಿ ನಡೆಯುವ ಕದನದ ಕೋಲಾಹಲಗಳು ಅಸತ್ಯವಾಗಿದ್ದರೂ ಅನುಭವಕ್ಕೆ ಬರುವುದಲ್ಲವೆ? ಸಂಸಾರಗಳೂ ಅದರಂತೆಯೇ!

೩೧. ಸ್ವಪ್ನದಲ್ಲಿ ಕಂಡುದಕ್ಕೆ ಬೇರೆ ಕಾರಣವನ್ನು ಸಂಭಾವನೆ ಮಾಡುವುದು ಸಾಧ್ಯವಿಲ್ಲ; ಬೇರೆ ಹೇತುವು ಯಾವುದನ್ನು ಹೇಳಲಾದೀತು? ಅನುಭವಿಸಿರುವವನ ಅನುಭವವಲ್ಲದೆ ಅಲ್ಲಿ ಇನ್ನೂ ಯಾವುದೂ ಸಾಕ್ಷಿಯೇ ಇಲ್ಲದಿರಲು ಹೇತುವೆಲ್ಲಿಂದ ಬಂದೀತು?

ಕಥಮಾಲಕ್ಷ್ಯತೇ ಸ್ವಪ್ನ ಇತಿ ಪ್ರಷ್ಟುಃ ಪ್ರಕಥ್ಯತೇ ।
ಯಥೈವಂ ಪಶ್ಯಸೀತ್ಯೇವ ಹೇತುರತ್ರಾಸ್ತಿ ನೇತರಃ ॥ ೩೨ ॥

ಸ್ವಪ್ನಜಂತುರಿವ ವ್ಯೋಮ್ನಿ ಭಾತಿ ಪ್ರಥಮಸರ್ಗತಃ ।
ಪ್ರಭೃತ್ಯೇವ ವಿರಾಡಾತ್ಮಾ ಖೇ ಖಮೇವ ಪರಸ್ಪರೇ ॥ ೩೩ ॥

ಸ್ವಪ್ನಶಬ್ದೇನ ಬೋಧಾರ್ಥಂ ತವ ವ್ಯವಹರಾಮ್ಯಹಂ ।
ದೃಶ್ಯಂ ತ್ವಿದಂ ನ ಸನ್ನಾಸನ್ನ ಸ್ವಪ್ನೋ ಬ್ರಹ್ಮ ಕೇವಲಂ ॥ ೩೪ ॥

ಅಥ ರಾಘವ ಸಾ ಕಾಂತಾ ಮಯಾ ಕಾಂತಾನುಷಂಗಿಣೀ ।
ಸಂವಿದಂ ತನ್ಮಯೀಂ ಕೃತ್ವಾ ಪೃಷ್ಟೇದಂ ದೃಶ್ಯರೂಪಿಣೀ ॥ ೩೫ ॥

---

೩೨ ಯಾರಾದರೂ ಕನಸು ಹೇಗೆ ಕಾಣಲಾಗುವುದು ಎಂದು ಯಾರಾದರೂ ಕೇಳುವುದಾದರೆ, ಅವರಿಗೆ ಉತ್ತರ, ನೀನು ಕಂಡ ಹಾಗೆ ಎಂದಷ್ಟೇ! ಅದೇ ಹೇತುವಾಗಬಹುದೇ ಹೊರತು ಇನ್ನು ಯಾವುದೂ ಇಲ್ಲ.

೩೩. ವಿರಾಡಾತ್ಮನು ಚಿದಾಕಾಶರೂಪನಾಗಿ ಚಿದಾಕಾಶದಲ್ಲಿಯೇ ಪ್ರಥಮ ಸರ್ಗಮೊದಲುಗೊಂಡು ಸ್ವಪ್ನಜಂತುವಿನಂತೆ ವಿಷಯಿವಿಷಯಗಳಾಗಿ ವಿರಾಜಿಸುತ್ತಿರುವನು

(ಪರಸ್ಪರೇ ವಿಷಯಿ ವಿಷಯವತಾ ಅನ್ಯೋನ್ಯ ಸಾಪೇಕ್ಷರೂಪೇ—ತಾ. ಪ್ರ.)

೩೪. ನಿನಗೆ ಬೋಧವು ಉದಯವಾಗಲೆಂದು ಸ್ವಪ್ನ ಶಬ್ದದಿಂದ ವ್ಯವಹಾರ ಮಾಡುತ್ತಿರುವೆನು. ಈ ದೃಶ್ಯವು ಯಾವುದಿದೆಯೋ ಅದು ಸತ್ ಅಲ್ಲ: ಅಸತ್ ಅಲ್ಲ ಸ್ವಪ್ನವು ಕೂಡ ಕೇವಲವಾದ ಬ್ರಹ್ಮವೇ!

೩೫. ಅನಂತರ, ಎಲೈ ರಾಘವನೆ, ಕಾಂತನನ್ನು ಹೊಂದಿಕೊಂಡಿರುವ, ದೃಶ್ಯರೂಪಿಣಿಯಾಗಿರುವ ಆ ಕಾಂತೆಯನ್ನು, ನನ್ನ ಆತ್ಮ ಸಂವಿತ್ತನ್ನು ತನ್ಮಯವಾಗಿ ಮಾಡಿಕೊಂಡು ಹೀಗೆ ಕೇಳಿದೆನು :—

ವ್ಯವಹಾರೋ ಯಥೋದೇತಿ ಸ್ವಪ್ನೇ ಸ್ವಪ್ನಜನೈಃ ಸಹ ।
ತಥಾ ತದಾ ತಯಾ ಸಾರ್ಧಂ ವ್ಯವಹಾರೋ ಮಮೋದಿತಃ ॥ ೩೬ ॥

ಯಥೈವ ಸ್ವಪ್ನಸಂಕಾಶೋ ಽವ್ಯವಹಾರಃ ಖಮೇವ ಸಃ ।
ತಥೈವ ತ್ವಮಿಮಂ ವಿದ್ಧಿ ಮಾಮಾತ್ಮಾನಂ ಜಗಚ್ಚ ಖಂ ॥ ೩೭ ॥

ಯಥಾ ಸ್ವಪ್ನಜಗದ್ರೂಪಂ ಖಮೇವೈವಮಿದಂ ಜಗತ್ ।
ಜಾಗ್ರದಾದೌ ಸ ಹಿ ಸ್ವಪ್ನಃ ಸರ್ಗಾದೌ ಜಗದುದ್ಭವಃ ॥ ೩೮ ॥

ಸ್ವಪ್ನೋಽಯಂ ಜಗದಾಭೋಗೋ ನ ಕಿಂಚಿದ್ವಾ ಖಮೇವ ಚ ।
ನಿರ್ಮಲಂ ಜ್ಞಪ್ತಿತಾಮಾತ್ರಮಿತ್ಥಂ ಸನ್ಮಾತ್ರಸಂಸ್ಥಿತಂ ॥ ೩೯ ॥

ಸ್ವಪ್ನಸ್ಯ ವಿದ್ಯತೇ ದ್ರಷ್ಟಾ ಸಾಕಾರೋ ಯುಷ್ಮದಾದಿಕಃ ।
ದ್ರಷ್ಟಾ ತು ಸರ್ಗಸ್ವಪ್ನಸ್ಯ ಚಿದ್ವ್ಯೋಮೈವಾಮಲಂ ಸ್ವತಃ ॥ ೪೦ ॥

---

೩೬. ಸ್ವಪ್ನದಲ್ಲಿ ಸ್ವಪ್ನಜನರೊಡನೆ ಹೇಗೆ ವ್ಯವಹಾರವು ಉದಯಿಸುವುದೋ ಹಾಗೆಯೇ ಅವಳೊಡನೆ ಆಗ ನನಗೂ ವ್ಯವಹಾರವು ನಡೆಯಿತು.

೩೭. ವ್ಯವಹಾರವು ನಿಜವಾಗಿಯೂ ಸ್ವಪ್ನದಂತೆಯೇ ! ಅದೂ ಆಕಾಶವೇ ! ಆದ್ದರಿಂದ, ನಾನು, ನೀನು, ಜಗತ್ತು, ಮೊದಲಾದ ಈ ಸರ್ವವೂ ಆಕಾಶವೇ ಎಂದು ತಿಳಿ.

೩೮. ಸ್ವಪ್ನ ಜಗತ್ತು ಹೇಗೆ ಆಕಾಶವೋ ಹಾಗೆಯೇ ಈ ಜಗತ್ತೂ ಕೂಡ ಆಕಾಶಮಯವೇ ಜಾಗ್ರತ್ತಿನ ಆದಿಯಲ್ಲಿ ಸ್ವಪ್ನವು: ಸರ್ಗದ ಮೊದಲಿನಲ್ಲಿ ಜಗತ್ತಿನ ಉದ್ಭವವು.

೩೯. ಸ್ವಪ್ನವೇ ಈ ಜಗತ್ತಾಗಿ ಹರಡಿರುವುದು: ಅದು ಇನ್ನೇನೂ ಅಲ್ಲ: ಹರಡಿರುವುದೆಲ್ಲ ಆಕಾಶವೇ ! ನಿರ್ಮಲವಾದ ಜ್ಞಪ್ತಿಯೇ ಸನ್ಮಾತ್ರವಾಗಿ ಹೀಗೆ ಸಂಸ್ಥಿತವಾಗಿರುವುದು

೪೦. ಸ್ವಪ್ನವನ್ನು ನೋಡುವ ದ್ರಷ್ಟೃವು ಸಾಕಾರನಾಗಿ ನಾನು ನೀನು ಎಂದುಕೊಂಡು ಇರುವನು ಸರ್ಗಸ್ವಪ್ನವನ್ನು ನೋಡುವ ದ್ರಷ್ಟೃವು ಸ್ವಯಂ ಚಿದಾಕಾಶವು.

ಯಥಾ ದ್ರಷ್ಟಾಮಲಂ ವ್ಯೋಮ ದೃಶ್ಯಂ ತದ್ವದ್ಗತಂ ತಥಾ ।
ಸ್ವಪ್ನರೂಪಜಗತ್ಯಚ್ಚೈರ್ಜಗತ್ತ್ವೇನಾಮಲಂ ನಭಃ ॥ ೪೧ ॥

ಚಿದ್ವ್ಯೋಮ್ನೋನಾಕೃತೇಃ ಸ್ವಪ್ನೋ ಹೃದಿ ಸ್ಫುರತಿ ಯಃ ಸ್ವತಃ ।
ಸರ್ಗಸ್ತಸ್ಯ ಕುತಸ್ತೇನ ಸಾಕೃತಿತ್ವಂ ಕಥಂ ಭವೇತ್ ॥ ೪೨ ॥

ಸಾಕಾರಸ್ಯೈವ ಯತ್ಸ್ವಪ್ನಜಗತ್ತದ್ವ್ಯೋಮ ನಿರ್ಮಲಂ ।
ನಿರಾಕಾರಸ್ಯ ಚಿದ್ವ್ಯೋಮ್ನಃ ಸರ್ಗಃ ಸ್ವಪ್ನಃ ಕಥಂ ನ ಖಂ ॥ ೪೩ ॥

ನಿರುಪಾದಾನಸಂಭಾರಮಭಿತ್ತಾವೇವ ಚಿನ್ನಭಃ ।
ಪಶ್ಯತ್ಯಕೃತಮೇವೇದಂ ಜಗತ್ಸ್ವಪ್ನಂ ಕೃತಂ ತಥಾ ॥ ೪೪ ॥

ಮೃದ್ವ್ಯಾಪ್ಯ ಚಿದಾಕಾಶಮ್ಮೃದಾ ಬ್ರಹ್ಮಣಾ ಬ್ರಾಹ್ಮಣೇನ ಖೇ ।
ಕೃತೋಪಿ ನ ಕೃತಃ ಸರ್ಗಮಂಡಪೋಕ್ಷಗವಾಕ್ಷಕಃ ॥ ೪೫ ॥

---

೪೧. ದ್ರಷ್ಟೃವು ಹೇಗೆ ನಿರ್ಮಲವಾದ ಚಿದಾಕಾಶವೋ ಹಾಗೆಯೇ ದೃಶ್ಯವೂ ಕೂಡ ಚಿದಾಕಾಶವೇ. ಚಿದಾಕಾಶವೇ ದ್ರಷ್ಟೃವಾದ ಹಾಗೆಯೇ ದೃಶ್ಯವೂ ಆಗಿರುವುದು. ನಿರ್ಮಲವಾದ ಚಿದಾಕಾಶವು ಸ್ವಪ್ನರೂಪವಾದ ಜಗತ್ತಾಗಿ ಹರಡಿರುವುದು.

೪೨. ನಿರಾಕಾರವಾದ ಚಿದಾಕಾಶದ ಹೃದಯದಲ್ಲಿ ಅಕಾರಣವಾಗಿ ತಾನಾಗಿ ಸ್ಫುರಿಸಿದ ಸ್ವಪ್ನವೇ ಸರ್ಗವು ಅದಕ್ಕೆ ಆಕೃತಿತ್ವವು ಹೇಗೆ ಎಲ್ಲಿಂದ ಬಂದೀತು ?

೪೩. ಸಾಕಾರನಾಗಿರುವನ ಸ್ವಪ್ನವೂ ಕೂಡ ನಿರ್ಮಲ ಚಿದಾಕಾಶವಾಗಿರಲು, ನಿರಾಕಾರವಾಗಿರುವ ಚಿತ್ತಿನ ಸ್ವಪ್ನವಾದ ಸ್ವರ್ಗವೆಂತು ಆಕಾಶವಲ್ಲ ?

೪೪ ಉಪಾದಾನ ಕಾರಣಗಳು ಯಾವವೂ ಇಲ್ಲದಿರ ವಾಗ, ಭಿತ್ತಿಯೇ ಇಲ್ಲದಿರುವಾಗ ಚಿದಾಕಾಶವು, ಅಕೃತವಾಗಿಯೇ, (ಕಾರಣವೇ ಇಲ್ಲದೆ,) ಸ್ವಪ್ನ ವನ್ನು ಕೃತವಾದಂತೆಯೇ ನೋಡುವುದು.

೪೫. ಬ್ರಹ್ಮವು ಬ್ರಾಹ್ಮಣ (ಹಿರಣ್ಯಗರ್ಭ)ವನ್ನು ಮಾಡಿತು ಅವನು ಚಿದಾಕಾಶವೆಂಬ ಮಣ್ಣಿನಿಂದ ಮಣ್ಣು ತೆಗೆದುಕೊಂಡು ಇಂದ್ರಿಯಗಳೆಂಬ ಗವಾಕ್ಷಗಳನ್ನುಳ್ಳ ಸರ್ಗ ಮಂಡಪವನ್ನು ಮಾಡಿದನು. ಆದರೆ ಆ ಮಂಡಪವು ಆಗಿದ್ದರೂ ಆಗಿದ್ದಂತೆಯೇ !

ನೋ ಕರ್ತೃತಾ ನ ಚ ಜಗಂತಿ ನ ಭೋಕ್ತೃತಾಸ್ತಿ ।
ನಾಸ್ತೀತಿ ನಾಸ್ತಿ ನ ಚ ಕಿಂಚಿದತೋ ಬುಧಃ ಸನ್ ॥
ಪಾಷಾಣಮೌನಮವಲಂಬ್ಯ ಯಥಾಪ್ರವಾಹ-
ಮಾಚಾರಮಾಚರ ಶರೀರಮಿಹಾಸ್ತು ಮಾ ವಾ ॥ ೪೬ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಚಿದೈಕ್ಯಂ" ನಾಮ
ದ್ವಿಷಷ್ಟಿತಮಃ ಸರ್ಗಃ

೪೬: ಕರ್ತೃತ್ವವಿಲ್ಲ ಜಗತ್ತುಗಳೂ ಇಲ್ಲ. ಭೋಕ್ತೃತ್ವವೂ ಇಲ್ಲ. ಇಲ್ಲವೆಂಬುದೂ ಇಲ್ಲ. ಯಾವುದೂ ಇಲ್ಲ. ಆದರಿಂದ ಬುದ್ಧಿವಂತನಾಗಿ, ಪಾಷಾಣ ಮೌನವನ್ನು ಅವಲಂಬಿಸಿ, ತಾನಾಗಿ ಮಾಡಬೇಕಾಗಿ ಬಂದುದನ್ನು ಮಾಡುತ್ತ, ಶರೀರವು ಇದ್ದರೆ ಇರಲಿ, ಹೋದರೆ ಹೋಗಲಿ, ಎಂದು ಸುಖವಾಗಿರು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಚಿದೈಕ್ಯ" ಎಂಬ
ಅರವತ್ತೆರಡನೆಯ ಸರ್ಗವು.

## ತ್ರಿಷಷ್ಟಿತಮಃ ಸರ್ಗಃ

ಶ್ರೀರಾಮ ಉವಾಚ:—

ತವ ಸ್ತ್ರಿಯಾಸ್ಸ್ವರೂಪೇಣ ದೇಹೇನಾಥೋತ್ತಯಾ ಕಥಂ ।
ಕಥಮುಚ್ಚಾರಿತಾಸ್ತತ್ರ ವರ್ಣಾಃ ಕಚಟತಾದಯಃ ॥ ೧ ॥

ಶ್ರೀ ವಸಿಷ ಉವಾಚ.—

ವರ್ಣೇಷು ಸ್ವಶರೀರಾಣಾಂ ವರ್ಣಾಃ ಕಚಟತಾದಯಃ ।
ಕದಾಚನಾಪಿ ನೋದ್ಯಂತಿ ಶವಾನಾಮಿವ ಕೇನಚ ॥ ೨ ॥

---

## ಅರವತ್ತೂರನೆಯ ಸರ್ಗವು

ಶ್ರೀ ರಾಮನು ಕೇಳಿದನು :—

೧. ಆ ವ್ಯೋಮ ಮಂಡಲದಲ್ಲಿ ಸ್ವರೂಪವಿಲ್ಲದ ದೇಹವುಳ್ಳ ಸ್ತ್ರೀಯು ಅದು ದಾದರೂ ಹೇಗೆ? ಆಕೆಯು ದೇಹವಿಲ್ಲದವಳಾದ ಮೇಲೆ, ಕಚಟತ ಮೊದಲಾದ ವರ್ಣಗಳಿಂದಾಗುವ ಮಾತುಗಳನ್ನು ಆಡಿದುದು ಹೇಗೆ?

(ತತ್ರ ತಸ್ಯಾಂದಶಾಯಾಂ ಕಚಟತಾ ದಯೋವರ್ಣಾಃ ತ್ವಯಾ ವಿನಾಂ ಜಿಹ್ವಾಂ ಕಥಮುಚ್ಚಾರಿತಾಃ—ತಾ. ಪ್ರ.)

ಶ್ರೀ ವಸಿಷ್ಠನು ಹೇಳಿದನು :—

೨. ಆಕಾಶ ಶರೀರಗಳು ಮಾತನಾಡುವಾಗ ಕಚಟತ ಮೊದಲಾದ ವರ್ಣಗಳು, ಹೆಣಗಳ ದೇಹದಲ್ಲಿ ಹೇಗೆ ಹುಟ್ಟುವುದಿಲ್ಲವೋ ಹಾಗೆ ಯಾವ ಕಾರಣದಿಂದಲೂ ಯಾವಾಗಲೂ ಹುಟ್ಟುವುದಿಲ್ಲ.

(ವರ್ಣೋಚ್ಚಾರಣಾದಿ ವ್ಯವಹಾರೇ, ಶರೀರಸ್ಯ ನ ಕಾರಣತಾ ಸತ್ಯಪಿ, ಶವ ಶರೀರೇ ತದದರ್ಶನಾತ್, ವಿನಾಪಿ ಶರೀರ ಸ್ಪಷ್ಟೇ ತದ್ದರ್ಶನಾತ್, ಅನ್ವಯ

ವ್ಯತಿರೇಕ ವ್ಯಭಿಚಾರಾತ್, ಸಹೇತುಕತ್ವೇ ವ್ಯವಹಾರಸ್ಯ ಸತ್ಯತಾ ಪತ್ತೇಶ್ಚ ಕಿಂತು ಕಲ್ಪನಾ ಮಾತ್ರಂ। ತತ್ರ ತವಾಪಿ ಸುಲಭ ಮಿತ್ಯಾಶಯೇನ ವಸಿಷ್ಠ ಉತ್ತರ ಮಾಹ।— ಖಮಿವ ಶರೀರಂ ಯೇಷಾಂ ತತ್ವವಿದಾಂ ತೇಷಾಂ ಮತೇ, ವರ್ಣೇಷು ಮಧ್ಯೇಯೇ ಕಚಟತಾದಯಃ, ತೇ ಕದಾಚನಾಪಿ ನೋದ್ಯಂತಿ। ಕಲ್ಪನಾಮಾತ್ರ ರೂಪತ್ವಾದಿತ್ಯರ್ಥಃ॥—ತಾ. ಪ್ರ)

(ಹಿಂದೆ, ೧೯೩೯ರಲ್ಲಿ ಮುಳಬಾಗಲು ತಾಲ್ಲೋಕು ಮುಡಿಯನೂರಿನಲ್ಲಿ ನಾನು ಒಬ್ಬ ಸಾಧುಗಳನ್ನು ಕಂಡಿದ್ದೆ. ಅವರು ಸ್ನಾನ, ಭಿಕ್ಷಾಚರಣಗಳಿಗಾಗಿ ಮಾತ್ರ ಹೊರಕ್ಕೆ ಬರುವರು. ಯಾವಾಗಲಾದರೂ ಹಠಾತ್ತಾಗಿ ಒಮ್ಮೊಮ್ಮೆ ಸಂಜೆಯು ಬಿಸಿಲು ಕಾಯಿಸಿಕೊಳ್ಳಲು ಹೊರಗೆ ಬರುವರು. ಹಾಗೆ ಬಂದಾಗಲೂ ಅವರು ಹೆಚ್ಚಾಗಿ ಮಾತನಾಡುತ್ತಿರಲಿಲ್ಲ ಅವರ ಬಳಿ ನಾನು ಹೋದಾಗ, ರಾತ್ರಿ ಊಟಮಾಡಿಕೊಂಡು ಬರಹೇಳಿದರು. ಸುಮಾರು ಹತ್ತು ಗಂಟೆಗೆ ಹೋದೆ. ಸುಮಾರು ರಾತ್ರಿ ಮೂರು ಗಂಟೆಯವರೆಗೂ ಇಬ್ಬರೂ ಮಾತನಾಡುತ್ತಿದ್ದೆವು. ಸುಮಾರು ಹನ್ನೊಂದು ಗಂಟೆಯವರೆಗೂ ಅವರು ಬಾಯಲ್ಲಿ ಮಾತನಾಡುತ್ತಿದ್ದರು. ಅಲ್ಲಿಂದಾಚೆಗೆ ನನಗೆ ನಿದ್ದೆ ಬರುವಂತಾಯಿತು. ಕಣ್ಣು ಎಳೆದುಕೊಂಡು ಹೋಯಿತು. ಹಾಗೆ ಅರ್ಧ ಜಾಗ್ರತ್ತಿನಲ್ಲಿರುವಾಗ, ಅವರು ವಾಚಾಮಾತನಾಡುವು ದನ್ನು ನಿಲ್ಲಿಸಿಬಿಟ್ಟರು ಅಲ್ಲಿಂದಾಚೆಗೆ ಅವರು ಮಾತನಾಡವಿದ್ದರೂ ನನಗೆ ಅವರ ಭಾವವು ಸ್ಪಷ್ಟವಾಗಿ ತಿಳಿದು, ನಾನು ಭಾಷೆ ಮುಖವಾಗಿ ಉತ್ತರಕೊಡುತ್ತಿದ್ದೆ. ಹೀಗೆ ನಾಲ್ಕು ಗಂಟೆ ಮಾತನಾಡಿದುದು ನನಗೆ ಚೆನ್ನಾಗಿ ನೆನಪಿದೆ.

ಹಾಗೆಯೇ ಶ್ರೀ ಶ್ರೀ ಆನಂದಗಿರಿಗಳಲ್ಲಿ ನಡೆದ ಸಂಗತಿಯೊಂದು ಕೂಡ ಉಲ್ಲೇಖನೀಯವಾದುದು. ಒಮ್ಮೆ ಸಂಜೆ ಅವರು ಕಾಡುಮಲ್ಲೇಶ್ವರ ದೇವಸ್ಥಾನದ ಪೂರ್ವ ದ್ವಾರದಲ್ಲಿ ಮೆಟ್ಟಿಲ ಮೇಲೆ ಕುಳಿತಿದ್ದರು ನಾನು ಹೋಗಿ ನಮಸ್ಕಾರ ಮಾಡಿದೆ ನನ್ನನ್ನು ಕುಳಿತುಕೊಳ್ಳಹೇಳಿ ನನ್ನ ಕಡೆ ದಿಟ್ಟಿಸಿ ನೋಡಿದರು ಅವರು ಮಾತನಾಡದಿದ್ದರೂ ಅವರ ಭಾವವು ಮನಸ್ಸಿಗೆ ವ್ಯಕ್ತವಾಯಿತು. ಏನೋ ಶಕ್ತಿಯು ನನ್ನನ್ನು ಮಾತನಾಡಗೊಡಿಸದೆ, ಮನಸ್ಸಿನಲ್ಲಿಯೇ ಅವರ ಪ್ರಶ್ನೆಕ್ಕೆ ಉತ್ತರವನ್ನು ಹೇಳಿಸಿತು.

ಹಾಗೆಯೇ ವರ್ಣಾತ್ಮಕವಾಗಿಯೇ ಕಿವಿಗೆ ಸ್ಪಷ್ಟವಾಗಿ ವಾಣಿಗಳು ಕೇಳಿಸುವು ದುಂಟು ಹಿಂದಿನವರ ಅಶರೀರವಾಣಿಯು ಸುಳ್ಳಲ್ಲ ಎಂಬುದು ಅನೇಕರ ಅನುಭವ ದಲ್ಲಿರುವಂತೆ ನನ್ನ ಅನುಭವದಲ್ಲೂ ಉಂಟು. ಇತಿ ಶಿವಂ)

ವರ್ಣೋಚ್ಚಾರೋ ಭವಿಷ್ಯಚ್ಚೇತ್ಪ್ರಕಟಾರ್ಥಸ್ತತಃ ಕ್ವಚಿತ್ ।
ಸ್ವಪ್ನೇಷ್ವನ್ಯಭವಿಷ್ಯತ್ತಂ ವಿನಿದ್ರಃ ಪಾರ್ಶ್ವಗೋ ಜನಃ ॥ ೩ ॥

ತಸ್ಮಾನ್ನ ಕಿಂಚಿತ್ಸ್ವಪ್ನೇಷು ತತ್ಸತ್ಯಂ ಭ್ರಾಂತಿರೇವ ಸಾ ।
ಚಿನ್ಮಾತ್ರಾಕಾಶಕಚನಂ ತತ್ತಥಾ ಖೇ ಸ್ವಭಾವಜಂ ॥ ೪ ॥

ತದೇಂದುಕಾರ್ಷ್ಣ್ಯಖತನುಶಿಲಾಗೇಯಾದಿತಾಂ ಗತಾಃ ।
ಇವಾಭಾಂತಿ ಚಿದಾಕಾಶಾಸ್ತಥಾ ದೇಹರವಾದಯಃ ॥ ೫ ॥

ತಚ್ಚಿದಾಕಾಶಕಚನಂ ಯನ್ನಾಮ ಸ್ವಪ್ನವೇದನೇ ।
ಆಕಾಶಮೇವ ನಭಸಃ ಕಚನಂ ವಿದ್ಧಿ ನೇತರತ್ ॥ ೬ ॥

---

೩. ಅರ್ಥವನ್ನು ಪ್ರಕಟಮಾಡಲು ವರ್ಣೋಚ್ಚಾರವೊಂದೇ ಹಾದಿಯೆನ್ನುವುದಾದರೆ (ವರ್ಣವರ್ಣಕ್ಕೂ ಅರ್ಥ ಹೇಳಬೇಕಾದೀತು) (ಹಾಗಿಲ್ಲದೆ ಅರ್ಥ ಪ್ರಕಟ ಮಾಡಲು ವರ್ಣಗಳು ಬೇಕಿಲ್ಲ ಎನ್ನುವುದಾದರೆ,) ಕನಸು ಕಾಣುತ್ತಿರುವವನಿಗೆ ತಿಳಿಯುವುದನ್ನೆಲ್ಲ ನಿದ್ದೆಯಿಲ್ಲದೆ ಅವನ ಮಗ್ಗುಲಲ್ಲಿರುವವನೂ ಅನುಭವಿಸಬೇಕಾದೀತು.

೪ ಆದರಿಂದ ವರ್ಣೋಚ್ಚಾರದಿಂದಲೇ ಅರ್ಥವು ಪ್ರಕಟವಾಗಬೇಕು ಎನ್ನುವುದೂ ಒಂದು ಭ್ರಾಂತಿಯು: ಎಲ್ಲೋ ಕೆಲವೆಡೆಗಳಲ್ಲಿ ಮಾತ್ರ ಅದು ಸತ್ಯವು. ಸ್ವಪ್ನದಲ್ಲಿ ಹೇಗೋ ಹಾಗೆಯೇ ಎಲ್ಲವೂ ಚಿನ್ಮಾತ್ರವಾದ ಆಕಾಶದ ಕಚನವು ಆ ಕಚನವೂ ಆಕಾಶದಲ್ಲಿ ಸ್ವಭಾವಜವು: ಸಹಜವು.

೫ ಚಂದ್ರನು ಕಪ್ಪಾಗಿ ಕಾಣುವಾಗ, ತಾನು ಆಕಾಶ ದೇಹಿಯೆಂದು ಕೊಂಡಾಗ, ಕಲ್ಲು ಹಾಡಿದುದನ್ನು ಕೇಳಿದಾಗ, ಆಗುವಂತೆ, ದೇಹದಲ್ಲಿರುವ ಶಬ್ದವೇ, ಚಿದಾಕಾಶ ಖಂಡಗಳಾಗಿ, ಹಾಗೆ ತೋರುವುದು.

(ದೇಹರವವು ಕೆಲವು ವೇಳೆಗಳಲ್ಲಿ ಸ್ಪಷ್ಟವಾಗಿ ನುಡಿದು ಹೊರಗಿನವರು ಮಾತಾಡಿದಂತೆ ಕೇಳುವುದುಂಟು. ಇದು ಉದಾನ ವಾಯುವಿನ ವ್ಯಾಪಾರ. ಈ ವಿಷಯವನ್ನು ವಿವರವಾಗಿ ಮಹಾಬ್ರಾಹ್ಮಣವಲ್ಲಿ ವರ್ಣಿಸಲಾಗಿದೆ.)

೬. ಸ್ವಪ್ನದಲ್ಲಿ ವೇದ್ಯವಾಗುವುದು ಯಾವುದುಂಟೋ ಅದೂ ಚಿದಾಕಾಶದ ಕಚನವು ಹೇಗೋ ಹಾಗೆ ಆಕಾಶದ ಕಚನವೂ ಆಕಾಶವೇ ಅಲ್ಲದೆ ಮತ್ತೇನೂ ಅಲ್ಲ.

ಯಥಾ ಸ್ವಪ್ನಸ್ತಥೈವೇದಂ ಜಾಗ್ರದಗ್ರೇ ವ್ಯವಸ್ಥಿತಂ ।
ಆಕಾಶಮಪ್ಯನಾಕಾಶಂ ಯಥೈವೇದಂ ತಥೈವ ತತ್ ॥ ೭ ॥

ತಥಾ ಕಚತಿ ತಚ್ಚಾರು ಚೇತನಂ ಚತುರಂ ತಥಾ ।
ಯಥಾಸ್ಥಿತಂ ತದೇವೇದಂ ಸತ್ಯಂ ಸ್ಥಿರಮಿವ ಸ್ಫುರತ್ ॥ ೮ ॥

ಶ್ರೀ ರಾಮ ಉವಾಚ.—

ಭಗವನ್ಸ್ವಪ್ನ ಏವೇದಂ ಕಥಂ ಜಾಗ್ರದವಸ್ಥಿತಂ ।
ಅಸತ್ಯಮೇವ ಸತ್ಯತ್ವಮಿವ ಯಾತಂ ಕಥಂ ಭವೇತ್ ॥ ೯ ॥

---

೭. ಸ್ವಪ್ನವು ಹೇಗೋ ಹಾಗೆಯೇ ಜಾಗ್ರತ್ತು ಕೂಡ ಇದು ಎದುರಿಗೇ ಕಾಣುತ್ತಿದ್ದರೂ ಸ್ವಪ್ನದಂತೆಯೇ! ಆಕಾಶವೂ ಹೌದು: ಅನಾಕಾಶವೂ ಹೌದು. ಇದರಂತೆಯೇ ಅದು: ಅದರಂತೆಯೇ ಇದು.

(ಏವಂ ಸ್ವಾಪ್ನಾರ್ಥಾನಾಂ ಚಿದಾಕಾಶ ಮಾತ್ರತಾಂ ಪ್ರಸಾಧ್ಯ ತತ್ಸಾಮ್ಯೇನೈವ ಪುರಃ ಸ್ಥಿತಾನಾಂ ಸಮಾಧಿದೃಷ್ಟಾನಾಂಚಾರ್ಥಾನಾಂ ಚಿದಾಕಾಶ ಮಾತ್ರತೇತ್ಯಾಹ–ತಥೇತಿ—ತಾ. ಪ್ರ)

೮. ಬ್ರಹ್ಮ ಚೇತನವು ಕಚನ ಮಾಡುವಾಗ ಆಗ ಚತುರವೂ ಚಾರುವೂ ಆಗ ಫಲವನ್ನೇನು ಹೇಳೋಣ! ಬ್ರಹ್ಮವು ಸತ್ಯವಾಗಿ ಯಥಾಸ್ಥಿತವಾಗಿ ಇದ್ದರೂ ಜಗತ್ತು ಪ್ರತ್ಯೇಕವಾಗಿ ಸ್ಥಿರವಾಗಿ ಇದ್ದಂತೆ ಕಾಣುವುದು.

ಶ್ರೀ ರಾಮನು ಕೇಳಿದನು:—

೯. ಎಲೈ ಭಗವಂತನೆ, ಸ್ವಪ್ನವೇ ಜಾಗ್ರತ್ತಾಗಿ ಇರುವುದು ಎಂಬುದು ಹೇಗೆ? ಅಸತ್ಯವು ಸತ್ಯವಾಗಿ ತೋರುವುದು ಹೇಗೆ?

(ಪ್ರಮಾಣಗವ್ಯಸ್ಯ ಜಾಗ್ರತ್ಪ್ರಪಂಚಸ್ಯ ತದಗಮ್ಯ ಸ್ವಪ್ನಸಾಮ್ಯಮಯುಕ್ತಮಿತಿ ರಾಮಃ ಶಂಕತೇ—ತಾ. ಪ್ರ)

ಶ್ರೀ ವಸಿಷ್ಠ ಉವಾಚ :—

ಶೃಣು ಸ್ವಪ್ನಮಯಾನ್ಯೇವ ಕಥಂ ಸಂತಿ ಜಗಂತ್ಯಲಂ ।
ನಾಸ್ತ್ಯಾನಿ ನಚ ಸತ್ಯಾನಿ ನ ಸ್ಥಿರಾಣಿ ಸ್ಥಿತಾನಿ ಚ ॥ ೧೦ ॥

ಅನಂತಭೂತಾನಿ ಬೀಜಾನಿ ಬೀಜರಾಶಾವಿವಾಂಬರೇ ।
ಅನ್ಯಾನ್ಯನ್ಯಾನಿ ತಾನ್ಯೇವ ಸಮಾನಿ ನ ಸಮಾನಿ ಚ ॥ ೧೧ ॥

ಪ್ರತ್ಯೇಕಮಂತರನ್ಯಾನಿ ತಥೈವಾಭ್ಯುದಿತಾನಿ ಚ ।
ಪರಸ್ಪರಮದೃಷ್ಟಾನಿ ಬಹೂನಿ ವಿವಿಧಾನಿ ಚ ॥ ೧೨ ॥

---

ಶ್ರೀ ವಸಿಷ್ಠನು ಹೇಳಿದನು.—

೧೦. ಈ ಜಗತ್ತುಗಳೆಲ್ಲವೂ (ಸ್ಥಿರವಾಗಿ ಸತ್ಯವಾಗಿ ಇರುವಂತೆ ಕಾಣುತ್ತಿದ್ದರೂ) ಹೇಗೆ ಸ್ವಪ್ನಮಯಗಳೇ ಎಂಬುದನ್ನೂ, ಜಗತ್ತು ಸ್ವಪ್ನವಲ್ಲದೆ ಇನ್ನೇನೂ ಅಲ್ಲ: ಅವುಗಳಲ್ಲಿ ಸತ್ಯತ್ವವಿಲ್ಲ: ಸ್ಥಿರತ್ವವಿಲ್ಲ: ಎಂಬುದನ್ನೂ ಹೇಳುವೆನು.

(ಅಸ್ತು ಆಪಾತತಃ ಚಕ್ಷುರಾದಿ ಮಾನಗಮ್ಯತಾ, ತಥಾಪಿ-ತತ್ವತೋ ವಿಮರ್ಶಸಹತ್ವೇನ ಅಸ್ಥಿರತ್ವೇನ ಚ ಸ್ವಪ್ನಸಾಮ್ಯಮಸ್ತ್ಯೇವ ಇತ್ಯಾಶಯೇನೋತ್ತರಮಾಹ—ತಾ. ಪ್ರ.)

೧೧. ಬೀಜಗಳ ರಾಶಿಯಲ್ಲಿರುವ ಬೀಜಗಳು ಒಂದೊಂದೂ ಬೇರೆ ಬೇರೆಯಾಗಿದ್ದರೂ ಒಂದಕ್ಕೊಂದು ಸಮಗಳೂ ಹೌದು: ಸಮಗಳೂ ಅಲ್ಲ ಹೇಗೋ, (ಹಾಗೆ)

(ಏವಂ ಪರಸ್ಪರಂ ಬೀಜಭಾವಾದ್ವಿರುದ್ಧ ಭೇದಾಭೇದ ಸಮಾಸಮ ರೂಪತ್ವಾಚ್ಚ ಸ್ವಪ್ನಸಾಮ್ಯಮಿತ್ಯಾಹ—ತಾ ಪ್ರ.)

೧೨. (ಬಾಳೆಯ ಕಂಬದ ಪಟ್ಟೆಗಳಂತೆ) ಪ್ರತಿಯೊಂದರೊಳಗೂ ಇನ್ನೆಷ್ಟೋ ಇದ್ದು, ಹುಟ್ಟಿ ಬರುವವು. ಒಂದನ್ನೊಂದು ಕಾಣವು ಅವು ಬಹುವಾಗಿ, ವಿವಿಧವಾಗಿ, ಇರುವುವು

ಅನ್ಯೋಽನ್ಯಂ ತಾನಿ ಸರ್ವಾಣಿ ನ ಪಶ್ಯಂತ್ಯೇವ ಕಿಂಚನ ।
ಜಡಾನಿವ್ಯೈಕರಾಶಿನಿ ಬೀಜಾನೀವ ಗಲಂತ್ಯಪಿ ॥ ೧೩ ॥

ವ್ಯೋಮಾತ್ಮತ್ವಾನ್ನ ಗಗನಂ ನ ವಿದಂತಿ ಪರಸ್ಪರಂ ।
ಅಪಿ ಚೇತನ ರೂಪಾಣಿ ಸುಪ್ತಾನೀವ ನಿರಂತರಂ ॥ ೧೪ ॥

ಸುಪ್ತಾಃ ಸ್ವಪ್ನಜಗಜ್ಜಾಲಮಹನಿ ವ್ಯವಹಾರಿಣಃ ।
ಅಸುರಾ ನಿಹತಾ ದೇವೈಸ್ತೇ ಸ್ವಪ್ನಜಗತಿ ಸ್ಥಿತಾಃ ॥ ೧೫ ॥

ಅಜ್ಞಾನಾನ್ನ ಗತಾ ಮುಕ್ತಿಂ ನ ಜಾಡ್ಯಾಜ್ಜಡತಾಮಿತಾಃ ।
ನ ದೇಹವಂತಃ ಕಿಂ ಸಂತು ವಿನಾ ಸ್ವಪ್ನಜಗತ್ಸ್ಥಿತೇಃ ॥ ೧೬ ॥

---

೧೩. ಅವು ಏಕರಾಶಿಯಲ್ಲಿದ್ದರೂ ಜಡಗಳಾದ್ದರಿಂದ ಆ ಬೀಜಗಳು ಜಾರಿ ಹೋಗಿ ಒಂದರ ಮೇಲೊಂದು ಬೀಳುತ್ತಿದ್ದರೂ ಅವು ಒಂದನ್ನೊಂದು ನೋಡ ಲಾರವು.

೧೪. ಆಕಾಶವು ಆಕಾಶವನ್ನೇ ಹೇಗೆ ನೋಡಲಾರದೋ ಹಾಗೆಯೇ ಅವೂ ಒಂದನ್ನೊಂದು ಅರಿಯಲಾರವು. ಅವು ಚೇತನಗಳೇ ಆದರೂ ಯಾವಾಗಲೂ ಸುಪ್ತಗಳಂತೆ ಇರುವುವು.

(ಗಲಿತಾನ್ಯಪಿ ತಾನಿ ಚೇತನ ರೂಪಾಣ್ಯೇವೇತಿ ನ ಪ್ರತಪ್ತ ಖರ್ಪರ ನಿಪ ತಿತ ಜಲಬಿಂದುವದ್ವ್ಯೋಮಾತ್ಮತಾಂ ಪ್ರಾಪ್ಯ ಶೂನ್ಯಮೇವ ಸಂಪದ್ಯಂತೇ । ನಾಪಿ ಅಸ್ಮದಾದಿವತ್ಪರಸ್ಪರಂ ವಿದಂತಿ ಪಶ್ಯಂತಿ । ಕಿಂತು ಅಜ್ಞಾನಾವೃತಚೇತನ ರೂಪತ್ವಾತ್ ನಿರಂತರಂ ಸುಪ್ತಾನೀವ ಸ್ವಪ್ನಮೇವಾನು ಭವಂತೀತ್ಯರ್ಥಃ ॥— ತಾ ಪ್ರ.)

೧೫–೧೬. ಸುಪ್ತ(ಜೀವ)ರು ತಮ್ಮ ಕನಸಿನ ಪ್ರಪಂಚದಲ್ಲಿ ಹಗಲು ವ್ಯವ ಹಾರವನ್ನು ನಡೆಸುವರಲ್ಲವೆ? ಅಸುರರು ಸ್ವಪ್ನಗಳಲ್ಲಿ ದೇವತೆಗಳಿಂದ ನಿಹತರಾಗಿ ಸ್ವಪ್ನ ಪ್ರಪಂಚದಲ್ಲಿಯೇ ನಿಲ್ಲುವರು. ಅವರು ಹತರಾದರೂ ಅಜ್ಞಾನಿಗಳಾದ್ದ ರಿಂದ ಮುಕ್ತಿಯನ್ನು ಪಡೆಯಲಿಲ್ಲ. ಹಾಗೆಂದು ಜಾಡ್ಯದಿಂದ ಜಡತತ್ವವನ್ನೂ ಪಡೆಯಲಿಲ್ಲ: ದೇಹವಂತರೂ ಆಗಲಿಲ್ಲ : ಇಂಥವರು ಸ್ವಪ್ನಪುರುಷರಾಗಿ ಉಳಿಯ ಬೇಕಲ್ಲದೆ ಇನ್ನೇನಾಗಬೇಕು?

(ಅಸುರಾ ದೈತ್ಯಾಃ ಸೌಪ್ತಿಕೇನ ದೈವೈರ್ನಿಹತಾಃ ಸಂತಃ ಸ್ವಸ್ವಪ್ನಜಗತ್ಯೇವ

ಸುಪ್ತಾ ಸ್ವಪ್ನಜಗಜ್ಜಾಲೇ ಸ್ವಾಚಾರವ್ಯವಹಾರಿಣಃ ।
ಪುರುಷಾ ನಿಹತಾ ಪುಂಭಿಸ್ತೇ ತಥೈವ ವ್ಯವಸ್ಥಿತಾಃ ॥ ೧೭ ॥

ನಿರ್ಮೋಕ್ಷಾ ನಿಃಶರೀರಾಸ್ತೇ ಚೇತನಾವಾಸನಾನ್ವಿತಾಃ
ದೃಷ್ಟಂ ಸ್ವಪ್ನಜಗಜ್ಜಾಲಂ ವಿನಾ ಚ ಕ್ವ ವಸಂತು ತೇ ॥ ೧೮ ॥

ಸುಪ್ತಾಃ ಸ್ವಪ್ನಜಗಜ್ಜಾಲವ್ಯವಸ್ಥಾಚಾರಚಾರಿಣಃ ।
ಯೇ ಹತಾ ರಾಕ್ಷಸಾ ದೇವೈಸ್ತೇ ಯಥೈವ ವ್ಯವಸ್ಥಿತಾಃ ॥ ೧೯ ॥

---

ಸ್ಥಿತಾಃಯತೋಽಜ್ಞಾನಾಭಾವಾನ್ಮುಕ್ತಿಂ ನಗತಾಃ । ನಾಪಿ ಜಡತಾಂ ಪಾಷಾಣಾದಿ ಭಾವಮಿತಾಃ । ನಾಪಿ ದೇಹವಂತಸ್ಸಂಪನ್ನಾಃ । ಈ ದೃಶಾಸ್ತೇ ಸ್ವಪ್ನ ಜಗತ್ಸ್ಥಿತೇ ರ್ವಿನಾ ಕಿಂ ಸಂಸ್ಥಿತ್ಯರ್ಥಃ ॥—ತಾ. ಪ್ರ )

೧೭. ಸುಪ್ತರಾಗಿ ತಮ್ಮ ಸ್ವಪ್ನ ಪ್ರಪಂಚದಲ್ಲಿ ತಮ್ಮ ಆಚಾರದಂತೆ ವ್ಯವ ಹಾರ ಮಾಡುತ್ತಿರುವ ಪುರುಷರು, ಇತರ ಪುರುಷರಿಂದ ನಿಹತರಾದರೂ, ಇದ್ದಂ ತೆಯೇ ಇರುವರು

(ಏವಂ ಪುರುಷಾ ಮನುಷ್ಯಾ ಅಪಿ ಸ್ವಸ್ವಪ್ನರೂಪೇ ಜಗಜ್ಜಾಲೇ ವಾಸನಾಭಿ ರ್ವ್ಯವಹಾರಿಣಃ । ತೇ ಚ ತತ್ರೈವಾನ್ಯೈಃ ಪುಂಭಿರ್ನಿಹತಾಃ ಸಂತಃ ತಥೈವ ಪ್ರಾಗುಕ್ತಾಸುರ ಜೀವವತ್ ಸ್ವಪ್ನಪರಂಪರಾಯಾಮೇವ ವ್ಯವಸ್ಥಿತಾಃ॥—ತಾ. ಪ್ರ)

೧೮. ಈ ಪುರುಷರೂ ಜ್ಞಾನಿಗಳಲ್ಲದ್ದರಿಂದ ಮೋಕ್ಷವನ್ನು ಪಡೆಯದೆ, ಹತರಾದ್ದರಿಂದ ಶರೀರವೂ ಇಲ್ಲದೆ ಚೇತನವುಳ್ಳವರಾದ್ದರಿಂದ ವಾಸನಾನ್ವಿತರಾಗಿ ರುವವರಾಗಿ, ಇರುವರು. ಇಂಥವರೂ ತಾವು ಕಂಡ ಸ್ವಪ್ನ ಪ್ರಪಂಚವನ್ನು ಬಿಟ್ಟು ಇನ್ನೆಲ್ಲಿ ಇದ್ದಾರು ?

(ಯತಸ್ತೇಽಪಿ ಜ್ಞಾನಾಭಾವಾನ್ನಿರ್ಮೋಕ್ಷಾನಿಃ ಶರೀರಾಶ್ಚೇತಿ ನ ಜಾಗರ ಕ್ಷಮಾ ವಾಸನಾಭಿಶ್ಚ ವ್ಯವಹರಣ ಶೀಲಾಃ ಈದೃಶಾಸ್ತು ಸ್ವಪ್ನ ಜಗಜ್ಜಾಲಂ ವಿನಾ ಕ್ವವಸಂತು । ತೇಷಾಂ ಸ್ವಪ್ನಂ ವಿನಾನಾನ್ಯಾಗತಿರಸ್ತೀತ್ಯರ್ಥಃ ॥—ತಾ. ಪ್ರ.)

೧೯. (ಮೇಲೆ ಹೇಳಿದಂತೆ) ಸುಪ್ತರಾಗಿ ಸ್ವಪ್ನ ಪ್ರಪಂಚದಲ್ಲಿ ಅಲ್ಲಿಗೆ ತಕ್ಕಂತೆ ತಮ್ಮ ತಮ್ಮ ವ್ಯವಸ್ಥೆ ಆಚಾರಗಳಲ್ಲಿದ್ದ ರಾಕ್ಷಸರನ್ನು ದೇವತೆಗಳು

ಏವಂ ಯೇ ನಿಹತಾ ರಾಮ ಕಿಂ ತೇ ಕುರ್ವಂತಿ ಕಥ್ಯತಾಂ |
ಅಜ್ಞತ್ವಾನ್ನ ಗತಾ ಮುಕ್ತಿ ಚೇತನಾನ್ನ ದೃಷತ್ಸ್ಥಿತಾಃ || ೨೦ ||

ಸಾದ್ರ್ಯಬ್ಧ್ಯುರ್ವೀಜನಂ ದೃಶ್ಯಮಿದಂ ಸರ್ವಂ ಯಥಾಸ್ಥಿತಂ |
ಚಿರಾಯಾನುಭವಂತ್ಯೇತೇ ಯಥೇಮೇ ವಯಮಾದೃತಾಃ || ೨೧ ||

ತೇಷಾಂ ಕಲ್ಪಜಗತ್ಸಂಸ್ಥಾ ಯಥಾಸ್ಮಾಕಂ ತಥೈವ ತಾಃ
ಅಸ್ಮಾಕಂ ಜಗತೀಸಂಸ್ಥಾ ಯಥಾ ತೇಷಾಂ ತಥೈವ ಚ || ೨೨ ||

ಏತೇಷಾಂ ಸ್ವಪ್ನಪುರುಷಾಸ್ತ ಏವೇಮೇ ವಯಂ ಸ್ಥಿತಾಃ |
ಯೇ ಚ ತೇ ನಾಮ ಸಂಸಾರಾಸ್ತೇಭ್ಯ ಏಕಮಿಮಂ ವಿದುಃ || ೨೩ ||

ತೇ ಸ್ವಪ್ನಪುರುಷಾಸ್ತೇಷಾಂ ಸತ್ಯಾ ಏವಾನುಭೂತಿತಃ |
ಆತ್ಮನೋಽಪಿ ಪರಸ್ಯಾಪಿ ಸರ್ವಗತ್ವಾಚ್ಚಿದಾತ್ಮನಃ || ೨೪ ||

---

ಕೊಂದರು: ಅವರೂ ಸತ್ತಾಗ ಇದ್ದಂತೆ ಈಗಲೂ ಸ್ವಪ್ನ ಜಗತ್ತಿನಲ್ಲಿಯೇ ಇರುವರು.

೨೦ ಹೀಗೆ ನಿಹತರಾದವರು ಏನು ಮಾಡುವರು ಹೇಳು ರಾಮ? ಅವರು ಅಜ್ಞರಾದ್ದರಿಂದ ಮುಕ್ತಿಯನ್ನೂ ಪಡೆಯಲಾರರು. ಅವರು ಚೇತನರಾದ್ದರಿಂದ ಶಿಲಾತ್ವವನ್ನೂ ಪಡೆಯುವುದಿಲ್ಲ.

೨೧. ಅಂತಹವರು ನಾವು ಹೇಗೆ ಈ ಅದ್ರಿ, ಅಬ್ಧಿ, ಉರ್ವೀ, ಜನ, ಸಹಿತವಾದ ದೃಶ್ಯ ಪ್ರಪಂಚದಲ್ಲಿ ಆದರವಿಟ್ಟುಕೊಂಡು, ಯಥಾಸ್ಥಿತವಾಗಿ ಇದನ್ನು ಅನುಭವಿಸುವೆವೋ ಹಾಗೆಯೇ ಅವರೂ ಚಿರಕಾಲ ಅನುಭವಿಸಿದ ಸ್ವಪ್ನದಲ್ಲಿಯೇ ಜಾಗ್ರದ್ಬುದ್ಧಿಯುಳ್ಳವರಾಗಿ ಅನುಭವಿಸುವರು.

೨೨. ಅವರ ಕಲ್ಪಿತ ಜಗತ್ ಸಂಸ್ಥೆಯು ನಮ್ಮ ಜಗತ್ತು ಹೇಗೋ ಹಾಗೇ! ಅವರಿಗೆ ಅದೇ ಸತ್ಯವು. ಅವರಿಗೆ ಆ ಜಗತ್ಸಂಸ್ಥೆಗಳು ಹೇಗೋ ನಮಗೆ ಈ ಜಗತ್ಸಂಸ್ಥೆಗಳೂ ಹಾಗೆಯೇ!

೨೩-೪. ಅಂತಹವರಿಗೆ ನಾವು ಸ್ವಪ್ನಪುರುಷರು ಅವರ ಸಂಸಾರಗಳು ನಮಗೆ ಸ್ವಪ್ನಗಳು. ಅವರು ಸ್ವಪ್ನ ಪುರುಷರಾದರೂ ಅವರು ತಮ್ಮ ತಮ್ಮ ಸಂಸಾರವನ್ನು

ಯಥಾ ತೇ ಸ್ವಪ್ನಪುರುಷಾಃ ಸತ್ಯಮಾತ್ಮನ್ಯಥಾಽಪರೇ ।
ತಥಾಪಿ ಸ್ವಪ್ನಪುರುಷಾಃ ಸತ್ಯಮೇವ ತಥೈವ ತೇ ॥ ೨೫ ॥

ಸ್ವಸ್ವಪ್ನಪುರಪೌರಾ ಯೇ ತ್ವಯಾ ದೃಷ್ಟಾಸ್ತಥೈವ ತೇ ।
ಸ್ಥಿತಾಸ್ತತ್ರ ತಥಾದ್ಯಾಪಿ ಬ್ರಹ್ಮ ಸರ್ವಾತ್ಮಕಂ ಯತಃ ॥ ೨೬ ॥

ಪ್ರಬೋಧೇಽಪಿ ಹಿ ಬಿದ್ಯಂತೇ ಸ್ವಪ್ನಭಾವಾ ಯಥಾ ಸ್ಥಿತಾಃ ।
ತಥಾಸ್ಥಿತ್ವಾನುಭೂಯಂತೇ ಪರಬ್ರಹ್ಮತಯಾಥವಾ ॥ ೨೭ ॥

---

ಅನುಭವಿಸುತ್ತಿರುವರಾಗಿ ಅದದು ಅವರವರಿಗೆ ಸತ್ಯವು. ಅಷ್ಟೇ ಅಲ್ಲ. ಚಿದಾತ್ಮನು ಎಲ್ಲೆಲ್ಲಿಯೂ ಇರುವನಾದ್ದರಿಂದ, ಅವರು ಅನುಭವಿಸುತ್ತಿರುವುದು ಅವರಿಗೂ ಇತರರಿಗೂ ಸಮಾನವಾಗಿ ಸತ್ಯವು (ಎನ್ನಬೇಕು.)

(ಆತ್ಮನೋಽಪಿ ಪುರುಷಾಂತರಸ್ಯಾಪ್ಯನು ಭೂತಿತಃ ಅನುಭವಾದ್ಯತಸ್ತುಲ್ಯಾ ಅತಸ್ಸತ್ಯಾ ಏವ ತತ್ಸತ್ತಾ ನಿಮಿತ್ತಸ್ಯ ಅಧಿಷ್ಠಾನ ಚಿದಾತ್ಮನಃ ಸರ್ವಗತತ್ವೇನ ತುಲ್ಯತ್ವಾದಿತ್ಯರ್ಥಃ ॥—ತಾ. ಪ್ರ.)

೨೫. ಆ ಸ್ವಪ್ನಪುರುಷರು ಹೇಗೆ ಸತ್ಯವೋ ಹಾಗೆಯೇ ಇತರರೂ ಸತ್ಯವು ಹಾಗೆಯೇ ನನ್ನ ಸ್ವಪ್ನದಲ್ಲಿ ಕಾಣುವವರೂ ನಿನ್ನ ಸ್ವಪ್ನದಲ್ಲಿ ಕಾಣುವವರೂ ಕೂಡ ಸತ್ಯವೇ!

(ಅಪಿ ಶಬ್ದೋ ಭಿನ್ನಕ್ರಮಃ । ಯಥಾತೇ ಸ್ವಪ್ನ ಪುರುಷಾಃ ಸತ್ಯಾಸ್ತಥಾ ಅಪರೇಽಪಿ ಮಯಾ ಪ್ರತಿಸ್ವಪ್ನ ಮನುಭೂಯಮಾನಾಃ ಪುರುಷಾಃ ಸತ್ಯಮೇವ ತಥೇವ ತೇ ತ್ವಯಾಪಿ ಸ್ವಪ್ನಪುರುಷಾಃ ಬೋಧ್ಯಾಃ ॥—ತಾ. ಪ್ರ )

೨೬. ನೀನು ಕನಸಿನಲ್ಲಿ ಕಂಡ ಸ್ವಪ್ನ ಪುರದ ಪ್ರಜೆಗಳು, ಹಾಗೆಯೇ ಅಲ್ಲಿಯೇ ಇನ್ನೂ ಇರುವರು. ಏಕೆಂದರೆ, ಬ್ರಹ್ಮವು ಸರ್ವಾತ್ಮಕವಾದ್ದರಿಂದ (ಒಂದೆಡೆ ಇದ್ದುದು ಇನ್ನೊಂದೆಡೆ ಕಾಣುವುದು.)

೨೭. ಎಚ್ಚರವಾದಾಗ ಸ್ವಪ್ನಭಾವಗಳು ಬೇರೆಯಾಗಿ ಕಂಡರೂ, ಅವು ಇದ್ದಂತೆಯೇ ಇರುವುವು. ಅಥವಾ ಪರಬ್ರಹ್ಮವೇ ಆ ಕನಸಾಗಿಯೂ ಕಂಡಿರುವುದರಿಂದ ಜಾಗ್ರತ್ತಿನಲ್ಲಿಯೂ ಸ್ವಪ್ನಭಾವಗಳು ತಾವಿದ್ದಂತೆಯೇ ಅನುಭವಕ್ಕೂ ಬರುವುವು.

ಸರ್ವಂ ಸರ್ವಾತ್ಮ ಸರ್ವತ್ರ ಸರ್ವದಾಸ್ತಿ ತಥಾ ಪರೇ ।
ಯಥಾ ನ ಕಿಂಚಿನ್ನಾಕಾಶಂ ನ ಕ್ವಚಿನ್ನ ಚ ಹನ್ಯತೇ ॥ ೨೮ ॥

---

ಯಥಾತೇ ತೇ ತೇ ಸ್ವಪ್ನ ಭಾವಾಃ ಪ್ರಬೋಧೇ ಜಾಗರಣೇ ಯಥಾಭಿ ದ್ಯಂತೇ, ವಿಶೀರ್ಯಂತೇ, ಇತ್ಯನುಭೂಯತೇ, ತಥಾ ಸ್ವಪ್ನಕಾಲೇ ಸ್ಥಿತ್ವಾ ಸ್ಥಿತಾ ಇತ್ಯೇವಾನುಭೂಯಂತೇ। ತಥಾಚ ತದ್ಬಾಧ ಇವ ತತ್ಸತ್ತಾಪ್ಯನುಭವ ಬಲಂ ಲಬ್ಧಾನಾಪಹ್ನೋತುಂಶಕ್ಯೇತ್ಯರ್ಥಃ। ಅಥವಾ ಬ್ರಹ್ಮ ಸತ್ತಾಯಾ ಏವ ಸರ್ವ ಸತ್ತಾತ್ಮಕತ್ವಾತ್ ಕಸ್ಯಾಪಿ ಸತ್ತಾ ಕದಾಪಿ .ನಾಪಹ್ನೋತುಂ ಶಕ್ಯೇತ್ಯಾಶಯು ನೇಹ—ತಾ ಪ್ರ.)

೨೮. ಸರ್ವವೂ ಸರ್ವಾತ್ಮವಾಗಿ ಸರ್ವತ್ರವೂ ಸರ್ವದಾ ಪರಬ್ರಹ್ಮದಲ್ಲಿ ಇದ್ದೇ ಇರುವುದು. ಹೇಗೆ ಆಕಾಶವಲ್ಲದ್ದು ಯಾವುದೂ ಇಲ್ಲವೋ, ಹಾಗೆ ಯಾವುದನ್ನೂ ಎಲ್ಲಿಯೂ ಹತಮಾಡುವುದಕ್ಕೂ ಆಗುವುದಿಲ್ಲ.

(ತಥಾ ಚ ಪ್ರಾಕ್ ಪರಿಜ್ಞಾತಂ ಫಲಿತ ಮಿತ್ಯಾಹ—ಸರ್ವಮಿತಿ। ಯಥಾ ಸರ್ವಂ ಜಗದಾಕಾಶಕಾರ್ಯತ್ವಾತ್ ಆಕಾಶಮೇವೇತಿ ತದ್ರೂಪೇಣ ನ ಕ್ವಚಿತ್ ಕಿಂಚಿದಪಿ ಹನ್ಯತೇ ತಥಾ ಪ್ರಥಮಂ ವಿನೋದಯೇ ಉತ್ಪತ್ತಿಶೂನ್ಯೇ ಮಧ್ಯೇ ನಿರಂತರೇ ಅಗ್ರೇ ಚ ನಿರಂತೇ ಪರಮಾಕಾಶೇ ಬ್ರಹ್ಮಣಿ ತತ್ರ ನಿರಂಶೇ ಅಸಂಖ್ಯೇ ಚಿತ್ತ ಸಂಘಾತೇ ತೇಷು ಚಾಸಂಖ್ಯೇ ಜಗತಾಂಗಣೇ ತತ್ರಾಪಿ ಪ್ರತ್ಯಾಕಾಶಂ ತತ್ರಾಪಿ ಪ್ರತಿ ಸಂಸಾರ ಮಂಡಲಂ ತತ್ರಾಪಿ ಪ್ರತಿಭೂರಾದಿಲೋಕಂ ತತ್ರಾಪಿ ಪ್ರತಿದ್ವೀಪಂ,ತತ್ರಾಪಿ ಪ್ರತಿಗಿರಂ, ತತ್ರಾಪಿ ಪ್ರತಿಮಂಡಲ ವಿಸ್ತಾರಂ, ತತ್ರಾಪಿ ಪ್ರತಿ ಗ್ರಾಮಂ, ಪ್ರತಿಪುರಂ, ಪ್ರತಿಗೃಹಂ, ತತ್ರಾಪಿ ಪ್ರತಿಜಂತು, ಪ್ರತಿಯುಗಾದಿ ಕಾಲಂ, ಚ ಯಾವಂತೋ ಯೇ ಜೀವಾ ಮೃತಾ ಮೋಕ್ಷ ವಿವರ್ಜಿತಾಃ ಸ್ಥಿತಾ ಸ್ತಾವಂತಃ ಸಂಸಾರಾಃ ಪೃಥಕ್ ಪೃಥಗಕ್ಷಯಾ ಏವ ಸ್ಥಿತಾ ಇತಿ ಪಂಚಾನಾಂ ಏಕಾನ್ವಯಃ॥—ತಾ. ಪ್ರ.)

ನಿರಂತರೇ ಪರಾಕಾಶೇ ನಿರಂತೇ ಚ ವಿನೋದಯೇ ।
ನಿರಂತೇ ಚಿತ್ತಸಂಘಾತೇ ನಿರಂತೇ ಜಗತಾಂ ಗಣೇ ॥ ೨೯ ॥

ಪ್ರತ್ಯಾಕಾಶಕಲಾಕೋಶಂ ಪ್ರತಿಸಂಸಾರಮಂಡಲಂ ।
ಪ್ರತಿಲೋಕಾಂತರಾಕಾರಂ ಪ್ರತಿದ್ವೀಪಂ ಗಿರಿಂ ಪ್ರತಿ ॥ ೩೦ ॥

ಪ್ರತಿಮಂಡಲವಿಸ್ತಾರಂ ಪ್ರತಿಗ್ರಾಮಂ ಪುರಂಪ್ರತಿ ।
ಪ್ರತಿಜಂತು ಪ್ರತಿಗೃಹಂ ಪ್ರತಿವರ್ಷಂ ಯುಗಂಪ್ರತಿ ॥ ೩೧ ॥

ಯಾವಂತೋ ಯೇ ಮೃತಾಃ ಕೇಚಿಜ್ಜೀವಾ ಮೋಕ್ಷವಿವರ್ಜಿತಾಃ ।
ಸ್ಥಿತಾಸ್ತೇ ತತ್ರ ತಾವಂತಃ ಸಂಸಾರಾಃ ಪೃಥಗಕ್ಷಯಾಃ ॥ ೩೨ ॥

ತೇಷಾಮಂತರ್ಜನಾಃ ಸಂತಿ ಜನಂ ಪ್ರತಿ ಪುನರ್ಮನಃ ।
ಪುನರ್ಮನಃಪ್ರತಿ ಜಗಜ್ಜಗತ್ಪ್ರತಿ ಪುನರ್ಜನಃ ॥ ೩೩ ॥

---

೨೯-೩೦-೩೧-೩೨. ಅಂತರವೇ ಇಲ್ಲದೆ ನಿಬಿಡವಾಗಿರುವ ಅಂತವೂ ಉದಯ (ಆದಿ) ಯೂ ಇಲ್ಲದೆ ಹರಡಿರುವ, ಪರಾಕಾಶದಲ್ಲಿ, ಚಿತ್ತಗಳೂ ಜಗದ್ಗಣಗಳೂ ಲೆಕ್ಕವಿಲ್ಲದೆ ತುಂಬಿರಲು, ಆಕಾಶವು ಒಡೆದಂತೆ ಆಗಿ ಒಂದೊಂದು ಕೋಶವಾಗಿರಲು,ಆ ಕೋಶ ಒಂದೊಂದಕ್ಕೂ ಆ(ಕೋಶವನ್ನು ಹಿಡಿದು ನಡೆಯುತ್ತಿರುವ) ಪ್ರತಿಯೊಂದು ಸಂಸಾರ ಮಂಡಲಕ್ಕೂ, (ಸಂಸಾರ ಮಂಡಲವೊಂದೊಂದು ಒಂದೊಂದು ಲೋಕವಾಗಿರುವುದರಿಂದ) ಪ್ರತಿಯೊಂದು ಲೋಕಲೋಕಕ್ಕೂ, ಅವುಗಳಲ್ಲಿ ದ್ವೀಪದ್ವೀಪ, ಗಿರಿಗಿರಿಗಳಿಗೂ, ಅಲ್ಲಿರುವ ದೇಶದೇಶ, ಗ್ರಾಮಗ್ರಾಮ, ಪುರಪುರಕ್ಕೂ, ಅಲ್ಲಿರುವಜಂತುಜಂತುವಿಗೂ ಗೃಹಗೃಹಕ್ಕೂ ವರ್ಷವರ್ಷಕ್ಕೂ ಯುಗಯುಗಕ್ಕೂ, ಅನ್ವಯಿಸುವಂತೆ, ಎಷ್ಟೆಷ್ಟು ಜೀವರು ಮೃತರಾಗಿರುವರೋ, ಅವರಲ್ಲಿ ಅಜ್ಞಾನಬಲದಿಂದ ಮೋಕ್ಷಕ್ಕೆ ಹೋಗದೆ ನಿಂತಿರುವವರೆಲ್ಲ ಅವರು ಮೊದಲಿದ್ದ ಹಾಗೆಯೇ ಇರುವರು. ಅವರು ಹಾಗೆ ಇರುವವರೆಗೂ ಬೇರೆ ಬೇರೆಯಾಗಿ ಸಂಸಾರಗಳು ಅಕ್ಷಯವಾಗಿ ನಡೆಯುತ್ತಲೇ ಇರುವುವು.

೩೩. (ಆ ಸಂಸಾರ ಸಂಸಾರಕ್ಕೂ ಒಂದೊಂದು ಕ್ಷೇತ್ರವಿರಬೇಕು. ಆ ಕ್ಷೇತ್ರದಲ್ಲಿ) ಜನಗಳು ಇರುವರು. ಜನ ಜನಕ್ಕೂ ಮನಸ್ಸು ಇರುವುದು ಮನಸ್ಸು ಮನಸ್ಸಿಗೂ ಒಂದೊಂದು ಜಗತ್ತು ಇರುವುದು. ಆಯಾ ಜಗತ್ತು ಜಗತ್ತಿನಲ್ಲಿಯೂ (ಕ್ಷೇತ್ರದಲ್ಲಿ) ಮತ್ತೆ ಜನಮನೋ ಜಗತ್ತುಗಳು ಹೀಗೇ !

ಇತ್ಥಮಾದ್ಯಂತರಹಿತ ಏಷ ದೃಶ್ಯಮಯೋ ಭ್ರಮಃ ।
ಬ್ರಹ್ಮೈವ ಬ್ರಹ್ಮವಿತ್ಪಕ್ಷೇ ನಾತ್ರೇಯತ್ತಾಸ್ತಿ ಕಾಚನ ॥ ೩೪ ॥

ಕುಡ್ಯೇ ನಭಸ್ಯುಪಲಕೇ ಸಲಿಲೇ ಸ್ಥಲೇಽಂತ-
ಶ್ಚಿನ್ಮಾತ್ರಮಸ್ತಿ ಹಿ ಯತಸ್ತದಶೇಷವಿಶ್ವಂ ॥
ತದ್ಯತ್ರ ತತ್ರ ಜಗದಸ್ತಿ ಕುತೋಽತ್ರ ಸಂಖ್ಯಾ ।
ತಜ್ಜ್ಞೇಷು ತತ್ಪರಮಥಾಜ್ಞಮನಃಸು ದೃಶ್ಯಂ ॥ ೩೫ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಜಗತ್ತತ್ತ್ವೈಕ್ಯ ಪ್ರತಿಪಾದನಂ" ನಾಮ
ತ್ರಿಷಷ್ಟಿತಮಃ ಸರ್ಗಃ

೩೪. ಹೀಗೆ ದೃಶ್ಯಮಯವಾದ ಈ ಭ್ರಾಂತಿಯು ಆದ್ಯಂತರಹಿತವಾಗಿರುವುದು. ಬ್ರಹ್ಮವೇತ್ತನಿಗೆ ಇದು ಬ್ರಹ್ಮವೇ ಆಗಿರುವುದು. ಈ ಭ್ರಮ ವಿಚಾರದಲ್ಲಿ ಇಯತ್ತಾ ಎಂದರೆ ಇಷ್ಟೇ ಎಂಬ ವ್ಯವಸ್ಥೆಯು ಯಾವುದೂ ಇಲ್ಲ.

೩೫. ಗೋಡೆಯಲ್ಲಿ, ಆಕಾಶದಲ್ಲಿ ಕಲ್ಲಿನಲ್ಲಿ, ಜಲದಲ್ಲಿ, ಸ್ಥಲದಲ್ಲಿ, ಎಲ್ಲದರಲ್ಲಿಯೂ ಚಿನ್ಮಾತ್ರವು ಇದ್ದೇ ಇರುವುದು ಆದರಿಂದ ಒಂದೊಂದೂ ಸಂಪೂರ್ಣವಾದ ವಿಶ್ವವು. ಆದರಿಂದ ಎಲ್ಲೆಲ್ಲಿ ಒಂದೊಂದು ಜಗತ್ತಿರುವುದೋ ಅಲ್ಲಲ್ಲಿ ಸಂಖ್ಯಾ ಎಂಬುದು (ಇಯತ್ತಾ ಎಂಬುದು) ಇರುವುದು ಸಾಧ್ಯವೇ ಇಲ್ಲ. ಆದರಿಂದ ಈ ರಹಸ್ಯವನ್ನು ಅಥವಾ ಎಲ್ಲವೂ ಬ್ರಹ್ಮವೇ ಎಂಬ ರಹಸ್ಯವನ್ನು ಬಲ್ಲವರಿಗೆ ಇದೆಲ್ಲವೂ ಬ್ರಹ್ಮವೇ ! ಅದನ್ನರಿಯದವರಿಗೆ ಇದೆಲ್ಲವೂ ದೃಶ್ಯವೇ !

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜಗತ್ತತ್ತ್ವೈಕ್ಯ ಪ್ರತಿಪಾದನ" ಎಂಬ
ಅರವತ್ಮೂರನೆಯ ಸರ್ಗವು.

## ಚತುಃಷಷ್ಟಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ತತಃಕುವಲಯೋಲ್ಲಾಸಿಮಾಲತೀಮಾಲ್ಯಲೋಚನಾ ।
ಲಲನಾಲಲಿತಾಲೋಕ್ಯಲೀಲಯಾ ಲಪಿತಾ ಮಯಾ ॥ ೧ ॥

ಕಾ ತ್ವಂ ಕಮಲಗರ್ಭಾಭೇ ಕಿಮರ್ಥಂ ಮಾಮುಪಾಗತಾ ।
ಕಸ್ಯಾಸಿ ಕಿಂ ಪ್ರಾರ್ಥಯಸೇ ಕ್ವ ಗತಾಸಿ ಕಿಮಾಸ್ಪದಾ ॥ ೨ ॥

ವಿದ್ಯಾಧರ ಉವಾಚ —

ಮುನೇ ಶೃಣು ಯಥಾವತ್ತ್ವಮಾತ್ಮೋದಂತಂ ವದಾಮ್ಯಹಂ ।
ಪ್ರಷ್ಟುಮರ್ಹಸಿ ವಿಸ್ರಬ್ಧಮಾರ್ತಾಂ ಕರುಣಯಾರ್ಥಿನೀಂ ॥ ೩ ॥

---

## ಅರವತ್ತನಾಲ್ಕನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು.—

೧. ಅನಂತರ ಕುವಲಯದಂತೆ ಸುಂದರಳೂ ಮಾಲತೀ ಮಾಲೆಯಂತೆ ಮನೋಹರವಾದ ಲೋಚನಗಳುಳ್ಳವಳೂ ಆದ ಲಲಿತ ಲಲನೆಯೂ ಆದ ಆ ವಿಧ್ಯಾಧರಿಯನ್ನು ಕುತೂಹಲದಿಂದ ನಾನೇ ಮಾತನಾಡಿಸಿದೆನು.

೨. ಕಮಲ ಗರ್ಭದಂತೆ ಕೋಮಲವಾದ ಎಲೌ, ನೀನು ಯಾರು? ಏತಕ್ಕಾಗಿ ಇಲ್ಲಿ ನನ್ನ ಬಳಿ ಬಂದಿರುವೆ? ನೀನು ಯಾರವಳು? ಏನು ಕೋರುತ್ತಿರುವೆ? ಎಲ್ಲಿಗೆ ಹೊರಟಿರುವೆ? ನೀನು ಇರುವುದು ಎಲ್ಲಿ?

ವಿಧ್ಯಾಧರಿಯು ಹೇಳಿದಳು:—

೩. ಎಲೈ ಮುನಿಯೆ ಕೇಳು, ನನ್ನ ವೃತ್ತಾಂತವನ್ನು ಇದ್ದುದು ಇದ್ದಂತೆ ಹೇಳುವೆನು. ನನಗೆ ಕಷ್ಟವು ಬಂದಿರುವುದು. ಕೃಪೆಮಾಡಿ ನೀನು ನನ್ನನ್ನು ಕಾಪಾಡಬೇಕು. ಅದರಿಂದ ಕೇಳು

ಪರಮಾಕಾಶಕೋಶಸ್ಯ ಕಸ್ಮಿಂಶ್ಚಿತ್ಕೋಣಕೋಟರೇ ।
ಯುಷ್ಮಾಕಂ ಸಂಸ್ಥಿತಂ ಕಿಂಚಿದಿದಂ ತಾವಜ್ಜಗದ್ಗೃಹಂ ॥ ೪ ॥

ಪಾತಾಲಭೂತಲಸ್ವರ್ಗಾ ಇಹಾಪವರಕಾಸ್ತ್ರಯಃ ।
ಕಲ್ಪನೈಕಾ ಕುಮಾರ್ಯತ್ರ ಕೃತಾ ಧಾತೃತ್ವಮಾಯಯಾ ॥ ೫ ॥

ತತ್ರ ದ್ವೀಪೈಃ ಸಮುದ್ರೈಶ್ಚ ವಲಿತಂ ವಲಯೈರಿವ ।
ಪಾಟಲೋತ್ಥಂ ಜಗಲ್ಲಕ್ಷ್ಮ್ಯಾಃ ಪ್ರಕೋಷ್ಠ ಇವ ಭೂತಲಂ ॥ ೬ ॥

ಅಂತೇ ದ್ವೀಪಸಮುದ್ರಾಣಾಂ ಸರ್ವದಿಕ್ಕಮವಸ್ಥಿತಾ ।
ಯೋಜನಾನಾಂ ಸಹಸ್ರಾಣಿ ದಶ ಹೇಮಮಯೀ ಮಹೀ ॥ ೭ ॥

ಸ್ವಯಂಪ್ರಕಾಶಸಂಕಲ್ಪಫಲದಾಂಬರನಿರ್ಮಲಾ ।
ಚಿಂತಾಮಣಿಮಯೀ ಸ್ವಚ್ಛಾ ಸ್ವಚ್ಛಾಂಗಾ ಜಿತವಿಷ್ಟಪಾ ॥ ೮ ॥

---

೪. ಪರಮಾಕಾಶ ಕೋಶದ ಒಂದಾನೊಂದು ಮೂಲೆಯ ಗೂಡಿನಲ್ಲಿ ನಿಮ್ಮ ಜಗತ್ತೆಂಬ ಮನೆಯಿರುವುದು.

೫. ಪಾತಾಲ, ಭೂತಲ, ಸ್ವರ್ಗಗಳೂ ಕೂಡ ನಿಮ್ಮ ಜಗತ್ತಿನಲ್ಲಿ ಒಂದರೊಳಗೊಂದು ಇರುವುವು. ಇವೆಲ್ಲಕ್ಕೂ ಧಾತೃವಾಗಿರುವ ಮಾಯೆಯು ಇವೆಲ್ಲವನ್ನೂ ಆಳುವುದಕ್ಕೆ ಒಬ್ಬ ಕುಮಾರಿಯನ್ನು ಸೃಜಿಸಿದಳು.

೬. ದ್ವೀಪಗಳಿಂದಲೂ ಸಮುದ್ರಗಳಿಂದಲೂ ವಲಯಗಳಿಂದ ಹೇಗೋ ಹಾಗೇ ವಲಿತವಾಗಿರುವ ಜಗಲ್ಲಕ್ಷ್ಮಿಯ ಪಾಟಲವರ್ಣದ ಮುಂಗೈಯೆಂಬಂತೆ ಭೂತಲವಿರುವುದು.

೭. ದ್ವೀಪ ಸಮುದ್ರಗಳ ಕೊನೆಯಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ಹರಡಿಕೊಂಡು ದಶ ಸಹಸ್ರ ಯೋಜನ ವಿಸ್ತೀರ್ಣವಾಗಿ ಹೇಮಮಯವಾಗಿ ಭೂಮಿಯು ಹರಡಿಕೊಂಡಿರುವುದು.

೮ ಆ ಭೂಮಿಯು ಸ್ವಯಂ ಪ್ರಕಾಶವುಳ್ಳದು. ಸಂಕಲ್ಪ ಮಾತ್ರದಿಂದಲೆ ಫಲವನ್ನು ಕೊಡುವ ಆಕಾಶದಿಂದ ಕೂಡಿ ನಿರ್ಮಲವಾಗಿರುವುದು. ಚಿಂತಾಮಣಿಗಳಿಂದ ತುಂಬಿರುವುದು. ಸ್ವಚ್ಛವು: ತನ್ನ ಕಾಂತಿಯಿಂದ ಸ್ವರ್ಗವನ್ನೂ ಮೀರಿಸಿರುವುದು.

ಸಾಪ್ಸರೋಮರಸಿದ್ಧಾನಾಂ ಲೀಲಾವಿಹರಣಾವನಿಃ ।
ಸಂಕಲ್ಪಮಾತ್ರಸಂಪನ್ನಸರ್ವಸಂಭೋಗಸುಂದರೀ ॥ ೯ ॥

ಅಂತೇ ತಸ್ಯಾ ಭುವಃ ಶೈಲೋ ಲೋಕಾಲೋಕೋಽಸ್ತಿ ವಿಶ್ರುತಃ ।
ಭೂಪೀಠಸ್ಯ ಪ್ರಕೋಷ್ಠಸ್ಯ ವಲಯಾವಲನಾಂ ದಧತ್ ॥ ೧೦ ॥

ಕ್ವಚಿನ್ನಿತ್ಯಂ ತಮೋವ್ಯಾಪ್ತೋ ಮೂಢಬುದ್ಧೇರಿವಾಶಯಃ ।
ಕ್ವಚಿನ್ನಿತ್ಯಂ ಪ್ರಕಾಶಾತ್ಮಾ ಮನಃ ಸತ್ತ್ವವತಾಮಿವ ॥ ೧೧ ॥

ಕ್ವಚಿದಾಹ್ಲಾದಜನಕಃ ಸಾಧೂನಾಮಿವ ಸಂಗಮಃ ।
ಕ್ವಚಿದುದ್ವೇಗಜನಕೋ ಮೂರ್ಖೈರಿವ ಸಮಾಗಮಃ ॥ ೧೨ ॥

ಕ್ವಚಿತ್ಪ್ರಕಟಸರ್ವಾರ್ಥೋ ಮನೋಮತಿಮತಾಮಿವ ।
ಕ್ವಚಿದತ್ಯಂತಗಹನೋ ಮೂರ್ಖಶ್ರೋತ್ರಿಯಚಿತ್ತವತ್ ॥ ೧೩ ॥

---

೯. ಅದು ಅಪ್ಸರೆಯರು, ಅಮರರು, ಸಿದ್ಧರು ಮೊದಲಾದವರ ಕ್ರೀಡಾ ಭೂಮಿಯು. ಸಂಕಲ್ಪ ಮಾತ್ರದಿಂದಲೇ ಎಲ್ಲಾ ಭೋಗಗಳನ್ನು ಕೊಡುವ ಸುಂದರ ಭೂಮಿಯದು.

೧೦. ಆ ಭೂಮಿಯ ಕೊನೆಯಲ್ಲಿ ಲೋಕಾಲೋಕವೆಂಬ ಪರ್ವತವಿರುವುದು. ಅದು ಬಹಳ ಪ್ರಸಿದ್ಧವಾದುದು: ಭೂಪೀಠದ ಕೊನೆಯಲ್ಲಿರುವ ವಲಯವೆಂಬಂತೆ ಹರಡಿರುವುದು.

೧೧. ಅದು ಕೆಲವೆಡೆ ಸದಾ ತಮಸ್ಸಿನಿಂದ ತುಂಬಿರುವುದು. ಅದನ್ನು ನೋಡಿದರೆ ಮೂಢ ಬುದ್ಧಿಗಳ ಹೃದಯವೋ ಎನ್ನಿಸುವುದು ಇನ್ನು ಕೆಲವೆಡೆ ಸತ್ವಗುಣ ಸಂಪನ್ನರ ಮನಸ್ಸಿನಂತೆ ಪ್ರಕಾಶಮಯವಾಗಿರುವುದು.

೧೨ ಒಂದೆಡೆ ಸಾಧುಗಳ ಸಂಘದಂತೆ ಆಹ್ಲಾದ ಜನಕವಾಗಿರುವುದು ಇನ್ನು ಕೆಲವೆಡೆ ಮೂರ್ಖಸಂಘದಂತೆ ಉದ್ವೇಗಜನಕವಾಗಿರುವುದು

೧೩. ಒಂದೆಡೆ ಮತಿವಂತರ ಮನಸ್ಸಿನಂತೆ ಸರ್ವಾರ್ಥಗಳನ್ನು ಬಿಚ್ಚಿ ತೋರಿಸುವುದು: ಇನ್ನೊಂದೆಡೆ ಮೂರ್ಖ ಶ್ರೋತ್ರಿಯನ ಚಿತ್ತದಂತೆ ಅತ್ಯಂತ ಗಹನವಾಗಿ ದುರ್ಗಮವಾಗಿರುವುದು.

ಕ್ವಚಿದಪ್ರಾಪ್ತಸೋಮಾಂಶುಃ ಕ್ವಚಿದಪ್ರಾಪ್ತಸೂರ್ಯಭಾಃ ।
ಕ್ವಚಿಲ್ಲೋಕಮಯಸ್ತೇನ ಕ್ವಚಿದಾಶೂನ್ಯದಿಕ್ತಟಃ ॥ ೧೪ ॥

ಕ್ವಚಿದ್ದೇವಪುರವ್ಯಾಪ್ತಃ ಕ್ವಚಿದ್ದೈತ್ಯಪುರಾನ್ವಿತಃ ।
ಕ್ವಚಿತ್ಪಾತಾಲಗಹನಃ ಕ್ವಚಿಚ್ಛೃಂಗೋರ್ಧ್ವಕಂಧರಃ ॥ ೧೫ ॥

ಕ್ವಚಿಚ್ಛ್ವಭ್ರಭ್ರಮದ್ಗೃಧ್ರಃ ಕ್ವಚಿತ್ಸಾನುಮನೋಹರಃ ।
ಕ್ವಚಿಚ್ಛೃಂಗಶಿಖಾಕ್ರಾಂತ ವೈರಿಂಚನಗರಾಂತರಃ ॥ ೧೬ ॥

ಕ್ವಚಿಚ್ಛೂನ್ಯಮಹಾರಣ್ಯವಹತ್ಕಲ್ಪಾಂತಮಾರುತಃ ।
ಕ್ವಚಿತ್ಪುಷ್ಪವನೋದ್ಯಾನಗಾಯದ್ವಿದ್ಯಾಧರೀಗಣಃ ॥ ೧೭ ॥

ಕ್ವಚಿತ್ಪಾತಾಲಗಂಭೀರ ಗುಹಾ ಕುಂಭಾಂಡಭೀಷಣಃ ।
ಕ್ವಚಿನ್ನಂದನಸೋದರ್ಯಮುನ್ಯಾಶ್ರಮಮನೋರಮಃ ॥ ೧೮ ॥

---

೧೪. ಒಂದೆಡೆ ಚಂದ್ರನ ಕಿರಣಗಳು ಬೀಳುವುದೇ ಇಲ್ಲ. ಇನ್ನೊಂದೆಡೆ ಸೂರ್ಯನ ಕಿರಣಗಳಿಲ್ಲ. ಒಂದೆಡೆ ಲೋಕಗಳು ತುಂಬಿದ್ದರೆ ಇನ್ನೊಂದೆಡೆ ದಿಕ್ತಟಗಳವರೆಗೂ ಏನೂ ಇಲ್ಲದೆ ಶೂನ್ಯವಾಗಿರುವುದು.

೧೫-೧೬. ಕೆಲವೆಡೆ ದೇವಪುರಗಳೂ, ಇನ್ನೊಂದೆಡೆ ದೈತ್ಯಪುರಗಳು ಕೆಲವೆಡೆ ಪಾತಾಲದಂತೆ ಆಳವಾಗಿ ಇನ್ನೊಂದೆಡೆ ಶಿಖರಗಳಿಂದ ಉನ್ನತವಾಗಿ ಇರುವುದು. ಇನ್ನೊಂದೆಡೆ ಶಿಖರಗಳು ಎತ್ತರವಾಗಿ ಬ್ರಹ್ಮಲೋಕವನ್ನು ಭೇದಿಸುವಂತೆ ಇರುವುವು.

೧೭-೧೮ ಕೆಲವೆಡೆ ಶೂನ್ಯವಾಗಿರುವ ಮಹಾರಣ್ಯಗಳಲ್ಲಿ ಬೀಸುವ ಭಯಂಕರ ಗಾಳಿಗಳು: ಇನ್ನು ಕೆಲವೆಡೆ ಪುಷ್ಪ ವನಗಳಲ್ಲಿ ಹಾಡುತ್ತಿರುವ ವಿದ್ಯಾಧರಿಯರ ಗಣಗಳು. ಇನ್ನು ಕೆಲವೆಡೆ ಪಾತಾಲದಂತಿರುವ ಗುಹೆಗಳೆಂಬ ಕುಂಭಗಳಿಂದ ಭಯಂಕರವಾಗಿರುವುದು: ಮತ್ತೆ ಕೆಲವೆಡೆ ನಂದನವನದ ಸೋದರಿಯರಂತಿರುವ ಮುನ್ಯಾಶ್ರಮಗಳಿಂದ ಮನೋಹರವಾಗಿರುವುದು.

ಕ್ವಚಿದಕ್ಷಯಮತ್ತಾಭ್ರಃ ಕ್ವಚಿದ್ದುರ್ಲಭವಾರಿದಃ ।
ಕ್ವಚಿದ್ಗರ್ಭಗುಹಾಶ್ವಭ್ರಗಹನೋಪಾಂತಮಂಡಲಃ ॥ ೧೯ ॥

ಕ್ವಚಿತ್ ಕ್ಷುಬ್ಧಜನಾಕ್ಷೇಪಸಮುತ್ಸಾದಿತಭೂತಭೂಃ ।
ಕ್ವಚಿದ್ವಾಸ್ತವ್ಯಜನತಾಸೌಜನ್ಯಜಿತವಿಷ್ಟಪಃ ॥ ೨೦ ॥

ಕ್ವಚಿನ್ನಿತ್ಯಂ ವಹದ್ವಾತಾ ಜಾತಸ್ಥಾವರಜಂಗಮಃ ।
ಕ್ವಚಿತ್ಸರ್ವಕ್ಷಯೋನ್ಮುಕ್ತಸ್ಥಿರಸ್ಥಾವರಜಗಮಃ ॥ ೨೧ ॥

ಕ್ವಚಿನ್ಮಹಾಮರುಮರುನ್ಮುಕ್ತಭಾಂಕಾರಭೀಷಣಃ ।
ಕ್ವಚಿತ್ಕಣತ್ಕಮಲಿನೀಮತ್ತಸಾರಸಭೂಷಣಃ ॥ ೨೨ ॥

ಕ್ವಚಿತ್ಸಲಿಲಕಲ್ಲೋಲಜಲದೋಲ್ಲಾಸಘರ್ಘರಃ ।
ಕ್ವಚಿನ್ಮತ್ತಾಪ್ಸರೋದೋಲಾವಿಲಾಸಜನಿತಸ್ಮರಃ ॥ ೨೩ ॥

ಕ್ವಚಿತ್ಪಿಶಾಚಕುಂಭಾಂಡವೇಷ್ಟಿತಾಶೇಷ್ವದಿಕ್ತಟಃ ।
ಕ್ವಚಿದ್ವಿದ್ಯಾಧರೀಸಿದ್ಧನೃತ್ಯಗೀತಸರಿತ್ತಟಃ ॥ ೨೪ ॥

---

೧೯-೨೦. ಕೆಲವೆಡೆಗಳಲ್ಲಿ ಅಕ್ಷಯವಾದ ಕರಿಯ ಮೋಡಗಳಿದ್ದರೆ ಇನ್ನು ಕೆಲವೆಡೆಗಳಲ್ಲಿ ಮೋಡಗಳೇ ಇಲ್ಲದೆ ಇರುವುದು. ಇನ್ನು ಕೆಲವೆಡೆ ಗರ್ಭಗಳಂತೆ ದುರ್ಗಮವಾದ ಗುಹೆಗಳಿಂದಲೂ ಹಳ್ಳಗಳಿಂದಲೂ ಕೂಡಿರುವ ದೇಶಗಳು ಇರುವುವು. ಕ್ಷೋಭಗೊಂಡಿರುವ ಜನರು ಹೊಡೆದೋಡಿಸುತ್ತಿರುವ ಪಿಶಾಚ ಗಳುಳ್ಳ ದೇಶವೊಂದೆಡೆಯಾದರೆ, ಇನ್ನೊಂದೆಡೆ ಅಲ್ಲಿ ವಾಸವಾಗಿರುವ ಜನರ ಸೌಜನ್ಯದಿಂದ ಸ್ವರ್ಗವನ್ನು ಮೀರಿಸಿರುವ ದೇಶವು ಇರುವುದು.

೨೧-೨೨. ಕೆಲವೆಡೆ ಗಾಳಿಯು ಯಾವಾಗಲೂ ಬೀಸುತ್ತಿರುವುದು; ಯಾವಾಗಲೂ ಗಿಡಮರಗಳೂ ಪ್ರಾಣಿಗಳೂ ತುಂಬಿರುವುವು. ಇನ್ನೊಂದೆಡೆ ಯಾವ ಮನೆಗಳೂ ಇಲ್ಲದೆ ಸ್ಥಾವರ ಜಂಗಮಗಳೆರಡೂ ಸ್ಥಿರವಾಗಿರುವುವು. ಇನ್ನೊಂದೆಡೆ ವಿಶಾಲವಾದ ಮರುಭೂಮಿಯೂ, ಮರುಭೂಮಿಯಲ್ಲಿ ಜನಿಸುವ ಮಹಾಶಬ್ದದ ಭಯವೂ ಇರುವುವು. ಇನ್ನೊಂದೆಡೆ ನಲಿಯುತ್ತಿರುವ ಕಮಲಿನಿ ಇಂದಲೂ ಮದಿಸಿದ ಸಾರಸಪಕ್ಷಿಗಳಿಂದಲೂ ಮನೋಹರವಾಗಿರುವುದು.

೨೩-೨೪. ಒಂದೆಡೆ ಜಲಗಳ ಕಲ್ಲೋಲದಿಂದ ಜಲದಗಳ ಉಲ್ಲಾಸದಿಂದ

ಕ್ವಚಿದುದ್ವರ್ಷದಂಭೋದಸರಿದ್ಬಾಹುಲುಠತ್ತಟಃ ।
ಕ್ವಚಿತ್ಸತತಗಾನೀತನೀತನಾನಾಭ್ರಸತ್ಪಟಃ ॥ ೨೫ ॥

ಕ್ವಚಿತ್ಕಮಲಿನೀಕೋಶವಕ್ತ್ರಸ್ಫಾಧ್ಯಾನಮಂಡಲಃ ।
ಕ್ವಚಿತ್ಸ್ವರ್ಗಾಂಗನಾಸಿದ್ಧಸುಂದರೀದಂತಮಂಡನಃ ॥ ೨೬ ॥

ಕ್ವಚಿತ್ಪ್ರಪದ್ದಿನಕರಜನತಾಚಾರಸುಂದರಃ ।
ಕ್ವಚಿನ್ನೈಕೃಶತಮೋಗೇಹನೃತ್ಯನ್ಮತ್ತನಿಶಾಚರಃ ॥ ೨೭ ॥

ಕ್ವಚಿದುತ್ಪತದುತ್ಪಾತಶಯಾ ನಶ್ಯಜ್ಜನಾವನಿಃ ।
ಕ್ವಚಿತ್ಸೌರಾಜ್ಯಸಂಪತ್ತ್ಯಾ ಪ್ರೋತ್ಫವತ್ಪುರಮಂಡಲಃ ॥ ೨೮ ॥

---

ಕೂಡಿರುವುದು. ಇನ್ನೊಂದೆಡೆ ಮದಿಸಿರುವ ಅಪ್ಸರೆಯರು ಉಯ್ಯಾಲೆಯಾಡು ತ್ತಿರುವುದನ್ನು ಕಂಡರೆ ಸ್ಮರೋದಯ ವಾಗುವಂತಿರುವುದು, ಇನ್ನೊಂದೆಡೆ ಪಿಶಾಚ ಗಳೂ ಕುಂಭಾಂಡಗಳೂ ಸೇರಿಕೊಂಡು ಮಾಡುತ್ತಿರುವ ಚೇಷ್ಟೆಗಳಿಂದ ತುಂಬಿ ಹೋಗಿರುವ ದಿಕ್ತಟಗಳು: ಇನ್ನೊಂದೆಡೆ ವಿದ್ಯಾಧರಿಯರ ಸಿದ್ಧರ ನೃತ್ಯಗೀತೆ ಗಳಿಂದ ತುಂಬಿ ಹೋಗಿರುವ ನದಿಗಳ ದಡಗಳು.

೨೫–೨೬. ಇನ್ನೊಂದೆಡೆ ಬಹುವಾಗಿ ವರ್ಷಿಸುತ್ತಿರುವ ಮೋಡಗಳು ನೀರು ಗಳೆಂಬ ಬಾಹುಗಳಿಂದ ಕಿತ್ತುಹಾಕುತ್ತಿರುವ ದಡಗಳು: ಮತ್ತೊಂದು ಕಡೆ ಮಾರುತನು ತಂದೊಡ್ಡಿರುವ ನಾನಾ ಮೇಘಗಳೆಂಬ ಪಟಗಳು: ಇನ್ನೊಂದೆಡೆ ಕಮಲಿನಿಯ ಕೋಶವಲ್ಲಿರುವ ದುಂಬಿಗಳು ಧ್ಯಾನ ಮಾಡುತ್ತಿರುವ ದೇಶವು: ಇನ್ನೊಂದೆಡೆ ಸ್ವರ್ಗಾಂಗನೆಯರ ಸಿದ್ಧಸುಂದರಿಯರ ದಂತಗಳ ಪ್ರಕಾಶವು.

(ಸ್ವರ್ಗಾಂಗನಾನಾಮಪ್ಸರಸಾಂ ಸಿದ್ಧಸುಂದರೀಣಾಂಚದಂತಾಸ್ತಾಂಬೂಲೈ ರ್ಮಂಡಯತೀತಿ ತಥೋಕ್ತಃ । ನಾಗವಲ್ಲೀವನಭೂಷಿತ ಇತಿಯಾವತ್ ॥ —ತಾ. ಪ್ರ.)

೨೭–೨೮. ಕೆಲವೆಡೆ ಬೆಳಗುತ್ತಿರುವ ಸೂರ್ಯನೂ ಶುದ್ಧಾಚಾರದಿಂದ ಕೂಡಿ ರುವ ಜನಗಳೂ ಇದ್ದು ಸುಂದರವಾಗಿರುವ ದೇಶವು: ಇನ್ನು ಕೆಲವೆಡೆ ರಾತ್ರಿಯ ಕತ್ತಲು ತುಂಬಿರುವ ಮನೆಗಳಲ್ಲಿ ಕುಣಿಯುತ್ತಿರುವ ಉನ್ಮತ್ತ ರಾಕ್ಷಸರು ಇನ್ನೊಂದೆಡೆ ಆಗುತ್ತಿರುವ ಉತ್ಪಾತಗಳಿಂದ ಧ್ವಂಸವಾಗುತ್ತಿರುವ ಜನಪದಗಳು:

ಕ್ವಚಿದತ್ಯಂತನಿಃಶೂನ್ಯಃ ಕ್ವಚಿಜ್ಜನಪದಾವೃತಃ ।
ಕ್ವಚಿಚ್ಛ್ವಭ್ರಾಂತಗಂಭೀರಃ ಕ್ವಚಿತ್ಪಾತಾಲಭೀಷಣಃ ॥ ೨೯ ॥

ಕ್ವಚ್ಚಿದ್ವೃಹಕಲ್ಪತರುಃ ಕ್ವಚಿನ್ನಿರ್ಜಲಜಂಗಲಃ ।
ಕ್ವಚಿನ್ಮಹಾಕರಿಕುಲಃ ಕಚಿನ್ಮತ್ತಹರಿವ್ರಜಃ ॥ ೩೦ ॥

ಕ್ವಚಿನ್ನಿರ್ಭೂತವಮುದ್ಯಾತಃ ಕ್ವಚಿದುನ್ಮತ್ತರಾಕ್ಷಸಃ ।
ಕ್ವಚಿತ್ಕರಂಜಗಹನ ಕ್ವಚಿತ್ತಾಲಮಹಾವನಃ ॥ ೩೧ ॥

ಕ್ವಚಿದ್ವ್ಯೋಮೋಪಮಸರಾಃ ಕ್ವಚಿದ್ದೀರ್ಘಮರುಸ್ಥಲಃ ।
ಕ್ವಚಿನ್ನಿತ್ಯಭ್ರಮತ್ಪಾಂಸುಃ ಕ್ವಚಿತ್ಸರ್ವರ್ತುಕಾನನಃ ॥ ೩೨ ॥

ಶಿಖರೇಷು ಶಿಲಾಸ್ತಸ್ಯ ಸಾಮಾನ್ಯಾಚಲಸಂನಿಭಾಃ ।
ಸಂತಿ ಸುಸ್ಥಿತಕಲ್ಪಾಭ್ರಾ ರತ್ನಮಯ್ಯೋಽಂಬರಾಮಲಾಃ ॥ ೩೩ ॥

---

ಇನ್ನೊಂದೆಡೆ ಉತ್ತಮವಾದ ರಾಜ್ಯ ಭಾರವಿರುವುದರಿಂದ ವೃದ್ಧಿಯಾಗುತ್ತಿರುವ ಪುರಮಂಡಲಗಳು.

೨೯ ೩೦ ಕೆಲವೆಡೆ ಅತ್ಯಂತ ನಿಃಶೂನ್ಯಗಳು: ಕೆಲವೆಡೆ ಜನಪದಗಳಿಂದ ತುಂಬಿರುವ ಕಡೆಗಳು ಕೆಲವೆಡೆ ಆಳವಾದ ಹಳ್ಳಗಳು: ಕೆಲವೆಡೆ ಪಾತಾಲ ದಂತಿದ್ದು ಭಯಂಕರವು : ಕೆಲವೆಡೆ ವಿಸ್ತಾರವಾಗಿಯೂ ಎತ್ತರವಾಗಿಯೂ ಬೆಳೆದಿರುವ ಕಲ್ಪತರುಗಳು. ಕೆಲವೆಡೆ ನಿರ್ಜಲವಾದ ಜಂಗಲ್ಲುಗಳು, ಕೆಲವೆಡೆ ದೊಡ್ಡಾನೆಗಳ ಹಿಂಡುಗಳು. ಕೆಲವೆಡೆ ಮದಿಸಿದ ಸಿಂಹಗಳು ಗುಂಪುಗಳು.

೩೧–೩೨ ಕೆಲವೆಡೆ ಪ್ರಾಣಿಗಳು ಬದುಕುವುದಕ್ಕಾಗದಷ್ಟು ಎತ್ತರವಾಗಿರುವ ಭೂಮಿಗಳು. ಕೆಲವೆಡೆ ಉನ್ಮತ್ತರಾದ ರಾಕ್ಷಸರು ತುಂಬಿರುವ ದೇಶಗಳು: ಕೆಲವೆಡೆ ಮುಳ್ಳು ಹಿಡಿದಿರುವ ಅರಣ್ಯಗಳು: ಕೆಲವೆಡೆ ತಾಲವೃಕ್ಷಗಳಿಂದ ತುಂಬಿರುವ ಮಹಾ ವನಗಳು ಕೆಲವೆಡೆ ಆಕಾಶದಂತೆ ನಿರ್ಮಲವಾಗಿರುವ ಸರಸ್ಸುಗಳು: ಕೆಲವಡೆ ವಿಸ್ತಾರವಾದ ಮರುಭೂಮಿಗಳು. ಕೆಲವೆಡೆ ಯಾವಾಗಲೂ ಬೀಸುತ್ತಿರುವ ಗಾಳಿಗಳಿಂದ ಎದ್ದಿರುವ ಧೂಳುಳ್ಳ ದೇಶಗಳು. ಕೆಲವೆಡೆ ಸರ್ವ ಋತುಗಳಲ್ಲಿಯೂ ಹೂವು ಹಣ್ಣು ಉಳ್ಳ ಅಡವಿಗಳು.

೩೩ ಕೆಲವು ಪರ್ವತಗಳ ಶಿಖರಗಳಲ್ಲಿ ಒಂದು ಸಾಮಾನ್ಯವಾದ ಬೆಟ್ಟ

ಕ್ಷೀರೋದಕಾರ್ಕಗೌರೀಣಾಂ ವನಸ್ಕಂಧೌಕಸಾಮಿವ ।
ವಿಶ್ರಾಮ್ಯಂತ್ಯನಿಶಂ ಯಾಸು ಹರಯೋ ಹರಿಯೋನಯಃ ॥ ೩೪ ॥

ತಾಸಾಮುತ್ತರದಿಗ್ಭಾಗೇ ಪೂರ್ವಶೃಂಗಶಿಲೋದರೀ ।
ನಿವಸಾಮ್ಯಹಮಕ್ಷೀಣ ವಜ್ರಸಾರಸಮತ್ವಚಿ ॥ ೩೫ ॥

ವಿಧಿನಾ ತತ್ರ ಬದ್ಧಾಸ್ಮಿ ವಸಾಮ್ಯು ಪಲಯಂತ್ರಕೇ ।
ಅಶ್ರಾಸಂಖ್ಯಾ ಮುನೇ ಯಾತಾ ಮನ್ಯೇ ಯುಗಗಣಾ ಮಮ ॥ ೩೬ ॥

ನ ಕೇವಲಮಹಂ ಬದ್ಧಾ ಯಾವದ್ಭರ್ತಾಪಿ ತತ್ರ ಮೇ ।
ಬದ್ಧಃ ಸಾಯಂತನೇ ಪದ್ಮಕುಡ್ಮಲೇ ಷಟ್ಪದೋ ಯಥಾ ॥ ೩೭ ॥

---

ದಕ್ಷಿರುವ ಬಂಡೆಗಳುಂಟು. ಅವುಗಳಲ್ಲಿ ಯಾವಾಗಲೂ ಮೋಡಗಳು ವಿಶ್ರಾಂತಿ ಪಡೆಯುತ್ತಿರುವುವು: ಆ ಶಿಲೆಗಳೆಲ್ಲವೂ ರತ್ನಮಯಗಳಾಗಿ ಆಕಾಶದಂತೆ ಶುಭ್ರವಾಗಿರುವುವು.

೩೪. ಕ್ಷೀರದಂತೆ ಜಲದಂತೆ ಸೂರ್ಯನಂತೆ ಬೆಳ್ಳಗಿರುವ ಆ ಪರ್ವತ ಶಿಖರ ಶಿಲೆಗಳಲ್ಲಿ, ಆರಣ್ಯದ ಮಹಾ ವೃಕ್ಷಗಳಲ್ಲಿ ತಂಗುವಂತೆ, ಕಪಿಗಳು ಸಂತಾನಗಳೊಡನೆ ಇರುವುವು

೩೫. ಅವುಗಳ ಉತ್ತರ ಭಾಗದಲ್ಲಿರುವ ಶಿಲೆಗಳ ಮೂಡಣ ಕೋಡಿನ ಬಂಡೆಯೊಂದುಂಟು. ಅಕ್ಷೀಣವಾದ ವಜ್ರಸಾರದಂತಿರುವ ಹೊರಭಾಗವುಳ್ಳದ್ದು ಅದು. ಅದರೊಳಗೆ ನಾನು ಇರುವೆನು.

೩೬. ವಿಧಿಯು ನಾನು ಅಲ್ಲಿರಬೇಕೆಂದು ಕಟ್ಟು ಮಾಡಿರುವುದು. ಅದು ಒಂದು ಶಿಲಾಯಂತ್ರವು ಅಲ್ಲಿರುವ ನನಗೆ ಯುಗ ಯುಗಗಳು ಅಸಂಖ್ಯಾತವಾಗಿ ಕಳೆದುಹೋದುವು.

೩೭ ಅಲ್ಲಿ ನಾನೊಬ್ಬಳೇ ಅಲ್ಲ: ನನ್ನ ಗಂಡನೂ ಇರಬೇಕಾಗಿರುವುದು. ಸಂಜೆಯಾಗುತ್ತಲೂ ಪದ್ಮಕೋಶದಲ್ಲಿ ಸೆರೆಯಾಗುವ ದುಂಬಿಗಳಂತೆ ನಾವಿಬ್ಬರೂ ಅಲ್ಲಿ ಸೆರೆಯನ್ನು ಅನುಭವಿಸುತ್ತಿರುವೆವು.

ತೇನ ಸಾರ್ಧಂ ಮಯಾ ಭರ್ತ್ರಾ ಶಿಲಾಕೋಟರಸಂಕಟೇ ।
ಅನುಭೂತಾ ಚಿರಂ ಕಾಲಮತ್ರ ವರ್ಷಗಣಾ ಗತಾಃ ॥ ೩೮ ॥

ಅದ್ಯಾಪ್ಯಾತ್ಮೈಕದೋಷೇಣ ನಹಿ ಮೋಕ್ಷಂ ಲಭಾವಹೇ ।
ಚಿರಂ ತತ್ರೈವ ತಿಷ್ಠಾವಸ್ತಥೈವಾಬದ್ಧಭಾವನೌ ॥ ೩೯ ॥

ಪಾಷಾಣಸಂಕಟೇ ತಸ್ಮಿನ್ಬದ್ಧಾವಾವಾಂ ನ ಕೇವಲಂ ।
ಬದ್ಧೋ ಯಾವದಶೇಷೇಣ ಪರಿವಾರೋಽಪಿ ತತ್ರ ನೌ ॥ ೪೦ ॥

ಪುರಾಣಪುರುಷೋ ಬದ್ಧೋ ದ್ವಿಜಸ್ತತ್ರಾಸ್ತಿ ಮೇ ಪತಿಃ ।
ಏಕಸ್ಥಾನಾನ್ನ ಚಲತಿ ಜೀವನ್ಯುಗಶತಾನ್ಯಸೌ ॥ ೪೧ ॥

ಆಬಾಲ್ಯಾದ್ಬ್ರಹ್ಮಚಾರೀ ಚ ಶ್ರೋತ್ರಿಯಃ ಪಾಠಕೋಽಲಸಃ ।
ಏಕಾಂತ ಏಕ ಏವಾಸ್ತೇಽಜಿಹ್ಮವೃತ್ತಿರಚಾಪಲಃ ॥ ೪೨

---

೩೮. ಅಲ್ಲಿ ನಾನು ನನ್ನ ಗಂಡನೊಡನೆ, ಶಿಲಾ ಗರ್ಭದಲ್ಲಿ ಸೆರೆಯನ್ನು ಅನುಭವಿಸಿದೆನು. ಅದು ಎಷ್ಟು ಕಾಲವಾಯಿತೋ? ಅಂತೂ ವರ್ಷ ವರ್ಷಗಳು ಕಳೆದುಹೋದುವು.

೩೯. ಈಗಲೂ ನಾವು ಮಾಡಿದ ಒಂದೇ ಒಂದು ತಪ್ಪಿಗಾಗಿ, ಒಂದೇ ಒಂದು ದೋಷಕ್ಕಾಗಿ, ನಮಗೆ ಬಿಡುಗಡೆಯಿಲ್ಲವಾಗಿರುವುದು. ಇನ್ನೂ ಚಿರಕಾಲ ಅಲ್ಲಿಯೇ ಇರಬೇಕಾಗಿರುವುದು. ಹೀಗೆಯೇ ಬಂಧನವನ್ನು ಅನುಭವಿಸಬೇಕಾಗಿರುವುದು

೪೦. ಆ ಪಾಷಾಣ ಬಂಧ ಸಂಕಟದಲ್ಲಿ ಒದ್ದಾಡುತ್ತಿರುವವರು ನಾವು ಇಬ್ಬರು ಮಾತ್ರವಲ್ಲ: ನಮ್ಮ ಪರಿವಾರವೆಲ್ಲವೂ ಕೂಡ ಬಂಧಿತವಾಗಿರುವುದು.

೪೧. ನನ್ನ ಗಂಡನು ದ್ವಿಜನು: ಅವನು ಪುರಾಣಪುರುಷನಾಗಿರುವನು: ಯುಗ ಶತಗಳಾದರೂ ಇನ್ನು ಕುಳಿತ ಕಡೆ ಬಿಟ್ಟು ಏಳದೆ ಇರುವನು.

೪೨. ಆತನು ಬಾಲ್ಯದಿಂದಲೂ ಬ್ರಹ್ಮಚಾರಿಯು ಶ್ರೋತ್ರಿಯನು: ಪಾಠಕನು: ಆಲಸ್ಯವಿಲ್ಲದವನು: ನೇರವಾಗಿರುವವನು: ಚಾಪಲ್ಯವಿಲ್ಲದವನು: ಏಕಾಂತದಲ್ಲಿ ಒಬ್ಬನೇ ಒಬ್ಬನಾಗಿರುವನು.

ಅಹಂವ್ಯಸನಿನೀ ಭಾರ್ಯಾ ತಸ್ಯ ವೇದವಿದಾಂವರ ।
ನ ನಿಮೇಷಂ ಸಮರ್ಥಾಸ್ಮಿ ತಂ ವಿನಾ ದೇಹಧಾರಣೇ ॥ ೪೩ ॥

ಶೃಣು ತೇನ ಕಥಂ ಬ್ರಹ್ಮನ್ಭಾರ್ಯಾಹಂ ಸಮುಪಾರ್ಜಿತಾ ।
ಕಥಂ ವೃದ್ಧಿಮಯಂ ಯಾತಃ ಸ್ನೇಹೋಽಸ್ಮಾಕಮಕೃತ್ರಿಮಃ ॥ ೪೪ ॥

ತೇನ ಜಾತೇನ ಮದ್ಭರ್ತ್ರಾ ಬಾಲೇನೈವ ಸತಾ ಪುರಾ ।
ಕಿಂಚಿಜ್ಜ್ಞೇನ ಸತೈಕೇನ ತಿಷ್ಠತಾತ್ಮಾಲಯೇಽಮಲೇ ॥ ೪೫ ॥

ಶ್ರೋತ್ರಿಯತ್ವಾನುರೂಪೇಣ ಜಾಯಾ ಮೇ ಜನ್ಮಶಾಲಿನೀ ।
ಕುತಃ ಸಂಭವತೀತ್ಯೇವ ನಿರ್ಣೀಯ ಚಿರಚಿಂತಯಾ ॥ ೪೬ ॥

ಸ್ವಯಮೇವಾನವದ್ಯಾಂಗೀ ತೇನ ತಾಮರಸೇಕ್ಷಣ ।
ಉತ್ಪಾದಿತಾಸ್ಮಿ ನಾಥೇನ ಜ್ಯೋತ್ಸ್ನೇವ ಶಶಿನಾಮಲಾ ॥ ೪೭ ॥

೪೩. ಆತನ ಭಾರ್ಯೆಯಾದವರೂ ನಾನು ವ್ಯಸನವುಳ್ಳವಳು (ಭೋಗ ಕಾತರಳು) ಎಲೈ ವೇದವೇತ್ತರಲ್ಲಿ ಶ್ರೇಷ್ಠನಾದವನೆ, ಗಂಡನನ್ನು ಬಿಟ್ಟು ಒಂದು ಕ್ಷಣವೂ ಬದುಕಿರಲಾರೆನು.

೪೪. ಆ ಏಕಾಂತವಾಸಿಯಾದ ದ್ವಿಜನು ನನ್ನನ್ನು ಭಾರ್ಯೆಯಾಗಿ ಹೇಗೆ ಪಡೆದನೆಂಬುದನ್ನು ಕೇಳು. ನಮ್ಮಿಬ್ಬರಿಗೂ ಅಕೃತ್ರಿಮವಾದ ಸ್ನೇಹವು ಹೇಗೆ ವೃದ್ಧಿಯಾಯಿತು ಎಂಬುದನ್ನೂ ಹೇಳುವೆನು ಕೇಳು.

೪೫ ನನ್ನ ಗಂಡನು ಹುಡುಗನಾಗಿದ್ದಾಗಲೇ, ಅವನು ಇನ್ನೂ ಅಷ್ಟಾಗಿ ತಿಳಿಯದಿದ್ದಾಗ, ಒಬ್ಬನೇ ಒಬ್ಬ ಮನೆಯಲ್ಲಿದ್ದುಕೊಂಡು (ಬೇಜಾರುಪಡುತ್ತಿದ್ದಾಗ)

೪೬. ಶ್ರೋತ್ರಿಯನಿಗೆ ತಕ್ಕ ಹೆಂಡತಿಯಾದವಳು ಒಬ್ಬಳು ನನಗೆ ಹೇಗೆ ದೊರೆತಾಳು ಎಂದು ಬಹು ಕಾಲ ಚಿಂತಿಸಿದನು.

೪೭. ಅದರ ಫಲವಾಗಿ ನಿರ್ದೋಷ ಸೌಂದರ್ಯವುಳ್ಳ ನಾನು, ಎಲೈ ಪದ್ಮಪತ್ರೇಕ್ಷಣನೆ, ಸ್ವಯಂ ಆಗಿ ಚಂದ್ರನಿಂದ ಚಂದ್ರಿಕೆಯು ಹುಟ್ಟುವಂತೆ, ಹುಟ್ಟಿ ಬಂದೆನು.

ಮನಸಾ ಮಾನಸೀ ಭಾರ್ಯಾ ಮಂದಾರೋತ್ತಮಸುಂದರೀ ।
ತತೋ ವೃದ್ಧಿಂ ಪ್ರಯಾತಾಸ್ಮಿ ವಸಂತ ಇವ ಮಂಜರೀ ॥ ೪೮ ॥

ಸಹಜಾಂಬರಸಂಚ್ಛನ್ನಾ ಭೂತಾನಾಂ ಚಿತ್ತಹಾರಿಣೀ ।
ಪೂರ್ಣೇಂದುಬಿಂಬವದನಾ ದ್ಯೌರಿವಾಮಲತಾರಕಾ ॥ ೪೯ ॥

ಕೋರಕೋಚ್ಚಸ್ತನಭರಾ ಸಮಗ್ರರಸಶಾಲಿನೀ ।
ಲತಾವರವನೇನೇವ ಕರಪಲ್ಲವಶಾಲಿನೀ ॥ ೫೦ ॥

ಸರ್ವಸ್ಯ ಜಂತುಜಾತಸ್ಯ ನಿತ್ಯಂ ಹೃದಯಾಹಾರಿಣೀ ।
ಹರಣೀತಾರನಯನಾ ಮದನೋನ್ಮಾದದಾಯಿನೀ ॥ ೫೧ ॥

ಲೀಲಾವಿಲಾಸ್ಯೈಕರತಾ ಹೇಲಾವಲಿತಲೋಚನಾ ।
ಗೇಯವಾದ್ಯಪ್ರಿಯಾ ನಿತ್ಯಂ ನಚ ತೃಪ್ತಾನುರಾಗಿಣೀ ॥ ೫೨ ॥

---

೪೮. ಆತನು ತನ್ನ ಮನಸ್ಸಿನಿಂದ ಹುಟ್ಟಿ ಬಂದ ಭಾರ್ಯೆಯಾದ ನನ್ನನ್ನು ತನ್ನ ಮನಸ್ಸಿನಿಂದಲೇ, ವಸಂತನು ಮಂಜರಿಯನ್ನು ಬೆಳೆಸುವ ಹಾಗೆ ಬೆಳೆಸಿದನು. ನಾನೂ ಮಂದಾರದಂತೆ ಉತ್ತಮಳಾದ ಸುಂದರಿಯಾದೆನು.

೪೯. ನಿರ್ಮಲವೂ ತಾರಕೆಗಳಿಂದ ಕೂಡಿದುದೂ ಆದ ಆಕಾಶದಂತೆ, ಸಹಜವಾದ ವಸ್ತ್ರದಿಂದ ಆಚ್ಛಾದಿತಳಾಗಿ, ನೋಡಿದವರ ಮನಸ್ಸನ್ನು ಅಪಹರಿಸುವವಳಾಗಿ, ಬೆಳೆದೆನು.

೫೦ ಕೋರಕ (ಮುಗ್ಗು)ಗಳಂತೆ ಎತ್ತರವಾದ ಸ್ತನಗಳುಳ್ಳವಳೂ, ಸಮಗ್ರ ಸದ್ಗುಣ ಸಂಪನ್ನಳೂ, ಕಾಡಿನಲ್ಲಿರುವ ಲತೆಯಂತೆ ಕರಗಳೆಂಬ ಪಲ್ಲವಗಳನ್ನುಳ್ಳವಳೂ ಆದೆನು.

೫೧. ಎಲ್ಲ ಜಂತುಗಳಿಗೂ ಮನೋಹರಗಳಾಗಿ, ಹರಿಣಿಯ ಕಣ್ಣುಗಳಂತೆ ಕಣ್ಣುಗಳುಳ್ಳವಳಾಗಿ, ಮದನನಿಗೂ ಉನ್ಮಾದವನ್ನು ಉಂಟುಮಾಡುವವಳಾದೆನು.

೫೨. ಯಾವಾಗಲೂ ಆಟವಾಡುವವಳಾಗಿ, ಲೀಲಾ ಪರಿಪೂರ್ಣವಾದ ನೇತ್ರಗಳುಳ್ಳವಳಾಗಿ, ಗೇಯವಾದ್ಯಗಳಲ್ಲಿ ಅಭಿರತಳಾಗಿ, ಭೋಗಗಳಲ್ಲಿ ಅತೃಪ್ತಳಾಗಿ ಇದ್ದೆನು

ಸೌಭಾಗ್ಯಭೋಗಪರಮಾ ಲಕ್ಷ್ಮ್ಯ ಲಕ್ಷ್ಮ್ಯೋಃ ಪ್ರಿಯಾ ಸಖೀ ।
ಅನನ್ಯಾ ಮೋಹಜಾಲಾನಾಮಖಿನ್ನಾ ಸಂಪದಾಪದೋಃ ॥ ೫೩ ॥

ನ ಕೇವಲಮಹಂ ಗೇಹಂ ಧಾರಯಾಮಿ ದಿಜನ್ಮನಃ ।
ಯಾವತ್ತ್ರೈಲೋಕ್ಯಸದನಮಿದಮಂಗ ಬಿಭರ್ಮ್ಯಹಂ ॥ ೫೪ ॥

ಅಹಂ ಕುಲಕರೀ ಭಾರ್ಯಾ ಕಲತ್ರಭರಣಕ್ಷಮಾ ।
ತ್ರೈಲೋಕ್ಯಗೃಹಸಂಭಾರಧಾರಣೈಕಭರೋದ್ವಹಾ ॥ ೫೫ ॥

ಅಥಾಹಂ ತರುಣೀ ಜಾತಾ ಸಮುದ್ಭಿನ್ನೋನ್ನತಸ್ತನೀ ।
ಲತೋಲ್ಲಸದ್ಗುಲುಚ್ಛೇವ ವಿಲಾಸರಸಶಾಲಿನೀ ॥ ೫೬ ॥

---

೫೩. ಸೌಭಾಗ್ಯದಿಂದ ಕೂಡಿದ ಭೋಗಗಳಲ್ಲಿ ಆಸಕ್ತಿಯುಳ್ಳವಳಾದರೂ ಲಕ್ಷ್ಮಿ- ಅಲಕ್ಷ್ಮಿಯರಿಬ್ಬರ ಪ್ರಿಯ ಸಖಿಯಾಗಿ, ಮೋಹಜಾಲದಲ್ಲಿ ಗಂಡನ ಪ್ರೇಮವನ್ನು ಪೂರ್ಣವಾಗಿ ಅನುಭವಿಸುವವಳಾಗಿ, ಸಂಪತ್ತು ಆಪತ್ತುಗಳಿಂದು ಖಿನ್ನಳಾಗದೆ,

೫೪. (ನನ್ನ ಗಂಡನಾದ) ಆ ಬ್ರಾಹ್ಮಣನ ಮನೆಯನ್ನು ನಡೆಸಿಕೊಂಡು ಹೋಗುತ್ತಿರುವೆನು, ಮಾತ್ರವಲ್ಲ. ಈ ತ್ರೈಲೋಕ್ಯಗೇಹವೆಂಬುದು ಯಾವು ದುಂಟೋ ಅದನ್ನೆಲ್ಲ ನಿರ್ವಹಿಸುತ್ತಿರುವೆನು.

೫೫. ನಾನು ಕುಲವನ್ನು ಬೆಳೆಸುವ ಭಾರ್ಯೆಯು. ಸಂಸಾರವನ್ನು ಭರಿಸುವ ಯೋಗ್ಯತೆಯುಳ್ಳವಳು. ತ್ರೈಲೋಕ್ಯವೆಂಬ ಗೃಹದ ಸಂಭಾರ ಧಾರಣವೆಂಬ ಭಾರವನ್ನು ವಹಿಸಬಲ್ಲ ಶಕ್ತಿಯುಳ್ಳವಳು.

೫೬. ನಾನು ತರುಣಿಯಾದೆನು : ಎದೆಯು ಸ್ತನಗಳಿಂದ ತುಂಬಿತು. ಉಲ್ಲಾಸ ದಿಂದ ಕೂಡಿರುವ ಪುಷ್ಪಗುಚ್ಛಗಳಿಂದ ಮನೋಹರವಾಗಿರುವ ಲತೆಯಂತೆ, ಕ್ರೀಡಾ ರಸ ಪರಿಪೂರ್ಣಳಾಗಿರುವೆನು

ಪತಿರ್ಮಾಂ ದೀರ್ಘಸೂತ್ರತ್ವಾಚ್ಛ್ರೋತ್ರಿಯತ್ವಾತ್ತಥೋರತಃ ।
ಕಯಾಪ್ಯಪೇಕ್ಷಯಾದ್ಯಾಪಿ ನ ವಿವಾಹಿತವಾನಿಮಾಂ ॥ ೫೭ ॥

ತೇನ ಯೌವನಸಂಪನ್ನವಿಲಾಸರಸಶಾಲಿನೀ ।
ತಂ ವಿನಾ ವ್ಯಸನೇನಾಹಂ ದಹ್ಯೇಽಗ್ನಾವಿವ ಪದ್ಮಿನೀ ॥ ೫೮ ॥

ಶೀತಾನಿಲವಿಲೋಲಾಸು ನಲಿನೀಷು ನಿರಂತರಂ ।
ಅಂಗದಾಹಮವಾಪ್ನೋಮಿ ಪೂತಾಂಗಾರಸ್ಥಲೀಷ್ವಿವ ॥ ೫೯ ॥

ಉದ್ಯಾನಾವನಯಃ ಸರ್ವಾಃ ಪೂರ್ಣಾಃ ಕುಸುಮವರ್ಷಣೈಃ ।
ಸಂಪನ್ನಾಸ್ತಪ್ತಸಿಕತಾಃ ಶೂನ್ಯಾ ಮೇ ಮರುಭೂಮಯಃ ॥ ೬೦ ॥

ಜಲಕಲ್ಲೋಲಕಹ್ಲಾರಕಮಲೋತ್ಕರಕೋಮಲಾಃ ।
ಸರಸ್ಯಃ ಸಾರಸಾರಾವಸರಸಾ ಮಮ ನೀರಸಾಃ ॥ ೬೧ ॥

---

೫೭. ಯಾರಿಗಾಗಿ ನಾನು ಜನ್ಮಿಸಿದೆನೋ ಆ ನನ್ನ ಪತಿಯು, ದೀರ್ಘ ಸೂತ್ರ (ಯಜ್ಞ) ದಲ್ಲಿರುವುದರಿಂದಲೋ, ಶ್ರೋತ್ರಿಯನಾಗಿರುವುದರಿಂದಲೋ, ಅಥವಾ ಮತ್ತೆ ಯಾವ ಕಾರಣದಿಂದಲೋ, ನನ್ನನ್ನು ಇನ್ನೂ ಮದುವೆ ಮಾಡಿ ಕೊಂಡಿಲ್ಲ

೫೮. ಯೌವನ ಸಂಪನ್ನಳೂ ವಿಲಾಸರಸ ಪೂರ್ಣಳೂ ಆದ ನಾನು, ಗಂಡ ನಿಲ್ಲವಲ್ಲಾ ಎಂಬ ದುಃಖದಿಂದ ಬೆಂಕಿಯಲ್ಲಿ ಬಿದ್ದ ತಾವರೆಯಂತೆ ಬೇಯುತ್ತಿ ರುವೆನು.

೫೯. ತಣ್ಣಗಿರುವ ಗಾಳಿಗಳು ಬೀಸಿ ತಾವರೆಗಳು ಅಲ್ಲಾಡಿದಾಗಲೆಲ್ಲಾ ಊದಿ ಬೂದಿಯನ್ನು ಹಾರಿಸಿದ ಕೆಂಡಗಳು ಸುಡುವಂತೆ ಅಂಗದಾಹವನ್ನು ಅನುಭವಿಸು ವೆನು.

೬೦. ಕುಸುಮ ವರ್ಷಣದಿಂದ ಪೂರ್ಣಗಳಾದ ಉದ್ಯಾನ ಭೂಮಿಗಳು ಎಲ್ಲವೂ ನನ್ನ ಪಾಲಿಗೆ ಸುಡುವ ಮರಳಿನಿಂದ ಕೂಡಿರುವ ಶೂನ್ಯವಾದ ಮರು ಭೂಮಿಗಳು.

೬೧. ಜಲಗಳ ಕಲ್ಲೋಲದಿಂದಲೂ ಕೋಮಲವಾದ ಕಹ್ಲಾರ ಕಮಲ

ಅಹಂ ಪುಷ್ಕರಮಂದಾರಕುಮುದೋತ್ಕರಮಾಲಿತಾ ।
ಭೃಶಂ ದಾಹಮವಾಪ್ನೋಮಿ ಕಂಟಕೇಷ್ವಿವ ದೋಲಿತಾ ॥ ೬೨ ॥

ಕುಮುದೋತ್ಪಲಕಹ್ಲಾರಕದಲೀತಲ್ಪಪಾಲಯಃ ।
ಮದಂಗಸಂಗಮಾದ್ಗ್ರೀಷ್ಮಮರ್ಮರಾ ಯಾಂತಿ ಭಸ್ಮತಾಂ ॥ ೬೩ ॥

ಯತ್ಕಾಂತಮುಚಿತಂ ಸ್ವಾದು ವಿಚಿತ್ರಂ ಚಿತ್ತಹಾರಿ ಚ ।
ತದಾಲೋಕ್ಯ ಭವಾಮ್ಯಂತರ್ಬಾಷ್ಪಪೂರ್ಣಾಯತೇಕ್ಷಣಾ ॥ ೬೪ ॥

ವ್ಯಸನಾನಲಸಂತಪ್ತಾಃ ಪತಂತೋ ಬಾಷ್ಪಬಿಂದವಃ ।
ಛಮಚ್ಛಮಿತಿ ಮಜ್ಜಂತೀ ಕಮಲೋತ್ಪಲಪಂಕ್ತಿಷು ॥ ೬೫ ॥

---

ಈ ಹೂಗಳಿಂದಲೂ ಕೂಡಿರುವ ಸರಸಿಗಳು ಸಾರಸಗಳ ಆರಾವದಿಂದ ಸರಸಗಳಾಗಿದ್ದರೂ ನನ್ನ ಪಾಲಿಗೆ ನೀರಸವಾಗಿರುವುವು.

೬೨. ಪುಷ್ಕರ, ಮಂದಾರ, ಕುಮುದ, ಮೊದಲಾದ ಹೂಗಳ ಮಾಲೆಯುನ್ನು ಧರಿಸಿಕೊಂಡರೆ ನನಗೆ, ಮುಳ್ಳುಗಳಲ್ಲಿ ಉಯ್ಯಾಲೆಯಾಡಿದಂತಾಗಿ ತಪ್ಪದೆ ಮೈಯೆಲ್ಲ ಉರಿಯು ಬರುವುದು.

೬೩. ಕುಮುದ, ಉತ್ಪಲ, ಕಹ್ಲಾರ, ಕದಳೀ, ಮೊದಲಾದುವುಗಳಿಂದ ಆದ ಮಂಚಗಳು ನನ್ನ ಅಂಗಸಂಗವಾಗುತ್ತಲೂ ಬೇಸಿಗೆಯಲ್ಲಿ ಒಣಗುವಂತೆ ಒಣಗಿ ಭಸ್ಮವಾಗುವುವು.

೬೪. ಯಾವುದು ಮನೋಹರವೋ, ಯಾವುದು ಯುವತೀ ಜನರಿಗೆ ಉಚಿತವೋ, ಯಾವುದು ಸ್ವಾದವೋ, ಯಾವುದು ವಿಚಿತ್ರವೋ, ಯಾವುದು ಚಿತ್ತಹಾರಿಯೋ ಆದದನ್ನೆಲ್ಲ ನೋಡಿ ಒಳಗೇ ಕಣ್ಣೀರು ಕರೆಯುವವಳಾಗುವೆನು

೬೫ ವ್ಯಸನವೆಂಬ ಬೆಂಕಿಯಿಂದ ಕಾದು ಕಣ್ಣೀರು ಕಮಲ, ಉತ್ಪಲಗಳ ಸಾಲುಗಳಲ್ಲಿ ಛಮ ಛಮ ಎಂದು ಬಿಸಿಬಿಸಿಯಾಗಿ ಸುರಿದು ಅವುಗಳನ್ನು ತೊಳೆಯುವುದು.

ಕದಲೀಕಂದಲೀಸ್ಕಂಧದೋಲಾಸ್ಡೋಲನಲೀಲಯಾ ।
ಲಾಲಿತೋದ್ಯಾನಖಂಡೇಷು ಮುಖಮಾಚ್ಛಾದ್ಯ ರೋದಿಮಿ ॥ ೬೬ ॥

ತುಷಾರನಿಕರಾಕೀರ್ಣಂ ಕದಲೀದಲಮಂಡಪಂ ।
ಪಶ್ಯಾಮ್ಯುಷ್ಣಮುಜ್ಜಂತಂ ಖದಿರಾಂಗಾರಭೀಷಣಂ ॥ ೬೭ ॥

ನಲಿನೀನಾಲದೋಲಾಸು ನಾರಸೀಂ ಸಾರನಾಶ್ರಿತಾಂ ।
ದೀನಾನನಾ ವಿಲೋಕ್ಯಾಂತರ್ನಿಂದಾಮಿ ನಿಜಯೌವನಂ ॥ ೬೮ ॥

ರಮ್ಯೇ ರೋದಿಮಿ ಮಧ್ಯಸ್ಥೇ ಪದಾರ್ಥೇ ಯಾಮಿ ಸೌಮ್ಯತಾಂ ।
ಹೃಷ್ಯಾಮ್ಯಶೋಭನೇ ದೀನಾ ನ ಜಾನೇ ಕಿಮಹಂ ಸ್ಥಿತಾ ॥ ೬೯ ॥

ದೃಷ್ಟಾನಿ ಕುಂದ ಮಂದಾರಕುಮುದಾನಿ ಹಿಮಾನಿ ಚ ।
ಮಯಾ ಕಾಮಾಗ್ನಿದಗ್ಧಾನಾಂ ಭಸ್ಮಾನೀವ ದಿಶಂ ಪ್ರತಿ ॥ ೭೦ ॥

---

೬೬. ಸುಂದರವಾದ ಉದ್ಯಾನ ಭೂಮಿಗಳಲ್ಲಿ ಕದಲೀ, ಕಂದಲೀ, ಮರಗಳನ್ನು ಕಟ್ಟಿದ ಉಯ್ಯಾಲೆಯಲ್ಲಿಟ್ಟು ತೂಗಿದರೆ ಮುಖವನ್ನು ಮುಚ್ಚಿಕೊಂಡು ಅಳುವೆನು.

೬೭. ಸೀತನ ಹನಿಗಳಿಂದ ನೆನೆದಿರುವ ಕದಲೀ ದಲಗಳಿಂದ ಆದ ಮಂಟಪಗಳಲ್ಲಿ ಬಿಸಿಯನ್ನು ಕಾರುವ ಖದಿರಾಂಗಾರಗಳನ್ನು ಕಾಣುವೆನು.

೬೮. ಕಮಲದ ದಂಟುಗಳ ಉಯ್ಯಾಲೆಯಲ್ಲಿ ನಾರಸವು ತನ್ನನ್ನು ಆಶ್ರಯಿಸಿರಲು ಕುಳಿತು ತೂಗಿಕೊಳ್ಳುವ ಸಾರಸಿಯನ್ನು ಕಂಡು, ದೀನಳಾಗಿ ನೋಡುತ್ತ ನಿಜಯೌವನವನ್ನು ಮನಸ್ಸಿನಲ್ಲಿಯೇ ನಿಂದಿಸಿಕೊಳ್ಳುವೆನು.

೬೯. ರಮ್ಯವಾದ ಪದಾರ್ಥವು ಕಾಣಿಸಿದರೆ ಅಳುವೆನು. ಸಾಮಾನ್ಯವಾದ ಪದಾರ್ಥವನ್ನು ಕಂಡರೆ ಸುಮ್ಮನಿರುವೆನು. ಅರಮ್ಯವನ್ನು ಕಂಡರೆ ಹರ್ಷಗೊಳ್ಳುವೆನು. ದೀನಳಾದ ನಾನು ಏನಾಗಿರುವೆನೋ ನಾನೇ ಕಾಣೆನು.

೭೦. ಕುಂದಮಂದಾರ ಕುಮುದಗಳನ್ನೂ ಹಿಮಗಳನ್ನೂ ದಿಕ್ಕುಗಳಲ್ಲಿ ಕಂಡಾಗ, ಕಾಮಾಗ್ನಿದಗ್ಧರಾದವರ ಭಸ್ಮಗಳು ಇವು ಎಂದು ಕೊಳ್ಳುವೆನು.

ಆನೀಲಪಲ್ಲವಮೃಣಾಲಲತೋತ್ಪಲಾನಾಂ ।
ಕಹ್ಲಾರಕುಂದಕದಲೀದಲ ಮಾಲತೀ ನಾಂ ॥
ಶಯ್ಯಾ ಮಮಾಂಗಚಲನೇನ ವಿಶೋಷಯಂತ್ಯಾ ।
ವ್ಯರ್ಥಂ ಗತಾನಿ ನವಯೌವನವಾಸರಾಣಿ ॥ ೨೧ ॥

ಇತ್ಯಾರ್ಷೇ ವಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ವಿದ್ಯಾಧರೀ ವ್ಯಸನ ವರ್ಣನಂ" ನಾಮ
ಚತುಃಷಷ್ಟಿತಮಃ ಸರ್ಗಃ

೨೧. ನೀಲ ಪಲ್ಲವಗಳು, ಮೃಣಾಲಲತೆಗಳೂ, ಉತ್ಪಲ, ಕಹ್ಲಾರ, ಕುಂದ, ಕದಲೀದಲ, ಮಾಲತೀ, ಇವುಗಳಿಂದ ಆದ ಶಯ್ಯೆಗಳೆಲ್ಲವೂ ನನ್ನ ಮೈಯು ಸೋಂಕಿದರೆ ಒಣಗಿ ಹೋಗುವುವು. ಅಯ್ಯೋ, ನನ್ನ ನವ ಯೌವನದ ದಿನಗಳೆಲ್ಲವೂ ವ್ಯರ್ಥವಾಗುತ್ತಿರುವುವು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿದ್ಯಾಧರೀ ವ್ಯಸನ ವರ್ಣನ" ಎಂಬ
ಅರವತ್ತನಾಲ್ಕನೆಯ ಸರ್ಗವು.

## ಪಂಚಷಷ್ಟಿತಮಃ ಸರ್ಗಃ

ವಿದ್ಯಾಧರೀ ಉವಾಚ.—

ಅಥ ಕಾಲೇನ ಮಹತಾ ಸೋಽನುರಾಗೋ ವಿರಾಗತಾಂ ।
ಪ್ರಾಪ್ತೋ ಮಮ ಶರಚ್ಛಾಂತೌ ವಿರಸಃ ಪಲ್ಲವೋ ಯಥಾ ॥ ೧ ॥

ವೃದ್ಧ ಏಕಾಂತರಸಿಕೋ ನೀರಸಃ ಸ್ನೇಹವರ್ಜಿತಃ ।
ಭರ್ತಾಽಜಿಹ್ಮಮತಿರ್ಮೌನೀ ಕಿಂ ಮನ್ಯೇ ಜೀವಿತೇನ ಮೇ ॥ ೨ ॥

ವರಂ ವೈಧವ್ಯಮಾಬಾಲ್ಯಾದ್ವರಂ ಮರಣಮೇವ ಚ ।
ವರಂ ವ್ಯಾಧಿರಥಾಪದ್ವಾ ನಾಹೃದ್ಯಪ್ರಕೃತಿಃ ಪತಿಃ ॥ ೩ ॥

---

## ಅರವತ್ತೈದನೆಯ ಸರ್ಗವು

ವಿದ್ಯಾಧರಿಯು ಹೇಳಿದಳು:—

೧. ಹೀಗೇ ಕಾಲವು ಬೇಕಾದ ಹಾಗೆ ಕಳೆಯಲು ಅನುರಾಗವು ವಿರಾಗ ವಾಯಿತು. ಶರತ್ಕಾಲವು ಕಳೆದು ಹೋಗಲು ಪಲ್ಲವವು ವಿರಸವಾಗುವಂತೆ ನನಗೂ ಆಯಿತು.

೨ ನನ್ನ ಗಂಡನು ಏಕಾಂತವನ್ನು ಬಯಸುವನು. ನೀರಸನು. ಸ್ನೇಹವ ರ್ಜಿತನು: ವೃದ್ಧನು: ಋಜು ಬುದ್ಧಿಯಾದರೂ ಮೌನಿಯು: ಹೀಗಿರಲು ನಾನು ಬದುಕಿ ನನಗೆ ಆಗಬೇಕಾದುದೇನು ?

೩. ಬಾಲ್ಯದಿಂದಲೂ ವಿಧವೆಯಾಗಿರುವುದೂ ಲೇಸು· ಸಾಯುವುದೂ ಲೇಸು. ರೋಗದಲ್ಲಿ ನರಳುವುದೂ ಲೇಸು: ಆಪತ್ತು ಬಂದರೂ ಲೇಸು: ಆದರೆ ಹೃದಯದಲ್ಲಿ ವಿಶ್ವಾಸವಿಲ್ಲದ ಪತಿಯು ಮಾತ್ರ ಬೇಡ.

ಏತಾವಜನ್ಮಸಾಫಲ್ಯಂ ಸೌಭಾಗ್ಯ ಮವಿಖಂಡಿತಂ ।
ರಸಿಕಃ ಪೇಶಲಾಚಾರೋ ಯನ್ನಾರ್ಯಾಸ್ತರುಣಃ ಪತಿಃ ॥ ೪ ॥

ಹತಾ ನೀರಸಾನಾಥಾ ಸ್ತ್ರೀ ಹತಾಽಸಂಸ್ಕಾರಿಣೀ ಚ ಧೀಃ
ಹತಾ ದುರ್ಜನಭುಕ್ತಾ ಶ್ರೀರ್ಹತಾ ವೇಶ್ಯಾಹೃತಾ ಚ ಹ್ರೀಃ ॥ ೫ ॥

ಸಾ ಸ್ತ್ರೀ ಯಾಽನುಗತಾ ಭರ್ತ್ರಾ ಸಾ ಶ್ರೀರ್ಯಾನುಗತಾ ಸತಾ ।
ಸಾ ಧೀರ್ಯಾ ಮಧುರೋದಾರಾ ಸಾಧುತಾ ಸಮದೃಷ್ಟಿತಾ ॥ ೬ ॥

ನಾಧಯೋ ವ್ಯಾಧಯೋ ನೈವ ನಾಪದೋ ನ ದುರೀತಯಃ ।
ಕುರ್ವಂತಿ ಮನಸೋ ಬಾಧಾಂ ದಂಪತ್ಯೋರನುರಕ್ತಯೋಃ ॥ ೭ ॥

೪. ರಸಿಕನೂ ಸಮುಚಿತಾಚಾರನೂ ಆದ ತರುಣ ಪತಿಯು ಯಾವ ಹೆಂಗುಸಿಗೆ ಉಂಟೋ ಅವಳ ಜನ್ಮವು ಸಫಲವು: ಅವಳ ಸೌಭಾಗ್ಯವು ಅಖಂಡಿತವು

೫. ನೀರಸನಾದ ನಾಥನಿರುವ ಸ್ತ್ರೀಯು ಹತಳು. ಸಂಸ್ಕಾರ ರಹಿತವಾದ ಬುದ್ಧಿಯು ಹತವು. ದುರ್ಜನರು ಅನುಭವಿಸುವ ಐಶ್ವರ್ಯವು ಹತವು ವೇಶ್ಯೆಯಿಂದ ಹೃತವಾದ ಹ್ರೀಯು (ಸತ್ಕುಲಾಚಾರಾದ್ಯಾಚಿತಾ ಪುಂಸಾಂ ಲಜ್ಜಾ) ಹತವು.

೬. ಭರ್ತೃವು ಅನುಸರಿಸುವ ಸ್ತ್ರೀಯೇ ಸ್ತ್ರೀಯು. ಸತ್ಪುರುಷರಲ್ಲಿರುವ ಭಾಗ್ಯವೇ ಭಾಗ್ಯವು. ಮಧುರವೂ ಉದಾರವೂ ಆದ ಬುದ್ಧಿಯೇ ಬುದ್ಧಿಯು. ಸಮದೃಷ್ಟಿಯೇ ಸಾಧುತೆಯು.

೭. ಅನುರಕ್ತರಾದ ದಂಪತಿಗಳಿಗೆ, ಆಧಿವ್ಯಾಧಿಗಳೂ ಆಪತ್ತುಗಳು, ದುಷ್ಟವಾದ ಈತಿಬಾಧೆಗಳೂ ಮನಸ್ಸನ್ನು ಕೊರಗಿಸಲಾರವು.

(ಅತಿ ವೃಷ್ಟಿರನಾವೃಷ್ಟಿಃ ಶಲಭಾಮೂಷಿಕಾಃ ಶುಕಾಃ ॥ ಅತ್ಯಾಸನ್ನಾಶ್ಚ ರಾಜಾನಃ ಷಡೇತಾ ಈತಯಃ ಸ್ಮೃತಾಃ ॥—ತಾ. ಪ್ರ.)

ಉತ್ಫುಲ್ಲಾಃ ಕುಸುಮಸ್ಥಲ್ಯೋ ನಂದನೋದ್ಯಾನ ಭೂಮಯಃ ।
ಧನ್ವಾಯಂತೇ ಕುನಾಥಾನಾಂ ವಿನಾಥಾನಾಂ ಚ ಯೋಷಿತಾಂ ॥ ೮ ॥

ಸರ್ವ ಏವ ಜಗದ್ಭಾವಾ ಯಥೇಚ್ಛಂ ಗುಣಲೇಶತಃ ।
ಸಂತ್ಯಜ್ಯಂತೇ ಪ್ರಮಾದಾತ್ತು ವರ್ಜಯಿತ್ವಾ ಪತಿಂ ಸ್ತ್ರಿಯಾ ॥ ೯ ॥

ಸ್ಥಿರಯೌವನಯಾ ದುಃಖಾನ್ಯೇತಾನಿ ಮುನಿನಾಯಕ ।
ಭುಕ್ತಾನಿ ವರ್ಷವೃಂದಾನಿ ಪಶ್ಯ ದೌರ್ಭಾಗ್ಯಜೃಂಭಿತಂ ॥ ೧೦ ॥

ಅಥ ಕ್ರಮೇಣ ತೇನೈವ ಸರಾಗೋ ಮೇ ವಿರಾಗತಾಂ ।
ಆಯಯೌ ಹಿಮದಗ್ಧಾಯಾ ನಲಿನ್ಯಾ ಇವ ನೀರಸಃ ॥ ೧೧ ॥

ವಿರಾಗವಾಸನಾಸ್ತೇನ ಸರ್ವಭಾವಾನುರಂಜನಾ ।
ತವೋಪದೇಶೇನೇಚ್ಛಾಮಿ ಮುನೇ ನಿರ್ವಾಣಮಾತ್ಮನಃ ॥ ೧೨ ॥

---

೮. ಚೆನ್ನಾಗಿ ಅರಳಿರುವ ಕಾಮುದಗಳನ್ನುಳ್ಳ ಸ್ಥಳಿಗಳೂ, ನಂದನೋದ್ಯಾನದಲ್ಲಿರುವ ಭೂಮಿಗಳು ಕೂಡ, ಕುನಾಥರೂ ವಿನಾಥರೂ ಆದ ಹೆಂಗುಸರಿಗೆ ಮರುಭೂಮಿಗಳಾಗುವುವು.

೯. ಹೆಂಗುಸಿಗೆ ಪತಿಯಿಲ್ಲದೆ ಹೋದರೆ ಜಗತ್ತಿನಲ್ಲಿರುವ ಸರ್ವಭಾವಗಳೂ ಯಥೇಚ್ಛವಾಗಿದ್ದರೂ ಹಗುರನಾಗಿ ಬೇಡ ಎನ್ನಿಸುವುವು.

೧೦. ಎಲೈ ಮುನಿನಾಯಕನೆ, ಸ್ಥಿರಯತಾವನೆಯಾದ ನಾನು ಹೀಗೆ ದುಃಖಮಯಗಳಾದ, ವರ್ಷಗಳನ್ನು ಅನೇಕವಾಗಿ ಕಳೆದನು. ನನ್ನ ದೌರ್ಭಾಗ್ಯದ ವಿಜೃಂಭಣವನ್ನಾದರೂ ನೋಡು.

೧೧. ಅನಂತರ, ಏನು ಹೇಳಲಿ, ಹೀಗೆ ದುಃಖವನ್ನು ಅನುಭವಿಸುತ್ತಾ ನನಗಿದ್ದ ಆಶೆಯೆಲ್ಲವೂ ನಿರಾಶೆಯಾಯಿತು. ಹಿಮದಿಂದ ಕಂಗೆಟ್ಟ ತಾವರೆಯಂತೆ ನೀರಸವಾಯಿತು

೧೨. ವೈರಾಗ್ಯವಾಸನೆಯು ಬಲವಾಗಿ, ಅದು ಎಲ್ಲಾ ಭಾವಗಳಲ್ಲೂ ತುಂಬಿದೆಯಾಗಿ, ಮುನೀಂದ್ರನೆ, ನಿನ್ನ ಉಪದೇಶದಿಂದ ನಿರ್ವಾಣವನ್ನು ಪಡೆಯಲು ಇಚ್ಛಿಸುವೆನು.

ಅಪ್ರಾಪ್ತಾಭಿಮತಾರ್ಥಾನಾಮವಿಶ್ರಾಂತಧಿಯಾಂ ಪರೇ ।
ಮರಣೈರುಹ್ಯಮಾನಾನಾಂ ಜೀವಿತಾನ್ಮರಣಂ ವರಂ ॥ ೧೩ ॥

ಸ ಮದ್ಭರ್ತಾದ್ಯ ನಿರ್ವಾಣಮೀಹಮಾನೋ ದಿವಾನಿಶಂ ।
ರಾಜಾ ರಾಜ್ಞೀವ ಮನಸಾ ಮನೋ ಜೇತುಂ ಪ್ರಭುದ್ಯತೇ ॥ ೧೪ ॥

ಬ್ರಹ್ಮಂಸ್ತಸ್ಯ ಚ ಮದ್ಭರ್ತುರ್ಮಮ ಚಾಜ್ಞಾನಶಾಂತಯೇ ।
ನ್ಯಾಯೋಪಪನ್ನಯಾ ವಾಚಾ ಕುರು ಸ್ಮರಣಮಾತ್ಮನಃ ॥ ೧೫ ॥

ಯದಾ ಮಾಮನಪೇಕ್ಷ್ಯೈವ ಸ ಮದ್ಭರ್ತಾತ್ಮನಿ ಸ್ಥಿತಃ ।
ತದಾ ವಿರಾಗೋ ವೈರಸ್ಯಮನಯನ್ಮೇ ಜಗತ್ಸ್ಥಿತಿಂ ॥ ೧೬ ॥

ಸಂಸಾರವಾಸನಾವೇಶವರ್ಜಿತಾಸ್ಮಿ ತತೋಽವಸಂ ।
ನಿಬಧ್ಯಾಭಿಮತಾಂ ತೀವ್ರಾಂ ವ್ಯೋಮಸಂಚಾರಧಾರಣಾಂ ॥ ೧೭ ॥

---

೧೩. ಬೇಕೆಂದುದನ್ನು ಪಡೆಯಲಾರದೆ; ಪರದಲ್ಲಿ ಬುದ್ಧಿಯು ಶಾಂತವಾಗದಿರುವವರಿಗೆ, ಮರಣವು ಬಂದೀತೇ ಎಂದು ಕಾದಿರುವವರಿಗೆ, ಬದುಕಿರುವುದಕ್ಕಿಂತ ಮರಣವೇ ಉತ್ತಮವು.

೧೪. ಆ ನನ್ನ ಗಂಡನು ನಿರ್ವಾಣವನ್ನು ಪಡೆಯಬೇಕೆಂದು ಹಗಲೂ ಇರುಳೂ ರಾಜನಾದ ಮನಸ್ಸಿನಿಂದ ಮನಸ್ಸನ್ನು ಗೆಲ್ಲಬೇಕೆಂದು ರಾಜನಂತೆ ಪ್ರಯತ್ನಿಸುತ್ತಿರುವನು.

೧೫. ಎಲೈ ಬ್ರಹ್ಮನೇ, ಆ ನನ್ನ ಗಂಡನಿಗೂ ನನಗೂ ಅಜ್ಞಾನ ಶಾಂತಿಯಾಗುವ ಹಾಗೆ, ನ್ಯಾಯವು ತುಂಬಿರುವ ವಾಕ್ಕಿನಿಂದ ಆತ್ಮಸ್ಮರಣವನ್ನು ಮಾಡಿಸು.

೧೬. ನನ್ನ ಗಂಡನು ನನ್ನನ್ನು ಬಿಟ್ಟು ತಾನೊಬ್ಬನೇ ಮುಕ್ತನಾದರೆ, ಆಗ ನನಗೆ ವೈರಾಗ್ಯವು ಜಗತ್ಸ್ಥಿತಿಯನ್ನು ವಿರಸವಾಗಿ ಮಾಡುವುದು.

೧೭. ಸಂಸಾರ ವಾಸನೆಯ ಆವೇಶವಿಲ್ಲದವಳು ನಾನು, ವ್ಯೋಮ ಸಂಚಾರಕ್ಕೆ ಬೇಕಾದ ಖೇಚರೀ ಮುದ್ರೆಯನ್ನು ತೀವ್ರನಾಗಿ ಸಂಕಲ್ಪ ಪೂರ್ವವಾಗಿ ಧಾರಣ ಮಾಡಿಕೊಂಡಿರುವೆನು.

ಅರ್ಜಯಿತ್ವಾ ತಯಾ ವ್ಯೋಮ್ನಿ ಗತಿಂ ಧಾರಣಯಾ ಮಯಾ ।
ಅಭ್ಯಸ್ತಾ ಧಾರಣಾ ಭೂಯಃಸಿದ್ಧಸಂಗಫಲಪ್ರದಾ ॥ ೧೮ ॥

ತತಃ ಸ್ವಜಗದಾಧಾರಪೂರ್ವಾಪರನಿರೀಕ್ಷಯಾ ।
ಸ್ಥಿತಾಹಂ ಧಾರಣಾಂ ಬದ್ಧ್ವಾ ನಾಪಿ ಸಿದ್ಧಿಂ ಸಮಾಗತಾ ॥ ೧೯ ॥

ಅಥಸ್ವಜಗತೋ ದೃಷ್ಟ್ವಾ ಹೃದಯಂ ತಸ್ಯ ಬಾಹ್ಯಗಾ ।
ಅಹಂ ದೃಷ್ಟವತೀ ಸ್ಥೂಲಾಂ ಲೋಕಾಲೋಕಗಿರೇಃ ಶಿಲಾಂ ॥ ೨೦ ॥

ಏತಾವತಾಪಿ ಕಾಲೇನ ದಂಪತ್ಯೋರಾವಯೋರ್ಮುನೇ ।
ಪರಂ ದ್ರಷ್ಟುಮಭೂದಿಚ್ಛಾ ನ ಕಾಚನ ಕದಾಚನ ॥ ೨೧ ॥

ಮದ್ಭರ್ತಾ ಕೇವಲಂ ಶುದ್ಧವೇದಾರ್ಥೈಕಾಂತಚಿಂತಯಾ ।
ನಚ ಯಾತಂ ನಚಾಯಾತಂ ವೇತ್ತ್ಯಹೋ ವಿಗತೈಷಣಃ ॥ ೨೨ ॥

---

೧೮. ಆ ಖೇಚರೀ ಮುದ್ರಾಧಾರಣದಿಂದ ವ್ಯೋಮಗತಿಯನ್ನು ಸಾಧಿಸಿದೆನು. ಆ ಖೇಚರೀ ಮುದ್ರೆಯನ್ನು ಸಿದ್ಧ ಸಂಘಗಳ ಅನುಗ್ರಹದಿಂದ ಸಾಧಿಸಿದೆನು.

೧೯. ಅನಂತರ ನನ್ನ ಬ್ರಹ್ಮಾಂಡದ ಭೂತ ಭವಿಷ್ಯಗಳನ್ನು ಗಮನಿಸುವ ಧಾರಣೆಯನ್ನು ಪಡೆದು ಅದನ್ನು ಧರಿಸಿಕೊಂಡು ಇದ್ದು ಅದರಲ್ಲಿಯೂ ಸಿದ್ಧಿಯನ್ನು ಪಡೆದನು.

೨೦ ನನ್ನ ಬ್ರಹ್ಮಾಂಡದ ಹೃದಯವೇನು ಎಂಬುದನ್ನು ಪರೀಕ್ಷಿಸಿ ಅದನ್ನು ಭೇದಿಸಿ ಹೊರಗೆ ಬಂದೆನು. ನಾನು ಲೋಕಾಲೋಕ ಪರ್ವತದ ಶಿಲೆಗಳನ್ನು ನೋಡಿದೆನು.

೨೧ ಇದುವರೆಗೂ ದಂಪತಿಗಳಾದ ನಮಗೆ, ಎಲೈ ಮುನಿಯೆ, ಪರ (ಆತ್ಮ ದರ್ಶನದ ಇಚ್ಛೆಯು ಯಾವುದೂ ಯಾವಾಗಲೂ ಹುಟ್ಟಿರಲಿಲ್ಲ.

೨೨. ನನ್ನ ಗಂಡನು ಕೇವಲ ಶುದ್ಧವೂ ಆದ ವೇದಾರ್ಥವನ್ನು ಮಾತ್ರ ಪರಿ ಭಾವಿಸುತ್ತ ಏಕಾಂತದಲ್ಲಿ ಅದೇ ಚಿಂತೆಯಲ್ಲಿದ್ದುಕೊಂಡು ಬಂದುದನ್ನೂ ಹೋದು ದನ್ನೂ ಕೂಡ ಅರಿಯದೆ ಯಾವ ವಿಚಕ್ಷಣವೂ ಇಲ್ಲದೆ ಇರುವನು.

ತೇನಾಸೌ ಮತ್ಪತಿರ್ವಿದ್ವಾನಪಿ ನ ಪ್ರಾಪ್ತವಾನ್ಪದಂ ।
ಅದ್ಯ ಸೋऽಹಂ ಚ ವಾಂಛಾವಃ ಪ್ರಯತ್ನೇನ ಪರಂ ಪದಂ ॥ ೨೩ ॥

ತದೇತಾಮರ್ಥಿತಾಂ ಬ್ರಹ್ಮನ್ಸಫಲಾಂ ಕರ್ತುಮರ್ಹಸಿ ।
ಮಹತಾಮರ್ಥಿನೋ ವ್ಯರ್ಥಾ ನ ಕದಾಚನ ಕೇಚನ ॥ ೨೪ ॥

ಭ್ರಮಂತೀ ಸಿದ್ಧಸೇನಾಸು ಸದಾ ನಭಸಿ ಮಾನದ ।
ತ್ವದೃತೇ ನೇಹ ಪಶ್ಯಾಮಿ ಘನಾಜ್ಞಾನದವಾನಲಂ ॥ ೨೫ ॥

ಬ್ರಹ್ಮನ್ನಿನ್ನೈವ ಕರುಣಾಕರ ಕಾರಣೇನ ।
ಸಂತೋ ಯಥೋऽರ್ಥಿಜನವಾಂಛಿತಪೂರಣಾನಿ ॥
ಕುರ್ವಂತಿ ತೇನ ಶರಣಾಗತತಾಮುಪೇತಾಂ ।
ಮಾಮರ್ಹಸೀಹ ನ ತಿರಸ್ಕರಣೇನ ಯೋಕ್ತುಂ ॥ ೨೬ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ವಿದ್ಯಾಧರೀ ಜನ್ಮ ವ್ಯವಹಾರ ವರ್ಣನಂ" ನಾಮ ಪಂಚಷಷ್ಟಿತಮಃ ಸರ್ಗಃ**

---

೨೩. ಆದರಿಂದ ಈ ನನ್ನ ಗಂಡನು ವಿದ್ವಾಂಸನಾದರೂ ಪರಮಪದವನ್ನು ಪಡೆದವನಲ್ಲ. ಈಗ ಆತನೂ ನಾನೂ ಇಬ್ಬರೂ ಪರಮಪದವನ್ನು ಪಡೆಯಲೇ ಬೇಕೆಂದು ಇಚ್ಛಿಸುತ್ತಿರುವೆವು.

೨೪. ಆದರಿಂದ, ಎಲೈ ಬ್ರಹ್ಮನೆ, ಈ ಪ್ರಾರ್ಥನೆಯನ್ನು ಸಫಲಮಾಡಿಕೊಡುವುದು ನಿನ್ನ ಕೈಯ್ಯಲ್ಲಿದೆ. ಮಹಾತ್ಮರ ಬಳಿ ಬಂದ ಅರ್ಥಿಗಳು ಯಾವಾಗಲೂ ಯಾರೂ ವಿ-ಅರ್ಥರಾಗಿ ಹಿಂತಿರುಗುವುದಿಲ್ಲವಷ್ಟೆ ?

೨೫. ನಾನು ಸಿದ್ಧ ಸಂಘಗಳಲ್ಲಿ ಆಕಾಶದಲ್ಲಿ ಯಾವಾಗಲೂ ತಿರುಗುತ್ತಿರುವೆನು. ಎಲೈ ಮಾನವಂತನೆ, ನಿನ್ನನ್ನು ಬಿಟ್ಟರೆ, ಘನವಾದ ಅಜ್ಞಾನಕ್ಕೆ ದವಾನಲರಾಗಿರುವವರು ಇನ್ನು ಯಾರನ್ನೂ ಕಾಣೆನು.

೨೬. ಎಲೈ ಬ್ರಹ್ಮನೆ, ಎಲೈ ಕರುಣಾಕರನೆ, ಕಾರಣವೇ ಇಲ್ಲದೆ, ಸಾಧುಗಳಾದವರು ಅರ್ಥಿಜನರ ವಾಂಛೆಯನ್ನು ಪೂರಣಗೊಳಿಸುವರು. ಆದರಿಂದ ನಿನಗೆ ಶರಣಾಗತಳಾಗಿರುವೆನು. ನನ್ನನ್ನು ತಿರಸ್ಕರಿಸದೆ ಕಾಪಾಡು.

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ವಿದ್ಯಾಧರೀ ಜನ್ಮ ವ್ಯವಹಾರ ವರ್ಣನ" ಎಂಬ ಅರವತ್ತೈದನೆಯ ಸರ್ಗವು.**

## ಷಟ್‌ಷಷ್ಟಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಅಥೇತ್ಯುಕ್ತವತೀಪೃಷ್ಟಾ ಸಾ ಮಯಾ ಕಲ್ಪಿತಾಸನಾ ।
ಸಂಕಲ್ಪಿತಾಸನಸ್ಥೇನ ಸ್ಥಿತೇನ ನಭಸಿ ಸ್ಥಿತಾ ॥ ೧ ॥

ಕಥಂ ಶಿಲೋದರೇ ಬಾಲೇ ತ್ವದ್ವಿಧಾನಾಂ ಭವೇತ್ಸ್ಥಿತಿಃ ।
ಕಥಂ ಸಂಚಲನಂ ತತ್ರ ಕಿಮರ್ಥಂ ತತ್ರ ಚಾಸ್ಪದಂ ॥ ೨ ॥

ವಿದ್ಯಾಧರಿ ಉವಾಚ :—

ಮುನೇ ಯಥೇದಂ ಭವತಾಂ ಜಗತ್ಸ್ಫಾರಂ ವಿರಾಜತೇ ।
ತಥಾಸ್ಮಾಕಂ ಜಗತ್ತತ್ರ ಸರ್ಗಸಂಸಾರಯುಕ್ ಸ್ಥಿತಂ ॥ ೩ ॥

---

## ಅರವತ್ತಾರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಹೀಗೆಂದು ಹೇಳಿದ ಅವಳನ್ನು ಒಂದು ಆಸನದಲ್ಲಿ ಕುಳ್ಳಿರಲು ಹೇಳಿದೆನು ಆಕಾಶದಲ್ಲಿಯೇ ಸಂಕಲ್ಪದಿಂದ ಆದ ಆಸನದಲ್ಲಿ ಕುಳಿತಿರುವ ಆಕೆಯನ್ನು ಹೀಗೆ ಕೇಳಿದೆನು;

೨ ಎಲೈ ಹುಡುಗಿಯೆ, ಶಿಲೋದರದಲ್ಲಿ ನಿನ್ನಂಥಹವರು ಇರುವುದೆಂತು ? ಅಲ್ಲಿ ಓಡಾಡುವುದೆಂತು ? ಅಲ್ಲಿ ಇರುವುದರಿಂದ ಆಗುವ ಲಾಭವಾದರೂ ಏನು ?

ವಿದ್ಯಾಧರಿಯು ಹೇಳಿದಳು.—

೩. ಎಲೈ ಮುನೀಂದ್ರನೆ, ಈ ನಿಮ್ಮ ಜಗತ್ತು ಹೇಗೆ ವಿಸ್ತಾರವಾಗಿ ವಿರಾಜಿಸುತ್ತಿರುವುದೋ ಹಾಗೆಯೇ ನಮ್ಮ ಜಗತ್ತೂ ಸೃಷ್ಟಿಯಾಗಿ ಸಂಸಾರಯುತವಾಗಿ (ವಿಸ್ತಾರವಾಗಿ) ಇರುವುದು.

ಸ್ಫುರಂತಿ ನಾಗಾಃ ಪಾತಾಲೇ ತಿಷ್ಠಂತಿ ಭುವಿ ಪರ್ವತಾಃ
ಆಪಸ್ಫಲಭಲಾಯಂತೇ ವಹಂತಿ ವ್ಯೋಮ್ನಿ ವಾಯವಃ	॥ ೪ ॥

ಅರ್ಣವಾ ಅರ್ಣಸಾ ಭಾಂತಿ ಯಾತ್ಯಂತಃ ಶನಕೈಃ ಪ್ರಜಾಃ ।
ಭೂತಾನ್ಯಜಸ್ರಂ ಜಾಯಂತೇ ಮ್ರಿಯಂತೇಽವಿರತಂ ಯಥಾ	॥ ೫ ॥

ವಾಂತಿ ವಾತಾ ವಹಂತ್ಯಾಪೋ ಭಾಂತಿ ಖಾ ಭಾಂತಿ ಖೇ ಸುರಾಃ ।
ತಿಷ್ಠಂತ್ಯಗಾಃ ಸಮುದ್ಯಂತಿ ಗ್ರಹಾ ಯಾಂತಿ ಮಹೀಂ ನೃಪಾಃ	॥ ೬ ॥

ದೇವಾಸುರಮನುಷ್ಯಾಣಾಂ ವ್ಯವಹಾರಪರಂಪರಾಃ ।
ಲೋಲಾಃ ಪ್ರವೃತ್ತಾ ಆಕಲ್ಪಮಾಸಮುದ್ರಮಿವಾಪಗಾಃ	॥ ೭ ॥

ದಿನಪದ್ಮಾನಿ ಭೂಲೋಕಸರಸ್ಯಾಕಲ್ಪಮಾನಭಃ ।
ಲೋಲಾಭ್ರಾಲೀನಿ ಫುಲ್ಲಾನಿ ಮೀಲಿತೋನ್ಮಿಲಿತಾನ್ಯಲಂ	॥ ೮ ॥

---

೪. ಅಲ್ಲಿರುವ ಪಾತಾಳದಲ್ಲಿ ನಾಗಗಳು ಆಡುವುವು. ಅಲ್ಲಿರುವ ಭೂಮಿಯಲ್ಲಿ ಪರ್ವತಗಳು ಇರುವುವು ಜಲಗಳು ಛಲಛಲ ಎಂದು ಹರಿಯುವುವು: ಆಕಾಶದಲ್ಲಿ ವಾಯುಗಳು ಬೀಸುವುವು

೫. ಸಮುದ್ರಗಳು ನೀರಿನಿಂದ ಕೂಡಿರುವುವು. ಅದರೊಳಕ್ಕೆ ಜನರು ಇಳಿಯುವರು. ಅಲ್ಲಿಯೂ ಜಂತುಗಳು ಒಂದೇ ಸಮನಾಗಿ ಹುಟ್ಟುತ್ತಾ ಸಾಯುತ್ತಾ ಇರುವುವು.

೬. ಗಾಳಿಗಳು ಬೀಸುವುವು: ನೀರುಗಳು ಹರಿಯುವುವು: ಆಕಾಶದಲ್ಲಿ ದೇವತೆಗಳು ಪ್ರಕಾಶಿಸುವರು: ಪ್ರಕಟವಾಗಿ ತೋರುವರು. ಪರ್ವತಗಳು ಇರುವುವು: ಗ್ರಹಮಂಡಲವು ವಿರಾಜಿಸುತ್ತಿರುವುದು. ಅರಸರು ರಾಜ್ಯವಾಳುವರು.

೭. ದೇವಾಸುರ ಮನುಷ್ಯರ ವ್ಯವಹಾರ ಪರಂಪರೆಗಳು, ಸಮುದ್ರದವರೆಗೂ ಹೋಗುವ ಮಹಾನದಿಗಳಂತೆ ಲೋಲನಾಗಿ ಪ್ರವರ್ತಿಸುತ್ತಿರುವುವು.

೮. ಹಗಲಿನಲ್ಲಿ ಅರಳುವ ತಾವರೆಗಳು ಭೂಲೋಕದ ಸರಸ್ಸುಗಳಲ್ಲಿ(ಹೇಗೋ ಹಾಗೆ) ಕಲ್ಪಾಂತದವರೆಗೂ, ಆಕಾಶದವರೆಗೂ, ಅರಳಿ ಲೋಲವಾದ ಭ್ರಮರ

ಚಂದ್ರಶ್ಚರ್ಚಾಶ್ಚತುರ್ದಿಕ್ಕಂ ಚಂದನೇನಾತ್ಮತೇಜಸಾ ।
ರಚಯಂತ್ರಾತ್ರಿರೋಹಿಣ್ಯೋಸ್ತಮೋ ಹಂತ್ಯಪಿ ಹೃದ್ಗತಂ ॥ ೯ ॥

ಸ್ವದಶಾಸ್ವಾದನರತಾ ವಾತಯಂತ್ರಸುಚಾರಿತಾ ।
ರೋದಃ ಸದ್ಮನಿ ಸೂರ್ಯಾಖ್ಯಾ ದೀಪ್ಯತೇ ದಿವಿ ದೀಪಿಕಾ ॥ ೧೦ ॥

ಬ್ರಹ್ಮಸಂಕಲ್ಪಿತೋ ರುದ್ಧೋ ವಾತಸಂಚಾರಚಾರಿಭಿಃ ।
ಖೇಽನಿಶಂ ಚಕ್ರಮೃಕ್ಷಾಣಾ ಗುಣಾವತೋರ್ವಿವರ್ತತೇ ॥ ೧೧ ॥

ಭೂತತಂಡೂಲಮಾಸೃಷ್ಟೇಃ ಪಿನಷ್ಟಿ ಧ್ರುವಕೀಲಕಃ ।
ನಿಯತ್ಯಾ ಚಲಿತೋ ರೋಧಃ ಕಪಾಟಾಂಭೋದಘರ್ಘರಃ ॥ ೧೨ ॥

---

ಪಂಕ್ತಿಗಳಿಂದ ಸೇವಿತವಾಗಿ, ಒಂದರೊಳಗೊಂದು ಸೇರಿಕೊಂಡು ಕಲಿಯುತ್ತಿರುವುವು.

೯. ಚಂದ್ರನು ಚತುರ್ದಿಕ್ಕುಗಳಲ್ಲಿಯೂ ಆತ್ಮತೇಜಸ್ಸೆಂಬ ಚಂದನವನ್ನು ಹಚ್ಚಿ ರಾತ್ರಿಯಲ್ಲಿ ಹರಡಿರುವ (ಹೊರಗಿನ) ತಮಸ್ಸನ್ನು ರೋಹಿಣೀ ದೇವಿಯ ಹೃದಯದಲ್ಲಿರುವ (ಅಂತಃ) ತಮಸ್ಸನ್ನೂ ಕಳೆಯುವನು.

೧೦. ತನ್ನನ್ನೇ ಬತ್ತಿಯನ್ನಾಗಿ ಮಾಡಿಕೊಂಡು ಜಗತ್ತನ್ನೆಲ್ಲಾ ಚಲಿಸುವ ವಾತಯಂತ್ರಕ್ಕೆ ಸಿಕ್ಕಿ ಸುತ್ತುತ್ತಾ ಇರುವ ಸೂರ್ಯನೆಂಬ ದೀವಿಗೆಯು ದ್ಯಾವಾಭೂಮಿಗಳೆಂಬ ಗೃಹದಲ್ಲಿ ಆಕಾಶದಲ್ಲಿ ಬೆಳಗುತ್ತಾ ಇರುವುದು.

೧೧. ಅಲ್ಲಿಯೂ ಸೃಷ್ಟಿಕರ್ತನ ಸಂಕಲ್ಪಾನುಸಾರವಾಗಿ ಗಂಟು ಬಿದ್ದಿರುವ ಜ್ಯೋತಿಶ್ಚಕ್ರವು ಹಗ್ಗಗಳಿಂದ ಕಟ್ಟಿರುವಂತೆ ವಾತಸಂಚಾರಕ್ಕೆ ಅನುಗುಣವಾಗಿ ಆಕಾಶದಲ್ಲಿ ದಿನವೂ ತಿರುಗುತ್ತಿರುವುದು.

೧೨. ಭೂತಸಂಘಾತಗಳೆಂಬ ಅಕ್ಕಿಯನ್ನು, ಸೃಷ್ಟಿಯು ಆದಂದಿನಿಂದ ಧ್ರುವಕೀಲಕವೆಂಬ ಬೀಸುವ ಕಲ್ಲು ಬೀಸುತ್ತಿರುವುದು. ನಿಯತಿಯು ಬೀಸುತ್ತಿರುವಳು ಅಂತರಿಕ್ಷಭೂಮಿಗಳೆಂಬ ಬಾಗಿಲನ್ನುಳ್ಳ ಮನೆಯಲ್ಲಿ ಬೀಸುತ್ತಿರುವ ಶಬ್ದವು ಮೇಘಗರ್ಜನವಾಗಿ ಕೇಳಿಸುತ್ತಿರುವುದು.

ದ್ವೀಪಾಬ್ಧಿ ಶೈಲೈರ್ಭೂಪೀಠಂ ವಿಮಾನನಗರೈರ್ನಭಃ ।
ದೈತ್ಯದಾನವನಾಗೌಘೈಃ ಪೂರ್ಣಂ ಪಾತಾಲ ಮಂಡಲಂ ॥ ೧೩ ॥

ಕುಂಡಲಂ ತ್ರಿಜಗಲ್ಲಕ್ಷ್ಮ್ಯಾ ನೀಲಂ ಭೂತಲಮಂಡಲಂ ।
ಸ್ಥಿತಂ ಚಂಚಲವಾಚಾರಚಂಚಲಾಯಾಃ ಸ್ಫುರನ್ಮಣಿ ॥ ೧೪ ॥

ಬುದ್ಧ್ಯಾದಿರಹಿತಾಂ ಸ್ಪಂದಸಂವಿದಂ ವಾಯುವೀಮಿವ ।
ಸ್ಥಾವರಂ ಜಂಗಮಂ ಚೈವ ಸೂಕ್ಷ್ಮಮಾದಾಯ ಜಾಯತೇ ॥ ೧೫ ॥

ಮುನಿಮೌನಸ್ಥೈರ್ಧರಾ ವಾರ್ಧಿರ್ಮಾರುತೈಃ ಕಪಿಚಾಪಲಂ ।
ಆಕಾಶೈರವಕಾಶಿತ್ವಂ ತೇಜೋಭಿರ್ಭಾಸನಂ ಶ್ರಿತಂ ॥ ೧೬ ॥

ವೃಕ್ಷೋರ್ವ್ಯಬ್ಧ್ಯದ್ರಿಖಚರಾಃ ಪ್ರಾಣಿನೋಂತಃಸ್ಫುರಂತ್ಯಲಂ ।
ಮೃತಿಜನ್ಮೋನ್ಮುಖಾಃ ಕೀಟಸಂಘಾಸ್ಸುರಜಲೌಕಸಃ ॥ ೧೭ ॥

---

೧೩. ಅಲ್ಲಿ ಭೂಮಂಡಲವು ದ್ವೀಪ, ಅಬ್ಧಿ, ಶೈಲಗಳಿಂದಲೂ, ಆಕಾಶವು ವಿಮಾನಗಳಿಂದಲೂ ದೇವನಗರಗಳಿಂದಲೂ, ಪಾತಲ ಮಂಡಲವು ದೈತ್ಯ ದಾನವ ನಾಗಸಂಘಗಳಿಂದಲೂ, ತುಂಬಿರುವುದು.

೧೪. ಆಚಾರ ಚಂಚಲೆಗಳಾದ ತ್ರಿಜಗಲ್ಲಕ್ಷ್ಮಿಯ ನೀಲಕುಂಡಲವೆಂಬಂತೆ ಭೂಮಂಡಲವು ಚಂಚಲವಾಗಿ ರತ್ನ ಖಂಡಿತವಾಗಿ ಇರುವುದು

೧೫. ಅಲ್ಲಿರುವ ಸ್ಥಾವರ ಜಂಗಮಗಳು, ಬೀಸುವ ಗಾಳಿಯು ವ್ಯಾಪಾರ ದಂತೆ ಬುದ್ಧಿರಹಿತವಾದ ಸ್ಪಂದಸಂಪತ್ತನ್ನೂ ಸೂಕ್ಷ್ಮವಾದ ಪ್ರಾಣವನ್ನು ಪಡೆದು ಹುಟ್ಟುವುವು (ಬೆಳೆಯುವುವು . ಸಾಯುವುವು.)

೧೬. ಅಲ್ಲಿಯೂ ಮುನಿಗಳು ಮೌನವನ್ನು ಆಶ್ರಯಿಸುವರು : ಭೂಮಿಯು ಸಮುದ್ರದಿಂದ ಸುತ್ತಲ್ಪಟ್ಟಿರುವುದು. ಮಾರುತಗಳು ಕಪಿಗಳಂತೆ ಚಪಲಗಳಾಗಿ ರುವುವು. ಆಕಾಶವು ಎಲ್ಲದಕ್ಕೂ ಅವಕಾಶವನ್ನು ಕೊಡುವುದು. ತೇಜಸ್ಸುಗಳು ಪ್ರಕಾಶಿಸುವುವು

೧೭. ವೃಕ್ಷ, ಭೂಮಿ ಅಬ್ಧಿ, ಅದ್ರಿ, ಆಕಾಶಚರಗಳಾದ ಪ್ರಾಣಿಗಳು ಅ

ಸಸುರಾಸುರಗಂಧರ್ವಾಃ ಕಾಲಃ ಕಲಯತಿ ಪ್ರಜಾಃ ।
ದೋರ್ಭಿಃ ಕಲ್ಪಯುಗಾಬ್ದೈಶ್ಚ ಸ್ವಪಶೂನಿವ ಪಾಲಕಃ ॥ ೧೮ ॥

ಅನಂತವಿಪುಲಾಗಾಧಗಂಭೀರೇ ಕಾಲಸಾಗರೇ ।
ಉತ್ಪತ್ಯೋತ್ಪತ್ಯ ಲೀಯಂತೇ ತೇ ತ್ವಾವರ್ತವಿವರ್ತಯಾ ॥ ೧೯ ॥

ಚತುರ್ದಶವಿಧಾ ವಾತ್ಯವೇಲ್ಲಿತಾ ಭೂತಪಾಂಸವಃ ।
ನಾಶಾಕಾಶೇ ವಿಲೀಯಂತೇ ಶರದಂಭೋದಲೀಲಯಾ ॥ ೨೦ ॥

ಭುವನಂ ಬೋಧಯಂತೀ ದ್ಯೌಶ್ಚಂದ್ರಾರ್ಕಕರಚಾಮರೈಃ ।
ಸ್ಥಿತಾಕಾಶಾಂಶುಕಾಕಲ್ಪತಾರಕೋತ್ಕರಶೇಖರಾ ॥ ೨೧ ॥

---

ನಮ್ಮ ಮಂಡಲದಲ್ಲಿ ಬೇಕಾದ ಹಾಗೆ ಇರುವುವು ಮೃತಿ, ಜನ್ಮಗಳನ್ನು ಪಡೆಯುತ್ತಿರುವುವು ಅವುಗಳಲ್ಲಿ ಕೀಟ, ಸುರ, ಅಸುರ ಜಲಚರಗಳೆಂಬ ಭೇದಗಳಿರುವುವು

೧೮. ಕಾಲನು ಸುರಾಸುರ ಗಂಧರ್ವರೆಂಬ ಪ್ರಜೆಗಳನ್ನು ಗೋಪಾಲನು ತನಗೆ ಬೇಕಾದ ಪಶುಗಳನ್ನು ಹೇಗೋ ಹಾಗೆ ಕಲ್ಪ, ಯುಗ, ಅಬ್ದಗಳೆಂಬ ತೋಳುಗಳಿಂದ ಹಿಡಿದು ಹಿಡಿದು ಉಪಭೋಗಿಸುತ್ತಿರುವನು.

೧೯. ಅನಂತವೂ ವಿಪುಲವೂ ಅಗಾಧವೂ ಗಂಭೀರವೂ ಆದ ಕಲಾ ಸಾಗರದಲ್ಲಿ ಈ ಪ್ರಾಣಿವರ್ಗಗಳೆಲ್ಲವೂ ಆವರ್ತ ವಿವರ್ತರೂಪವಾಗಿ, ಹುಟ್ಟಿ ಹುಟ್ಟಿ ಸಾಯುತ್ತಿರುವುವು.

೨೦. ಚತುರ್ದಶ ವಿಧವಾದ ಭೂತಗಳೆಂಬ ಧೂಳುಗಳು ವಾತಪ್ರೇರಿತಗಳಾಗಿ, ನಾಶಾಕಾಶದಲ್ಲಿ, ಶರದೃತುವಿನ ಮೇಘಗಳಂತೆ ವಿಲೀನವಾಗುವುವು.

೨೧. ಆಕಾಶವೆಂಬ ನೀಲಿಯುಡೆಯುಟ್ಟು ತಾರಕೆಗಳೆಂಬ ಮೊಗ್ಗುಗಳನ್ನು ಮುಡಿದಿರುವ ಅಂತರಿಕ್ಷ ಸುಂದರಿಯು ಚಂದ್ರ ಸೂರ್ಯರೆಂಬ ಚಾಮರಗಳನ್ನು ಹಿಡಿದು ಲೋಕದಲ್ಲಿರುವ ಅಜ್ಞಾನ ಸುಪ್ತರನ್ನು ಎಚ್ಚರಗೊಳಿಸುವಂತಿರುವಳು.

ಸ್ಥಿತಾಃ ಪವನಭೂಕಂಪಮೇಘತಾಪಸಹಿಷ್ಣವಃ ।
ಸ್ವಂ ಪ್ರದೇಶಮನುಜ್ಝಂತ್ಯಃ ಕಕುಭಃ ಸ್ತಂಭಿತಾ ಇವ ॥ ೬೨ ॥

ಉತ್ಪಾತಮೇಘನಿರ್ಹ್ರಾದಭೂಮಿಕಂಪಗ್ರಹಗ್ರಹೈಃ।
ಅಜ್ಞಾತೈರಪಿ ವಿಜ್ಞಾತೈರ್ಭೂತಾನಾಂ ಜಾಯತೇ ಗತಿಃ ॥ ೬೩ ॥

ಸಪ್ತಾನಾಂ ಜಲಮಬ್ಧೀನಾಮೌರ್ವಾಗ್ನಿಃ ಪಿಬತಿ ಜ್ವಲನ್ ।
ಲೋಕಾಂತರಾಣಾಮಾಕಲ್ಪಂ ಕಾಲೋ ಭೂತಗಣಂ ಯಥಾ ॥ ೬೪ ॥

೬೨. ಬಿರುಗಾಳಿಗಳು, ಭೂಕಂಪಗಳು, ಮೇಘಗಳ ಆರ್ಭಟಗಳು, (ಸೂರ್ಯ) ತಾಪಗಳು, ಇವೆಲ್ಲವನ್ನೂ ಸಹಿಸಿಕೊಂಡು ಆಕಾಶದಲ್ಲಿರುವ ದಿಗ್ದೇವಿಯರು, ಯಾರೋ ಅವರನ್ನು ಅಲ್ಲಿ ಸ್ತಂಭಿಸಿರುವಂತೆ, ಭದ್ರವಾಗಿರುವರು.

೬೩. ಅಜ್ಞಾತಗಳೂ ವಿಜ್ಞಾತಗಳೂ ಆದ ಉತ್ಪಾದಗಳು, ಮೇಘಗಳು, ಶಬ್ದಗಳು, ಭೂಕಂಪಗಳು, ಗ್ರಹಗಳು, ಗ್ರಹಣಗಳು, ಇವುಗಳಿಂದ ಪ್ರಾಣಿಗಳ ಗತಿಯು (ಹೆಚ್ಚು ಕಡಿಮೆ) ಯಾಗುವುದು.

(ಜ್ಯೋತಿಃಶಾಸ್ತ್ರ ಕುಶಲೈರ್ವಿಜ್ಞಾತೈಃ, ಅನ್ಯೈರಜ್ಞಾತೈರಪಿ ಉತ್ಪಾತಾದಿ ನಿಮಿತ್ತೈಃ ಭೂತಾನಾಮಿಷ್ಟಾನಿಷ್ಟ ಲಕ್ಷಣಾ ಗತಿಸ್ತತ್ರಾಪಿ ಜಾಯತೇ ॥–ತಾ.ಪ್ರ.)

೬೪. ಕಲ್ಪಾಂತದವರೆಗೂ ಕಾಲನು ಲೋಕಲೋಕಾಂತರಗಳಲ್ಲಿರುವ ಪ್ರಾಣಿಗಳನ್ನು ಭಕ್ಷಿಸುವಂತೆ, ಬಾಡಬನೂ ಉರಿಯುತ್ತ ಏಳು ಸಮುದ್ರಗಳಲ್ಲಿರುವ ನೀರುಗಳನ್ನು ಕುಡಿಯುತ್ತಿರುವನು.

ಪಾತಾಲಮಾವಿಶತಿ ಯಾತಿ ನಭೋಬಿಲಂ ಚ
ದಿಗ್ಮಂಡಲಂ ಭ್ರಮತಿ ಭೂತಗಣಃ ಸಮಂತಾತ್ ।
ಪರ್ಯೇತಿ ಪರ್ವತಮಹಾರ್ಣವಮಂಡಲಾನಿ
ದ್ವೀಪಾಂತರಾಣಿ ಚ ಮರುತ್ಸರಣಕ್ರಮೇಣ ॥ ೨೫ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಶಿಲಾಂತರ ವರ್ಣನಂ" ನಾಮ
ಷಟ್ಷಷ್ಟಿತಮಃ ಸರ್ಗಃ

---

೨೫. (ಅಲ್ಲಿಯೂ)ಎಲ್ಲೆಲ್ಲಿಂದಲೂ ಭೂತಗಣವು ಪಾತಾಲವನ್ನು ಪ್ರವೇಶಿಸುವುದು. ನಭೋಬಿಲವನ್ನು ಸೇರವುದು ದಿಗ್ಮಂಡಲದಲ್ಲಿ ಸುತ್ತುವುದು ಪರ್ವತ, ಮಹಾ ಸಮುದ್ರ, ಮಂಡಲಗಳನ್ನೂ ದ್ವೀಪಾಂತರಗಳನ್ನೂ ಮರುತನು ತಿರುಗಿದ ಹಾಗೆಲ್ಲಾ ಅಲೆಯುವುದು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಶಿಲಾಂತರ ವರ್ಣನ" ಎಂಬ
ಅರವತ್ತಾರನೆಯ ಸರ್ಗವು.

## ಸಪ್ತಷಷ್ಟಿತಮಃ ಸರ್ಗಃ

ವಿದ್ಯಾಧರೀ ಉವಾಚ :—

ಯಾವತ್ತ್ವಂ ಸರ್ಗಮಾಗಚ್ಛ ಪ್ರಸಾದಃ ಕ್ರಿಯತಾಂ ಮುನೇ ।
ಆಶ್ಚರ್ಯೋಪಸಪನ್ನೇಷು ಮಹಾಂತೋ ಹ್ಯತಿಕೌತುಕಾಃ ॥ ೧ ॥

ತಥೇತ್ಯುಕ್ತೇ ಮಯಾ ಸಾರ್ಧಂ ಗಂತುಮಾರಬ್ಧ ಮಂಬರೇ ।
ವಾತ್ಯಯಾ ಸೌರಭೇಣೇವ ಶೂನ್ಯೇ ಶೂನ್ಯೇನ ಶೂನ್ಯಯಾ ॥ ೨ ॥

ಅಥಾಹಂ ದೂರಮುದ್ವಾಸಂ ಶೂನ್ಯಮುಲ್ಲಂಘ್ಯ ನಾಭಸಂ ।
ನಭಃಸ್ಥಂ ಭೂತಸಂಘಾತಂ ತಯಾ ಸಾರ್ಧಮವಾಪ್ತವಾನ್ ॥ ೩ ॥

## ಅರವತ್ತೇಳನೆಯ ಸರ್ಗವು

ವಿದ್ಯಾಧರಿಯು ಹೇಳಿದಳು.—

೧ ಎಲೈ ಮುನೀಂದ್ರನೆ, ಆ ಸರ್ಗಕ್ಕೆ ದಯಮಾಡಿಸು ನಮ್ಮಲ್ಲಿ ಪ್ರಸಾದ ಮಾಡು ಆಶ್ಚರ್ಯಗಳು ಉಂಟು ಎಂದ ಮೇಲೆ ಮಹಾತ್ಮರಿಗೆ ಅವುಗಳಲ್ಲಿ ಬಹಳ ಕುತೂಹಲವಲ್ಲವೇ ?

೨. ನಾನೂ ಆಗಲಿ ಎಂದೆನು. ಅವಳೂ ನನ್ನನ್ನು ಕರೆದುಕೊಂಡು ಹೊರಟಳು ಗಾಳಿಯು ಸೌರಭವನ್ನು ತೆಗೆದುಕೊಂಡು ಹೋಗುವಂತೆ, ಶೂನ್ಯವಾದ ಅಂಬರದಲ್ಲಿ ದೇಹ ಶೂನ್ಯನಾದ ನನ್ನನ್ನು ದೇಹಾಶೂನ್ಯಳಾದ ಅವಳು ಕರೆದೊಯ್ದಳು

೩. ನಾನೂ ಶೂನ್ಯವಾದ ಆಕಾಶದಲ್ಲಿ ಆ ದೂರದ ಹಾದಿಯನ್ನು, ಆಕಾಶದಲ್ಲಿ ಭೂತ ಸಂಘಗಳನ್ನೂ ದಾಟಿ ಅವಳೊಡನೆ ಹೋದೆನು.

ತವಮುಲ್ಲಂಘ್ಯ ಚಿರೇಣಾತ್ರ ಭೂತಸಂಚಾರಮಂಬರೇ ।
ಲೋಕಾಲೋಕಶಿರೋವ್ಯೋಮ ಪ್ರಾಪ್ತೋಽಸ್ಮಿ ಧವಲಾಂಬುದಂ ।೪॥

ಉತ್ತರಾಂಶೇಂದುಶುಭ್ರಾಭ್ರಪೀಠಾನ್ನಿರ್ಗತ್ಯ ತಾಂ ಶಿಲಾಂ ।
ಆನೀತೋಽಸ್ಮಿ ತಯೋತ್ತುಂಗಾಂ ತಪ್ತಕಾಂಚನಕಲ್ಪಿತಾಂ ॥೫॥

ಯಾವತ್ಪಶ್ಯಾಮ್ಯಹಂ ಶುಭ್ರಾಂ ಶಿಲಾಂ ತಾಂ ನಚ ತಜ್ಜಗತ್ ।
ಕಲಧೌತಮಯೀಮುಚ್ಚೈರಗ್ನಿಲೋಕತಟೀಮಿವ ॥೬॥

ತದಾ ಮಯೋಕ್ತಾ ಸಾ ಕಾಂತಾ ಕ್ವ ಭವತ್ಸರ್ಗಭೂರಿತಿ ।
ಕ್ವ ರುದ್ರಾರ್ಕಾಗ್ನಿತಾರಾದಿ ಕ್ವ ಲೋಕಾಂತರಸಪ್ತಕಂ ॥೭॥

---

೪. ಅದನ್ನು ದಾಟಲು ಬಹಳ ಕಾಲ ಬೇಕಾಯಿತು. ಭೂತ ಸಂಚಾರ ವಿರುವ ಪ್ರದೇಶವನ್ನೆಲ್ಲಾ ದಾಟಿ ಲೋಕಾಲೋಕಪರ್ವತದಲ್ಲಿರುವ ಆಕಾಶವನ್ನು ಸೇರಿದೆವು. ಅದು ಮೋಡದಂತೆ ಬೆಳ್ಳಗಿತ್ತು

೫ ಉತ್ತರದ ದಿಕ್ಕಿನಲ್ಲಿ ಚಂದ್ರನಂತೆ ಶುಭ್ರವಾಗಿರುವ ಆಕಾಶ ಪೀಠದಿಂದ ಹೊರಟು ಆ ಶಿಲೆಯನ್ನು ದಾಟಿದೆವು. ಆ ಶಿಲೆಯು ಕಾಯ್ದ ಚಿನ್ನದಿಂದ ಮಾಡಿ ದಂತಿದ್ದು ಬಹಳ ಎತ್ತರವಾಗಿತ್ತು.

೬. ಆಶುಭ್ರವಾದ ಶಿಲೆಯು ನನಗೆ ಕಾಣಿಸುತ್ತಿತ್ತು. ಚೆನ್ನಾಗಿ ಒಗೆದ ಬಟ್ಟೆಯಂತೆ, ಅಗ್ನಿಲೋಕದ ಅಂಚಿನಂತೆ ಕಾಣುತ್ತಿದ್ದ ಆ ಶಿಲೆಯನ್ನು ನೋಡು ತ್ತಿದ್ದರೂ ಆ ವಿದ್ಯಾಧರಿಯು ಹೇಳಿದ ಪ್ರಪಂಚವು ನನಗೆ ಕಾಣಿಸಲಿಲ್ಲ.

(ಅಗ್ನಿನಾ ಅವಲೋಕ್ಯತೇ ಇತ್ಯಗ್ನಿಲೋಕಾಂ ಮೇರು ತಟೀಮಿವಸ್ಥಿತಾಂ ಶಿಲಾಂ—ತಾ ಪ್ರ.)

೭. ಆಗ ಆ ಸ್ತ್ರೀಯನ್ನು ಕುರಿತು "ನಿಮ್ಮ ಲೋಕವೆಲ್ಲಿದೆ ?" ಎಂದು ಕೇಳಿದೆನು. "ರುದ್ರ, ಅರ್ಕ, ಅಗ್ನಿತಾರಾದಿಗಳೆಲ್ಲ ಎಲ್ಲಿ? ಸಪ್ತಲೋಕಾಂತರಗಳೆಲ್ಲಿ?"

ಕ್ವಾರ್ಣವಾಕಾಶಕಕುಭಃ ಕ್ವೋನ್ಮಜ್ಜನನಿಮಜ್ಜನೇ ।
ಕ್ವ ಮಹಾಂಭೋದಸಂಭಾರಃ ಕ್ವ ತಾರಾಂಬರಡಂಬರಂ ॥ ೮ ॥

ಕ್ವ ಶೈಲಶಿಖರಶ್ರೇಣ್ಯಃ ಕ್ವ ಮಹಾರ್ಣವಲೇಖಿಕಾಃ ।
ಕ್ವ ದ್ವೀಪವಲಯಾಃ ಸಪ್ತ ಕ್ವ ತಪ್ತಕನಕಾವನಿಃ ॥ ೯ ॥

ಕ್ವ ಕಾರ್ಯಕಾಲಕಲನಾಃ ಕ್ವ ಭೂತಭುವನಭ್ರಮಃ ।
ಕ್ವ ವಿದ್ಯಾಧರಗಂಧರ್ವಾಃ ಕ್ವ ನರಾಮರದಾನವಾಃ ॥ ೧೦ ॥

ಕ್ವರ್ಷಿಭೂಪಾಲಮುನಯಃ ಕ್ವ ನಯಾಪನಯಕ್ರಮಃ ।
ಕ್ವ ಪಂಚಯಾಮರಜನ್ಯಃ ಕ್ವ ಸ್ವರ್ಗನರಕಭ್ರಮಃ ॥ ೧೧ ॥

ಕ್ವ ಪುಣ್ಯಪಾಪಕಲನಾ ಕ್ವ ಕಲಾಕಾಲಕೇಲಯಃ ।
ಕ್ವ ಸುರಾಸುರವೈರಾಣಿ ಕ್ವ ದ್ವೇಷಸ್ನೇಹರೀತಯಃ ॥ ೧೨ ॥

---

೮. "ಅರ್ಣವ, ಆಕಾಶ, ಕಂಭಗಳು ಎಲ್ಲಿ ? ಏಳುವುದೂ ಮುಳುಗುವುದೂ ಎಲ್ಲಿ? ಮಹಾಮೇಘಗಳ ಆರ್ಭಟವೆಲ್ಲಿ ? ತಾರೆಗಳಿಂದ ತುಂಬಿದ ಅಂಬರದ ಡಂಬರವೆಲ್ಲಿ ?

೯. ಶೈಲ ಶಿಖರಗಳ ಶ್ರೇಣಿಗಳೆಲ್ಲಿ ? ಮಹಾರ್ಣವಗಳ ಸಾಲುಗಳೆಲ್ಲಿ ? ಸಪ್ತ ದ್ವೀಪವಲಯಗಳೆಲ್ಲಿ ? ತಪ್ತ ಕಾಂಚನ ಭೂಮಿಯೆಲ್ಲಿ ?

೧೦. ಕಾರ್ಯಗಳೂ ಕಾಲ ಸಂಕಲ್ಪಗಳೂ ಎಲ್ಲಿ? ಭೂತಗಳು ಭುವನಗಳನ್ನು ಅಲೆಯುವುದೆಲ್ಲಿ ? ವಿದ್ಯಾಧರ ಗಂಧರ್ವರೆಲ್ಲಿ ? ನರ, ಅಮರ, ದಾನವರೆಲ್ಲಿ ?

೧೧. ಋಷಿಗಳು, ರಾಜರು, ಮುನಿಗಳು ಎಲ್ಲಿ? ನಯ, ಅಪನಯ ಕ್ರಮವೆಲ್ಲಿ ? ಐದು ಯಾಮಗಳ ರಾತ್ರಿಗಳೆಲ್ಲಿ ? ಸ್ವರ್ಗ ನರಕಗಳೆಲ್ಲಿ ?

೧೨. ಪುಣ್ಯಪಾಪ ಕಲ್ಪನೆಗಳೆಲ್ಲಿ ? ಕಲಾ, ಕಾಲ, ಕೇಳಿಗಳೆಲ್ಲಿ ? ಸುರ–ಅಸುರರ ವೈರಗಳೆಲ್ಲಿ ? ದ್ವೇಷ ಸ್ನೇಹರೀತಿಗಳೆಲ್ಲಿ ?

ವದತ್ಯೇವಂ ಮಯಿ ವಚಃ ಸೋವಾಚ ವರವರ್ಣಿನೀ ।
ವಿಸ್ಮಯಾಕುಲಮಾಲೋಕ್ಯ ಶಿಲಾಮಲಿವಿಲೋಚನಾ ॥ ೧೩ ॥

ವಿದ್ಯಾಧರಿ ಉವಾಚ —

ಪಶ್ಯಾಮ್ಯಖಿಲಮಾತ್ಮೀಯಮಹಂ ಸರ್ವಮಿಹೋಪಲೇ ।
ಮುಕುರಪ್ರತಿಬಿಂಬಸ್ಥಪುರಾನ್ಯಪುರವಜ್ಜನಂ ॥ ೧೪ ॥

ನಿತ್ಯಾನುಭವ ಏವಾತ್ರ ದರ್ಶನೇ ಕಾರಣಂ ಮಮ ।
ತದಭಾವೋ ಮುನೇ ಮನ್ಯೇ ತೇ ಕಾರಣಮದರ್ಶನೇ ॥ ೧೫ ॥

ಅನ್ಯಚ್ಚ ಚಿರಕಾಲೈಕದ್ವೈತಸಂಕಥಯಾನಯಾ ।
ಶುದ್ಧಾತಿವಾಹಿಕೈಕಾತ್ಮದೇಹತಾ ವಿಸ್ಮೃತಾವಯೋಃ ॥ ೧೬ ॥

---

೧೩. ಶಿಲೆಯನ್ನು ನೋಡಿ ವಿಸ್ಮಯಕುಲನಾದ ನಾನು ಹೀಗೆ ಕೇಳುತ್ತಿರಲು, ಅವರ ವರ್ಣಿನಿಯೂ ಭ್ರಮರಲೋಚನೆಯೂ ಆದ ಅವಳು ಹೀಗೆ ಹೇಳಿದಳು.

ವಿದ್ಯಾಧರಿಯು ಹೇಳಿದಳು :—

೧೪ ನಾನು ಈ ಶಿಲೆಯಲ್ಲಿ ನನ್ನ ಜಗತ್ತೆಲ್ಲವನ್ನೂ ನೋಡುತ್ತಿರುವೆನು (ಆದರೆ ಮೊದಲಿನಂತೆ ಅದು ಕಾಣುತ್ತಿಲ್ಲ.). ಕನ್ನಡಿಯಲ್ಲಿ ಪ್ರತಿಬಿಂಬವಾಗಿ ಕಾಣುವ ಇನ್ನೊಂದು ಊರನ್ನು ಮತ್ತೊಂದೂರಿನವರು ಕಾಣುವಂತೆ ನೋಡುತ್ತಿರುವೆನು ?

೧೫. ನನಗೆ ಕಾಣುವುದಕ್ಕೂ ನಿನಗೆ ಕಾಣದಿರುವುದಕ್ಕೂ ಕಾರಣ ಉಂಟು ನಿತ್ಯವೂ ನೋಡುತ್ತಿರ-ವುದರಿಂದ ನನಗೆ ಕಾಣುತ್ತಿರುವುದು. ಮುನೀಂದ್ರನೆ, ನೀನು ನೋಡದೆ ಇರುವುಗರಿಂದ ನಿನಗೆ ಕಾಣುವುದಿಲ್ಲ

೧೬. ಅಲ್ಲದೆ ಇನ್ನೂ ಒಂದು ಕಾರಣವುಂಟು. ಚಿರಕಾಲದಿಂದ ನಾವು ನಾವು ಮಾತನಾಡುತ್ತಾ ಶುದ್ಧವಾದ ಆತಿವಾಹಿಕ ದೇಹವನ್ನು ನಾವು ಮರೆತಿರುವೆವು ಆದರಿಂದ ನಿನಗೆ ಕಾಣದೆಯೇ ಇರುವುದು : ನನಗೆ ಕಂಡರೂ ಅಸ್ಪಷ್ಟವಾಗಿ ಕಾಣುತ್ತಿರುವುದು.

ಮಮಾತಿಸುಚಿರಾಭ್ಯಸ್ತಮಪಿ ವ್ಯೋಮಲತಾಮಿವ ।
ಗತಂ ನಿಜಂ ಜಗದಿದಂ ಯತಃ ಪಶ್ಯಾಮಿ ನ ಸ್ಫುಟಂ ॥ ೧೭ ॥

ಅಭೂದ್ಯತ್ಸ್ವಜಗತ್ಪೂರ್ವಮತಿಪ್ರಕಟಮೇವ ಮೇ ।
ತತ್ಪಶ್ಯಾಮೀದಮಾದರ್ಶ ಇವ ಬಿಂಬಿತಮಸ್ಫುಟಂ ॥ ೧೮ ॥

ಚಿರವ್ಯಥೋತ್ಥಯಾ ನಾಥ ಸಂಕಥಾವ್ಯಥಯಾ ಮಿಥಃ ।
ಸ್ವಾಸ್ಥ್ಯಂ ವಿಸ್ಮೃತವಾನಸ್ಮ್ಯಯಮಮದಾಕಾಶಕಮಂ ತತಂ ॥ ೧೯ ॥

ಯೋಽಭ್ಯಾಸಃ ಪ್ರಕಟತ್ಯಂತಃ ಶುದ್ಧಚಿನ್ನಭಸೋ ರಸಾತ್ ।
ಭವೇತ್ತನ್ಮಯಮೇವಾಂತರಾಬಾಲಮಪಿ ಲಕ್ಷ್ಯತೇ ॥ ೨೦ ॥

(ಸರ್ವ ಸೂಕ್ಷ್ಮಾರ್ಥಗ್ರಹಣಕ್ಷಮ ವಿಶುದ್ಧಮನೋ ಮಾತ್ರ ದೇಹಸ್ಯ ವಿಸ್ಮೃತಿ ಮಾದಪಿ ತವ ತದದರ್ಶನಂ ಮಮಾತದಸ್ಫುಟ ದರ್ಶನಂ ಇತ್ಯಾಹ— ತಾ. ಪ್ರ.)

೧೭. ನಾನು ಬಹುಕಾಲದಿಂದ ನೋಡಿ ನೋಡಿ ಅಭ್ಯಾಸವಾಗಿದ್ದರೂ, ಈ ನನ್ನ ಜಗತ್ತು ನನಗೆ ವ್ಯೋಮಲತೆಯಂತೆ ಆಗಿ ಹೋಯಿತು. ಅದರಿಂದ ನನಗೆ ಸ್ಫುಟವಾಗಿ ಕಾಣಿಸದಿರುವುದು.

೧೮. ಯಾವುದು ಮೊದಲು ನನ್ನ ಜಗತ್ತಾಗಿತ್ತೋ ಯಾವುದು ಅತಿ ಪ್ರಕಟವಾಗಿತ್ತೋ ಅದನ್ನೇ ಇಂದು ಕನ್ನಡಿಯಲ್ಲಿ ಕಂಡಂತೆ ಅಸ್ಫುಟವಾಗಿ ಕಾಣುತ್ತಿರುವೆನು.

೧೯. ಬಹಳ ಕಾಲದ, ಗಂಡನ ಕಥೆಯನ್ನು ಹೇಳುವುದರಲ್ಲಿ ಅನುಭವಿಸಿದ ವ್ಯಥೆಯಿಂದ ನನಗೆ ಮನಸ್ಸಿಗೆ ಸ್ವಾಸ್ಥ್ಯವು ಇಲ್ಲವಾಯಿತು. ಅದರಿಂದ ಪ್ರಕಾಶಮಾನವಾಗಿ ಹರಡಿರುವ ನನ್ನ ಲೋಕವನ್ನು ಕಾಣಲಾರದೆ ಹೋದೆನು.

೨೦. ಶುದ್ಧವಾದ ಚಿದಾಕಾಶದ ರಸದಿಂದ ಯಾವ ಅಭ್ಯಾಸವು ರೂಢವಾಗುವುದೋ ಅದೇ ಮನಸ್ಸಿನಲ್ಲೆಲ್ಲಾ ತುಂಬಿರುವುದು. ಇದು ಹುಡುಗರಿಗೂ ಗೊತ್ತು.

ನ ಸಚ್ಛಾಸ್ತ್ರೇಣ ಸಾ ವಿದ್ಧಿ ನ ಸನ್ನ್ಯಾಯೇ ಸಾ ಕಲಾ ।
ಅಸ್ತಿ ನಾಸ್ತ್ಯಮಿತೋದ್ಯೋಗಾದ್ಯದಭ್ಯಾಸಾನ್ನ ಸಿದ್ಧ್ಯತಿ ॥ ೨೧ ॥

ಸ್ವಜಗತ್ಸಂತತಾಭ್ಯಾಸವಶತೋ ಮಾಂ ಕಥಾಭ್ರಮಃ ।
ನೂನಮಾಕ್ರಾಂತವಾನೇಷ ದ್ವಯೋರ್ಹಿ ಬಲವಾನ್ ಜಯೀ ॥ ೨೨ ॥

ಇಷ್ಟವಸ್ತ್ವರ್ಥಿನಾಂ ತಜ್ಜ್ಞೈರುಪದಿಷ್ಟೇನ ಕರ್ಮಣಾ ।
ಪೌನಃಪುನ್ಯೇನ ಕರಣಾನ್ನೇತರಚ್ಛರಣಂ ಮುನೇ ॥ ೨೩ ॥

---

೨೧. ಅಭ್ಯಾಸದಿಂದ ಸಿದ್ಧವಾಗುವುದು ಯಾವುದುಂಟೋ ಅದು ಸಚ್ಛಾಸ್ತ್ರದಿಂದ ಆಗುವುದಿಲ್ಲ. ಉತ್ತಮವಾದ ನ್ಯಾಯದಿಂದ ಆಗುವುದಿಲ್ಲ ಅಮಿತವಾದ ಉದ್ಯೋಗದಿಂದ ಆಗುವುದಿಲ್ಲ.

೨೨. ಸಂತತಭ್ಯಾಸವಶವಾಗಿದ್ದರೂ ಈ ಕಥಾ ಭ್ರಾಂತಿಯು ನನ್ನ ಜಗತ್ತನ್ನೇ ಮರೆಯಿಸಿತು. ಯಾವಾಗಲೂ ಎರಡರಲ್ಲಿ ಯಾವುದು ಬಲವೋ ಅದೇ ಗೆಲ್ಲುವುದು.

(ಅಯಂ ತ್ವತ್ಸಂವಾದ ಕಥಾ ಭ್ರಮಃ ಸ್ವೀಯ ಜಗತ್ಸಂತತಾಭ್ಯಾಸವಶತೋ ಮಾಂ ಪೂರ್ವಜಗದ್ಭ್ರಮವತೀಮಾಕ್ರಾಂತವಾನ್ ವಶೀಕೃತವಾನ್, ತೇನ ತತ್ಸಂಸ್ಕಾರಸ್ತಿರೋಹಿತ ಇವಾಭೂದಿತ್ಯರ್ಥಃ ಅತೀತ ಭ್ರಮಾಪೇಕ್ಷಯಾ ವರ್ತಮಾನಸ್ಯ ಬಲೀಯಸ್ತ್ವಾದಿತ್ಯಾಶಯೇನಾಹ—ತಾ. ಪ್ರ)

೨೩ ಎಲೈ ಮುನಿಯೇ, ಯಾವುದಾದರೂ ಒಂದು ವಸ್ತುವು ಬೇಕು ಎನ್ನುವವರಿಗೆ ಅದನ್ನು ಬಲ್ಲವರು ಉಪದೇಶ ಮಾಡುವ ಕರ್ಮವನ್ನು ಪುನಃ ಪುನಃ ಮಾಡುವುದರಿಂದ ಹೊರತು ಇನ್ನು ಯಾವುದರಿಂದಲೂ ಇಷ್ಟ ಪ್ರಾಪ್ತಿಯಾಗುವುದಿಲ್ಲ.

(ಅತ ಏವ ಲೌಕಿಕಂ ವೈದಿಕಂ ವಾ ಶಿಲ್ಪವಿದ್ಯಾದಿ ಫಲಮಿಚ್ಛತಾಂ ತತ್ತದ್ಗುರೂಪದಿಷ್ಟ ಕ್ರಮೇಣ ಪುನಃ ಪುನಃ ತದಾಭ್ಯಾಸ ಏವ ಶರಣಂ ನಾನ್ಯದಿತ್ಯಾಹ—ತಾ. ಪ್ರ.)

ಅಯಮಿತ್ಥಮಿಹಾಜ್ಞಾನಭ್ರಮಃ ಪ್ರೌಢೋಽಹಮಾತ್ಮಕಃ ।
ಶಾಮ್ಯತಿ ಜ್ಞಾನಚರ್ಚಾಭಿಃ ಪಶ್ಯಾಭ್ಯಾಸವಿಜೃಂಭಿತಂ ॥ ೨೪ ॥

ಅಹಂ ಶಿಲಾಬಲಾ ಬಾಲಾ ಪಶ್ಯಾಮಿ ತ್ವಂ ನ ಪಶ್ಯಸಿ ।
ಸರ್ವಜ್ಞೋಽಪಿ ಶಿಲಾಸರ್ಗಂ ಪಶ್ಯಾಭ್ಯಾಸವಿಜೃಂಭಿತಂ ॥ ೨೫ ॥

ಅಜ್ಞೋಽಪಿ ತಜ್ಜ್ಞತಾಮೇತಿ ಶನೈಃ ಶೈಲೋಽಪಿ ಚೂರ್ಣ್ಯತೇ ।
ಬಾಣೋಽಪ್ಯೇತಿ ಮಹಾಲಕ್ಷ್ಯಂ ಪಶ್ಯಾಭ್ಯಾಸವಿಜೃಂಭಿತಂ ॥ ೨೬ ॥

ಇತ್ಥಂ ನಾಮ ಪರಿಪ್ರೌಢಾ ಮಿಥ್ಯಾಜ್ಞಾನವಿಷೂಚಿಕಾ ।
ಶಾಮ್ಯತ್ಯೇವ ವಿಚಾರೇಣ ಪಶ್ಯಾಭ್ಯಾಸವಿಜೃಂಭಿತಂ ॥ ೨೭ ॥

೨೪. ಇದು ಹೀಗೆ ಎಂದು ಗೊತ್ತು ಮಾಡಿಕೊಂಡು, ಅಹಂಕಾರ ಪೂರ್ವಕವಾಗಿ ವಿಜೃಂಭಿಸುವ ಪ್ರೌಢವಾದ ಅಜ್ಞಾನ ಭ್ರಮವೂ ಕೂಡ ಜ್ಞಾನ ವಿಷಯಕವಾದ ಚರ್ಚೆಗಳಿಂದ ಶಾಂತವಾಗುವುದರಿಂದ ಮೇಲೆ, ಅಭ್ಯಾಸ ವಿಜೃಂಭಣವು ಎಂಥದು ನೋಡು.

೨೫. ನಾನು ಶಿಲಾಸ್ತ್ರೀಯಾದ ಬಾಲೆಯು ಆದರೂ ನೋಡುತ್ತಿರುವೆನು. ನೀನು ಸರ್ವಜ್ಞನಾದರೂ ಈ ಶಿಲಾಗರ್ಭದಲ್ಲಿರುವ ಬ್ರಹ್ಮಾಂಡವನ್ನು ಕಾಣದಿರುವೆ. ನೋಡಿದೆಯಾ ಅಭ್ಯಾಸ ವಿಜೃಂಭಣವು ಎಂಥದು

(ಅಭ್ಯಾಸಪಾಟವೇ ಬಾಲಾನಾಮಪಿ ಪ್ರೌಢತಾ ದೃಷ್ಟಾ ತದ್ವಿಸ್ಮರಣೇತು ಮಹತಾಮಪಿವ್ಯಾಮೋಹಃ ಸಂಭಾವಿತ ಇತ್ಯರ್ಥೇ ಆವಾಮೇವ ನಿದರ್ಶನಮಿತ್ಯಾಹ— ತಾ ಪ್ರ.)

೨೬. ಅಜ್ಞನಾದರೂ ತಜ್ಞನಾಗುವನು. ಶೈಲವೇ ಆದರೂ ಕೊಂಚ ಕೊಂಚವಾಗಿ ಚೂರ್ಣವಾಗುವುದು. ಬಾಣವೂ ಮಹಾ ಲಕ್ಷ್ಯವನ್ನು ವೇಧಿಸುವುದು. ಅಭ್ಯಾಸದ ವಿಜೃಂಭಣವನ್ನು ನೋಡು

೨೭. ಹೀಗೆ ಎಂದು ಚೆನ್ನಾಗಿ ರೂಢವಾಗಿರುವ ಮಿಥ್ಯಾಜ್ಞಾನ ವಿಷೂಚಿಕೆಯೂ ವಿಚಾರದಿಂದ ಶಾಂತವಾಗುವುದು ಅಭ್ಯಾಸದ ವಿಜೃಂಭಣವನ್ನು ನೋಡು.

ಅಭ್ಯಾಸೇನ ಕಟುದ್ರವ್ಯಂ ಭವತ್ಯಭಿಮತಂ ಮುನೇ ।
ಅನ್ಯಸ್ಮೈ ರೋಚತೇ ನಿಂಬಸ್ತ್ವನ್ಯಸ್ಮೈ ಮಧು ರೋಚತೇ ॥ ೨೮ ॥

ಅಬಂಧುರ್ಬಂಧುತಾಮೇತಿ ನೈಕಟ್ಯಾಭ್ಯಾಸಯೋಗತಃ ।
ಯಾತ್ಯನಭ್ಯಾಸತೋ ದೂರಾತ್ಸ್ನೇಹೋ ಬಂಧುಷು ತಾನವಂ ॥ ೨೯ ॥

ಆತಿವಾಹಿಕದೇಹೋಽಯಂ ಶುದ್ಧಚಿದ್ವ್ಯೋಮ ಕೇವಲಂ ।
ಆಧಿಭೌತಿಕತಾಮೇತಿ ಭಾವನಾಭ್ಯಾಸಯೋಗತಃ ॥ ೩೦ ॥

ಆದಿಭೌತಿಕದೇಹೋಽಸೌ ಧಾರಣಾಭ್ಯಾಸಭಾವನಾತ್ ।
ವಿಹಂಗವತ್ಖಮಭ್ಯೇತಿ ಪಶ್ಯಾಭ್ಯಾಸವಿಜೃಂಭಿತಂ ॥ ೩೧ ॥

---

೨೮. ಎಲೈ ಮುನೀಂದ್ರನೇ, ಅಭ್ಯಾಸದಿಂದ ಕಟುದ್ರವ್ಯವೂ ರುಚಿಸುವುದು. ಒಬ್ಬನಿಗೆ ಬೇವು ಬೇಕೆನ್ನಿಸುವುದು. ಇನ್ನೊಬ್ಬನಿಗೆ ಜೇನು ಬೇಕೆನ್ನಿಸುವುದು.

(ನಿಂಬ ಭಕ್ಷಣಾಭ್ಯಾಸವತೇ ದ್ರಾವಿಡಾಯ ನಿಂಬೋಽಪಿ ರೋಚತೇ —ತಾ ಪ್ರ.)

೨೯. ಪಕ್ಕದಲ್ಲಿರುವುದು ಅಭ್ಯಾಸವಾದರೆ ಅಬಂಧುವೂ ಬಂಧುವಾಗುವನು: ಅನಭ್ಯಾಸದಿಂದ ದೂರದಲ್ಲಿರುವುದರಿಂದ ಬಂಧುಗಳಲ್ಲಿಯೂ ಸ್ನೇಹವು ತಾನವವನ್ನು ಹೊಂದುವುದು.

೩೦. ಆತಿವಾಹಿಕ ದೇಹವನ್ನು ಇದು ಶುದ್ಧವಾಗಿ ಚಿದಾಕಾಶವೆ! ಇದೇ ಆದಿ ಭೌತಿಕವಾಗುವುದು. ಹಾಗೆ ಆಗಲು ಭಾವನಾ, ಅಭ್ಯಾಸ ಯೋಗವು ಬೇಕು.

(ದೇಹೇ ಭೌತಿಕತಾ ಭ್ರಾಂತಿರಪಿ ಸ್ವಾಭಾವಿಕಾತ್ತದಭ್ಯಾಸಾದೇವೇತ್ಯಾಹ —ತಾ. ಪ್ರ.)

೩೧. ಆದಿಭೌತಿಕ ದೇಹವೂ ಕೂಡ ಧಾರಣವನ್ನು ಅಭ್ಯಾಸ ಮಾಡಿದರೆ, ವಿಹಂಗತದಂತೆ ಆಕಾಶದಲ್ಲಿ ಹಾರಬಲ್ಲುದಾಗುವುದು. ಅಭ್ಯಾಸದ ಪ್ರಭಾವವನ್ನು ನೋಡಿದೆಯಾ ?

ಪುಣ್ಯಾನಿ ಯಾಂತಿ ವೈಫಲ್ಯಂ ವೈಫಲ್ಯಂ ಯಾಂತಿ ಮಾತರಃ ।
ಭಾಗ್ಯಾನಿ ಯಾಂತಿ ವೈಫಲ್ಯಂ ನಾಭ್ಯಾಸಸ್ತು ಕದಾಚನ ॥ ೩೨ ॥

ದುಃಸಾಧ್ಯಾಃ ಸಿದ್ಧಿಮಾಯಾಂತಿ ರಿಪವೋ ಯಾಂತಿ ಮಿತ್ರತಾಂ ।
ವಿಷಾಣ್ಯಮೃತತಾಂ ಯಾಂತಿ ಸಂತತಾಭ್ಯಾಸಯೋಗತಃ ॥ ೩೩ ॥

ಯೇನಾಭ್ಯಾಸಃ ಪರಿತ್ಯಕ್ತ ಇಷ್ಟೇ ವಸ್ತುನಿ ಸೋಽಧಮಃ ।
ಕದಾಚಿನ್ನ ತದಾಪ್ನೋತಿ ವಂಧ್ಯಾ ಸ್ವತನಯಂ ಯಥಾ ॥ ೩೪ ॥

ಯದಪ್ಯಭಿಮತಂ ವಸ್ತು ಸ್ವಭ್ಯಾಸೇನ ತದರ್ಜನಾತ್ ।
ತದ್ಯುಕ್ತಿಪೂರ್ವಕಂ ತ್ಯಾಜ್ಯಮಾಮೃತ್ಯೋರ್ಜೀವಿತಂ ಯಥಾ ॥ ೩೫ ॥

೩೨. ಪುಣ್ಯಗಳೆಲ್ಲವೂ ವಿಫಲಗಳಾಗುವುವು: ಮಾತೆಯರೂ ವಿಫಲರಾಗುವರು: ಭಾಗ್ಯಗಳೂ ವಿಫಲಗಳಾಗುವುವು: ಅಭ್ಯಾಸವು ಮಾತ್ರ ವಿಫಲವಾಗುವುದಿಲ್ಲ.

೩೩. ದುಃಸಾಧ್ಯಗಳೂ ಸಿದ್ಧಿಸುವುವು: ರಿಪುಗಳು ಮಿತ್ರರಾಗುವರು: ವಿಷಗಳು ಅಮೃತಗಳಾಗುವುವು. ಇದು ಯಾವಾಗ ಎಂದರೆ ಅಭ್ಯಾಸ ಯೋಗ್ಯವನ್ನು ಆಶ್ರಯಿಸಿದಾಗ.

೩೪. ಯಾವನು ಇಷ್ಟವಾದ ವಸ್ತುವನ್ನು ಸಾಧಿಸಲು ಬೇಕಾದ ಅಭ್ಯಾಸವನ್ನು ತ್ಯಾಗ ಮಾಡುವನೋ ಅವನು ಅಧಮನು. ಮದುವೆಯಾಗದಿರುವ ವಧುವು ಮಗನನ್ನು ಹೇಗೆ ಎತ್ತಿಕೊಳ್ಳಲಾರಳೋ ಹಾಗೇ ಅವನು ತನ್ನ ಸಿದಿಯನ್ನು ಪಡೆಯುವುದಿಲ್ಲ.

೩೫. ಯಾವುದಾದರೂ ಅಭಿಮತವಾದ ವಸ್ತುವನ್ನು ಆರ್ಜಿಸಿದ್ದು ಅದನ್ನು ಬಿಡಬೇಕಾಗಿ ಬಂದರೆ ಒಳ್ಳೆಯ ಅಭ್ಯಾಸದಿಂದಲೂ ಯುಕ್ತಿಯಿಂದಲೂ ಬಿಡಬೇಕು: ಯೋಗಿಗಳು ಮೃತ್ಯುವು ಬರುವವರೆಗೂ ಜೀವಿತವನ್ನು ವಿಶ್ವಾಸದಿಂದ ನಿರ್ವಹಿಸುತ್ತಿದ್ದು ಮೃತ್ಯುವು ಒದಗಿದಾಗ ಅದನ್ನು ಬಿಡುವಂತೆ.

(ತರ್ಹಿ ಶಾಸ್ತ್ರೀಯಾಭ್ಯಾಸಾದಭಿಮತಂ ದಾರಪುತ್ರಧನ ಸತ್ಕರ್ಮಾನುಷ್ಠಾನಾದಿ ವಸ್ತು ತತ್ಕದಾಪಿ ನ ತ್ಯಾಜ್ಯಂ, ನೇತ್ಯಾಹ— ಯದಪೀತಿ । ಸ್ವಭ್ಯಾಸೇನ ಪ್ರಯುಕ್ತ

ಇಷ್ಟೇ ವಸ್ತುನಿ ನಾಭ್ಯಾಸಂ ಯಃ ಕರೋತಿ ನರಾಧಮಃ ।
ಸೋಽನಿಷ್ಟೇಽನಿಷ್ಟಮಾಪ್ನೋತಿ ನರಕಾನ್ನರಕಾಂತರಂ ॥ ೩೬ ॥

ತರಂತಿ ಸರಿತಂ ಸ್ಫೀತಾ ಸಂಸಾರಾಸಾರಸೇವಿನಃ ।
ತ ಏವಾತ್ಮವಿಚಾರಾಖ್ಯಮಭ್ಯಾಸಂ ನ ತ್ಯಜಂತಿ ಯೇ ॥ ೩೭ ॥

ಅಭ್ಯಾಸಭಾಸೋಽಭಿಮತಂ ವಸ್ತು ಪ್ರಕಟಯಂತ್ಯಲಂ ।
ಪ್ರಾಪಯಂತಿ ಚ ನಿರ್ವಿಘ್ನಂ ಘಟಂ ದೀಪಪ್ರಭಾ ಯಥಾ ॥ ೩೮ ॥

---

ಸಹಸ್ರೇಣ ತದರ್ಜನಾದತ್ಯಂತಾಭಿಮತಂ ದಾರಾದಿ ಯದ್ವಸ್ತು ತದಪಿ ನ ಸಹಸಾ ತ್ಯಾಜ್ಯಂ ಕಿಂತು ವೈರಾಗ್ಯಾಭ್ಯಾಸೇನ ವೃತ್ತ್ಯಾದಿ ಪರಿಕಲ್ಪನಾದಿಯುಕ್ತಿ ಪೂರ್ವಕಂ ತ್ಯಾಜ್ಯಂ। ಯಥಾ ಆ ಮೃತ್ಯೋ ರತ್ಯಂತಾಭಿಮತಮಪಿ ಜೀವಿತಂ ಯೋಗಿಭಿರ್ಯುಕ್ತಿಪೂರ್ವಕಂ ತ್ಯಜ್ಯತೇ ತದ್ವದಿತ್ಯರ್ಥಃ ॥—ತಾ. ಪ್ರ )

೩೬. ಇಷ್ಟವಾದ ವಸ್ತುವನ್ನು ಪಡೆಯಲು ಯಾವನು ಅಭ್ಯಾಸವನ್ನು ಮಾಡುವುದಿಲ್ಲವೋ ಆ ನರಾಧಮನು ಅನಿಷ್ಟದಲ್ಲಿ ಪ್ರಯತ್ನ ಮಾಡುತ್ತಾ ಅನಿಷ್ಟವನ್ನೇ ಪಡೆದು, ನರಕದಿಂದ ನರಕವನ್ನೇ ಹೊಂದುವವನಂತೆ ಒದ್ದಾಡುವವನು.

(ತತ್ತ್ವಜ್ಞಾನಾಭ್ಯಾಸಸ್ತು ಸರ್ವಥಾ ನ ತ್ಯಾಜ್ಯಃ । ತತ್ತ್ಯಾಗೇ ದೇಹಾಹಂಭಾವಾದ್ಯಭ್ಯಾಸಸ್ಯ ನಾಂತರೀಯಕಸ್ಯ ವಾರಯಿತು ಮಶಕ್ಯಾತ್ವಾದನಿರ್ಮೋಕ್ಷ ಏವೇತ್ಯಾಶಯೇನಾಹ—ಇಷ್ಟೇ ಇತಿ । ಅನಿಷ್ಟೇ ದೇಹಾದ್ಯಹಂಭಾವೇ ಅನಿಷ್ಟಮೇವಾಭ್ಯಾಸಸ್ವಭಾವಾ ದೇವಾಪ್ನೋತಿ । ತತಶ್ಚ ನ್ನರಕಾನ್ನರಕಾಂತರಂ ॥ —ತಾ ಪ್ರ.)

೩೭. ಆತ್ಮವಿಚಾರವೆಂಬ ಅಭ್ಯಾಸವನ್ನು ಯಾರು ಬಿಡದೆ ಸೇವಿಸುತ್ತಿರುವರೋ ಅವರು ಸಂಸಾರವು ಅಸಾರವೆಂಬ ವಿವೇಕವನ್ನು ಸೇವಿಸುವವರಾಗಿ ಈ ಉಬ್ಬುಬ್ಬಿ ಹರಿಯುತ್ತಿರುವ (ಈ ಸಂಸಾರ) ಮಹಾನದಿಯನ್ನು ದಾಟುವರು.

೩೮. ಅಭ್ಯಾಸದ ಬೆಳಕಿನಿಂದ ಅಭಿಮತವಸ್ತುವು ಪ್ರಕಟವಾಗುವುದು. ದೀಪದ ಬೆಳಕು ನಿರ್ವಿಘ್ನವಾಗಿ ಘಟವನ್ನೆಂತು ದೊರಕಿಸಿಕೊಡುವುದೋ ಹಾಗೆಯೇ ಇದೂ!

ಯಥಾ ಕಲ್ಪದ್ರುಮಲತಾಃ ಸಚ್ಚಿಂತಾಮಣಯೋ ಯಥಾ ।
ಫಲಂತಿ ಶರದಸ್ಚೈತ್ಯಾಸ್ತಥೈವಾಭ್ಯಾಸಭೂಮಯಃ ॥ ೩೯ ॥

ಇಷ್ಟವಸ್ತು ಚಿರಾಭ್ಯಾಸಭಾಸ್ವಾನ್ಭಾಸಯತಿ ಪ್ರಜಾಃ ।
ತಥೇಂದ್ರಿಯಾಖ್ಯಾಂ ದೇಹೋರ್ವ್ಯಾಂ ರಾತ್ರಿಂ ಪಶ್ಯಂತಿ ನೋ ಯಥಾ ॥ ೪೦ ॥

ಸರ್ವಸ್ಯ ಜಂತುಜಾತಸ್ಯ ಸರ್ವವಸ್ತ್ವವಭಾಸನೇ ।
ಸರ್ವದೈವೈಕ ಏವೋಚ್ಚೈರ್ಜಯತ್ಯಭ್ಯಾಸಭಾಸ್ಕರಃ ॥ ೪೧ ॥

ಚತುರ್ದಶವಿಧಾಯಾಸ್ತು ಭೂತಜಾತೇರ್ನ ಕಸ್ಯಚಿತ್
ಸಿಧ್ಯತ್ಯಭಿಮತಂ ವಸ್ತು ವಿನಾಭ್ಯಾಸಮಕೃತ್ರಿಮಂ ॥ ೪೨ ॥

(ಯಥಾಘಟಾರ್ಥಿನೋ ದೀಪಪ್ರಭಾ ಘಟಂ ಪ್ರಕಟಯಂತಿ ನಿರ್ವಿಘ್ನಂ ಪ್ರಾಪಯಂತಿ ಚ ತಥಾ ಆತ್ಮವಸ್ತ್ವರ್ಥಿನೋ ಅಭ್ಯಾಸ ಲಕ್ಷಣಾಭ್ಯಾಸಃ ಪ್ರಕಾಶಾ ಅಭಿಮತ ಮಾತ್ಮವಸ್ತು ಪ್ರಕಟಯಂತಿ ನಿರ್ವಿಘ್ನಂ ಪ್ರಾಪಯಂತಿ ಚ। ತತ್ರ ಶ್ರವಣ ಮನನಾಭ್ಯಾಸೋಽಸಂಭಾವನಾತಿಮಿರ ನಿರಾಸೇನ ಪ್ರಕಟಯತಿ। ನಿದಿಧ್ಯಾಸನಾಭ್ಯಾಸಸ್ತು ವಿಪರೀತ ಭಾವನಾರೂಪ ವಿಘ್ನನಿರಾಸೇನ ಪ್ರಾಪಯತೀತ್ಯಾಶಯಃ ॥ —ತಾ. ಪ್ರ)

೩೯. ಕಲ್ಪವೃಕ್ಷದ ಕೊಂಬೆಗಳಂತೆ, ಚಿಂತಾಮಣಿಗಳೆಂಬ ಸದ್ರತ್ನಗಳಂತೋ ಅಂತೆ, ಶರತ್ಕಾಲದ ಚೈತ್ಯವೃಕ್ಷಗಳಂತೆ, ಅಭ್ಯಾಸ ಭೂಮಿ(ಕೆ)ಗಳು ಫಲಿಸುವುವು.

೪೦. ಚಿರಕಾಲದ ಅಭ್ಯಾಸವೆಂಬ ಸೂರ್ಯನು ಇಷ್ಟವಸ್ತುವನ್ನು ಪ್ರಕಾಶಗೊಳಿಸುವನು ಆಗ ಅಧಿಕಾರಿಗಳಾದ ಜನರು ಇಂದ್ರಿಯ ವ್ಯಾಪಾರ ರೂಪವಾದ ರಾತ್ರಿಯನ್ನು ದೇಹಭೂಮಿಯಲ್ಲಿ ಕಾಣುವುದೇ ಇಲ್ಲ.

೪೧. ಜಂತುಜಾತವೆಲ್ಲಕ್ಕೂ ಸರ್ವವಸ್ತುಗಳೂ ಲಾಭವಾಗುವುದಕ್ಕೆ ಯಾವಾಗಲೂ ಒಂದೇ ಒಂದು ಉಪಾಯವಿರುವುದು ಅದು ಅಭ್ಯಾಸವು. ಆ ಅಭ್ಯಾಸ ಭಾಸ್ಕರನು ಯಾವಾಗಲೂ ಉನ್ನತ ಜಯಶೀಲನು.

೪೨. ಭೂತ ಜಾತಗಳು ಚತುರ್ದಶವಿಧಗಳು. ಈ ಭೂತಜಾತಗಳಲ್ಲಿ ಯಾರಿಗೂ ಯಾವ ಅಭಿಮತ ವಸ್ತುವೂ ಅಕೃತ್ರಿಮವಾದ ಅಭ್ಯಾಸವಿಲ್ಲದೆ ದೊರೆಯುವುದಿಲ್ಲ.

ಪೌನಃಪುನ್ಯೇನ ಕರಣಮಭ್ಯಾಸ ಇತಿ ಕಥ್ಯತೇ ।
ಪುರುಷಾರ್ಥಃ ಸ ಏವೇಹ ತೇನಾಸ್ತಿ ನ ವಿನಾ ಗತಿಃ ॥ ೪೩ ॥

ದೃಢಾಭ್ಯಾಸಾಭಿಧಾನೇನ ಯತ್ನನಾಮ್ನಾ ಸ್ವಕರ್ಮಣಾ ।
ನಿಜವೇದನಜೇನೈವ ಸಿದ್ಧಿರ್ಭವತಿ ನಾನ್ಯಥಾ ॥ ೪೪ ॥

ಅಭ್ಯಾಸಭಾಸ್ವತಿ ತಪತ್ಯವನೌ ವನೇ ಚ
ವೀರಸ್ಯ ಸಿದ್ಧ್ಯತಿ ನ ಯನ್ನ ತದಸ್ತಿ ಕಿಂಚಿತ್ ।
ಅಭ್ಯಾಸತೋ ಭುವಿ ಭಯಾನ್ಯಭಯೀಭವಂತಿ
ಸರ್ವಾಸು ಪರ್ವತಗುಹಾಸ್ವಪಿ ನಿರ್ಜನಾಸು ॥ ೪೫ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಅಭ್ಯಾಸ ಪ್ರಶಂಸಾ" ನಾಮ
ಸಪ್ತಷಷ್ಟಿತಮಃ ಸರ್ಗಃ

---

೪೩. ಮತ್ತೆ ಮತ್ತೆ ಮಾಡುತ್ತಿರುವುದೇ ಅಭ್ಯಾಸ ಎನ್ನಿಸಿಕೊಳ್ಳುವುದು. ಅದನ್ನೇ ಪುರುಷಾರ್ಥವೆನ್ನುವರು. ಅದು ಇಲ್ಲವಿದ್ದರೆ ಗತಿಯೇ ಇಲ್ಲ.

೪೪. ದೃಢಾಭ್ಯಾಸವೆಂಬ ಅಭಿಧಾನವುಳ್ಳ ಪ್ರಯತ್ನವೆಂಬ ಸ್ವಕರ್ಮದಿಂದ ತನ್ನ ಜ್ಞಾನ ಬಲದಿಂದ, ಸಿದ್ಧಿಯಾಗುವುದಲ್ಲದೆ, ಅನ್ಯಥಾ ಅಲ್ಲ.

೪೫. ಅವನಿಯಲ್ಲಾಗಲಿ ವನವಲ್ಲಾಗಲಿ, ಅಭ್ಯಾಸ ಸೂರ್ಯನು ಬೆಳಗುತ್ತಿರಲಾಗಿ, ವೀರನಿಗೆ ಸಿದ್ಧಿಸದ ವಸ್ತುವು ಯಾವುದೂ ಇಲ್ಲ ಅಭ್ಯಾಸಪರನಿಗೆ ಲೋಕದಲ್ಲಿ ಭಯಗಳೆಲ್ಲವೂ ಅಭಯಗಳಾಗುವುವು ನಿರ್ಜನವಾದ ಪರ್ವತ ಗುಹೆಗಳೇ ಆಗಲೀ ಅವನಿಗೆ ಭಯರಹಿತಗಳಾಗುವುವು

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಅಭ್ಯಾಸ ಪ್ರಶಂಸಾ" ಎಂಬ
ಅರವತ್ತೇಳನೆಯ ಸರ್ಗವು.

## ಅಷ್ಟಷಷ್ಟಿತಮಃ ಸರ್ಗಃ

ವಿದ್ಯಾಧರೀ ಉವಾಚ —

ತತಃ ಪ್ರಾಚೀನಮಭ್ಯಾಸಂ ಬೋಧಧಾರಣಯಾಮಲೇ ।
ಕುರ್ವನ್ ಪ್ರಕಟಿತಾಂ ತೇನ ಜಗದೇಷ್ಯತಿ ಶೈಲಗಂ ॥ ೧ ॥

ಶ್ರೀ ವಸಿಷ್ಠ ಉವಾಚ —

ಯುಕ್ತಿಯುಕ್ತೇ ತಯೇತ್ಯುಕ್ತೇ ವಿದ್ಯಾಧರ್ಯಾ ಧರೋರಸಿ ।
ಬದ್ಧಪದ್ಮಾಸನೋ ಧ್ಯಾತುಂ ಸಮಾಧಾವುಪಿತೋಽಭವಂ ॥ ೨ ॥

---

## ಅರವತ್ತೆಂಟನೆಯ ಸರ್ಗವು

ವಿದ್ಯಾಧರಿಯು ಹೇಳಿದಳು:—

೧ ಆದರಿಂದ ಬೋಧಧಾರಣೆಯೆಂಬ ಅಮಲದಲ್ಲಿ ನಿಂತು ಪ್ರಾಚೀನವಾದ ಅಭ್ಯಾಸವನ್ನು ಮಾಡೋಣ. ಆದರಿಂದ ಶೈಲದಲ್ಲಿರುವ ಜಗತ್ತು ಪ್ರಕಟವಾಗಲಿ.

(ಯತೋ ದೃಢಾಭ್ಯಾಸಾತ್ಸಮಾಧಿ ಯತ್ನಮಂತರೇಣ ದೇಹಾದಾವಾಧಿಭೌತಿಕತಾ ಭ್ರಾಂತಿರ್ನನಿವರ್ತತೇ ಆತಿವಾಹಿಕ ಭಾವಶ್ಚನಾವಿರ್ಭವತಿ ತಂ ವಿನಾ ಚ ಸರ್ಗಾಂತರಸ್ಥಿತಿಃ ಅಪಿ ಪ್ರತ್ಯಕ್ಷೇಣ ದ್ರಷ್ಟುಮಶಕ್ಯಾ ತತೋ. ಹೇತೋಃ ರಮಣೇ ಪರಮಾತ್ಮನಿ ಸರ್ವ ಬೋಧಾನುಕೂಲಯಾ ಸಮಾಧಿ ರೂಪಧಾರಣಯಾ ಪ್ರಾಚೀನ ಮಾತಿವಾಹಿಕಭಾವಾಭ್ಯಸಮಾವಾಂ ಕುರ್ವನ್ ತೇನೋಪಾಯೇನ ಶೈಲಗಂ ಶಿಲಾಂತರ್ಗತಂ ಮದುಕ್ತಂ ಜಗತ್ ಪ್ರಕಟಿತಾಮೇಷ್ಯತಿ ।—ತಾ. ಪ್ರ)

ಶ್ರೀ ವಸಿಷ್ಠನು ಹೇಳಿದನು :—

೨ ಯುಕ್ತಿ ಯುಕ್ತವಾಗಿ ಆ ವಿದ್ಯಾಧರಿಯು ಹೀಗೆ ಹೇಳಲು ನಾನು ಆ ಪರ್ವತ ಪ್ರಾಂತದಲ್ಲಿ ಪದ್ಮಾಸನದಲ್ಲಿ ಕುಳಿತು ಸಮಾಧಿಯನ್ನು ಹೊಂದಿದೆನು.

ಸರ್ವಾರ್ಥಭಾವನಾತ್ಯಾಗೇ ಚಿನ್ಮಾತ್ರೈಕಾಂತಭಾವಿತಃ ।
ಅತ್ಯಜಂತಮಹಂ ಪೂರ್ವಕಥಾರ್ಥಕಲನಾಮಲಂ ॥ ೩ ॥

ಅಥ ಚಿದ್ವ್ಯೋಮತಾಂ ಪ್ರಾಪ್ತಃ ಪರಾಂ ದೃಷ್ಟಿಮಹಂ ಗತಃ ।
ಶರತ್ಸಮಯಸಂಪ್ರಾಪ್ತೌ ವ್ಯೋಮ ನಿರ್ಮಲತಾಮಿವ ॥ ೪ ॥

ತತಃ ಸತ್ಯಾವಧಾನೈಕಘನಾಭ್ಯಾಸೇನ ದೇಹಕೇ ।
ಮಮಾಧಿಭೌತಿಕಭ್ರಾಂತಿರ್ನೂನಮಸ್ತಮುಪಾಗತಾ ॥ ೫ ॥

ಉದಯಾಸ್ತಮಯೋನ್ಮುಕ್ತಾ ಸತತೋದಯಮಯ್ಯಪಿ ।
ಮಹಾಚಿದ್ವ್ಯೋಮತಾಸ್ವಚ್ಛಾ ಪ್ರೋದಿತೇವ ತದಾಭವತ್ ॥ ೬ ॥

ಅಥ ಪಶ್ಯಾಮ್ಯಹಂ ಯಾವತ್ಸ್ವಸ್ಯೈವಾಮಲತೇಜಸಾ ।
ವಸ್ತುತಸ್ತು ನ ಚಾಕಾಶಂ ನೋಪಲಃ ಪರಮೇವ ತತ್ ॥ ೭ ॥

---

೩. ಯಾವ ಅರ್ಥವನ್ನೂ ಪರಿಭಾವಿಸದೆ, ಚಿನ್ಮಾತ್ರವನ್ನು ಮಾತ್ರ ಹಿಡಿದು ಏಕಾಂತಭಾವನೆಯಲ್ಲಿ ಮಾಡುತ್ತಾ, ಪೂರ್ವಕತೆಯನ್ನು ಕೇಳಿದ್ದರಿಂದ ಸಂಭವಿಸಿದ್ದ ಮಲವನ್ನು ತ್ಯಾಗಮಾಡಿದೆನು.

೪. ಶರತ್ಸಮಯವು ಬರಲು ವ್ಯೋಮವು ನಿರ್ಮಲವಾಗುವಂತೆ, ನಾನೂ ಚಿದಾಕಾಶವನ್ನು ಸೇರಿ ಉತ್ತಮವಾದ ಜ್ಞಾನ ದೃಷ್ಟಿಯನ್ನು ಪಡೆದೆನು.

೫ ಅನಂತರದಲ್ಲಿ ಸತ್ಯವಸ್ತುವೊಂದನ್ನೇ ಧ್ಯಾನಮಾಡುತ್ತಿರಲು, ದೇಹದಲ್ಲಿದ್ದ ಆದಿಭೌತಿಕ ಭ್ರಾಂತಿಯು ಸಂಪೂರ್ಣವಾಗಿ ಗಲಿತವಾಗಿಹೋಯಿತು.

೬. ಉದಯ-ಅಸ್ತಗಳಿಲ್ಲದ, ಯಾವಾಗಲೂ ಉದಯವಾಗಿರುವ, ಎಂದರೆ ಪ್ರಕಟವಾಗಿಯೇ ಇರುವ, ಮಹಾಚಿದಾಕಾಶವು ಮತ್ತೆ ಚೆನ್ನಾಗಿ ಬೆಳಗಿದಂತಾಯಿತು.

೭ ಅನಂತರ ಆ ಚಿದಾಕಾಶದ ಅಮಲ ತೇಜಸ್ಸಿನಿಂದ ನಾನು ನೋಡಿದರೆ ಅಲ್ಲಿ ಆಕಾಶವಾಗಲಿ, ಶಿಲೆಯಾಗಲಿ, ಯಾವುದೂ ಕಾಣಿಸದೆ ಕೇವಲ ಪರಮಾಕಾಶವೊಂದೇ ಕಂಡಿತು.

ಪರಮಾರ್ಥಘನಂ ಸ್ವಚ್ಛಂ ತತ್ತಥಾ ಭಾತಿ ತಾದೃಶಂ ।
ತಥಾ ಭಾವನಯಾ ಹ್ಯಾತ್ಮಾ ಮಯೇಯೋ ದೃಷ್ಟವಾಂಸ್ತಥಾ ॥ ೮ ॥

ಯಥಾ ಸ್ವಪ್ನೇ ಸುಮಹತೀ ದೃಷ್ಟ್ವಾ ಗೇಹಗತಾ ಶಿಲಾ ।
ವ್ಯೋಮೈವ ಕೇವಲಂ ತದ್ವತ್ತಸ್ಮಿನ್ಸ್ವಪ್ನೇ ಘನಶಿಲಾ ॥ ೯ ॥

ಸ್ವಯಂ ಸ್ವಪ್ನೇಽವಿತೋಽನ್ಯಸ್ಯ ಸ್ವಪ್ನಪುಂಸ್ತ್ವಂ ಗತೋ ನರಃ ।
ಸ್ವಪ್ನೇಽಜ್ಞಾನಪ್ರಬುದ್ಧಸ್ಯ ಯಾದೃಕ್ತದ್ವತ್ಸ್ವರೂಪತಃ ॥ ೧೦ ॥

೮. ಸ್ವಚ್ಛವಾದ ಪರಮಾರ್ಥ ಘನವು ಅದೇ ಹಾಗೆ ಆ ರೂಪವಾಗಿ ಭಾಸವಾಗುವುದು. ಅದರಿಂದ ಆ ಭಾವನೆಯಿಂದ ನನ್ನ ಆತ್ಮವೇ ಆ ರೂಪವಾಗಿ ಕಾಣಿಸಿತು.

(ಸ್ವಸ್ಯ ಸಾಕ್ಷಿ ವಿವರ್ತಿತ್ವೇನ ಅಮಲ ತೇಜಸಾ ವ್ಯಕ್ತೇರ್ಜಡಾಯಾಃ ಸ್ವತೋ ಪೃಥಕ್ಸತ್ತ್ವಾಭಾವಾದಿತಿ ಭಾವಃ॥—ತಾ. ಪ್ರ.)

(ತತ್ಪರಮಾರ್ಥಘನಂ ಪರಂ ತತ್ಸರ್ವಮ ಮಯೀಯ ಆತ್ಮಾ ತಥಾ ಉಪಲ ಭಾವನಯಾ ಉಪಲಂ ದೃಷ್ಟವಾನಿತ್ಯರ್ಥಃ॥—ತಾ. ಪ್ರ.)

೯. ಕನಸ್ಸಿನಲ್ಲಿ ಮನೆಯಲ್ಲಿಯೇ ಭಾರಿ ಶಿಲೆಯನ್ನು ಕಾಣುವಂತೆ, ವ್ಯೋಮವೇ ಕೇವಲ ಸ್ವಪ್ನವಾದ ಚಿತ್ತೇ ನಭತ್ಶಿಲೆಯಾಗಿ ಕಾಣಿಸಿತು.

೧೦. ತಾನೇ ಕನಸು ಕಾಣುತ್ತಿರುವನು ಮತ್ತೊಬ್ಬನ ಕನಸ್ಸಿನಲ್ಲಿ ಕಾಣಿಸಿಕೊಂಡು, ತನ್ನ ಕನಸ್ಸಿನಲ್ಲಿಯೇ ಅಜ್ಞಾನದಿಂದ ಪ್ರಬುದ್ಧನಾದನು. ಎಚ್ಚರಗೊಂಡನು ಎಂದರೆ ಹೇಗಿರುವುದೋ ಆಗೆ ಆಯಿತು.

(ಯದ್ಯಯಂ ವ್ಯವಹಾರಃ ಸ್ವಪ್ನ ಏವ ತರ್ಹಿ ಕಥಂ ಸ್ವಪರ ಜಗತ್ತ್ವಾ ಪ್ರತಿಪತ್ತಿಭಾಸಃ ? ತತ್ರಾಹ—ಸ್ವಯಮಿತಿ ಸ್ವಪ್ನೇ ಅಜ್ಞಾನವಶಾದೇವ ಪ್ರಬುದ್ಧೋಽಹ ಮಿತಿ ಮನ್ಯ ಮಾನಸ್ಯ ಅನ್ಯಸ್ಯ ಸ್ವಪ್ನದೃಶ್ಯಪುರುಷತ್ವ ಗತಃ ಸ್ವಪ್ನಾನ್ವಿತಃ ಸ್ವಯಂ ಸ್ವರೂಪತೋ ಯಾದೃಕ್ ಪ್ರತಿಬುದ್ಧೋಽಸ್ಮೀತಿ ಪ್ರತಿಭಾತಿ ತಾದೃಗಿತ್ಯರ್ಥಃ ॥—ತಾ. ಪ್ರ )

ಸ್ವಪ್ನಸ್ಥಾನಾಂ ಶಿರಶ್ಛಿನ್ನಂ ಯೇಷಾಂ ತೇ ಸಂಸೃತೌ ಸ್ಥಿತಾಃ ।
ಕಾಲೇನ ಜ್ಞಾನಲಾಭೇನ ವಿನಾ ಕುರ್ವಂತು ಕಿಂ ಕಿಲ ॥ ೧೧ ॥

ಬೋಧಃ ಕಾಲೇನ ಭವತಿ ಮಹಾಮೋಹವತಾಮಪಿ ।
ಯಸ್ಮಾನ್ನ ಕಿಂಚನಾಪ್ಯಸ್ತಿ ಬ್ರಹ್ಮತತ್ತ್ವಾದೃತೇಽಕ್ಷಯಂ ॥ ೧೨ ॥

ಅತಸ್ತಚ್ಚಿದ್ಘನಂ ಸ್ವಚ್ಛಂ ಬ್ರಹ್ಮಾಕಾಶಂ ಶಿಲಾಕೃತಿ ।
ದೃಷ್ಟಂ ಮಯಾ ತತಾ ತತ್ರ ನ ತು ಪೃಥ್ವ್ಯಾದಿ ಸತ್ಕ್ವಚಿತ್ ॥ ೧೩ ॥

---

೧೧. ಕನಸು ಕಾಣುತ್ತಿರುವವನ ಶಿರಸ್ಸನ್ನು ಕತ್ತರಿಸಿ ಬಿಟ್ಟರೆ, ಅವನಿಗೆ ಸಂಸಾರವೆಲ್ಲವೂ ಕನಸ್ಸಿನಲ್ಲಿಯೇ ನಡೆಯಬೇಕಲ್ಲದೆ ಬೇರೆ ಹೇಗೆ ಆದೀತು? ಯಾವುದೋ ಕಾಲಕ್ಕೆ ಜ್ಞಾನಲಾಭವಾದರಂತೂ ಸರಿಹೋಯಿತು. ಇಲ್ಲವಾದರೆ ಅವನೇನು ಮಾಡಬೇಕು.?

(ಅತಏವ ಸೌಪ್ತಿಕೇ ಸುಪ್ತಹತಾನಾಂ ಜಾಗರಣೋಪಾಯ ದೇಹಭಾವಾದ ಗತ್ಯಾ ಸ್ವಪ್ನ ಏವ ತೇಷಾಂ ಜಾಗರತಾ ಪರಿಶಿಷ್ಯತೇ ಇತಿ ಪ್ರಾಗುಕ್ತಂ ಮಯೇತಿ ಸ್ಮಾರಯತಿ— ತಾ ಪ್ರ)

೧೨ ಮಹಾ ಮೋಹದಲ್ಲಿ ಬಿದ್ದಿರುವವರಿಗೂ ಕಾಲಾನುಕಾಲದಲ್ಲಿ ಬೋಧವು ಲಭಿಸುವುದು ಏಕೆಂದರೆ ಬ್ರಹ್ಮವೊಂದನ್ನು ಬಿಟ್ಟು ಇನ್ನೇನೂ ಇಲ್ಲ. ಅದು ಅಕ್ಷಯವಾದುದು.

(ತಸ್ಮಾನ್ಮೂಲಾಜ್ಞಾನನಿದ್ರೋಚ್ಛೇದೇನ ಸ್ವರೂಪ ಪ್ರತಿಬೋಧ ಏವಾಸ್ಯ ಮುಖ್ಯಃ ಪ್ರತಿಬೋಧೋನ್ಯದಾ ತು ಸ್ವಪ್ನಏವ ವೃಥಾ ಜಾಗರಿತಾಮಾನ ಇತ್ಯಾಹ—ತಾ. ಪ್ರ)

೧೩. ಆದರಿಂದ ಆ ಚಿತ್ತು ತಾನೇ ತಾನಾಗಿ ಸ್ವಚ್ಛವಾಗಿರುವುದಲ್ಲ, ಅದೇ ಬ್ರಹ್ಮಾಕಾಶವೇ ಶಿಲೆಯಾಗಿ ಕಾಣಿಸಿತು. ಅಲ್ಲಿ ಪೃಥಿವೀ ಮೊದಲಾದ ಇನ್ನೇನೂ ಇರಲಿಲ್ಲ.

ಭೂತಾನಾಮಾದಿಸರ್ಗೇ ಯಚ್ಛುದ್ಧಂ ಯತ್ಪಾರಮಾರ್ಥಿಕಂ ।
ತತ್ತ್ವಸ್ತ್ವೇವ ಹ್ಯೇತೇಷಾಂ ಧ್ಯಾನಲಭ್ಯಮುಪಸ್ಥಿತಂ ॥ ೧೪ ॥

ಬ್ರಾಹ್ಮ್ಯಂ ವಪುರ್ಭೂತಾನಾಮಾತಿವಾಹಿಕಂ ಯತ್ಪುರಾತನಂ ।
ತದೇವಾದ್ಯ ಮನೋರಾಜ್ಯಂ ಸಂಕಲ್ಪ ಇತಿ ಕಥ್ಯತೇ ॥ ೧೫ ॥

ಸತ್ತಾತಿವಾಹಿಕೋ ದೇಹಸ್ತತ್ಪರಂ ಪರಮಾರ್ಥತಃ ।
ಪ್ರತ್ಯಕ್ಷಂ ಪರಮಂ ಯತ್ತತ್ತದಾದ್ಯಂ ಕಚನಂ ಚಿತಃ ॥ ೧೬ ॥

ಸರ್ಗೇ ತ್ವಥಮಮನ್ಯಸ್ಮಿಂ ಜೀವಸ್ಯ ಪ್ರಥಮಂ ವಪುಃ ।
ಮನಃ ಪ್ರತ್ಯಕ್ಷಮಿತ್ಯುಕ್ತಂ ತತ್ತ್ವೇನಾದ್ಯಾಪಿ ದುರ್ಧಿಯಾ ॥ ೧೭ ॥

೧೪. ಯಾವ ಪ್ರಾಣಿಯೇ ಆಗಲಿ, ಅದು ಮೊದಲು ಹುಟ್ಟಿದಾಗ, ಯಾವುದು ಶುದ್ಧವೂ ಪಾರಮಾರ್ಥಿಕವೂ ಆಗಿತ್ತೋ ಅದೇ ಈಗಲೂ ಅದೇ ಶುದ್ಧರೂಪದಿಂದ ಧ್ಯಾನಲಬ್ಧವಾಗುವುದು

೧೫. ಬ್ರಹ್ಮಸಂಬಂಧಿಯಾದ ದೇಹವು ಯಾವುದೋ ಆ ಪುರಾತನವಾದ ಅದೇ ಭೂತಗಳ ಆತ್ಮೀಯವಾದ ದೇಹವು. ಅದೇ ಈಗ ಮನೋರಾಜ್ಯವಾಗಿರುವುದು. ಅದನ್ನೇ ಸಂಕಲ್ಪವೆನ್ನುವರು.

೧೬. ಸತ್-ತಾ ಯಾವುದುಂಟೋ ಅದೇ ಆತಿವಾಹಿಕ ದೇಹವು. ಪರಮಾರ್ಥವಾಗಿ ನೋಡಿದರೆ ಅದೇ ಬ್ರಹ್ಮವು ಪ್ರತ್ಯಕ್ಷವಾಗಿ ಪರಮವಾಗಿರುವುದು ಯಾವುದೋ ಅದೇ ಚಿತ್ತಿನ ಪ್ರಥಮ ಕಚನವು.

(ಮಾಯಾಶಬಲಂ ಬ್ರಹ್ಮ ಸದಿತ್ಯುಚ್ಯತೇ ತತ್ರ ಚಿತಃ ಜಗತ್ಸಂಸ್ಕಾರ ಸಂವಲಿತಾಂಶಸತ್ತಾ ಸ ಏವಾತಿವಾಹಿಕೋ ದೇಹಃ। ಶಿಷ್ಟಾ ಪರೋಕ್ಷ ಶುದ್ಧ ಚಿದಂಶಸ್ತು ಸ್ವರೂಪಕಚನಮಿತ್ಯರ್ಥಃ॥—ತಾ. ಪ್ರ.)

೧೭. ಸ್ವರ್ಗದ ಆದಿಯಲ್ಲಿ ಜೀವನ ಪ್ರಥಮವಪುವಾಗಿ ಯಾವುದು ಗೃಹೀತವಾಗುವುದೋ ಅದೇ ಈಗಲೂ ವಿವೇಕಹೀನರಿಂದ ಮನಃ ಪ್ರತ್ಯಕ್ಷವೆಂದೆನ್ನಿಸಿಕೊಳ್ಳುವುದು.

ಯೋಗಿಪ್ರತ್ಯಕ್ಷಮಿತ್ಯುಕ್ತಂ ಮನಃಪ್ರತ್ಯಕ್ಷಮಿತ್ಯಪಿ ।
ತತ್ಸ್ವಮೇವ ಚಿತೋ ರೂಪಂ ಗತಮೇವಾನ್ಯತಾಂ ಮುಧಾ ॥ ೧೮ ॥

ಇದಮದ್ಯತನಂ ನಾಮ ಪ್ರತ್ಯಕ್ಷಮಸದುತ್ಥಿತಂ ।
ಅಸತ್ಪ್ರತ್ಯಕ್ಷಮೇವೇತಿ ವಿದ್ಧಿ ಪ್ರತ್ಯಕ್ಷಮಂಗ ತತ್ ॥ ೧೯ ॥

ಅಹೋ ನು ಚಿತ್ರಾ ಮಾಯೇಯಂ ಪ್ರಾಕ್ಪ್ರತ್ಯಕ್ಷೇ ಪರೋಕ್ಷತಾ ।
ನಿರ್ಣೀತಾಸ್ಮಿಂಸ್ತ್ವನಧ್ಯಕ್ಷೇ ಪ್ರತ್ಯಕ್ಷಕಲನಾಗತಾ ॥ ೨೦ ॥

---

(ತರ್ಹಿ ಕಥಂ ಮನೋಜೀವಸ್ಯಾತಿವಾಹಿಕೋ ದೇಹ ಇತಿ ಪ್ರಾಗುಕ್ತಂ ತತ್ರಾಹ ಉದ್ಯದಿತಿ। ತತ್ಸತ್ತಾರೂಪಂ ಸರ್ಗೋದಯೇನ ತದಾಕಾರಮಿವೋದ್ಯತ್ ಸರ್ಗ ಗೋಚರಮಧ್ಯಕ್ಷಂ ಜೀವಸ್ಯ ಚಿದಾಭಾಸಾತ್ಮನಃ ಪ್ರಥಮಂ ಹಿರಣ್ಯಗರ್ಭರೂಪಂ ಸಮಷ್ಟರೂಪಮಾತಿವಾಹಿಕವಪುರ್ಭವತಿ । ತತ್ಪುನಃ ಸಮಷ್ಟಿ ಭಾವಸ್ಯಾಪಿ ದುರ್ಧಿಯಾ ವಿಸ್ಮರಣೇ ಅಧ್ಯೈವ ವ್ಯಷ್ಟಿತಾಂ ಗತಂ ತತ್ಸರ್ವ ಜನಪ್ರತ್ಯಕ್ಷಂ ಮನ ಇತಿ ಪ್ರಾಗುಕ್ತಮಿತ್ಯರ್ಥಃ॥—ತಾ. ಪ್ರ)

೧೮. ಮನಃ ಪ್ರತ್ಯಕ್ಷವನ್ನು ಯೋಗಿ ಪ್ರತ್ಯಕ್ಷವೆಂದೂ ಹೇಳುವರು. ಅದೂ ಆಕಾಶವೇ ! ಚಿತ್ತಿನ ರೂಪವೇ ಅನ್ಯತೆಯಾದಂತೆ ಕಾಣುವುದು.

(ತದಿತ್ಥಂ ಸ್ವಯಮೇವ ಚಿತೋ ರೂಪಂ ಸಮಷ್ಟಿರೂಪೇಣ ಯೋಗಿಪ್ರತ್ಯಕ್ಷಂ ಸರ್ವಜನ ಸಾಧಾರಣ್ಯೇನ ತು ಮನಃ ಪ್ರತ್ಯಕ್ಷಮಿತ್ಯಪ್ಯುಕ್ತಂ ॥ —ತಾ.ಪ್ರ)

೧೯. ಈಗ ನಡೆಯುತ್ತಿರುವುದು ಅದ್ಯತನವು ಎಂದು ಹೆಸರುಳ್ಳ ಪ್ರತ್ಯಕ್ಷವು ಅಸತ್ತಾಗಿಯೇ ಇರುವುದು. ಅಸತ್ತೇ ಪ್ರತ್ಯಕ್ಷವಾಗುವುದೆಂದು ತಿಳಿ. ಅದನ್ನೇ ಯೋಗಿ ಪ್ರತ್ಯಕ್ಷವೆಂದೂ ಹೇಳುವರು

(ತತ್ರ ಇದಮದ್ಯತನಂ ಮನಃಪ್ರತ್ಯಕ್ಷಮಾಧಿಭೌತಿಕ ದೇಹಾದಿಕಲ್ಪನಯಾ ಅತ್ಯಂತಾಸದ್ರೂಪೇಣೈವೋತ್ಥಿತಮಿತ್ಯಸತ್ ಪ್ರತ್ಯಕ್ಷಮೇವ ವಿದ್ಧಿ। ತದ್ಯೋಗಿ ಪ್ರತ್ಯಕ್ಷಮೇವ ಹೇ ಅಂಗ, ಸದ್ಯಾಥಾತ್ಮ್ಯಸ್ಫೂರ್ತೇರ್ಮುಖ್ಯಂ ಪ್ರತ್ಯಕ್ಷಂ॥—ತಾ. ಪ್ರ.)

೨೦. ಅಹಹಾ! ಈ ಮಾಯೆಯ ವಿಚಿತ್ರವನ್ನೇನು ಹೇಳೋಣ ಪ್ರತ್ಯಕ್ಷ

ಆತಿವಾಹಿಕದೇಹತ್ವಂ ಪ್ರತ್ಯಕ್ಷಂ ಪ್ರಥಮೋದಿತಂ ।
ಸತ್ಯಂ ಸರ್ವಗತಂ ವಿದ್ಧಿ ಮಾಯೈವ ತ್ವಾಧಿಭೌತಿಕಂ　　॥ ೩೧ ॥

ಅನುಭೂತಾಪಿ ನಾಸ್ತ್ಯೇವ ಹೇಮ್ನಃ ಕಟಕತಾ ಯಥಾ ।
ತಥಾತಿವಾಹಿಕಸ್ಯಾಧಿಭೌತಿಕತ್ವಂ ನ ವಿದ್ಯತೇ　　॥ ೩೨ ॥

ಭ್ರಮಃ ಅಭ್ರಮತಾಂ ಯಾತನುಭ್ರಮೋ ಭ್ರಮತಾಂ ಗತಂ ।
ವೇತ್ತಿ ಜೀವಃ ವಿಚಾರೇಣ ವಿನಾಹೋ ನು ವಿಮೂಢತಾ　　॥ ೩೩ ॥

ಕ್ಕಿಂತ ಮುಂಚೆ ಪರೋಕ್ಷವಾಗಿರುವುದು ಎಂದು ನಿರ್ಣಯವಾಗಿದ್ದರೂ ಅಧ್ಯಕ್ಷ ನಿಲ್ಲವಾಗಲು ಪ್ರತ್ಯಕ್ಷವಾಗುವುದು.

(ಕಥಂ ತರ್ಹಿ ಸರ್ವಜನಾನಾಂ ತತ್ರ ಪ್ರತ್ಯಕ್ಷೇ ಪರೋಕ್ಷತಾನುಭವಃ ಇತ ರತ್ರ ಚ ಪ್ರತ್ಯಕ್ಷತಾನುಭವ? ತತ್ರಾ? – ಆಹೋ? ಇತಿ? ತಾ.ಪ್ರ)

೩೧. ಆತಿವಾಹಿಕ ದೇಹವೆನ್ನುವುದು ಯಾವುದುಂಟೋ ಅದು ಮೊದಲು ಪ್ರತ್ಯಕ್ಷವಾದುದು. ಅದು ಸತ್ಯವು. ಸರ್ವಗತವು. ಆಧಿಭೌತಿಕವೆನ್ನುವುದು ಮಾಯೆಯು.

(ಪ್ರಥಮೋದಿತಮಿತಿ ಸೂಕ್ಷ್ಮ ಪೂರ್ವಕತ್ವಾತ್ ಸ್ಥೌಲ್ಯಾಧ್ಯಾಸಸ್ಯೇತ್ಯರ್ಥಃ। "ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ। ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದಗ್ನೇರಗ್ನಿತ್ವಂ ತ್ರೀಣಿ ರೂಪಾಣೀತ್ಯೇವ ಸತ್ಯಂ" ಇತಿ ಶ್ರುತೇಃ। ಸತ್ಯಂ ಸಮಷ್ಟಿ ಭಾವಾತ್ಸರ್ವಗತಂ ಮಾಯೈವಾನೃತಮೇವ—ತಾ ಪ್ರ.)

೩೨. ಚಿನ್ನದಿಂದಾದ ಕಟಕದ ಭಾವವು ಅನುಭವಕ್ಕೆ ಬಂದು ಪ್ರತ್ಯಕ್ಷವಾದರೂ ಪ್ರತ್ಯೇಕವಾಗಿ ಹೇಗೆ ಇಲ್ಲವೋ, ಹಾಗೆಯೇ ಆತಿವಾಹಿಕಕ್ಕೆ ಆಧಿಭೌತಿಕವು ಪ್ರತ್ಯಕ್ಷವಾದರೂ ವಾಸ್ತವವಾಗಿ ಪೃಥಕ್ಕಾಗಿ ಇಲ್ಲ.

೩೩. ಭ್ರಮವು ಅಭ್ರಮತೆಯನ್ನು ಅಭ್ರಮತೆಯು ಭ್ರಮತೆಯನ್ನು ಹೊಂದಿರುವುದು. ವಿಚಾರದಿಂದ ಜೀವನು ಇದನ್ನು ತಿಳಿಯುವನು. ವಿಚಾರವಿಲ್ಲವಾಗ ವಿಮೂಢನಾಗಿರುವನು.

ಆಧಿಭೌತಿಕದೇಹೋಽಯಂ ವಿಚಾರೇಣ ನ ಲಭ್ಯತೇ ।
ಆತಿವಾಹಿಕದೇಹಸ್ತು ಕಿಲ ಲೋಕದ್ವಯೇಽಕ್ಷಯಃ ॥ ೨೪ ॥

ಆಧಿಭೌತಿಕಚಿದ್ರೂಢಾ ಹ್ಯಾತಿವಾಹಿಕದೇಹಕೇ ।
ಮರೌ ಮರೀಚಿಕಾಸ್ವೇವ ಯಥಾ ಮಿಥ್ಯೈವ ವಾರಿಧೀಃ ॥ ೨೫ ॥

ಜಾತಾಧಿಭೌತಿಕೇ ಸಂವಿದಾತಿವಾಹಿಕಚಿತ್ಕ್ರಮೇ ।
ದೇಹದೃಷ್ಟಿವಶಾತ್ಪ್ರೌಢಾ ಸ್ಥಾಣೌ ಪುರುಷಧೀರಿವ ॥ ೨೬ ॥

ಶುಕ್ತೌ ರಜತತಾ ತಾಪೇ ಜಲತೇಂದೌ ಯಥಾ ದ್ವಿತಾ ।
ಆಧಿಭೌತಿಕತಾ ತದ್ವನ್ಮಾಯಯೈವಾತಿವಾಹಿಕೇ ॥ ೨೭ ॥

ಯದಸತ್ತತ್ಕೃತಂ ಸತ್ಯಂ ಯತ್ಸತ್ಯಂ ತದಸತ್ಕೃತಂ ।
ಅಹೋ ನು ಮೋಹಮಾಹಾತ್ಮ್ಯಂ ಜೀವಸ್ಯಾಸ್ಯಾವಿಚಾರಜಂ ॥ ೨೮ ॥

---

೨೪. ಆಧಿಭೌತಿಕ ದೇಹವೊಂದಿದೆಯೇ ಎಂದು ವಿಚಾರಮಾಡಿ ನೋಡಿದರೆ, ನಿಜವಾಗಿಯೂ ಇಲ್ಲ ಎಂಬುದು ತಿಳಿಯುವುದು ಆತಿವಾಹಿಕ ದೇಹವಾದರೋ ಲೋಕದ್ವಯದಲ್ಲೂ (ಇಹಪರಗಳೆರಡರಲ್ಲೂ) ಮುಕ್ತಿಯವರೆಗೂ ಅಕ್ಷಯವಾಗಿ, ಎಂದರೆ ಕ್ಷಯವಿಲ್ಲದೆ ಇರುವುದು.

೨೫. ಆತಿವಾಹಿಕ ದೇಹದಲ್ಲಿ ಆಧಿಭೌತಿಕವಾಗಿ ಚಿತ್ತೇ ರೂಢವಾಗುವುದು. ಮರುಭೂಮಿಯಲ್ಲಿ ಕಾಣಿಸುವ ಮರೀಚಿಕೆಯಲ್ಲಿ ಸುಳ್ಳುಸುಳ್ಳಾಗಿಯೇ ಸಮುದ್ರವು ಕಾಣಿಸುವುದಿಲ್ಲವೇ ಅದರಂತೆ !

೨೬. ಆತಿವಾಹಿಕದಲ್ಲಿರುವ ಚಿತ್ತು ಮುನ್ನಡೆ ನಡೆದು ಆಧಿಭೌತಿಕ ಸಂವಿತ್ತಾಗುವುದು. ದೇಹ ಬುದ್ಧಿಯಿಂದ ರೂಢವಾಗಿ ಮೋಟು ಮರವಲ್ಲಿ ಕಂಡ ಪುರುಷ ಬುದ್ಧಿಯಂತೆ ದೃಢವಾಗುವುದು

೨೭. ಶುಕ್ತಿಯಲ್ಲಿ ರಜತತೆಯೂ ತಾಪದಲ್ಲಿ ಜಲತೆಯೂ ಇಂದುವಿನಲ್ಲಿ ದ್ವಿತೆಯೂ ಕಾಣುವಂತೆ, ಆತಿವಾಹಿಕದಲ್ಲಿ ಮಾಯೆಯಿಂದ ಆದಿಭೌತಿಕತೆಯು ಕಾಣುವುದು

೨೮. ಯಾವುದು ಆಸತ್ತೋ ಅದರಿಂದ ಸತ್ಯವಾಗಿರುವುದು ; ಯಾವುದು

ಯೋಗಿಪ್ರತ್ಯಕ್ಷಮೇವಾಸ್ತಿ ಕಿಂಚಿದಸ್ತಿ ತು ಮಾನಸಂ ।
ಯಸ್ಮಾಲ್ಲೋಕದ್ವಯಾಚಾರಸ್ತಾಭ್ಯಾಮೇವ ಪ್ರಸಿಧ್ಯತಿ ॥ ೫೯ ॥

ಆದ್ಯಂ ಪ್ರತ್ಯಕ್ಷಮುತ್ಸೃಜ್ಯ ಯಃ ಸತ್ಯೇಽಸ್ಮಿನ್ಸ್ಥಿತಸ್ಥಿತಿಃ ।
ಪ್ರತ್ಯಕ್ಷೇ ಮೃಗತೃಷ್ಣಾಂಬು ಪೀತ್ವಾ ಸ ಸುಖಮಾಸ್ಥಿತಃ ॥ ೬೦ ॥

ಯತ್ಸುಖಂ ದುಃಖಮೇವಾಹುಃ ಕ್ಷಣನಾಶಾನುಭೂತಿಭಿಃ ।
ಅಕೃತ್ರಿಮಮನಾದ್ಯಂತಂ ಯತ್ಸುಖಂ ತತ್ಸುಖಂ ವಿದುಃ ॥ ೬೧ ॥

ಸತ್ಯವೋ ಅದು ಆಸತ್ತಿಸಿಂದ ಆಗಿರುವುದು ಅಹಹಾ! ಜೀವನ ಅವಿಚಾರ ದಿಂದ ಹುಟ್ಟಿರುವ ಮೋಹದ ಮಹಾತ್ಮ್ಯವನ್ನು ಏನು ಹೇಳೋಣ!

೫೯. ಯೋಗಿ ಪ್ರತ್ಯಕ್ಷವೇ ಮಾನಸ ಪ್ರತ್ಯಕ್ಷವೆನ್ನಿಸಿಕೊಳ್ಳುವುದು. ಅದ ರಿಂದಲೇ ಇಹಪರಗಳೆರಡರಲ್ಲಿಯೂ ಆಚಾರವು ರೂಢವಾಗಿರುವುದು.

(ಸ್ಫೂರ್ತಿಸ್ಪಂದನೇ ವ್ಯವಹಾರ ಸರ್ವಸ್ವಂ। ತೇ ಚ ಲೋಕದ್ವಯ ಸಾಧಾರಣ ತ್ವಾದಾತಿ ವಾಹಿಕ ದೇಹಸ್ಯೈವ ನಿಷ್ಕರ್ಷ ಪರ್ಯವಸ್ಯತ ಇತ್ಯಾಹ-ಯೋಗೀತಿ । ಮಾನಸಂ ಸ್ಪಂದನಮಿತಿಶೇಷಃ। ತಚ್ಚ ಪ್ರತ್ಯಕ್ಷಾಧೀನ ಸಿದ್ಧಿಕತ್ವಾತ್ ಕಿಂಚಿದಸ್ತಿ ನ ಪ್ರತ್ಯಕ್ಷ ಸಮಸತ್ತಾತಸ್ಯಾಸ್ತೀತ್ಯಸ್ಪಷ್ಟನೇವ ತದಪೀತಿ ಭಾವಃ ॥—ತಾ. ಪ್ರ.)

೬೦. ಆದರಿಂದ ಯೋಗಿ ಪ್ರತ್ಯಕ್ಷವೆಂಬ ಆದ್ಯ ಪ್ರತ್ಯಕ್ಷವನ್ನು ಬಿಟ್ಟು ಇಂದ್ರಿಯ ಗೋಚರವಾದ್ದರಿಂದ ಸತ್ಯವೆನ್ನಿಸಿಕೊಳ್ಳುವ ಇಂದ್ರಿಯ ಪ್ರತ್ಯಕ್ಷದಲ್ಲಿ ಯಾರೂ ಸ್ಥಿತಿ ಸ್ಥಿತಿಯಾಗುವನೋ ಅವನು ಮೃಗ ತೃಷ್ಣಾಂಬುವಿನಲ್ಲಿ ದಾಹ ವನ್ನು ಅಣಗಿಸಿಕೊಂಡು ಸುಖವಾಗಿರುವೆ ಎನ್ನುವವನಾಗುವನು.

(ತಥಾಚ ಸರ್ವಸಾಧಾರಣ ಪ್ರತ್ಯಕ್ಷಮಾತ್ರೇ ಸರ್ವಮನ್ಯದ್ವಿಹಾಯ ಯೋಗೀನ ಸ್ಥಿರತಾ ಕಾರ್ಯಾ ನ ಪಾಮರಜನಮಾತ್ರ ಪ್ರಸಿದ್ಧೇ ಐಹಿಕಮಾತ್ರೇ ಸ್ಥೂಲಾದಿ ಪ್ರತ್ಯಕ್ಷೇ ಇತ್ಯಾಶಯೇನಾಹ—ತಾ.ಪ್ರ.)

೬೧. ಸುಖವಾವುದೋ ಅದು ಒಂದು ಕ್ಷಣವಿದ್ದು ನಾಶವಾಗುವುದು ಎಂಬ ಅನುಭವವು ಪದೇ ಪದೇ ಬರುತ್ತದಾಗಿ ಅದನ್ನು ದುಃಖವೆನ್ನುವರು. ಅಕೃತ್ರಿ ಮವೂ ಆದಿ-ಅಂತವಿಲ್ಲದ್ದೂ ಯಾವುದೋ ಅದನ್ನೇ ಸುಖ ಸುಖ ಎನ್ನುವರು.

ಪ್ರತ್ಯಕ್ಷೇಣೈವಮಧ್ಯಕ್ಷಂ ಪ್ರತ್ಯಕ್ಷಂ ಪ್ರವಿಚಾರ್ಯತಾಂ ।
ಯದಾದ್ಯಂ ತತ್ಸದಧ್ಯಕ್ಷಂ ತತ್ಪ್ರತ್ಯಕ್ಷೇಣ ದೃಶ್ಯತಾಂ || ೩೨ ||

ಲೋಕತ್ರಯಾನುಭವದಂ ತ್ಯಕ್ತ್ವಾ ಪ್ರತ್ಯಕ್ಷಮೈಹಿಕಂ ।
ಮಾಯಾತ್ಮಕಂ 'ಯೋ ಗೃಹ್ಣಾತಿ ನಾಸ್ತಿ ಮೂಢತಮಸ್ತತಃ || ೩೩ ||

ಆತಿವಾಹಿಕಮೇವೈಷಾಂ ಭೂತಾನಾಂ ವಿದ್ಯತೇ ವಪುಃ ।
ಅತ್ರಾಧಿಭೌತಿಕವ್ಯಾಪ್ತಿರಸತ್ಯೈವ ಪಿಶಾಚಿಕಾ || ೩೪ ||

ಅಜಾತಸಂಕಲ್ಪಮಯಂ ಪ್ರತ್ಯಕ್ಷಂ ಸತ್ಕಥಂ ಭವೇತ್ ।
ಸ್ವಯಮೇವ ನ ಯತ್ಸತ್ಯಂ ತತ್ಸಾತ್ಯಕಾರ್ಯಕರಂ ಕಥಂ || ೩೫ ||

---

(ಏವಂ ಸುಖೇಽಪಿ ಸರ್ವಲೋಕ ಸಾಧಾರಣೇ ಯೋಗಿನಾಮೇವಾನುಭವ ಸಿದ್ಧೇ ಪರಮ ಪುರುಷಾರ್ಥತಾ ನ ಪಾಮರ ಜನ ಪ್ರಸಿದ್ಧೇ ಇತ್ಯಾಶಯೇನಾಹ– ಕ್ಷಣಮಾತ್ರೇಣ ನಾಶಾನುಭೂತಾಭಿರ್ದುಃಖಪರ್ಯವಸಿತಂ ಪ್ರಾಕ್ಚ ದುಃಖ ಸಹಸ್ರ ನಿಷ್ಪಾದಿತಂ ಯದ್ವಿಷಯ ಸುಖಂ ತದ್ದುಃಖಮೇವಾಹುರ್ವಿವೇಕಿನ ಇತ್ಯರ್ಥಃ—ತಾ. ಪ್ರ.)

೩೨. ಇಂದ್ರಿಯ ಗೋಚರವಾಗುವ ಪ್ರತ್ಯಕ್ಷವನ್ನು ಎದುರಿಗಿಟ್ಟುಕೊಂಡು ಚೆನ್ನಾಗಿ ವಿಚಾರಮಾಡಿ ನೋಡಿ. ಯಾವುದು ಆದ್ಯಪ್ರತ್ಯಕ್ಷವೋ ಅದು ಸತ್ಸ್ವರೂಪವಾಗಿರುವುದು. ಆದರಿಂದ ಅದನ್ನು ಮಾತ್ರ ಪ್ರತ್ಯಕ್ಷವೆಂದು ಅಂಗೀಕರಿಸಿ.

೩೩. ಲೋಕತ್ರಯದ ಅನುಭವವನ್ನು ಕೊಡುವ ಯೋಗಿ ಪ್ರತ್ಯಕ್ಷವನ್ನು ಬಿಟ್ಟು, ಮಾಯಾಮಯವಾದ ಐಹಿಕ ಪ್ರತ್ಯಕ್ಷವನ್ನು ಮಾತ್ರ ಗ್ರಹಿಸುವನೋ ಅವನಿಗಿಂತ ಮೂಢತಮನು ಇನ್ನೊಬ್ಬನಿಲ್ಲ.

೩೪. ಪ್ರಾಣಿಗಳೆಲ್ಲ ಆತಿವಾಹಿಕ ದೇಹವಿದ್ದೇ ಇರುವುದು ಅವರಲ್ಲಿ ಆದಿ ಭೌತಿಕ ವ್ಯಾಪ್ತಿಯು ಯಾವುದುಂಟೋ ಅದು ಅಸತ್ಯವಾದ ಪಿಶಾಚಿಕೆಯು.

೩೫. ಮಿಥ್ಯಾ ಸಂಕಲ್ಪದಿಂದ ಕೂಡಿರುವ ಪ್ರತ್ಯಕ್ಷವೆಂತು ಸತ್ ಆದೀತು ? ತಾನೇ ಸತ್ಯದಲ್ಲಿದ್ದು ಕಾರ್ಯಕಾರಿ ಎಂತಾದೀತು ?

ಯತ್ರ ಪ್ರತ್ಯಕ್ಷಮೇವಾಸದನ್ಯತ್ಕಿಂ ತತ್ರ ಸದ್ಭವೇತ್ ।
ಕ್ವ ತತ್ಸತ್ಯಂ ಭವೇದ್ವಸ್ತು ಯದಸಿದ್ಧೇನ ಸಾಧ್ಯತೇ ॥ ೩೬ ॥

ಪ್ರತ್ಯಕ್ಷ ಏವ ಭಾವತ್ವೇ ನಷ್ಟೇ ಕ್ವೇವಾನುಮಾದಯಃ ।
ಉಹ್ಯಂತೇ ವಾರಣಾ ಯತ್ರ ತತ್ರೋರ್ಣಾಯುಷು ಕಾ ಕಥಾ ॥ ೩೭ ॥

ಅತಃ ಪ್ರಮಾಣಸಂಸಿದ್ಧಂ ದೃಶ್ಯಂ ನಾಸ್ತ್ಯೇವ ಕುತ್ರಚಿತ್ ।
ಅನನ್ಯದಿದಮಸ್ತ್ಯೇವ ತತ್ತದ್ಬ್ರಹ್ಮ ಘನಂ ಘನಂ ॥ ೩೮ ॥

ಸ್ವಪ್ನೇ ದ್ರಷ್ಟುಃ ಖಮೇವಾದ್ರಿರ್ಗೃಹೇ ನಾನ್ಯಸ್ಯ ವೈ ಯಥಾ ।
ತಥಾ ತದ್ಭಾವನಾವತೋರಾವಯೋಃ ಸಾ ಶಿಲೈವ ಚಿತ್ ॥ ೩೯ ॥

---

೩೬. ಎಲ್ಲಿ ಪ್ರತ್ಯಕ್ಷವೇ ಅಸತ್ಯವೋ ಅಲ್ಲಿ ಇನ್ನು ಯಾವುದು ಸತ್ಯವಾದೀತು? ಅಸಿದ್ಧದಿಂದ ಸಾಧ್ಯವಾಗುವ ವಸ್ತುವು ಯಾವುದು ತಾನೇ ಸತ್ಯವಾದೀತು?

(ನನು ಚಕ್ಷುರಾದಿ ಪ್ರಮಾಣ ಪ್ರಸಾಧಿತಃ ಪ್ರಪಂಚಃ ಕಥಮುಪಲಪ್ಯತೇ ತತ್ರಾಹ–ಯತ್ರೇತಿ ಯೋಗಿ ಪ್ರತ್ಯಕ್ಷಬಾಧಿತತ್ವಾಚ್ಚಕ್ಷುರಾದೇರಪೀತಿ ಭಾವಃ॥ ತಾ. ಪ್ರ.)

೩೭. ಪ್ರತ್ಯಕ್ಷವೇ ಸತ್ಯವಲ್ಲ; ಎನ್ನಲು ಅನುಮಾನಾದಿಗಳು ಇನ್ನು ಉಳಿಯುವುದೆಲ್ಲಿ? ಎಲ್ಲಿ ಆನೆಗಳೇ ಕೊಚ್ಚಿಹೋಗುವುವೋ ಅಲ್ಲಿ ಕುರಿಗಳ ಮಾತೇನು?

೩೮. ಆದರಿಂದ ಪ್ರಮಾಣ ಸಂಸಿದ್ಧವಾದ ದೃಶ್ಯವು ಎಲ್ಲಿಯೂ ಇಲ್ಲವೇ ಇಲ್ಲ: ಅನನ್ಯವಾಗಿರುವ ಬ್ರಹ್ಮವೊಂದೇ ಘನಘನವಾಗಿ ತುಂಬಿರಲು, ಇರುವುದೆಲ್ಲವೂ ಬ್ರಹ್ಮವೇ!

೩೯. ಕನಸ್ಸಿನಲ್ಲಿ ಕನಸ್ಸು ಕಾಣುತ್ತಿರುವವನಿಗೆ ಆಕಾಶವೇ ಅದ್ರಿ, ಗೃಹಗಳಾಗಿ ಕಾಣುವುದಲ್ಲವೆ ಇನ್ನಿತರರಿಗೆ ಏನಾಗಿಯೂ ಕಾಣದಿರುವಂತೆ ತದ್ಭಾವನೆಯಿಂದ ಕೂಡಿರುವ ನನಗೂ ಆ ವಿದ್ಯಾಧರಿಗೂ ಚಿತ್ತೆ ಶಿಲೆಯಾಗಿ ಕಂಡಿತು.

ಅಯಂ ಶೈಲ ಇದಂ ವ್ಯೋಮ ಜಗದೇತದಿದಂ ತ್ವಹಂ ।
ಇತಿ ಚಿನ್ಮಯ ಆತ್ಮಾಂತಃ ಖಂ ಚಮತ್ಕುರುತೇ ಸ್ವಯಂ ॥ ೪೦ ॥

ಪಶ್ಯತ್ಯೇತತ್ಪ್ರಬುದ್ಧಾತ್ಮಾ ನಾಪ್ರಬುದ್ಧಃ ಕದಾಚನ ।
ಶ್ರೋತುಃ ಕಥಾರ್ಥಸಂವಿತ್ತಿರ್ನಾಶ್ರೋತುರ್ಭವತಿ ಕ್ವಚಿತ್ ॥ ೪೧ ॥

ಅಪ್ರಬುದ್ಧವಿತಿ ಭ್ರಾಂತಿರೇವೇಯಂ ಸತ್ಯತಾಂ ಗತಾ ।
ಕ್ಷೀಬಸ್ಯ ಸುಸ್ಥಿರಾ ಏವ ನೃತ್ಯಂತಿ ತರುಪರ್ವತಾಃ ॥ ೪೨ ॥

---

(ಸ್ವಪ್ನೇ ಅದ್ರಿದ್ರಷ್ಟುಃ ಪ್ರಸಿದ್ಧೋಽದ್ರಿಸ್ತದಾನೀಮಪಿ ಖಂ ಶೂನ್ಯ ಏವ। ಯತಸ್ತಸ್ಮಿನ್ನೇವ ಕಾಲೇ ಜಾಗ್ರತಃ ಸ್ವಪತೋವಾ ಅನ್ಯಸ್ಯ ಸೋಽದ್ರಿರ್ನಾಸ್ತಿ । ಯಥಾಽಯಂ ದೃಷ್ಟಾಂತಸ್ತಥಾ ಶಿಲಾಭಾವನವತೋಽರಾವಯೋರ್ದೃಶ್ಯಾಪಿ ಸಾ ಶಿಲಾ ಚಿದೇವೇತ್ಯರ್ಥಃ॥—ತಾ.ಪ್ರ.)

೪೦. ಇದು ಶೈಲ, ಇದು ವ್ಯೋಮ, ಇದು ಜಗತ್ತು, ಈ ನಾನು, ಎಂಬುದೆಲ್ಲವೂ ಚಿನ್ಮಯವಾದ ಆತ್ಮವೇ! ಆಕಾಶವು ತನ್ನೊಳಗೆ ತಾನೇ ಮಾಡಿದ ಚಮತ್ಕಾರವಿದು.

೪೧. ಇದೇ ಸತ್ಯವೆಂಬುದನ್ನು ಪ್ರಬುದ್ಧಾತ್ಮನು ಕಾಣಬಲ್ಲನು. ಅಪ್ರಬುದ್ಧನು ಕಾಣಲಾರನು. ಕೇಳಿದವನಿಗೆ ಕಥಾರ್ಥವು ತಿಳಿಯುವುದೇ ಹೊರತು ಕೇಳದಿದ್ದವನಿಗೆ ಕಥೆಯು ಎಂತು ತಿಳಿಯುವುದು ?

೪೨. ಹಾಗಾದರೆ ಅಪ್ರಬುದ್ಧವೆಂದರೇನು ? ಎಂದರೆ ಭ್ರಾಂತಿಯು ಸತ್ಯತೆಯಾಗಿರುವುದೇ ಅಪ್ರಬುದ್ಧತೆಯು ! ಚೆನ್ನಾಗಿ ಕುಡಿದವನಿಗೆ ಸುಸ್ಥಿರಗಳಾದ ತರು, ಪರ್ವತಗಳೂ ಕುಣಿಯುವಂತೆ ಕಾಣುವುದಲ್ಲದೆ ಇತರರಿಗೆಂತು ಕಂಡೀತು?

ಸರ್ವತ್ರಾಪ್ರತಿಹತಮೇಕರೂಪಬೋಧಂ ।
ಪ್ರತ್ಯಕ್ಷಂ ಶಿವಮನುಭೂಯ ಚಿತ್ಸ್ವರೂಪಂ ॥
ಪ್ರತ್ಯಕ್ಷಾಂತರಮಿಹ ಕೇವಲಂ ಶ್ರಯಂತೇ ।
ಯೇ ಮೂಢಾಸ್ತೃಣತನುಭಿಃ ಜಲ್ಪೈರಲಂ ತೈಃ ॥ ೪೩ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ದೃಶ್ಯಾನುಪಪತ್ತಿ ವರ್ಣನಂ" ನಾಮ
ಅಷ್ಟಷಷ್ಟಿತಮಃ ಸರ್ಗಃ

೪೩. ಎಲ್ಲೆಲ್ಲಿಯೂ ಶಿವನಾಗಿ ಏಕರೂಪವಾಗಿ ಬೋಧವಾಗುವ ಚಿತ್ಸ್ವರೂಪವು ಅಪ್ರತಿಹತವಾಗಿ ಪ್ರತ್ಯಕ್ಷವಾಗಿರುವುದನ್ನು ಕಂಡುಕೊಳ್ಳದೆ, ಕೇವಲ ತುಚ್ಛವಾದ ಪ್ರತ್ಯಕ್ಷಾಂತರವನ್ನು ಅಂಗೀಕರಿಸುವ ಮೂಢರು ತೃಣಪ್ರಾಯರು ಶಠರು. ಅವರ ಮಾತು ಸಾಕು

ಇಂತಿವು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ದೃಶ್ಯಾನುಪಪತ್ತಿ ವರ್ಣನ" ಎಂಬ
ಅರವತ್ತೆಂಟನೆಯ ಸರ್ಗವು.

## ಏಕೋನಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಜಗದಂಗಮನಾಭಾಸಮದೃಶ್ಯಂ ದೃಶ್ಯವತ್ಸ್ಥಿತಂ ।
ಪರಯಾ ದೃಶ್ಯತೇ ದೃಷ್ಟ್ಯಾ ತದ್ಬ್ರಹ್ಮೈವ ನಿರಾಮಯಂ ॥ ೧ ॥

ತತ್ರ ಶೈಲಸರಿತ್ಸ್ರೋತೋ ಲೋಕಾಲೋಕಾಂತರಮಾಭ್ರಮಾಃ ।
ಭಾಂತಿ ತೇ ಪರಮಾದರ್ಶೇ ಮಹಾವ್ಯೋಮನಿ ಬಿಂಬಿತಾಃ ॥ ೨ ॥

ಸಾ ಪ್ರವಿಷ್ಟಾ ತತಃ ಸರ್ಗಂ ತಮನರ್ಗಲಚೇಷ್ಟಿತಾ ।
ಅಹಮಪ್ಯವಿಶಂ ತತ್ರ ಸಂಕಲ್ಪಾತ್ಮಾ ತಯಾ ಸಹ ॥ ೩ ॥

---

## ಅರವತ್ತೊಂಭತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಜಗತ್ತು ಜಗತ್ತುಗಳು ಅಂಗಗಳಾಗಿರುವ ಬ್ರಹ್ಮಾಂಡವು ಯಾವು ದುಂಟೋ ಅದು ಅನಾಭಾಸವು. ಅದೃಶ್ಯವು; ಆದರೂ ದೃಶ್ಯವಾಗಿರುವಂತೆ ಕಾಣು ವುದು. ಉತ್ತಮವಾದ ಜ್ಞಾನ ದೃಷ್ಟಿಯನ್ನು ಅವಲಂಬಿಸಿ ನೋಡಿದರೆ, ದೃಶ್ಯ ವಾಗಿ ಕಾಣುವ ಈ ಸರ್ವವೂ ನಿರಾಮಯವಾದ ಬ್ರಹ್ಮವೇ!

೨. ಅಲ್ಲಿ ಶೈಲ, ಸರಿತ್ತು, ಲೋಕಾಲೋಕ, ಮೊದಲಾದ ಭ್ರಮೆಗಳೆಲ್ಲವೂ ಪರಮ ಆದರ್ಶವಾದ ಮಹಾಕಾಶದಲ್ಲಿ ಬಿಂಬಿತಗಳಾಗಿ ಕಾಣಿಸುವುವು.

೩. ಆನಂತರ ಆ ವಿದ್ಯಾಧರಿಯು ಬಾಗಿಲನ್ನು ತೆರೆದು ಆ ಸರ್ಗವನ್ನು ಪ್ರವೇಶಿಸಿದಳು: ನಾನೂ ಸಂಕಲ್ಪಾತ್ಮನಾಗಿ ಅವಳೊಡನೆ ಆ ಸರ್ಗವನ್ನು ಪ್ರವೇಶಿಸಿದೆನು.

ಯಾನವತ್ಸಾ ತತ್ರ ಸ್ವೈರಂ ಚ ಲೋಕಮಾಸಾದ್ಯ ಸೋದ್ಯಮಾ ।
ಉಪವಿಷ್ಟಾ ವಿರಂಚಸ್ಯ ಪುರಃ ಪರಮಶೋಭನಾ ॥ ೪ ॥

ಪತ್ಯುರಯಂ ಮುನಿಶಾರ್ದೂಲ ಪತಿರ್ಮೇ ಪಾತಿ ಮಾಮಿಮಾಂ ।
ವಿವಾಹಾರ್ಥಮನೇನಾಹಂ ಜನಿತಾ ಮನಸಾ ಪುರಾ ॥ ೫ ॥

ಪುರಾಣಃ ಪುರುಷೋಽಪ್ಯೇಷ ವಾಪ್ಯಸ್ಮದ್ಯ ಜರಾಗತಾಂ ।
ನ ವಿವಾಹಿತವಾಂಸ್ತೇನ ವಿರಾಗವಶಮಾಗತಾ ॥ ೬ ॥

ವಿರಾಗಮೇಷೋಽಪ್ಯಾಯಾತೋ ಗಂತುಮಿಚ್ಛತಿ ತತ್ಪದಂ ।
ಯತ್ರ ನ ದ್ರಷ್ಟೃತಾ ನೈವ ದೃಶ್ಯತಾ ನತು ಶೂನ್ಯತಾ ॥ ೭ ॥

ಮಹಾಪ್ರಲಯ ಆಸನ್ನೋ ಜಗತ್ಯಸ್ಮಿಂಶ್ಚ ಸಂಪ್ರತಿ ।
ಧ್ಯಾನಾನ್ನ ಚ ಚಲತ್ಯೇಷ ಶೈಲಮೌನಾದಿವಾಚಲಃ ॥ ೮ ॥

೪. ಪರಮ ಶೋಭನೆಯಾದ ಆ ವಿದ್ಯಾಧರಿಯು ಪ್ರಯತ್ನ ಪೂರ್ವಕವಾಗಿ ಆ ಸರ್ಗದಲ್ಲಿದ್ದ ಬ್ರಹ್ಮ ಲೋಕವನ್ನು ಪ್ರವೇಶಿಸಿ, ಆ ಲೋಕಾಧಿಪತಿಯಾದ ಬ್ರಹ್ಮನ ಎದುರಿಗೆ ಕುಳಿತುಕೊಂಡಳು.

೫. ಎಲೈ ಮುನೀಂದ್ರನೆ, ಈ ನನ್ನ ಗಂಡನು ನಿನ್ನೊಡನೆ ಮಾತನಾಡುವವನು ಈ ನನ್ನನ್ನು ಈತನೇ ಕಾಪಾಡುತ್ತಿರುವನು. ವಿವಾಹ ಮಾಡಿಕೊಳ್ಳಬೇಕೆಂದು ಈತನು ನನ್ನನ್ನು ಮನಸ್ಸಿನಿಂದ ಸೃಷ್ಟಿಸಿದನು.

೬. ಈತನು, ಪುರಾಣಪುರುಷನಾದರೂ ನಾನೂ ವೃದ್ಧೆಯಾಗಿದ್ದರೂ ಈತನು ಇನ್ನೂ ನನ್ನನ್ನು ಮದುವೆಯಾಗಿಲ್ಲವೆಂದು ನನಗೆ ವೈರಾಗ್ಯವು ಬಂದಿರುವುದು.

೭. ಈತನೂ ವೈರಾಗ್ಯ ಸಂಪನ್ನನಾಗಿರುವನು: ಈತನು ಎಲ್ಲಿ ದ್ರಷ್ಟೃವೂ ದೃಶ್ಯವೂ ಇಲ್ಲವೋ ಎಲ್ಲಿ ಶೂನ್ಯತೆಯೂ ಇಲ್ಲವೋ ಅಲ್ಲಿಗೆ ಹೋಗಬೇಕೆಂದಿರುವನು.

೮ ಈ ಜಗತ್ತಿನಲ್ಲಿ ಮಹಾ ಪ್ರಲಯವು ಆಸನ್ನವಾಗಿರುವುದು ಆದರೂ ಶೈಲಮೌನವಾಗಿದ್ದುಕೊಂಡು ಧ್ಯಾನದಿಂದ ಕದಲದೆ ಅಚಲನಾಗಿರುವನು.

ತಸ್ಮಾನ್ಮಾಮೇನಮಪಿ ಚ ಬೋಧಯಿತ್ವಾ ಮುನೀಶ್ವರ ।
ಆಮಹಾಕಲ್ಪಸರ್ಗಾದೌ ಪರಮೇ ಪಥಿ ಯೋಜಯ ॥ ೯ ॥

ಇತ್ಯುಕ್ತ್ವಾ ಮಾನುಸೌ ತಸ್ಯ ಬೋಧಾಯೇದಮುವಾಚ ಹ ।
ನಾಥಾಯಂ ಮುನಿನಾಥೋಽದ್ಯ ಸದ್ಮ ಸಂಪ್ರಾಪ್ತವಾನಿದಂ ॥ ೧೦ ॥

ಏಷೋಽನ್ಯಸ್ಮಿನ್ ಜಗದ್ಗೇಹೇ ಬ್ರಹ್ಮಣಸ್ತನಯೋ ಮುನಿಃ ।
ಪೂಜಯೈನಂ ಗೃಹಾಯಾತಂ ಗೃಹಸ್ಥಗೃಹಪೂಜಯಾ ॥ ೧೧ ॥

ಬುದ್ಧ್ಯ ತ್ವಾಮರ್ಘ್ಯಪಾದ್ಯೇನ ಪೂಜ್ಯತಾಂ ಮುನಿಪುಂಗವಃ ।
ಮಹನ್ಮಹತ್ಸಪರ್ಯಾಭಿರ್ಮಹಾತ್ಮಭ್ಯೋ ಹಿ ರೋಚತೇ ॥ ೧೨ ॥

---

೯. ಆದರಿಂದ, ಎಲೈ ಮುನೀಶ್ವರ, ಈತನಿಗೂ ನನಗೂ ಬೋಧವನ್ನು ಕೊಟ್ಟು, ಮಹಾಕಲ್ಪ ಪರ್ಯಂತವಾಗಿರುವ ಸರ್ಗಸರ್ಗದಲ್ಲಿಯೂ ನಮಗೆ (ಜಾ ನವು ನಿಶ್ಚಲವಾಗಿರುವಂತೆ) ಪರಮಪಥದಲ್ಲಿ ನಿಲ್ಲಿಸು.

(ಆಮಹಾಕಲ್ಪಂ ವೈಜ್ಞಾನಿಕ ಪ್ರಲಯಪರ್ಯಂತಂ ಯೇ ಯೇ ಪ್ರಸಿದ್ಧಾಃ ಸರ್ಗಾಃ ತೇಷಾಮಾದೌ ಮೂಲಭೂತೇ ಬ್ರಹ್ಮಾಖ್ಯೇ ಪಥಿ ಯೋಜಯ—ತಾ ಪ್ರ.)

೧೦. ನನ್ನನ್ನು ಕುರಿತು ಹೀಗೆ ಹೇಳಿ, ಆಕೆಯು, ಆತನನ್ನು ಎಚ್ಚರಗೊಳಿಸುವುದಕ್ಕೋಸ್ಕರ ಹೀಗೆ ಹೇಳಿದಳು: "ನಾಥ, ಈ ಮುನಿನಾಥನು (ನಮ್ಮ) ಮನೆಗೆ ಬಂದಿರುವನು."

೧೧. "ಈತನು ಇನ್ನೊಂದು ಬ್ರಹ್ಮಾಂಡದಲ್ಲಿ ಬ್ರಹ್ಮಮಾನಸ ಪುತ್ರನಾದ ಮುನೀಂದ್ರನು ಮನೆಗೆ ಬಂದಿರುವ ಈತನನ್ನು ಪೂಜಿಸು. ಗ್ರಹಸ್ಥನು ಹೇಗೆ ಗೌರವಿಸಬೇಕೋ ಹಾಗೆ ಗೌರವಿಸು."

೧೨. ಅರ್ಘ್ಯಪಾದ್ಯಗಳನ್ನು ಕೊಟ್ಟು ಈ ಮುನಿಪುಂಗವನನ್ನು ಪೂಜೆ ಮಾಡಿ ಗೌರವಿಸು. ಎಲೈ ಮಹಾಂತನೆ, ಮಹಾತ್ಮರಿಗೆ ಮಹಾಪೂಜೆಯನ್ನು ಒಪ್ಪಿಸುವುದು ನಿಮ್ಮಂಥವರಿಗೆ ತಕ್ಕುದು.

ತಯೇತ್ಯುಕ್ತೋ ಮಹಾಬುದ್ಧಿರ್ಬುಬುಧೇ ಸ ಸಮಾಧಿತಃ ।
ಸ್ವಸಂವಿತ್ತಿದ್ರವಾತ್ಮತ್ವಾದಾವರ್ತ ಇವ ವಾರಿಧೌ ॥ ೧೩ ॥

ಶನೈರುನ್ಮೀಲಯಾಮಾಸ ನಯನೇ ನಯಕೋವಿದಃ ।
ಮಧೌ ಶಿಶಿರಸಂಶಾಂತಾವವನೌ ಕುಸುಮೇ ಯಥಾ ॥ ೧೪ ॥

ಶನೈಃ ಪ್ರಕಟಯಾಮಾಸುಸ್ತಾನ್ಯಂಗಾನ್ಯಸ್ಯ ಸಂವಿದಂ ।
ಮಧುಪಲ್ಲವಜಾಲಾನಿ ನವಾನೀವ ನವಂ ರಸಂ ॥ ೧೫ ॥

ಸುರಸಿದ್ಧಾಪ್ಸರಃಸಂಘಾಃ ಸಮಾಜಗ್ಮುಃ ಸಮಂತತಃ ।
ಯಥಾ ಹಂಸಾಲಿನೋ ಲೋಲಾಃ ಪ್ರಾತರ್ವಿಕಸಿತಂ ಸರಃ ॥ ೧೬ ॥

ದದರ್ಶಾಸೌ ಪುರಃಪ್ರಾಪ್ತಂ ಮಾಂ ಚ ತಾಂ ಚ ವಿಲಾಸಿನೀಂ ।
ಉವಾಚಾಥ ವಚೋ ವೇಧಾಃ ಪ್ರಣವಸ್ವರಸುಂದರಂ ॥ ೧೭ ॥

---

೧೩. ಆಕೆಯು ಹೀಗೆ ಹೇಳಲು, ಆ ಮಹಾಮತಿಯು ಸಮಾಧಿಯಿಂದ ಬಹಿರ್ಮುಖನಾದನು. ತನ್ನ ದ್ರವದ ಬಲದಿಂದ ಸಮುದ್ರದಲ್ಲಿ ಸುಳಿಯಾಗುವ ನೀರಿನಂತೆ ಆತನು ಸ್ವಸಂವಿತ್ತಿನ ಬಲದಿಂದ ಎಚ್ಚರಗೊಂಡನು.

೧೪. ನಯವನ್ನು ಬಲ್ಲ ಆತನು ಮೆಲ್ಲಗೆ ಕಣ್ಣು ತೆರೆದನು. ಆಗ ಶಿಶಿರದಿಂದ ತಣ್ಣಗಾಗಿರುವ ನೆಲದಲ್ಲಿ ಮಧುಮಾಸವು ಪ್ರಾಪ್ತವಾಗಲು ಎರಡು ಕುಸುಮಗಳು ಅರಳುವಂತೆ ಆಯಿತು.

೧೫. ಮಧುಮಾಸದಲ್ಲಿ ಹೊಸ ಚಿಗುರುಗಳನ್ನು ಹೊಸ ರಸವು ಆತನ ಅಂಗಾಂಗಗಳಲ್ಲಿ ಸಂವಿತ್ತು ಪೂರ್ಣವಾಗಿ ಅವೆಲ್ಲ ವ್ಯಾಪಾರಪರಗಳಾದುವು.

೧೬. ಸುರ, ಸಿದ್ಧ, ಅಪ್ಸರೆಯರ ಸಂಘಗಳು ಸುತ್ತುಮುತ್ತಲಿಂದ ಬಂದರು. ಬೆಳಗಿನ ಹೊತ್ತು ಅರಳಿದ ಕಮಲಗಳುಳ್ಳ ಸರೋವರಕ್ಕೆ ಹಂಸಗಳ ಗುಂಪುಗಳು ಬಂದಹಾಗೆ ಆಯಿತು

೧೭. ಆ ಬ್ರಹ್ಮನು ಎದುರಿಗಿರುವ ನನ್ನನು ಆ ವಿಲಾಸಿಯನ್ನೂ ನೋಡಿ, ಪ್ರಣವಸ್ವರ ಸುಂದರವಾದ ವಾಕ್ಕಿನಿಂದ ಮಾತನಾಡಿದನು.

(ಪ್ರಣವಪೂರ್ವಕೈಃ ಸ್ವರೈಃ ಸುಂದರತರ ಯಥಾ ಸ್ಯಾತ್ತಥಾ—ತಾ. ಪ್ರ.)

ಅನ್ಯಜಗದ್ಬ್ರಹ್ಮೋವಾಚ —

ಕರಾಮಲಕವದ್ದೃಷ್ಟಸಂಸಾರಾಸಾರಸಾರ ಹೇ ।
ಜ್ಞಾನಾಮೃತಮಹಾಂಭೋದ ಮುನೇ ಸ್ವಾಗತಮಸ್ತು ತೇ ॥ ೧೮ ॥

ಪದವೀಮಸಿ ಸಂಪ್ರಾಪ್ತ ಇಮಾಮತಿದವೀಯಸೀಂ ।
ದೂರಾಧ್ವಸುಪರಿಶ್ರಾಂತ ಇದಮಾಸನಮಾಸ್ಯತಾಂ ॥ ೧೯ ॥

ಇತ್ಯುಕ್ತೇ ತೇನ ಭಗವನ್ನಭಿವಾದಯ ಇತ್ಯಹಂ ।
ವದನ್ಮಣಿಮಯೇ ಪೀಠೇ ನಿವಿಷ್ಟೋ ದೃಷ್ಟಿದರ್ಶಿತೇ ॥ ೨೦ ॥

ಅಥಾಮರರ್ಷಿಗಂಧರ್ವಮುನಿವಿದ್ಯಾಧರೋದಿತಾಃ ।
ಪ್ರಸ್ತುತಾಃ ಸ್ತುತಯಃ ಪೂಜಾ ನತಯಃ ಸ್ಥಿತಿನೀತಯಃ ॥ ೨೧ ॥

ತತೋ ಮುಹೂರ್ತಮಾತ್ರೇಣ ಸರ್ವಭೂತಗಣೋದಿತೇ ।
ಶಾಂತೇ ಪ್ರಣತಿಸಂರಂಭೇ ತಸ್ಯೋಕ್ತಂ ಬ್ರಹ್ಮಣೋ ಮಯಾ ॥ ೨೨ ॥

ಅನ್ಯ ಜಗದ್ಬ್ರಹ್ಮನು ಹೇಳಿದನು :—

೧೮ ಸಂಸಾರವೆಂಬ ಆಸಾರದಲ್ಲಿ ಸಾರಭೂತವಾದ ಆತ್ಮವನ್ನು ಕರತಲಾ ಮಲಕದಂತೆ ಕಂಡವನೆ, ಜ್ಞಾನಾಮೃತವನ್ನು ಕರೆಯುವ ಮಹಾಮೇಘ ಸ್ವರೂಪನೇ, ಮುನೀಂದ್ರನೇ, ನಿನಗೆ ಸ್ವಾಗತವು.

೧೯ ಬಹು ದೂರದಲ್ಲಿರುವ ಈ ಲೋಕಕ್ಕೆ ದಯಮಾಡಿದೆ. ಬಹು ದೂರ ದಿಂದ ಬಂದು ಆಯಾಸ ಪಟ್ಟಿರುವೆ. ಈ ಆಸನದಲ್ಲಿ ಕುಳಿತುಕೊ.

೨೦. ಆತನು ಹೀಗೆ ಹೇಳಲು, ನಾನೂ ಭಗರ್ವ, ಅಭಿವಾದನ ಮಾಡುವೆನು ಎಂದು ಹೇಳುತ್ತಾ ಆತನು ಕಣ್ಣಿನಿಂದ ತೋರಿಸಿದ ಮಣಿಮಯ ಪೀಠದಲ್ಲಿ ಕುಳಿತುಕೊಂಡೆನು.

೨೧. ಅನಂತರ ದೇವತೆಗಳು ಋಷಿಗಳು ಗಂಧರ್ವರು ಮುನಿಗಳು ವಿಧ್ಯಾ ಧರರು ಇವರೆಲ್ಲರೂ ಹೇಳಿದ ಸ್ತುತಿಗಳು ಒಪ್ಪಿಸಿದ ಪೂಜೆಗಳು ನಮಸ್ಕಾರಗಳು, ಇತರ ಆಚಾರಗಳ, ಎಲ್ಲವೂ ಆದವು

೨೨. ಒಂದು ಮುಹೂರ್ತದೊಳಗಾಗಿ ಸರ್ವ ಪ್ರಾಣಿಗಳು ಬಂದು ಪೂಜೆ

ಕಿಮಿದಂ ಭೂತಭವ್ಯೇಶ ಯದಿಯಂ ಮಾಮುಪಾಗತಾ ।
ವಕ್ತಿ ಜ್ಞಾನಗಿರಾಸ್ಮಾಂಸ್ತ್ವಂ ಬೋಧಯೇತಿ ಪ್ರಯತ್ನತಃ ॥ ೩೩ ॥

ಭವಾನ್ಭೂತೇಶ್ವರೋ ದೇವ ಸಕಲಜ್ಞಾನಪಾರಗಃ ।
ಇಯಂ ತು ಕಾಮಮೂರ್ಖಾ ಕಿಂ ಬ್ರೂತೇ ಬ್ರೂಹಿ ಜಗತ್ಪತೇ ॥ ೩೪ ॥

ಕಥಮೇಷಾ ತ್ವಯಾ ದೇವ ಜಾಯಾರ್ಥಂ ಜನಿತಾ ಸತೀ ।
ನೇಹ ಜಾಯಾಪದಂ ನೀತಾ ನೀತಾ ವಿರಸತಾಂ ಕಥಂ ॥ ೩೫ ॥

ಅನ್ಯಜಗದ್ಬ್ರಹ್ಮೋವಾಚ —

ಮುನೇ ಶೃಣು ಯಥಾವೃತ್ತಮಿದಂ ತೇ ಕಥಯಾಮ್ಯಹಂ ।
ಯಥಾವೃತ್ತಮಶೇಷೇಣ ಕಥನೀಯಂ ಯತಃ ಸತಾಂ ॥ ೩೬ ॥

---

ಯನ್ನು ಒಪ್ಪಿಸಿದುದದೆಲ್ಲ ಮುಗಿಯಿತು ಪ್ರಣಾಮ ಸಂರಂಭವೆಲ್ಲ ಶಾಂತವಾದ ಮೇಲೆ ಆ ಬ್ರಹ್ಮನಿಗೆ ನಾನು ಹೀಗೆ ಹೇಳಿದೆನು

೩೩. ಎಲೈ ಭೂತಭವ್ಯಗಳಿಗೆ ಈಶನಾಗಿರುವವನೇ, ಈಕೆಯು ಬಂದು ನನ್ನನ್ನು "ಜ್ಞಾನವಾಕ್ಯಗಳಿಂದ ನಮ್ಮನ್ನು ಬೋಧಗೊಳಿಸು" ಎಂದು ಪ್ರಯತ್ನಪೂರ್ವಕವಾಗಿ ಹೇಳುತ್ತಿರುವವಳಲ್ಲಾ ಇದೇನು ?

೩೪. ಎಲೈ ದೇವನೆ, ನೀನು ಭೂತೇಶ್ವರನು. ಸಕಲ ಜ್ಞಾನದ ಕೊನೆಯನ್ನು ಕಂಡವನು. ಈಕೆಯಾದರೂ ಕಾಮ ಮೂರ್ಖಳು. ಈಕೆಯು ಹೇಳುತ್ತಿರುವುದೇನು ಎಂಬುದನ್ನು, ಎಲೈ ಜಗತ್ಪತಿಯೇ ನೀನು ಹೇಳು.

೩೫ ನೀನು ಈಕೆಯನ್ನು ಜಾಯೆಯಾಗಲೆಂದು ಜನಿಸಿದೆಯಂತೆ ! ಆದರೆ ಆಕೆಗೆ ಜಾಯಾಪದವನ್ನು ಕರುಣಿಸಲಿಲ್ಲವಂತೆ ! ಅದರಿಂದ ಈಕೆಗೆ ವೈರಾಗ್ಯವು ಬಂತಂತೆ ! ಇದು ಹೇಗೆ ?

ಅನ್ಯ ಜಗದ್ಬ್ರಹ್ಮನು ಹೇಳಿದನು: —

೩೬. ಎಲೈ ಮುನೀಂದ್ರನೆ ಕೇಳು, ನಡೆದುದನ್ನೆಲ್ಲಾ ನಿನಗೆ ಹೇಳುವೆನು. ಎಲ್ಲವನ್ನೂ ಇದ್ದುದು ಇದ್ದಂತೆ ಸತ್ಪುರುಷರಿಗೆ ಹೇಳಬೇಕು.

ಅಸ್ತಿ ತಾವದಜಂ ಶಾಂತಮಜರಂ ಕಿಂಚಿದೇವ ಸತ್ ।
ತತಶ್ಚಿತ್ಕಚನಸ್ಯೈಕಾಂತರೂಪಿಣಃ ಕಚಿತೋಽಸ್ಮ್ಯಹಂ ॥ ೨೭ ॥

ಆಕಾಶರೂಪ ಏವಾಹಂ ಸ್ಥಿತ ಆತ್ಮನಿ ಸರ್ವದಾ ।
ಭವಿಷ್ಯತಿ ಸ್ಥಿತೇ ಸರ್ಗೇ ಸ್ವಯಂಭೂರಿತಿ ನಾಮ ಮೇ ॥ ೨೮ ॥

ವಸ್ತುತಸ್ತು ನ ಜಾತೋಽಸ್ಮಿ ನಚ ಪಶ್ಯಾಮಿ ಕಿಂಚನ ।
ಚಿದಾಕಾಶಶ್ಚಿದಾಕಾಶೇ ತಿಷ್ಠಾಮ್ಯಹಮನಾವೃತಃ ॥ ೨೯ ॥

ಯದಯಂ ತ್ವಂ ಮಮಾಹಂ ತೇ ಯದಿದಂ ಕಥನಂ ಮಿಥಃ ।
ತತ್ತರಂಗಸ್ತರಂಗಾಗ್ರೇ ರಣತೀವೇತಿ ಮೇ ಮತಿಃ ॥ ೩೦ ॥

———— ————

೨೭ ಅಜವೂ ಶಾಂತವೂ ಅಜರವೂ ಆದ ಒಂದು ಸತ್ಪದಾರ್ಥವಿದೆಯಲ್ಲಾ, ಆ ಚಿತ್ತಿನ ಕಚನದಿಂದ, ಏಕಾಂತದಲ್ಲಿ ನಾನು ಹುಟ್ಟಿದೆನು.

೨೮. ನಾನು ಆಕಾಶರೂಪನು. ಯಾವಾಗಲೂ ಆತ್ಮನಲ್ಲಿಯೇ ಇರುವೆನು. ಇನ್ನು ಮುಂದೆ ಬರುವ ಸರ್ಗದಲ್ಲಿ ನನ್ನನ್ನು ಸ್ವಯಂ ಭೂ ಎಂದು ಕರೆಯುವರು

೨೯ ಆದರೆ ವಾಸ್ತವ್ಯವಾಗಿ ನಾನು ಹುಟ್ಟಿದವನಲ್ಲ. ನನಗೆ ಏನೂ ಕಾಣು ವುದೂ ಇಲ್ಲ ಚಿದಾಕಾಶವಾಗಿ, ಯಾವ ಆವರಣವೂ ಇಲ್ಲದೆ ಚಿದಾಕಾಶದಲ್ಲಿಯೇ ನಾನು ಇರುವೆನು.

೩೦ ಈಕೆಯು, ನೀನು, ನಾನು, ನನ್ನದು, ನಿನ್ನದು, ಎಂಬ ಕಥನಗಳು ಉಂಟಲ್ಲವೇ ಇವೆಲ್ಲವೂ ತರಂಗವು ತರಂಗಾಗ್ರದಲ್ಲಿ ನರ್ತಿಸುವಂತೆ ಎಂದು ನನ್ನ ಅಭಿಪ್ರಾಯವು

(ತರ್ಹಿ ತತ್ವಪಿದೋಸ್ತಾವಯೋಃ ಪ್ರಶ್ನೋತ್ತರಾದಿ ವ್ಯವಹಾರಃ ಕೀದೃಶಸ್ತ ತ್ರಾಹ — ಯಥಾ ಏಕಏವ ಸಮುದ್ರೋಽಯಂತಸ್ತರಂಗಭೇದೈಃ ಖಂಡನ ಪರಸ್ಪ ರಾಘಾತೈರ್ಧ್ವನಿ ವೈಚಿತ್ರ್ಯಂ ದರ್ಶಯತಿ ತದ್ವದಿತಿ ಭಾವಃ — ತಾ ಪ್ರ)

ಏವಂರೂಪಸ್ಯ ಮೇ ಕಾಲವಶತೋಽವಿಶದಾಕೃತೇಃ ।
ಸಾ ಕುಮಾರ್ಯೂರ್ಜಿತಾ ಚಿದಾಭಾಸಮಾತ್ರಸ್ವಾಂತಃ ಸ್ವಭಾವತಃ ॥ ೩೧ ॥

ಮಮಾನನ್ಯಾ ತವಾನ್ಯಸ್ಯ ಚಾನ್ಯೇವೇಹ ವಿಭಾತಿ ಯಾ ।
ಸೋದಿತಾನುದಿತೇವಾಂತರ್ಮಮಾಹಮಿತಿ ವಾಸನಾ ॥ ೩೨ ॥

ಅನಾರತಸತ್ತಾನುದಿತಸ್ತ್ವಹಮಾತ್ಮಾತ್ಮನಿ ಸ್ಥಿತಃ ।
ಸ್ವಭಾವಾದಚ್ಯುತಾಕಾರಃ ಸ್ವಾತ್ಮಾರಾಮಃ ಸ್ವಯಂ ಪ್ರಭುಃ ॥ ೩೩ ॥

ತಸ್ಯಾ ಅಹಮಿತಿ ಭ್ರಾಂತೇರ್ವಾಸನಾಯಾ ಜಗತ್ಸ್ಥಿತೇಃ ।
ಸಂಪನ್ನೇಯಮಧಿಷ್ಠಾತೃದೇವತಾ ದೇಹರೂಪಿಣೀ ॥ ೩೪ ॥

೩೧. ಹೀಗಿರುವ ನನಗೆ ಕಾಲವಶವಾಗಿ, (ಎಲ್ಲೋ ಕೊಂಚ ವಿಸ್ಮರಣ ವಾದಾಗ) ಅವಿಶದಾಕೃತಿಯಾದಾಗ, ಚಿದಾಭಾಸ ಮಾತ್ರದ ಅಂತಃ ಸ್ವಭಾವಾನು ಗುಣವಾಗಿ ಆ ಕುಮಾರಿಯು ಜನಿಸಿದಳು.

೩೨. ಅವಳು ನನಗೆ ಅನನ್ಯಳು. ಬೇರೆಯಾದ ನಿನಗೆ ಅನ್ಯಳಾಗಿಯೇ ತೋರುವಳು. ಆದರೂ ನನ್ನೊಳಗೆ ಮಮ, ಅಹಂ, ಎಂಬ ವಾಸನೆಯು ಹುಟ್ಟಿ ದಾಗ ಇವಳು ಉದಿತಳಾಗಿದ್ದರೂ ಅನುದಿತಳೇ!

೩೩. ನಾನು ಅನಾರತಸತ್ತಾ ಆದುದರಿಂದ ಅನುದಿತನಾಗಿ ಆತ್ಮಸ್ವರೂಪನಾಗಿ ಆತ್ಮನಲ್ಲಿ ಇರುವೆನು. ಸ್ವಭಾವದಿಂದಲೇ ನಾನು ಅಚ್ಯುತಾಕಾರನು. ಸ್ವಾತ್ಮಾ ರಾಮನು: ಸ್ವಯಂ ಪ್ರಭುವು.

೩೪. ಆದರೆ ನಾನು ಬೇರೆಯೆಂಬ ಭ್ರಾಂತಿಯಿದ್ದು ಜಗತ್ಸ್ಥಿತಿ ವಾಸನಾ ಇರುವುದರಿಂದ ದೇಹರೂಪಿಣಿಯಾದ ಈ ಅಧಿಷ್ಠಾತೃದೇವತೆಯು ಹುಟ್ಟಿ ಕೊಂಡಳು.

(ಈದೃಶಾತ್ಮತ್ವತ್ತ ಇಯಂ ಕಥಮುತ್ಪನ್ನಾ ಕಾಚ ವಾ? ತತ್ರಾಹ-ತಸ್ಯೇತಿ । ಆ ಅಹಮಿತಿ ಭ್ರಾಂತೇಃ ।—ಪೂರ್ವಪೂರ್ವಾಹಂಕಾರ ಸಂಸ್ಕಾರ ಪ್ರಭವತ್ವಾತ್ ಸ್ಮೃತಿಕಲ್ಪಾಯಾ ಅಹಮಿತಿ ಭ್ರಾಂತೇರ್ಜಗತ್ಸ್ಥಿತೇರ್ವಾಸನಾಯಾಶ್ಚ ಅಧಿಷ್ಠಾತ್ರೀ ದೇವತಾ ಇಯಂ ಮತ್ಸಂಕಲ್ಪಾದ್ದೇಹರೂಪಿಣೀ ಸಂಪನ್ನೇತ್ಯರ್ಥಃ—ತಾ ಪ್ರ)

ವಾಸನಾಯಾ ಅಧಿಷ್ಠಾತೃದೇವತ್ಯೈವಮಿಯಂ ಸ್ಥಿತಾ ।
ನತು ಮೇ ಗೃಹಿಣೀ ನಾಪಿ ಗೃಹಿಣ್ಯರ್ಥೇನ ಸತ್ಕೃತಾ ॥ ೩೫ ॥

ಸ್ವವಾಸನಾವೇಶವಶೇನ ಭಾವಂ
ಗೃಹಿಣ್ಯಹಂ ಬ್ರಹ್ಮಣ ಇತ್ಯುಪೇತ್ಯ ।
ಏಷಾ ಸ್ವಯಂ ವ್ಯರ್ಥಮಿತಾತಿದುಃಖಂ
ಯಸ್ಮಾತ್ಕಿಲೈಷೈವ ಹಿ ವಾಸನಾಂತಃ ॥ ೩೬ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಸರ್ವಪ್ರಾಪ್ತಿ" ನಾಮ
ಏಕಸಪ್ತತಿತಮಃ ಸರ್ಗಃ

---

೩೫. ವಾಸನಾ ಬಲದಿಂದ ಇವಳು ಅಧಿಷ್ಠಾತೃದೇವತೆಯಾಗಿರುವಳು ಇವಳು ನನ್ನ ಗೃಹಿಣಿಯೂ ಅಲ್ಲ; ನಾನು ಇವಳನ್ನು ಗೃಹಿಣಿ ಯೆಂದು ಸತ್ಕರಿಸಲೂ ಇಲ್ಲ.

೩೬ ಸ್ವವಾಸನಾ ಆವೇಶ ಬಲದಿಂದ ಇವಳು ನಾನು ಬ್ರಹ್ಮನ ಗೃಹಿಣಿಯೆಂದು ಕೊಂಡಿರುವಳು. ಇವಳೂ ವಾಸನಾಗರ್ಭಳಾದ್ದರಿಂದ ತಾನಾಗಿ ಇಲ್ಲದ ದುಃಖ ವನ್ನು ಕಲ್ಪಿಸಿಕೊಂಡು ವ್ಯರ್ಥವಾಗಿ ಆಯಾಸ ಪಡುತ್ತಿರುವಳು.

(ಯಸ್ಮಾದೇಷೈವ ಅಂತಃ ಸರ್ವಜಗದ್ವಾಸನಾ ಅತೋ ಗೃಹಿಣ್ಯಹಮಿತಿ ಸ್ವಮನೀಷಯೈವ ಉಪೇತ್ಯ ವ್ಯರ್ಥಮತಿ ದುಃಖಮಿತಾಪ್ರಾಪ್ತಾ—ತಾ.ಪ್ರ.)

ಇ-ತಿಮ ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಸರ್ವಪ್ರಾಪ್ತಿ" ಎಂಬ
ಅರವತ್ತೊಂಭತ್ತನೆಯ ಸರ್ಗವು.

## ಸಪ್ತತಿತಮಃ ಸರ್ಗಃ

ಅಸ್ಯಜಗದ್ಬ್ರಹ್ಮೋವಾಚ:—

ಅಥಾಹಂ ಚಿನ್ಮಯಾಕಾಶಸ್ತ್ವನ್ಯಾಕಾಶಮಯೀಂ ಸ್ಥಿತಿಂ ।
ಪರಾಂ ಗ್ರಹೀತುಂ ವಾಂಛಾಮಿ ತೇನೇಹೋಽಪಸ್ಥಿತಃ ಕ್ಷಯಃ ॥ ೧ ॥

ಮಹಾಪ್ರಲಯಕಾಲೇಽಸ್ಮಿಂಸ್ತ್ಯಕ್ತುಮೇಷಾ ಮಯಾಧುನಾ ।
ಮುನೀಂದ್ರ ನೂನಮಾರಬ್ಧಾ ತೇನ ವೈರಸ್ಯಮಾಗತಾ ॥ ೨ ॥

---

## ಎಪ್ಪತ್ತನೆಯ ಸರ್ಗವು

ಅಸ್ಯ ಜಗದ್ಬ್ರಹ್ಮನು ಹೇಳಿದನು :—

೧. ಈಗ ನಾನು ಚಿನ್ಮಯಾಕಾಶನು; ಇರುವುದಕ್ಕಿಂತ ಉತ್ತಮವಾದ ಪರಮಾಕಾಶಮಯವಾದ ಸ್ಥಿತಿಯನ್ನು ಗ್ರಹಣಮಾಡಬೇಕೆಂದಿರುವೆನು. ಅದರಿಂದ ಈಗ ಇಲ್ಲಿರುವ ಸ್ಥಿತಿಯು ಕ್ಷಯವಾಗುತ್ತಿರುವುದು.

('ಕಥಮೇಷಾ ತ್ವಯಾ ಬ್ರಹ್ಮನ್ ಜಯಾರ್ಥಂ ಜಾನಿತಾ ಸತೀ ನೇಹ ಜಾಯಾಪದಂ ನೀತಾ। ಇತಿ ಪ್ರಶ್ನಸ್ಯ ಉತ್ತರ ಮುಕ್ತಂ ಇದಾನೀಂ 'ನೀತಾ ವಿರಸತಾಂ ಕಥಂ' ಇತಿ ಪ್ರಶ್ನಸ್ಯೋತ್ತರಂ ವಕ್ತುಮಾರಭತೇ—ಅಥೇತ್ಯಾದಿನಾ। ಅಥ ಸ್ವಸಂಕಲ್ಪಕಲ್ಪಿತದ್ವಿಪರಾರ್ಧಾಯುಃ ಪ್ರಮಾಣಾದನಂತರಂ ಚಿನ್ಮಯಃ ಚಿದ್ವಿವರ್ತರೂಪೋ ಯಶ್ಚಿತ್ತಾಕಾಶಸ್ತದ್ರೂಪೋಽಹಂ ಪರಾಂ ನಿರತಿಶಯಾನಂದರೂಪಾಮನ್ಯಾಕಾಶಮಯೀಂ ಬ್ರಹ್ಮಾಕಾಶಾತ್ಮಿಕಾಂ ಕೈವಲ್ಯಸ್ಥಿತಿಂ। ತೇನ ಹೇತುನಾ ಇಹ ಮದ್ವಾಸನಾಕಲ್ಪಿತೇ ಜಗತಿ ಕ್ಷಯೋ ನಿತ್ಯೋ ನೈಮಿತ್ತಿಕೋ ದೈನಂದಿನ ಆತ್ಯಂತಿಕಶ್ಚೇತಿ ಪುರಾಣ ಪ್ರಸಿದ್ಧಶ್ಚತುರ್ವಿಧೋಽಪಿ ಪ್ರಲಯ ಉಪಸ್ಥಿತಃ"— ತಾ. ಪ್ರ.)

೨. ಮಹಾ ಪ್ರಲಯವಾಗುವ ಈ ಕಾಲದಲ್ಲಿ, ಎಲೈ · ನಾನು ಇವಳನ್ನು ಬಿಡಲು ಆರಂಭಿಸಿರುವೆನು. ಆದರಿಂದ ಇವಳಿಗೆ ವೈರಸ್ಯವು ಬಂದಿರುವುದು.

ಅಕಾಶತ್ವಾದ್ಯದಾದ್ಯೋಽಯಂ ಪರಾಕಾಶೋ ಭವಾಮ್ಯಹಂ ।
ತದಾ ಮಹಾಪ್ರಲಯತಾ ವಾಸನಾಯಾಶ್ಚ ಸಂಕ್ಷಯಃ ॥ ೩ ॥

ತೇನೈಷಾ ವಿರಸೀಭೂತಾ ಮನ್ಮಾರ್ಗಂ ಪರಿಧಾವತಿ ।
ನಾನುಗಚ್ಛತಿ ಕೋ ನಾಮ ನಿರ್ಮಾತಾರಮುದಾರಧೀಃ ॥ ೪ ॥

ಇಹಾದ್ಯಾಯಂ ಕಲೇರಂತಶ್ಚತುರ್ಯುಗವಿಪರ್ಯಯಃ ।
ಪ್ರಜಾಮನ್ವಿಂದ್ರದೇವಾನಾಮದ್ಯೈವಾಂತೋಽಯಮಾಗತಃ ॥ ೫ ॥

ಅದ್ಯೈವ ಚಾಯಂ ಕಲ್ಪಾಂತೋ ಮಹಾಕಲ್ಪಾಂತ ಏವ ಚ ।
ಮಮಾಯಂ ವಾಸನಾಂತೋಽದ್ಯ ದೇಹವ್ಯೋಮಾಂತ ಏವ ಚ ॥ ೬ ॥

ತೇನೇಯಂ ವಾಸನಾ ಬ್ರಹ್ಮನ್ ಕ್ಷಯಂ ಗಂತುಂ ಸಮುದ್ಯತಾ ।
ಕ್ವೇವ ಪದ್ಮಾಕರಾಶೋಷೇ ಗಂಧಲೇಖಾವತಿಷ್ಠತಾಂ ॥ ೭

---

೩. ಚಿತ್ತಾಕಾಶನಾಗಿರುವ ನಾನು ಈಗ ಈ ಚಿತ್ತಾಕಾಶವನ್ನು ಬಿಟ್ಟು ಬ್ರಹ್ಮಾಕಾಶವಾಗಬೇಕೆಂದಿರುವೆನು. ಅದರಿಂದ ವಾಸನಾ ಸಂಕ್ಷಯವಾಗುತ್ತಿರುವುದು ಮಹಾ ಪ್ರಲಯವಾಗಲಿರುವುದು

೪. ಅದರಿಂದ, ಇವಳೂ ನನ್ನ ಮಾರ್ಗವನ್ನೇ ಹಿಡಿಯಬೇಕಾಗಿ ಬಂದು ವಿರಸಳಾಗುತ್ತಿರುವಳು. ಯಾವ ಉದಾರ ಬುದ್ಧಿಯು ತನ್ನನ್ನು ನಿರ್ಮಿಸಿದವನ ಬೆನ್ನುಹಿಡಿದು ಹೋಗುವುದಿಲ್ಲ.

೫. ಈಗ ಇಲ್ಲಿ ಕಲಿಯುಗವು ಮುಗಿದು ಚತುರ್ಯುಗವು ಮರಳಬೇಕಾಗಿರುವುದು. ಪ್ರಜೆಗಳಿಗೂ ಇಂದ್ರಾದಿದೇವತೆಗಳಿಗೂ ಅಂತ್ಯಕಾಲವು ಬಂದಿರುವುದು.

೬. ಈಗಲೇ ಕಲ್ಪಾಂತವೂ ಮಹಾ ಕಲ್ಪಾಂತವೂ ಬಂದಿರುವುದು: ನನಗೆ ವಾಸನಾಂತವೂ ದೇಹಾಕಾಶಾಂತವೂ ಒದಗಿರುವುದು.

೭. ಅದರಿಂದ, ಎಲೈ ಬ್ರಹ್ಮನೇ, ಈ ವಾಸನಾ ಕ್ಷಯವಾಗುವುದಕ್ಕೆ ಆರಂಭವಾಗಿರುವುದು ಪದ್ಮಸರೋವರವೇ ಒಣಗಿ ಹೋದರೆ ಪದ್ಮ ಗಂಧವು ಉಳಿಯುವುದು ಹೇಗೆ ?

ಯಥಾ ಜಡಾಬ್ಧೇರ್ಜಡಯಾ ಜಾಯತೇ ಲಹರೀ ಚಲಾ ।
ವಾಸನಾಯಾಸ್ತಥೈವೇಚ್ಛಾ ಸಮುದೇತ್ಯಕಾರಣಂ ॥ ೮ ॥

ಅಧಿವಾಸಿತದೇಹಾಯಾ ವಾಸನಾಯಾಃ ಸ್ವಭಾವತಃ ।
ಅಸ್ಯಾ ಆತ್ಮಾವಲೋಕೇಚ್ಛಾ ಸ್ವಯಮೇವೋಪಜಾಯತೇ ॥ ೯ ॥

ಆತ್ಮತತ್ತ್ವಂ ಸು ಪಶ್ಯಂತ್ಯಾ ಧಾರಣಾಭ್ಯಾಸಯೋಗತಃ ।
ದೃಷ್ಟೋಽನಯಾ ಭವತ್ಸರ್ಗೋ ವರ್ಗವ್ಯಗ್ರನಿರರ್ಗಲಃ ॥ ೧೦ ॥

ಅನಯಾಂಬರಸಂಚಾರಪರಯಾದ್ರಿಶಿರಃಶಿಲಾ ।
ದೃಷ್ಟಾ ಸ್ವಜಗದಾಧಾರಭೂತಾಸ್ಯಾಕಂ ತು ಸ್ವಾತ್ಮಿಕಾ ॥ ೧೧ ॥

ಏಕದ್ಯಸ್ಮಿನ್ ಜಗದ್ಯತ್ರ ತದ್ವ್ಯಪಶ್ಯತ್ತ್ವಂ ಜಗದ್ಗಿರೌ ।
ಅಸ್ಯಜ್ಜಗತ್ಪದಾರ್ಥೇಷು ಸಂತ್ಯನ್ಯಾನಿ ಜಗಂತ್ಯಪಿ ॥ ೧೨ ॥

---

೮. ನಿಂತಿರುವ ನೀರಿನ ಸಮುದ್ರದ ಜಡತೆಯಿಂದ ಚಲಿಸುತ್ತಿರುವ ತರಂಗಮಾಲೆಯು ಜನಿಸುವಂತೆ, ವಾಸನಾ ಜಡದ ಇಚ್ಛೆಯು, ಕಾರಣವಿಲ್ಲದೆಯೇ ಹುಟ್ಟುವುದು.

೯. ವಾಸನಾ ಬಲದಿಂದ ಅಧಿವಾಸಿತಳಾಗಿ ಹುಟ್ಟಿದ ಇವಳಿಗೆ (ವಾಸನಾಸ್ವಭಾವದಿಂದ) ಆತ್ಮಾವಲೋಕನೇಚ್ಛೆಯು ಸ್ವಯಂ, ಸಹಜವಾಗಿ ತಲೆದೋರಿರುವುದು.

೧೦. ಇವಳು ಧಾರಣಾಭ್ಯಾಸ ಯೋಗವನ್ನು ಬಲ್ಲವಳು. ಇವಳಿಗೆ ಆತ್ಮತತ್ತ್ವವನ್ನು ದರ್ಶನ ಮಾಡಬೇಕು ಎನ್ನಿಸಿತು. ಆಗ ಧರ್ಮಾರ್ಥ ಕಾಮಮೋಕ್ಷಗಳೆಂಬ ಚತುರ್ವರ್ಗಗಳಲ್ಲಿ ಅಡ್ಡಿಯಿಲ್ಲದೆ ವ್ಯವಹರಿಸುವ ನಿಮ್ಮ ಸರ್ಗವು ದೃಗ್ಗೋಚರವಾಯಿತು.

೧೧. ಹಾಗೆಯೇ ಆಕಾಶ ಸಂಚಾರ ಮಾಡಬಲ್ಲ ಈಕೆಯು, ನಮ್ಮ ಸರ್ಗಕ್ಕೆ ಆಧಾರಭೂತವೂ, ಆಕಾಶಾತ್ಮಿಕವೂ, ಆದ ಪರ್ವತ ಶೃಂಗ ಶಿಲೆಯನ್ನು ಕಂಡಳು.

೧೨. ಜಗದ್ಗಿರಿಯಲ್ಲಿ ಜಗತ್ತನ್ನು ಹೊತ್ತಿರುವ ಬಂಡೆಗಳುಂಟಲ್ಲವೆ? ಹಾಗೆಯೇ ನಮ್ಮ ಜಗತ್ತುಗಳಲ್ಲಿಯೂ ಇನ್ನೂ ಬೇರೆ ಬೇರೆ ಜಗತ್ತುಗಳೂ ಇರುವುವು.

ವಯಂ ತಾನಿ ನ ಪಶ್ಯಾಮೋ ಭೇದದೃಷ್ಟ್ಯಾ ಸ್ಥಿತಾ ಇಮೇ ।
ಬೋಧೈಕತಾಂ ಗತಾಸ್ತ್ವಾಶು ಪಶ್ಯಾಮಸ್ತಾನಿ ವೀಕ್ಷಣಾತ್ ॥ ೧೩ ॥

ಘಟೇ ಪಟೇ ವಟೇ ಕುಡ್ಯೇ ಖೇಽನಲೇಽಂಭಸಿ ತೇಜಸಿ ।
ಜಗಂತಿ ಸಂತಿ ಸರ್ವತ್ರ ಶಿಲಾಯಾಮಿವ ಸರ್ವದಾ ॥ ೧೪ ॥

ಜಗನ್ನಾಮ ಮುಧಾ ಭ್ರಾಂತಿಃ ಕಿಲ ಸ್ವಪ್ನಪುರೋಪಮಾ ।
ಮಿಥ್ಯೈವೇಯಂ ಕ್ವ ನಾಮಾಸೌ ಚಿದ್ರೂಪಾಸ್ತ್ಯಥ ನಾಸ್ತಿ ಚ ॥ ೧೫ ॥

ಪರಿಜ್ಞಾತಾ ಸತೀ ಯೇಷಾಮೇಷಾ ಚಿನ್ನಭಸೈಕತಾಂ ।
ಗತಾ ತೇ ನ ವಿಮುಹ್ಯಂತಿ ಶಿಷ್ಟಾಸ್ತು ಭ್ರಮಭಾಜನಂ ॥ ೧೬ ॥

---

೧೩. ಭೇದದೃಷ್ಟಿಯಲ್ಲಿ ಇರುವ ನಾವು ಅವನ್ನು ಕಾಣೆವು. ಬೋಧೈಕತೆಯನ್ನು ಪಡೆದವರಾದರೆ, ಆ ಕೂಡಲೇ ನೋಡಿದರೆ ಸಾಕು ಅವುಗಳನ್ನು ನೋಡುವೆವು.

(ಭೇದದೃಷ್ಟ್ಯಾ ವ್ಯುತ್ಥಾನದಶಾಯಾಂ ಸ್ಥಿತಾ ವಯಂ ನ ಪಶ್ಯಾಮಃ। ಸಮಾಧಿನಾ ಬೋಧೈಕತಾಂ ಗತಾಸ್ತು ಯೋಗದೃಶಾ ವೀಕ್ಷಣಾತ್ಪಶ್ಯಾಮ ಏವ— ತಾ. ಪ್ರ.

೧೪. ಘಟದಲ್ಲಿ, ಪಟದಲ್ಲಿ, ವಟದಲ್ಲಿ, ಕುಡ್ಯದಲ್ಲಿ, ಆಕಾಶದಲ್ಲಿ, ಅಗ್ನಿಯಲ್ಲಿ, ಜಲದಲ್ಲಿ, ತೇಜಸ್ಸಿನಲ್ಲಿ ಕೂಡ ಜಗತ್ತುಗಳು ಈ ಶಿಲೆಯಲ್ಲಿರುವಂತೆ ಎಲ್ಲೆಲ್ಲೂ ಯಾವಾಗಲೂ ಇರುವುವು.

೧೫. ಜಗತ್ತೆಂಬ ಎನ್ನುವಿಕೆಯು ವೃಥಾ ಭ್ರಾಂತಿಯು (ಅದು ಇದ್ದರೂ) ಸ್ವಪ್ನ ಪುರದಂತೆಯೇ ಸರಿ. ಮಿಥ್ಯೆಯೇ ಆಗಿರುವ ಈ ಜಗತ್ತು ಎನ್ನುವುದೇ ? ಇದು ಇರುವುದಾದರೆ ಚಿದ್ರೂಪವಾಗಿ ಇದೆ. ಇಲ್ಲದಿದ್ದರೆ ಇಲ್ಲವೇ ಇಲ್ಲ.

೧೬. ಈ ಚಿದಾಕಾಶದ ಐಕ್ಯತೆಯನ್ನು ಯಾರು ಬಲ್ಲರೋ ಅವರು ವಿಮೋಹವನ್ನು ಹೊಂದುವುದಿಲ್ಲ. ಉಳಿದವರು ಭ್ರಮವನ್ನು ಬಿಡಲಾರರು.

ಅಥಾನ್ಯಧಾರಣಾಭ್ಯಾಸಾತ್ಸ್ವವಿರಾಗವಶೋದಿತಂ ।
ಸಾಧಯಂತ್ಯಾರ್ಥಸಾತ್ಮ್ಯಯಂ ದೃಷ್ಟಸ್ತ್ವಮನಯಾ ಮುನೇ ॥ ೧೭ ॥

ಇತಿ ಮಾಯೇವ ದುಷ್ಪಾರಾ ಚಿಚ್ಛಕ್ತಿಃ ಪರಿಜೃಂಭತೇ ।
ಇತ್ಥಮಾದ್ಯಂತರಹಿತಾ ಬ್ರಾಹ್ಮೀ ಶಕ್ತಿರನಾಮಯಾ ॥ ೧೮ ॥

---

೧೭. ಈಕೆಯು ವಾಸನಾತಾನವಜನ್ಯವಾದ ತನ್ನ ವೈರಾಗ್ಯ ಬಲದಿಂದ ಅನ್ಯಧಾರಣಾಭ್ಯಾಸವನ್ನು ಮಾಡಿದಳು. ಆಗ ಅವಳು ತನ್ನ ಗುರಿಯನ್ನು ಸಾಧಿಸಬೇಕೆಂದು ಹುಡುಕಿದಾಗ, ಎಲೈ ಮುನೀಂದ್ರನೆ ನೀನು ದೃಗ್ಗೋಚರನಾದೆ.

("ತ್ರಿಮುಂದಂ ಭೂತಭವ್ಯೇಶಯದಿಯಂ ಮಾಮುಪಾಗತಾ" ಇತಿ ಯತ್ಸ್ವಸಮೀಪಾಗಮನ ಸಾಮರ್ಥ್ಯ ಕಾರಣಂ ಪೃಷ್ಟಂ ತಸ್ಯೋತ್ತರಮಾಹ—ಅಥೇತಿ । ಅಥ ಪ್ರಾಗುಕ್ತ ನಿರ್ವೇದ ಪ್ರಾಪ್ತ್ಯನಂತರಂ ಸ್ವವಿರಾಗವಶಾದುದಿತಮಾತ್ಮ್ಯಯಂ ಸ್ವಾಭಿಲಷಿತ ಮಾತ್ಮಜ್ಞಾನಾನುಕೂಲಂ ಚ ಗುರೂಪಸದನ ಶ್ರವಣಮನನಾದ್ಯರ್ಥಂ ತ್ವದುಪದೇಶಾತ್ಸಾಧಯಂತ್ಯಾ ಸಾಧಯಿತುಮಿಚ್ಛಂತ್ಯಾ ಅನಯಾ ಅನ್ಯಾಸಾಂ ಪ್ರಾಗುಕ್ತ ಜಗತ್ಸರ್ವದರ್ಶನ ಹೇತುಧಾರಣಾ ವ್ಯತಿರಿಕ್ತಾನಾಂ ಖೇಚರಸಿದ್ಧಿ ಬ್ರಹ್ಮಾಂಡಾಂತರ ಸಂಚಾರ ಪರಮನಃ ಕಲ್ಪಿತ ಸೂಕ್ಷ್ಮಾರ್ಥಾನು ಪ್ರವೇಶ ಸಿದ್ಧ ಸಂದರ್ಶನ ಸಂಭಾಷಣಾದಿ ಸಿದ್ಧಿ ಹೇತುನಾಂ ಚೂಡಾಲೋಪಾಖ್ಯಾನೇ ಧಾರಣಾ ವಿಶೇಷಾಣಾಮಭ್ಯಾಸಾತ್ ತ್ವತ್ಸಂಕಲ್ಪಕಲ್ಪಿತಂ ತ್ವತ್ಸಮಾಧಿಸ್ಥಾನಂ ಪರಿಜ್ಞಾಯ ತತ್ರ ಗತಯಾ ಅನಯಾ ಅಂತರ್ಹಿತೋಽಪಿ ತ್ವಂ ದೃಷ್ಟ ಇತ್ಯರ್ಥಃ"—ತಾ.ಪ್ರ.)

೧೮. ಹೀಗೆ ಚಿಚ್ಛಕ್ತಿಯು, ದುಷ್ಪಾರವಾದ ಮಾಯೆಯಾಗಿ ಎಲ್ಲೆಲ್ಲೂ ವಿಜೃಂಭಿಸುತ್ತಿರುವುದು. ಬ್ರಾಹ್ಮೀ ಶಕ್ತಿಯು ಅನಾಮಯವಾಗಿ (ಅಡ್ಡಿ ಆತಂಕಗಳಿಲ್ಲದೆ) ಆದ್ಯಂತರಹಿತವಾಗಿ ಹರಡಿರುವುದು.

(ಇತಿ ವರ್ಣಿತ ಪ್ರಕಾರೇಣ ಜೀವಚಿಚ್ಛಕ್ತಿರವಿದ್ಯಾ ಐಂದ್ರಜಾಲಿಕಮಾಯೇವ ಪರಿಜಂಭೃತೇ। ಬ್ರಾಹ್ಮೀಚ ಮಾಯಾಶಕ್ತಿ ಅತ್ಥಮೇವ ಪರಿಜಂಭೃತೇ। ಸಾತು ವಿದ್ಯಾ, ನಿರಸ್ತಾವರಣಶಕ್ತಿತ್ವಾದನಾಮಯೇತಿ ವಿಶೇಷ ಇತ್ಯರ್ಥಃ। ಅಥವಾ ಪೂರ್ವಾರ್ಧೇನ ಮಾಯೇವ ಮಾಯಿಕೋಪಾಧೀನನುಸರಂತೀ ಜೀವಶಕ್ತಿರಾವಿ

ಪ್ರವರ್ತಂತೇ ನಿವರ್ತಂತೇ ನೇಹ ಕಾರ್ಯಾಣಿ ಕಾನಿಚಿತ್ ।
ದ್ರವ್ಯಕಾಲಕ್ರಿಯಾದ್ಯೋತಾ ಚಿತಿಸ್ತಪತಿ ಕೇವಲಂ ॥ ೧೯ ॥

ದೇಶಕಾಲಕ್ರಿಯಾದ್ರವ್ಯಮನೋಬುದ್ಧ್ಯಾದಿಕಂ ತ್ವಿದಂ ।
ಚಿಚ್ಛಿಲಾಂಗಕಮೇವ್ವೈಕಂ ವಿದ್ಧ್ಯನಸ್ತಮಯೋದಯಂ ॥ ೨೦ ॥

ಚಿದೇವೇಯಂ ಶಿಲಾಕಾರಮುಪತಿಷ್ಠತಿ ಬಿಭ್ರತೀ ।
ಅಂಗಮಸ್ಯಾ ಜಗಜ್ಜಾಲಂ ಮರುತಃ ಸ್ಪಂದನಂ ಯಥಾ ॥ ೨೧ ॥

ವಿಜ್ಞಾನಘನಮಾತ್ಮಾನಂ ಜಗದಿತ್ಯವಬುದ್ಧ್ಯತೇ ।
ಅನಾದ್ಯಂತಾಪಿ ಸಾದ್ಯಂತಾ ಚಿತ್ತ್ವಾದಿತಿ ಗತಾಪಿ ಚಿತ್ ॥ ೨೨ ॥

---

ರ್ಭೂತಾ ಬ್ರಹ್ಮೈವ ಸರ್ವಶೋ ವಿಜೃಂಭತ ಇತಿ ತತ್ವಜ್ಞಕಥೇತಿಯೋಜ್ಯಂ"
—ತಾ. ಪ್ರ.)

೧೯. ಈ ಚಿತ್ತು ಏನೂ ಕೆಲಸವನ್ನು ಮಾಡದೆ ತನ್ನ ಪಾಡಿಗೆ ತಾನು ಬೆಳಗುತ್ತ ಕುಳಿತಿರುವುದು. ಅದು ದೇಶ, ಕಾಲ, ಕ್ರಿಯೆಗಳಿಂದ ಗೋಚರವಾಗುವುದು. ಕಾರ್ಯಗಳು ಆದಂತೆಯೂ ಹೋದಂತೆಯೂ ಕಂಡರೂ ಪ್ರವರ್ತನವೂ ಇಲ್ಲ ನಿವರ್ತನವೂ ಇಲ್ಲ.

(ಪ್ರವರ್ತಂತೇ ಉತ್ಪದ್ಯಂತೇ। ನಿವರ್ತಂತೇ ನಶ್ಯಂತಿ। ಕಿಂತು ಕೇವಲಂ ಚಿತಿರೇವ .ದ್ರವ್ಯಮಿವ ಕಾಲ ಇವ ಕ್ರಿಯೇವ ದ್ಯೋತಮಾನಾ ತಪತಿ ಸ್ಫುರತಿ॥—ತಾ.ಪ್ರ )

೨೦ ದೇಶ, ಕಾಲ, ಕ್ರಿಯಾ, ದ್ರವ್ಯ, ಮನೋ, ಬುದ್ಧಿ, ಆದಿ (ಅಹಂಕಾರ) ಎಂಬ ಈ ಎಲ್ಲವೂ ಚಿತ್ತೆಂಬ ಶಿಲೆಯ ಅಂಗಗಳು: ಎಲ್ಲವೂ ಸೇರಿ ಒಂದು. ಆ ಒಂದೇ ಚಿತ್ತು. ಅದು ಅಸ್ತವೂ ಉದಯವೂ ಇಲ್ಲದ್ದು.

೨೧. ಚಿತ್ತೆ ಈ ಶಿಲೆಯ ಆಕಾರವನ್ನು ಧರಿಸಿ ಇಲ್ಲಿ ಕುಳಿತಿರುವುದು. ಈ ಚಿತ್ತಿನ ಅಂಗಾಂಗಗಳು ಜಗಜ್ಜಾಲಗಳು. ಮರುತನಲ್ಲಿ ಸ್ಪಂದವು ಹೇಗೋ ಹಾಗೆ ಇದು.

೨೨. ವಿಜ್ಞಾನ ಘನವಾದ ಆತ್ಮವನ್ನೇ ಜಗತ್ತು ಎಂದು ತಿಳಿಯುವರು. ಅದು

ಚಿಚ್ಛಿಲೇಯಮನಾದ್ಯಂತಾ ಸಾದ್ಯಂತಾಸ್ತೀತಿ ಬೋಧತಃ ।
ಸಾಕಾರಾಪಿ ನಿರಾಕಾರಾ ಜಗದಂಗೇತಿ ಸಂಸ್ಥಿತಾ ॥ ೩೩ ॥

ಯದ್ವತ್ಸ್ವಪ್ನೇ ಚಿದೇವ ಸ್ವಂ ರೂಪಂ ವ್ಯೋಮ್ನ್ಯೇವ ಪತ್ತನಂ ।
ವೇತ್ತಿ ತದ್ವದಿದಂ ವೇತ್ತಿ ಪಾಷಾಣಂ ಜಗದಂಗಕಂ ॥ ೩೪ ॥

ನ ಸರಂತೀಹ ಸರಿತೋ ನ ಚಕ್ರಂ ಪರಿವರ್ತತೇ ।
ನಾರ್ಥಾಃ ಪರಿಣಮಂತ್ಯಂತಃ ಕಚತ್ಯೇತಚ್ಚಿದಂಬರಂ ॥ ೩೫ ॥

ನ ಮಹಾಕಲ್ಪಕಲ್ಪಾಂತಸಂವಿದಃ ಸಂವಿದಂಬರೇ ।
ಸಂಭವಂತಿ ಪೃಥಗ್ರೂಪಾಃ ಪಯಸೀವ ಪಯೋಂತರಂ ॥ ೩೬ ॥

ಸಾದ್ಯಂತವಾಗಿ ಕಾಣುತ್ತಿದ್ದರೂ ನಿಜವಾಗಿ ಅನಾದ್ಯಂತವಾದುದೇ ! ಹಾಗೆ ಸಾದ್ಯಂತವಾಗಿ ತೋರಿದರೂ ಅನಾದ್ಯಂತವಾಗಿರುವಿಕೆಯೇ ಚಿತ್ತಿನ ಚಿತ್ತ್ವವು

೩೩. ಚಿತ್ತೆಂಬ ಈ ಶಿಲೆಯು ವಾಸ್ತವವಾಗಿ ಅನಾದ್ಯಂತವಾಗಿದ್ದರೂ ಸಾದ್ಯಂತವಾಗಿರುವಂತೆ ತೋರುವುದು. ಸಾಕಾರವಾಗಿ ಕಂಡರೂ ನಿರಾಕಾರವೇ ಅದು. ಅದೇ ಜಗತ್ತಾಗಿ ಇರುವುದು.

೩೪. ಸ್ವಪ್ನದಲ್ಲಿ ಹೇಗೆ ಚಿತ್ತು ತಾನೇ ತನ್ನ ರೂಪವನ್ನು ಬಿಡದೆ ವ್ಯೋಮ, ಪತ್ತನಗಳಾಗಿ ಕಾಣಿಸುವುದೋ ಹಾಗೆಯೇ ಜಗತ್ತನ್ನು ಅಂಗಾಂಗಗಳಾಗಿ ಧರಿಸಿರುವ ಪಾಷಾಣವಾಗಿರುವುದು.

೩೫. ಇಲ್ಲಿ ನದಿಗಳು ಹರಿಯುತ್ತಿಲ್ಲ. ಚಕ್ರಗಳು ಉರುಳುತ್ತಿಲ್ಲ : ಯಾವ ಅರ್ಥಗಳೂ ಪರಿಣಾಮವನ್ನು ಹೊಂದುತ್ತಿಲ್ಲ. ಚಿದಾಕಾಶವೊಂದು ಮಾತ್ರ ತನ್ನ ಒಳಗೇ ಕಚನ ಮಾಡುತ್ತಿರುವುದು.

೩೬. ಮಹಾಕಲ್ಪ ಕಲ್ಪಾಂತ ಸಂವಿತ್ತುಗಳ ಸಂವಿದಾಕಾಶದಲ್ಲಿ ಪ್ರತ್ಯೇಕವಾಗಿ ಏನೂ ಸಂಭವಿಸುವುದಿಲ್ಲ. ನೀರಿನಲ್ಲಿ ನೀರು ಬಂದು ಸೇರಿದಂತೆ ಇವೆಲ್ಲಾ ಆಗುವುವು.

ಜಗಂತಿ ಸಂತ್ಯೇವ ನ ಸಂತಿ ಶಾಂತೇ ।
ಚಿದಂಬರೇ ಸರ್ವಗತೈಕಮೂರ್ತೌ ॥
ನಭೋಂತರಾಣೀವ ಮಹಾನಭೋಂತ-
ಶ್ಚಿತ್ಸಂತಿ ಸತ್ತ್ವಾನಿ ಪರಾಂಬರಾಣಿ ॥ ೨೭ ॥

ವಸಿಷ್ಠ ತದ್ಗಚ್ಛ ಮುನೇ ಜಗತ್ಸ್ವಂ
ತ್ವಂ ಚಾಸನೇ ಸಂಪ್ರತಿ ಶಾಂತಿಮೇಹಿ ।
ಬುದ್ಧ್ಯಾದಿರೂಪಾಣಿ ಪರಂ ವ್ರಜಂತು
ವಯಂ ಬೃಹದ್ಬ್ರಹ್ಮಪದಂ ಪ್ರಯಾಮಃ ॥ ೨೮ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಶಿಲಾಂತರ್ಜಗತ್ಸ್ಥಿತಾಮಹಾವಾಕ್ಯಾನಿ" ನಾಮ ಸಪ್ತತಿತಮಃ ಸರ್ಗಃ**

---

೨೭. ಜಗತ್ತುಗಳು ಇದ್ದಂತೆ ಕಾಣುತ್ತವೆ. ನಿಜ. ಆದರೆ ಶಾಂತವಾಗಿ ಸರ್ವಗತವಾಗಿ ಬೇರೆ ಏನೂ ಇಲ್ಲದೆ ತಾನೇ ತಾನಾಗಿರುವ ಚಿದಾಕಾಶದಲ್ಲಿ ಇಲ್ಲವೇ ಇಲ್ಲ. ಮಹಾಕಾಶದಲ್ಲಿ ಮತ್ತೊಂದು ಆಕಾಶವೆಂಬಂತೆ ಪರಾಕಾಶದ ಮತ್ತೊಂದು ಅಂಗವೆಂಬಂತೆ ಇರುವುವು. ಅಷ್ಟೇ!

(ಯಥಾ ಮಹಾನಭೋಂತರ್ಘಟಾಕಾಶಾದಿ ನಭೋಂತರಾಣಿ ಮಹಾನಭಃ ಸತ್ತಯಾ ಸಂತಿಪೃಥಕ್ ಸಂತಿ ತಥಾ ತಾನಿ ಜಗಂತ್ಯಪಿ ಪರಂಬರಾಣಿ ಶೂನ್ಯಾನ್ಯಪಿ ಚಿತ್ಸಂತಿ ಸದ್ಭವಂತೀತ್ಯರ್ಥಃ—ತಾ.ಪ್ರ.)

೨೮. ಆದರಿಂದ, ಎಲೈ ವಸಿಷ್ಠ ಮಹರ್ಷಿಯೇ, ನಿನ್ನ ಜಗತ್ತನ್ನು ಕುರಿತು ನೀನು ಹೋಗು. ನೀನು ಇದ್ದೆಡೆಯಲ್ಲಿ ಸುಖವಾಗಿ ಶಾಂತಿಯಾಗಿ ಇರು. (ನಮ್ಮ) ಬುದ್ಧ್ಯಾದಿರೂಪಗಳೆಲ್ಲವೂ ಪರಮದಲ್ಲಿ ಸೇರಿಹೋಗಲಿ. ನಾವೂ ಬ್ರಹ್ಮಪದವನ್ನು ಹೊಂದುವೆವು.

(ಇಮಾನಿ ಮತ್ಕಲ್ಪಿತಾನಿ ಬುದ್ಧ್ಯಾದಿ ಜಗದ್ರೂಪಾಣಿ ಪ್ರಲಯೇನ ಪರಮವ್ಯಕ್ತಂ ವ್ರಜಂತು । ವಯಂ ತು ಹೈರಣ್ಯಗರ್ಭೋಪಾಧಿ ಸಹಿತ ಮೂಲಾಜ್ಞಾನಾಬಾಧೇನ ಪರಂ ಪದಂ ಕೈವಲ್ಯಾಖ್ಯಂ ಪ್ರಯಾಮ ಇತ್ಯರ್ಥಃ—ತಾ ಪ್ರ.

**ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಶಿಲಾಂತರ್ಜಗತ್ಸ್ಥಿತಾಮಹಾವಾಕ್ಯ" ಎಂಬ ಎಪ್ಪತ್ತನೆಯ ಸರ್ಗವು.**

## ಏಕಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಇತ್ಯುಕ್ತ್ವಾ ಭಗವಾನ್ಬ್ರಹ್ಮಾ ಬ್ರಹ್ಮಲೋಕಜನೈಃ ಸಹ ।
ಬದ್ಧಪದ್ಮಾಸನೋಽನಂತಸಮಾಧಾನಗತೋಽಭವತ್ ॥ ೧ ॥

ಓಂಕಾರಾರ್ಧೋಽರ್ಧಮಾತ್ರಾಂತಃ ಶಾಂತನಿಃಶೇಷಮಾನಸಃ ।
ಲಿಪಿಕರ್ಮಾರ್ಪಿತಾಕಾರ ಆಸಿದಾಶಾಂತವೇದನಃ ॥ ೨ ॥

---

## ಎಪ್ಪತ್ತೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧. ಹೀಗೆ ಹೇಳಿ ಭಗವಂತನಾದ ಆ ಬ್ರಹ್ಮನು ಬದ್ಧ ಪದ್ಮಾಸನದಲ್ಲಿ ಕುಳಿತು ಧ್ಯಾನಾಸೀನನಾಗಿ ತನ್ನ ಲೋಕದವರೆಲ್ಲರೊಡನೆ ಅನಂತ ಸಮಾಧಾನದಲ್ಲಿ ನಿಂತನು.

(ನ ವಿದ್ಯತೇ ಅಂತಃ ಅವಸಾನಂ ಪುನರ್ವ್ಯುತ್ಥಾನಂ ಯಸ್ಮಾತ್ತಥಾವಿಧಂ ಯತ್ಸಮಾಧಾನಂ ಸಮಾಧಿಸ್ತತ್ಪರಃ—ತಾ. ಪ್ರ)

೨. ಓಂಕಾರದ ಉತ್ತರಾರ್ಧವಾದ ಅರ್ಧಮಾತ್ರಾರೂಪವು ಯಾವುದುಂಟೋ ಅದರಲ್ಲಿ ನಿಂತು ಶಾಂತವೂ ನಿಃಶೇಷವೂ ಆದ ಮಾನಸವುಳ್ಳವನಾಗಿ, ಚಿತ್ರಾರ್ಪಿತ ಪ್ರತಿಮೆಯಂತೆ, ಸಂಪೂರ್ಣವಾಗಿ ಶಾಂತವಾದ ಆವೇದನವುಳ್ಳವನಾಗಿ ಇದ್ದುಬಿಟ್ಟನು.

(ಓಂಕಾರಸ್ಯ ಉತ್ತರಾರ್ಧಂ ಯಾ ಅರ್ಧಮಾತ್ರಾ ತದಂತಾರ್ನಾದ ಬಿಂದು ಶಕ್ತಿ ಶಾಂತಾಖ್ಯ ತದ್ಭಾಗೇಷು ಕ್ರಮಾಚ್ಚಿತ್ತ ವಿಲಾಪನೇನಾಂತೇ ಶಾಂತನಿಃಶೇಷಮಾನಸ ಇತಿ ಸಂಗ್ರಹೋಕ್ತಿಃ ॥—ತಾ. ಪ್ರ)

ತಮೇವಾನುಸರಂತೀ ಸಾ ತಥೈವ ಧ್ಯಾನಗಾ ಸತೀ ।
ವಾಸನಾಸೀದಶೇಷಾಂಶಾ ಶಾಂತಾ ಚಾಕಾಶರೂಪಿಣೀ ॥ ೩ ॥

ಪರಮೇಷ್ಠಿನ್ಯಸಂಕಲ್ಪೇ ತಸ್ಮಿಂಸ್ತಾನವಮೇಯುಷಿ ।
ಸರ್ವಗಾನಂತಚಿದ್ವ್ಯೋಮರೂಪೋಽಪಶ್ಯಮಹಂ ಯದಾ ॥ ೪ ॥

ಯಾವತ್ಸಂಕಲ್ಪನಂ ತಸ್ಯ ವಿರಸೀಭವತಿ ಕ್ಷಣಾತ್ ।
ತಥೈವಾಶು ತಥೈವೋರ್ವ್ಯಾಃ ಸಾದ್ರಿದ್ವೀಪಪಯೋನಿಧೇಃ ॥ ೫ ॥

ತೃಣಗುಲ್ಮಲತಾಶಾಲಿಸಮುದ್ಭವನಶಕ್ತಿತಾ ।
ಸಮಸ್ತೈವಾಸ್ತಮಾಗಂತುಮಾರಬ್ಧಾ ಚ ಶನೈಃಶನೈಃ ॥ ೬ ॥

---

೩. ಆ ವಿದ್ಯಾಧರಿಯೂ ಆತನನ್ನೇ ಅನುಸರಿಸಿ ತಾನೂ ಧ್ಯಾನಸ್ಥಳಾದಳು. ಆಕೆಯ ವಾಸನಾ ಪ್ರಪಂಚವೂ ನಿಶ್ಶೇಷವಾಗಲು ಆಕೆಯೂ ಶಾಂತಳಾಗಿ ಆಕಾಶ ರೂಪಿಣಿಯೇ ಆದಳು.

೪. ಪರಮೇಷ್ಠಿಯು ಸಂಕಲ್ಪವನ್ನು ಉಪಸಂಹಾರಮಾಡಲು, ಆತನೂ ತಾನವವನ್ನು ಹೊಂದುತ್ತ ಬಂದನು. ಆಗ ಎಲ್ಲೆಲ್ಲಿಯೂ ತಾನೇ ತಾನಾಗುತ್ತಿದ್ದ ಚಿತ್ತನ್ನು ವ್ಯೋಮರೂಪನಾದ ನಾನು ಕಂಡೆನು.

(ಇದಂ ತದೀಯಮಾಂತರಂ ರಹಸ್ಯಂ ತ್ವಂ ಕಥಮದಾಕ್ಷೀಃ ? ತತ್ರಾಹ- ಪರಮೇಷ್ಠಿನೀತಿ । ಸ್ಥೂಲ ಸೂಕ್ಷ್ಮ ಕಾರಣ ಲಕ್ಷಣಾರ್ಥ ಸಹಿತ ಪ್ರಣವ ಮಾತ್ರಾ ಪ್ರವಿಲಯ ಕ್ರಮೇಣ ಸ್ವವಾಸನಾಕ್ಷಯಾತ್ ತಾನವ ಮುತ್ತರೋತ್ತರ ಸೂಕ್ಷ್ಮ ಭಾವ ಆಯುಷಿ ಏಯುಷಿ ಸತಿ ಅಹಮಪಿ ಸಮಾಧಿನಾ ಸರ್ವಗಾನಂತ ಚಿದ್ವ್ಯೋ ಮರೂಪಃ ಸ್ಸ್ತತ್ಸರ್ವಮಪಶ್ಯಂ "—ತಾ ಪ್ರ.)

೫-೬. ಯಾವಾಗ ಆ ಪರಮೇಷ್ಠಿಯ ಸಂಕಲ್ಪವು ವಿರಸ-ರಸವಿಲ್ಲದ್ದು ಆಯಿತೋ, ಆಗಲೇ, ಕ್ಷಣಕ್ಷಣದಲ್ಲಿಯೂ ಹಾಗೆ ಹಾಗೆಯೇ ಅದ್ರಿ, ದ್ವೀಪ, ಸಮುದ್ರಗಳಿಂದ ಕೂಡಿದ ಭೂಮಿಯೂ, ತೃಣ, ಗುಲ್ಮ, ಲತಾ, ಇವುಗಳಿಂದ ಕೂಡಿದ್ದ ಸಮುದ್ರ ವನಶಕ್ತಿಯೂ ಸಹ, ಸಮಸ್ತವೂ ಮೆಲ್ಲಮೆಲ್ಲಗೆ ಅಸ್ತವಾಗುವುದಕ್ಕೆ ಆರಂಭವಾಯಿತು

ಕಿಲ ತಸ್ಯ ವಿರಾಡಾತ್ಮರೂಪಸ್ಯಾಂಗೈಕದೇಶತಾಂ ।
ಸಾ ಬಿಭರ್ತಿ ಮಹೀ ತೇನ ತದಸಂವೇದನೋದಯಾತ್ ॥ ೭ ॥

ವಿಚೇತನಾ ಸಾ ವಿರಸಾ ಬಭೂವ ಪರಿಜರ್ಜರಾ ।
ಮಾರ್ಗಶೀರ್ಷಾಂತವಲ್ಲೀವ ಜರಾವಿಧುರತಾಂ ಗತಾ ॥ ೮ ॥

ಯಥಾಸ್ಮಾಕಮಸಂವಿತ್ತೇರಂಗಾಲಿ ವಿರಸಾ ಭವೇತ್ ।
ತಥಾ ವಿರಿಂಚಿಸಂವಿತ್ತೇರ್ಧರಾ ವೈಧುರ್ಯಮಾಗತಾ ॥ ೯ ॥

ಸಂಪನ್ನಾ ಸಂತತಾನೇಕಮಹೋತ್ಪಾತಭರಾವೃತಾ ।
ದುಷ್ಕೃತಾಂಗಾರನಿರ್ದಗ್ಧ ನರಕೋನ್ಮುಖಮಾನವಾ ॥ ೧೦ ॥

ದುರ್ಭಿಕ್ಷಾಕಾಂಡದೌಸ್ಸ್ಥಿತ್ಯದೈನ್ಯದಾರಿದ್ರ್ಯದುರ್ಭಗಾ ।
ದುಃಶೀಲಾಶೇಷವನಿತಾ ನಿರ್ಮರ್ಯಾದನರಾವೃತಾ ॥ ೧೧ ॥

---

೭-೮. ಆ ವಿರಾಡಾತ್ಮನ ಅಂಗದ ಏಕ ದೇಶವಾಗಿದ್ದ ಆ ಭೂಮಿಯು, ಆತನಿಗೆ ಅಸಂವೇದನವು ಉದಯಿಸಲು, ವಿಚೇತನವೂ, ವಿರಸವೂ, ಪರಿಜರ್ಜರವೂ ಆಗಿ ಹೋಯಿತು. ಮಾರ್ಗಶಿರಮಾಸದ ಕೊನೆಯಲ್ಲಿ ಬಳ್ಳಿಯು ಮುಪ್ಪಿನಿಂದ ಮಂಕಾಗುವಂತೆ ಆಯಿತು.

(ಮುಮುಲೂರ್ಷೋರ್ವಿದುಷಃ ಸರ್ವದೇಹ ವ್ಯಾಪಿಸಂವೇದನಸ್ಯ ತತ್ಸಂಹಾರೇ ತದಂಗವೈರಸ್ಯವದ್ವಾ ತತ್ರ ವಿರಾಡ್ದೇಹಾವಯವ ಪೃಥಿವ್ಯಾದೀನಾಂ ವೈರಸ್ಯಂ ಬೋಧ್ಯ ಮಿತ್ಯಾಶಯೇನಾಹ— ತಾ ಪ್ರ.)

೯. ನಮ್ಮ ಅಂಗಾಂಗಗಳು ನಮ್ಮ ಅಸಂವಿತ್ತಿನಿಂದ ವಿರಸವಾಗುವಂತೆಯೇ ಆ ವಿರಂಚಿಯು ಅಸಂವಿತ್ತಿನಿಂದ ಆತನ ಮಂಡಲವೂ ಅಚೇತನವಾಯಿತು.

(ಕಥಂಕಥಂ ವಿಜರ್ಜರಾ ಬಭೂವೇತ್ಯೇತತ್ ಪ್ರಪಂಚಯತಿ - ತಾ ಪ್ರ.)

೧೦ ದುಷ್ಕೃತ್ಯಗಳೆಂಬ ಕೆಂಕಿಯಿಂದ ದಗ್ಧವಾಗಿರುವ, ಅನೇಕ ಮಹೋತ್ಪಾತಗಳ ಸಮೂಹಗಳಿಂದ ಕೂಡಿರುವವನಾಗಿ ಮಾನವರು ನರಕಕ್ಕೆ ಹೋಗುತ್ತಿದ್ದರು.

೧೧. ದುರ್ಭಿಕ್ಷದಿಂದ ಕಾರಣವಿಲ್ಲದೇ ದುಸ್ಸ್ಥಿತಿ ದೈನ್ಯದಾರಿದ್ರ್ಯ ದೌರ್ಭಾ

ಪಾಂಸುಪ್ರಮಂದನೀಹಾರಧೂಲಿಧೂಸರಸೂರ್ಯಕಾ ।
ದ್ವಂದ್ವಿಮೂರ್ಖಮಹಾದುಃಖಿವ್ಯಸನಿವ್ಯಾಧಿತಾಕುಲಾ ॥ ೧೨ ॥

ಅಗ್ನಿದಾಹಜಲಾಪೂರಯುದ್ಧಪ್ರೋಚ್ಛಿನ್ನಮಂಡಲಾ ।
ಅವೃಷ್ಟ್ಯವಗ್ರಹೋನ್ನಷ್ಟಕಷ್ಟಚೇಷ್ಟಿತಪಾಮರಾ ॥ ೧೩ ॥

ಅಶಂಕಿತಮಹೋತ್ಪಾತತ್ಪರ್ವತಪತ್ತನಾ ।
ಶಿಶುಶ್ರೋತ್ರಿಯಮುನ್ಯಾರ್ಯಗುಣಿನಾಶರುದಜ್ಜನಾ ॥ ೧೪ ॥

ಅಶಂಕಿತಸ್ಥಲೀಮಧ್ಯಸಂಜಾತಾಗಾಧಕೂಪಕಾ ।
ವರ್ಣಸಂಕರನಾರೀಣಾಮಾಸಕ್ತಜನಭೂಮಿಪಾ ॥ ೧೫ ॥

---

ಗ್ಯಗಳನ್ನನುಭವಿಸುತ್ತಿರುವ ಮಂಡಲಗಳಿದ್ದುವು: ಇನ್ನೊಂದೆಡೆ ಹೆಂಗುಸರೆಲ್ಲರೂ ದುಶ್ಶೀಲೆಯರು, ಮತ್ತೊಂದೆಡೆ ಮರ್ಯಾದೆಯೇ ಇಲ್ಲದ ಮನುಷ್ಯರು ಉಳ್ಳ ಮಂಡಲಗಳಿದ್ದುವು.

೧೨. ಧೂಳು ಮಂದವಾಗಿ ಮಂಜಿನಂತೆ ಹಬ್ಬಿರಲು, ಸೂರ್ಯನೂ ಮಂಕಾಗಿ ಹೋಗಿದ್ದ ಭೂಮಂಡಲಗಳು: ಸುಖ ದುಃಖಗಳಿಂದ ಮೂರ್ಖರಾಗಿ ಮಹಾ ದುಃಖಿಗಳಾಗಿರುವವರೂ ವ್ಯಸನಿಗಳೂ ವ್ಯಾಧಿತರೂ ತುಂಬಿದ್ದ ಮಂಡಲ ವಿನ್ನೊಂದೆಡೆ:

೧೩. ಅಗ್ನಿದಾಹದಿಂದಲೂ, ಜಲಪೂರದಿಂದಲೂ, ಯುದ್ಧಗಳಿಂದಲೂ ಬಳಲಿರುವ ದೇಶವಿನ್ನೊಂದೆಡೆ, ಅನಾವೃಷ್ಟಿ. ಖಂಡವೃಷ್ಟಿಗಳಿಂದ ನಷ್ಟ, ಕಷ್ಟ ಗಳನ್ನು ಅನುಭವಿಸುತ್ತಿರುವ ಪಾಮರರು ಇರುವ ದೇಶವಿನ್ನೊಂದು.

೧೪ ಅನಿರೀಕ್ಷಿತವಾಗಿ ಸಂಭವಿಸಿದ ಮಹೋತ್ಪಾತಗಳಿಂದ ಉರುಳುತ್ತಿರುವ ಪರ್ವತಗಳೂ ಪತ್ತನಗಳೂ, ಶಿಶು, ಶ್ರೋತ್ರಿಯ, ಮುನಿ, ಆರ್ಯ, ಗುಣಿ, ಎಂಬ ಭೇದವಿಲ್ಲದೆ ಎಲ್ಲರೂ ನಾಶವಾಗುತ್ತಿರುವುದರಿಂದ ಅಳುತ್ತಿರುವ ಜನರೂ ಉಳ್ಳ ದೇಶಗಳು ಇದ್ದುವು

೧೫ ಇದ್ದಕ್ಕಿದ್ದಂತೆಯೇ ಒಂದು ಸ್ಥಲದಲ್ಲಿ ಭೂಮಿಯು ಕುಸಿದು ಬಿದ್ದು ಒಂದು ಅಗಾಧಕೂಪವು ಆಗಿ ಹೋಯಿತು. ಅನವರು ವರ್ಣ ಸಂಕರ ಮಾಡುತ್ತಿರುವ ನಾರಿಯರಲ್ಲಿ ಆಸಕ್ತರಾದ ಜನರೂ ಅರಸೂ ಇನ್ನೊಂದೆಡೆ

ಅಟ್ಟಶೂಲಾಖಿಲಜನಾ ಶಿವಶೂಲಚತುಷ್ಪಥಾ ।
ಕೇಶೈಕಶೂಲವನಿತಾ ಪಾತ್ರಶೂಲಜನೇಶ್ವರಾ ॥ ೧೬ ॥

ದುಃಖಶೂಲಸಮಾಚಾರಾ ದ್ವಂದ್ವಶೂಲಾಖಿಲಪ್ರಜಾ ।
ಅಧರ್ಮಶೂಲವನಿತಾ ಪಾನಶೂಲಜನೇಶ್ವರಾ ॥ ೧೭ ॥

(ವರ್ಣಸಂಕರಾಯುಃ ಜಾತೀನಾಂ ಮಿಥ್ಯಾ ಗೋತ್ರ ಸಾಪಿಂಡ್ಯಾಗಮ್ಯಾದಿ ವಿಚಾರಂ ವಿನೈವ ವಿವಾಹಾದ್ಯಾಸಕ್ತಾ ಜನಾ ಭೂಮಿಪಾಶ್ಚ ಯಸ್ಯಾಂ—ತಾ. ಪ್ರ.)

೧೬. ಅನ್ನ ವಿಕ್ರಯಮಾಡುವ ಜನರು ಎಲ್ಲೆಲ್ಲಿಯೂ ತುಂಬಿರಲು, ಚೌಕ ಚೌಕಗಳಲ್ಲಿಯೂ ಕಂದಾಯನೆತ್ತುತ್ತಿರಲು, ಕೇಶವನ್ನು ಮಾರಿಕೊಂಡು ತಿನ್ನುವ ಹೆಂಗುಸರು ಹೆಚ್ಚುತ್ತಿರಲು, ಮಾತೆತ್ತಿದರೆ ತಲೆಯನ್ನು ತೆಗೆಯುವ ಅರಸರೂ ಹೆಚ್ಚಿಕೊಂಡಿರುವ ಪಂದಲಿಗರು ಒಂದೆಡೆ.

(ಅಷ್ಟೃತ ಇತಿ ಅಟ್ಟಮೋದನಾದಿ ಶೂಲಂ ವಿಕ್ರಯಮಾಪಣಾದಾಪಣಾ ಉಪಜೀವ್ಯಂ ಯೇಷಾಂ ತಥಾವಿಧಾ ಅಖಿಲಜನಾ ಯಸ್ಯಾಂ । ಶಿವಃ ಶುಲ್ಕಂ ತದೇವ ಶೂಲವದುಪಜೀವ್ಯಂ ಯೇಷು ತಥಾವಿಧಾಶ್ಚ ಚತುಷ್ಪಥಾಶ್ಚ ಯಸ್ಯಾಂ । ಕೇಶೋ ಭಗಃ ಸ ಏವೈಕಂ ಶೂಲವದುಪಜೀವ್ಯಂ ಯಾಸಾಂ ತಥಾವಿಧಾ ವನಿತಾ ಯಸ್ಯಾಂ । ಪಾತ್ರಂ ಏವ ಕರಸ್ತದೇವ ಶೂಲವದುಪಜೀವ್ಯಂ ಯೇಷಾಂ ತಥಾವಿಧಾ ಜನೇಶ್ವರಾ ರಾಜಾನೋ ಯಸ್ಯಾಮಿತಿ ಸಂಪ್ರದಾಯವ್ಯಾಖ್ಯಾ । ಅಥವಾ ಅಟ್ಟ ಅತಿಕ್ರಮೇ ಇತಿಧಾತೋಃ ಅಟ್ಟಃ ಸ್ವಸ್ವವರ್ಣಾಶ್ರಮೋಚಿತ ವೃತ್ತ್ಯತಿಕ್ರಮಃ । ಶಿವಾಃ ಸೃಗಾಲಾಃ । ಕೇಶಾಃ ಪ್ರಸಿದ್ಧಾ ಏವ । ಪಾತ್ರಾಣ್ಯೇಶ್ಯಾನರ್ತಕ್ಯಾದಯಸ್ತ ಶೂಲರೋಗ ಇವ ವ್ಯಸನ ಕ್ರಂದನ ಹೇತವೋ ಯೇಷಾಮಿತಿ ಯಥಾ ಯೋಗಂ ಯೋಜ್ಯಂ । ಶೇಷಂ ಪ್ರಾಗ್ವತ್—ತಾ. ಪ್ರ.)

೧೭. ಜನರ ಸಮಾಚಾರವೆಲ್ಲವೂ ಅದು ದುಃಖದಿಂದ ಕೂಡಿ ಶೂಲವಾಗುವುದು : ಅಖಿಲ ಪ್ರಜೆಗಳೂ ದ್ವಂದ್ವದಿಂದ ಶೂಲಿಗಳಾಗಿರುವರು : ವನಿತೆಯರು ಅಧರ್ಮದಿಂದ ಶೂಲಪ್ರಾಯರಾಗಿರುವರು : ಜನೇಶ್ವರರು ಪಾನವೆಂಬ ವ್ಯಸನಕ್ಕೆ ಸಿಕ್ಕಿರುವರು.

ಅಧರ್ಮಶೂಲವಲಿತಾ ಕುಶಾಸ್ತ್ರಶತಶೂಲಿನೀ ।
ದುರ್ಜನಾಖಿಲವಿತ್ತಾಢ್ಯಾ ವಿಪದ್ವಿಹತಸಜ್ಜನಾ ॥ ೧೮ ॥

ಅನಾರ್ಯವಸುಧಾಪಾಲಾ ತದನಾದೃತಪಂಡಿತಾ ।
ಲೋಭಮೋಹಭಯದ್ವೇಷರಾಗರೋಗರಜೋರತಾ ॥ ೧೯ ॥

ಅಸ್ಪೃಶ್ಯಗಾಮಿಪುರುಷಾ ರುಷಾಭಿಹತಸದ್ವಿಜಾ ।
ಅನಾರತಪರಾಕ್ರಂದಪರಾಪರ್ಯಂತಪಾಮರಾ ॥ ೨೦ ॥

ದಸ್ಯ್ವುತ್ಸನ್ನಪುರಗ್ರಾಮದೇವದ್ವಿಜಸಮಾಶ್ರಯಾ ।
ಆಪಾತಮಧುರಾರಂಭದುಃಖದೋದರಭಂಗುರಾ ॥ ೨೧ ॥

---

೧೮. ಅಧರ್ಮಪರರಾಗಿ ಆಕ್ರೋಶಮಾಡುವ ಜನರು: ಕುಶಾಸ್ತ್ರಗಳು ನೂರರಿಂದ ಬುದ್ಧಿಯು ಕೆಟ್ಟಿರುವುದು: ಸಂಪತ್ತೆಲ್ಲವೂ ದುರ್ಜನರಲ್ಲಿ ಸೇರಿರುವುದು: ಸಜ್ಜನರು ವಿಪತ್ತುಗಳಿಂದ ಸತ್ತಂತಾಗಿರುವರು.

೧೯. ವಸುಧಾಪಾಲಕರೆಲ್ಲರೂ ಅನಾರ್ಯರು: ಅವರು ಪಂಡಿತರನ್ನು ಆದರಿಸುವುದಿಲ್ಲ: ಲೋಭ, ಮೋಹ, ಭಯ, ದ್ವೇಷ, ರಾಗ, ರೋಗ, ಪಾಪಗಳಲ್ಲಿ ಆಸಕ್ತರಾಗಿರುವರು.

೨೦. ಜನರು ಪರಧರ್ಮದಲ್ಲಿ ಆಸಕ್ತರಾಗಿರುವರು: ದ್ವಿಜರೆನಿಸಿಕೊಂಡವರೂ ಕೋಪದಿಂದ ಅಭಿಹತರಾಗಿರುವರು: ಯಾವಾಗಲೂ ಇನ್ನೊಬ್ಬರನ್ನು ಅಳಿಸುವುದೇ ಕಾರ್ಯವಾಗುಳ್ಳ ಪಾಮರರು ತುಂಬಿರುವರು.

೨೧. ದೇವ, ದ್ವಿಜ ಸಮಾಶ್ರಯಗಳಾಗಿದ್ದ ಪುರಗ್ರಾಮಗಳು ಕಳ್ಳರಿಗೂ ಮರ್ಯಾದೆಯನ್ನು ಬಿಟ್ಟವರಿಗೂ ಆಶ್ರಯವಾಗಿರುವುವು: ಕೇಳುವುದಕ್ಕೆ ಹಿತವಾಗಿರುವ ಮಾತುಗಳನ್ನು ಆಡುತ್ತಿದ್ದರೂ ಮಾಡುವ ಕೆಲಸಗಳು ದುಃಖದಗಳೇ ಆದ ವ್ಯರ್ಥಗಳಾದ ಪಾಪ ಕಾರ್ಯಗಳಾಗಿರುವುವು.

ಆಲಸ್ಯೋಲ್ಲಾಸವಿಲಸತ್ಕಾರ್ಯಸ್ವೈಧುರ್ಯಧರ್ಮಿಣೀ ।
ಸರ್ವಾಪದುಪತಾಪಾಂತಾ ಕ್ರಮೋನ್ಮೇಷೋಲ್ಲಸದ್ದಿಗ್ಗ್ರಾ ॥ ೩೨ ॥

ಭಸ್ಮೀಭೂತಪುರಗ್ರಾಮಾ ನಿರ್ಜನಾಖಿಲಮಂಡಲಾ ।
ರೋರೂಯಮಾಣಭಸ್ಮಾಭ್ರಕಂದರೋದ್ಗಾರಮಂಥರಾ ॥ ೩೩ ॥

ದುರ್ಭಗಾಡಂಬರಾರಭರೋದನೋದ್ರವವಪ್ರೋದರೀ ।
ಮುಷ್ಟಿಪ್ರಮಾಣಜನತಾ ಜನತಾಪಾನುಸಂಗಿನೀ ॥ ೩೪ ॥

ನೀರಸಾಶೇಷದೇಶಾಂತಾ ಸರ್ವರ್ತುಗುಣವರ್ಜಿತಾ ।
ಇತ್ಯಸ್ಯ ಪಾರ್ಥಿವೇ ಧಾತೌ ಬ್ರಹ್ಮಣೋ ಗತವೇದನೇ ॥ ೩೫ ॥

ಪೃಥಿವೀ ಪೃಥುವೈಧುರ್ಯಾ ಸಂಪನ್ನಾಸನ್ನನಾಶತ ।
ಅಥ ತತ್ಸಂವಿದುನ್ಮುಕ್ತೋ ಜಲಧಾತುಃ ಕ್ಷಣೋನ್ಮುಖಃ ॥ ೩೬ ॥

---

೩೨. ಆಲಸ್ಯವನ್ನೇ ಉಲ್ಲಾಸವೆಂದುಕೊಂಡು, ಕಾರ್ಯಮಾಡುತ್ತೇವೆಂದು ಜಂಭಮಾಡಿಕೊಂಡು ತಿರುಗುವುದೇ ಧರ್ಮವಾಗುವುದು: ಸರ್ವಾಪತ್ತುಗಳೂ ತುಂಬಿ ಕಷ್ಟಪಡುತ್ತ ಕ್ರಮವಾಗಿ ಮಾನಮರ್ಯಾದೆಗಳನ್ನೂ ಬಿಡುವಂತಾಗುವುದು.

೩೩. ಪುರ ಗ್ರಾಮಗಳು ಸುಟ್ಟು ಬೂದಿಯಾಗುವುವು. ದೇಶದೇಶಗಳೂ ನಿರ್ಜನಗಳಾಗುವುವು: ಆಕಾಶಗಳು ಗರ್ಜಿಸುತ್ತಿರುವ ಭಸ್ಮಮೇಘಗಳನ್ನು ಹೊತ್ತು ತಂದಿರುವ ಸುಂಟರಗಾಳಿಗಳ ಆಡಂಬರದಿಂದ ತುಂಬಿರುವುವು.

೩೪. ಕುಲಹೀನರಾದವರು ಮಾಡುತ್ತಿರುವ ಕಾರ್ಯಗಳಿಂದ ಹುಟ್ಟಿರುವ ರೋದನಗಳ ಮಹಾಧ್ವನಿಯಿಂದ ತುಂಬಿರುವ, ಮುಷ್ಟಿಯಷ್ಟು ಮಾತ್ರ ಎತ್ತರ ಇರುವ ಜನಗಳುಳ್ಳ ಜನಗಳ ತಾಪದಿಂದ ಕೂಡಿರುವ ಪುರಗ್ರಾಮಗಳಿಂದ ಈ ಭೂಮಿಯು ಕೂಡಿರುವುದು.

೩೫. ಅಶೇಷದೇಶವೂ ನೀರಸವಾಗುವುದು. ಯಾವ ಋತುವಿನ ಗುಣವೂ ಇಲ್ಲವಾಗುವುದು. ಇದಿಷ್ಟೂ ಪೃಥ್ವೀಭೂತದಲ್ಲಿದ್ದ ಬ್ರಹ್ಮನ ಆವೇದನೆಯು ತಪ್ಪಿದಾಗ ಆಗುವುದು.

೩೬. ಆಗ ಪೃಥಿವಿಯು ಬಹುಮಟ್ಟಿಗೆ ಕಂಗೆಡುವುದು. ನಾಶವು ಆಸನ್ನ

ಯದಾ ವಿಕ್ಷುಭಿತಾತ್ಮಾಸೀತ್ತದಾ ನಿಯತಿಲಂಘನಾತ್ ।
ಸಮುತ್ಸಾರ್ಯಾರ್ಯಮರ್ಯಾದಾಮರ್ಣವಾ ವಿವೃತಾರ್ಣಸಃ ॥ ೩೭ ॥

ಪ್ರವೃತ್ತಾ ವಿಕೃತಿಂ ಗಂತುಮುನ್ಮತ್ತಾ ಇವ ರಾವಿಣಃ ।
ವೀಚಿವಿಕ್ಷೋಭವಿನ್ಯಾಸೈರ್ವೇಲಾವಿಪಿನಲಾಪಕಾಃ ॥ ೩೮ ॥

ಕಲ್ಲೋಲವಲನಾವರ್ತವಿವರ್ತೋದ್ವರ್ತಿತಾಶ್ರಯಾಃ ।
ಮಹಾಭ್ರ ಭ್ರಮದುತ್ತುಂಗತರಂಗಾತ್ತನಭೋದಿಶಃ ।
ಬೃಹದ್ಗುಲುಗುಲಾವರ್ತಗರ್ಜನೋದ್ದ್ರವಕಂದರಾಃ ॥ ೩೯ ॥

---

ವಾಗಿ ಬರುವುದು. ಹಾಗೆಯೇ ಜಲಧಾತುವಿನಲ್ಲಿ ಬ್ರಹ್ಮನ ಸಂವಿತ್ತು ಪರಾಙ್ಮುಖವಾಗಲು, ಅದು ಕ್ಷಯೋನ್ಮುಖವಾಗುವುದು.

೩೭. ಯಾವಾಗ ಜಲದಲ್ಲಿರುವ ಆತ್ಮ ಸಂವೇದನವು ವಿಕ್ಷೋಭವನ್ನು ಪಡೆಯುವುದೋ ಆಗ ನಿಯತಿಯು ಕೆಡುವುದು. ಆರ್ಯರು ಗೊತ್ತುಮಾಡಿದ್ದ ಮರ್ಯಾದೆಯು ಕೆಡುವುದು ಸಮುದ್ರಗಳು ದೇಶದೊಳಕ್ಕೆ ನುಗ್ಗಿ ನೀರೇ ನೀರಾಗುವುದು.

೩೮. ಸಮುದ್ರಗಳು ವಿಕೃತಿಯನ್ನು ಹೊಂದುವುದಕ್ಕೆ ಆರಂಭವಾಗಿ, ಹುಚ್ಚರಂತೆ ಆರ್ಭಟಿಸುತ್ತಾ, ತರಂಗಗಳನ್ನು ಎಸೆಯುತ್ತಾ, ವಿಕ್ಷೋಭಪಡುತ್ತಾ, ನಾನಾ ವಿಧವಾದ ವಿನ್ಯಾಸಗಳಿಂದ ತಮ್ಮ ತಮ್ಮ ಮೇರೆಗಳಾಗಿದ್ದ ವಿಪಿನಗಳನ್ನು ಹರಿದೆಸೆಯುವುವು. ಕಲ್ಲೋಲ (ಪ್ರವಾಹ) ವಲನ (ಸೆಳೆತ) ಆವರ್ತ (ಸುಳಿ) ವಿವರ್ತ (ಹಿಂದಕ್ಕೆ ಒದೆಯುವುದು) ಉದ್ವರ್ತಿತ (ಮೇಲಕ್ಕೆ ಹಾರುವುದು) ಎಂಬ ನಾನಾ ರೂಪವಾಗಿ ಜಲಾಶಯಗಳೆಲ್ಲವೂ ಹಾನಿಯನ್ನು ಮಾಡುವುವು

೩೯. ಮಹಾಮೇಘಗಳು ಸುತ್ತುತ್ತಾ ಎತ್ತರವಾಗಿ, ತರಂಗಗಳಂತೆ ಆಕಾಶವನ್ನೆಲ್ಲಾ ಆಕ್ರಮಿಸಿಕೊಂಡು, ಭಾರಿಯಾಗಿ ಗುಳಗುಳು ಎಂದು ಆವರ್ತ ಆವರ್ತವಾಗಿ ಗರ್ಜನಮಾಡುತ್ತ, ಕಂದರಗಳೆಲ್ಲವೂ ಪ್ರತಿಧ್ವನಿಸುವಂತೆ ಮಾಡುವುವು.

ಸೀಕರೌಘಮಹಾರಂಭಘೂನಸಂವಲಿತಾಚಲಾಃ ।
ಚಲಚ್ಚಲಚಲದ್ಭೀರಮಕರಾಘೂರ್ಣಿತಾಂತರಾಃ ॥ ೩೦ ॥

ಉಲ್ಲಸನ್ಮಕರಾಕ್ರಾಂತದ್ರುಮಕಾನನಿತೋದರಾಃ ।
ದರೀವಿದಾರಣಭ್ರಷ್ಟಸಿಂಹಾಹತಜಲೇಚರಾಃ ॥ ೩೧ ॥

ಊರ್ಮ್ಯುದಸ್ತಮಹಾರತ್ನಭರತಾರಕಿತಾಂಬರಾಃ ।
ಉತ್ಫಾಲಮಕರಚ್ಛನ್ನನಭಸ್ಥರಬೃಹದ್ಘನಾಃ ॥ ೩೨ ॥

ಪರಸ್ಪರೋರ್ಮಿಸಂಘಟ್ಟಭಾಂಕಾರಕಟುಟಾಂಕೃತಾಃ
ತರತ್ತರಲಮಾತಂಗಫೂತ್ಕಾರಾ ಧೌತಭಾಸ್ಕರಾಃ । ॥ ೩೩ ॥

ಅನ್ಯೋನ್ಯವೇಲ್ಲಸನ್ಮ್ಯಗ್ರಕ್ರುವಿದೀರ್ಣಾದ್ರಿಭಿತ್ತಯಃ ।
ತಟಪರ್ವತಲುಂಟಾಕತರಂಗಕರಮಂಡಲಾಃ ॥ ೩೪ ॥

೩೧. ಹನಿಗಳು ಮೇಲಕ್ಕೆ ಹಾರುತ್ತಿರಲು, ಆ ಅದ್ಭುತ ಸೀಕರಗಳಿಂದಲೇ ಪರ್ವತಗಳು ನಡುಗುತ್ತಿರುವುವು ಒಂದೇ ಸಮನಾಗಿ ಚಲಿಸುತ್ತಿರುವ ಮಕರಾದಿಗಳಿಂದ ಆ ಸಮುದ್ರಗಳ ಅಂತಃ ಪ್ರದೇಶಗಳೆಲ್ಲವೂ ಕ್ಷುಬ್ಧವಾಗಿರುವುದು.

೩೧. ಮಕರಾದಿ ಜಲಚರಗಳು ಹಾರಾಡುತ್ತಿದ್ದರೆ, ಸಮುದ್ರಗಳು ಕಾನನಗಳಾದಂತೆ ತೋರುವುವು. ಸಿಂಹಗಳು ಗುಹೆಗಳಿಂದ ಈಚೆ ಬಂದು ಜಲೇಚರಗಳನ್ನು ಹೊಡೆಯುವುವು.

೩೨. ತರಂಗಗಳು ಸಮುದ್ರ ತಲದಲ್ಲಿದ್ದ ರತ್ನಗಳನ್ನು ತೆಗೆದೆರಚಲು, ಆಕಾಶವು ಅವುಗಳಿಂದ ತುಂಬಿ, ಹೊಸದಾಗಿ ತಾರಕೆಗಳಿಂದ ಕೂಡಿದಂತಾಗುವುದು. ಮಕರಾದಿಗಳು ಮೇಲಕ್ಕೆ ಹಾರಿ ಆಕಾಶದಲ್ಲಿ ಆಡುತ್ತಿರುವ ಮಹಾ ಮೇಘಗಳನ್ನು ಮುಚ್ಚುವುವು.

೩೩. ತರಂಗಗಳು ಒಂದನ್ನೊಂದು ತಾಕಿ ಸಂಘಟ್ಟಿಸಲು, ಆಗ ಹುಟ್ಟಿದ ಭಾಂಕಾರವು ಕಟುವಾಗಿ ಟಾಂ ಎಂದು ಮೊಳಗುತ್ತಿರುವುದು. ಜಲಮಾತಂಗಗಳೂ ಫೂತ್ಕಾರದಿಂದ ಊದಿದ ನೀರು ಆಕಾಶದಲ್ಲಿರುವ ಸೂರ್ಯನನ್ನು ತೊಳೆಯುವುದು.

೩೪ ಅನ್ಯೋನ್ಯವಾಗಿ ಪರ್ವತಗಳು ಹೊಡೆದಾಡಿ ಮುರಿದು ಬೀಳುವುವು.

ಗರ್ಜದ್ಗಿರಿದರೀಗೇಹವಿಶದುನ್ಮತ್ತವಾರಯಃ ।
ಭೂಪಾಃ ಪರಪುರಾಕ್ರಾಂತಾ ಲಗ್ನಾ ಇವ ಹತಾರಯಃ ॥ ೩೫ ॥

ತಾರಾರವರಣದ್ಗೇಹವಿದ್ರಾವಿತನಭಶ್ಚರಾಃ ।
ಪ್ರಲುಂಠಿತವನವ್ಯೂಹಲೂನಕಾನನಿತಾಂಬರಾಃ ॥ ೩೬ ।

ಸಪಕ್ಷ ಪರ್ವತಾಕಾರತರಂಗಾಪೂರಿತಾಂಬರಾಃ ।
ಮಹಾರವಮರುಚ್ಛಿನ್ನಕಲ್ಲೋಲಾಚಲಚಾಲಿತಾಃ ॥ ೩೭ ॥

ಚಂಚತ್ತೀರಗಿರಿವ್ರಾತಪತತ್ತಟರಟಜ್ಜಲಾಃ ।
ಉಲ್ಲಸದ್ವಿಪುಲಾವರ್ತಪ್ರೋತ್ಕ್ಷಿಪ್ತಮಕರೋತ್ಕರಾಃ ॥ ೩೮ ॥

---

ನೀರಿನ ಮಗ್ಗುಲಲ್ಲಿದ್ದ ಪರ್ವತಗಳ ಹೊರಳುವಿಕೆಯಿಂದ ತರಂಗಗಳು ಏಳುತ್ತಿರಲು, ಅವೇ ಕೈಗಳನ್ನು ಚಾಚಿದಂತಿರುವುವು.

೩೫ ಗರ್ಜಿಸುತ್ತಾ ಗಿರಿಗುಹೆಗಳನ್ನು ಪ್ರವೇಶಿಸುತ್ತಿರುವ ಉನ್ಮತ್ತವಾರಿಗಳು ಶತ್ರು ಪುರಗಳನ್ನು ಪ್ರವೇಶಿಸಿ, ಅವರನ್ನೆಲ್ಲಾ ಕೊಂದು ಕೂಗುವ ಭೂಪತಿಗಳಂತೆ ಇರುವುವು

೩೬. ನಕ್ಷತ್ರಗಳ ಮಹಾರ್ಭಟದಿಂದ ತುಂಬಿರುವ ಆಕಾಶ ಗೇಹದಿಂದ ಓಡಿ ಬಂದ ನಭಶ್ಚರರು ಒದ್ದಾಡುತ್ತಿರಲು, ವನ ಪಂಕ್ತಿಗಳು ಉರುಳಿಬಿದ್ದಿರುವ ಕಾನನ ದಂತೆ ಆಕಾಶವು ಕಾಣುತ್ತಿರುವುದು

೩೭. ರೆಕ್ಕೆಗಳು ಹುಟ್ಟಿದ ಪರ್ವತಗಳಂತೆ ಎದ್ದು ಬರುತ್ತಿರುವ ಮಹಾ ತರಂಗಗಳಿಂದ ಆಕಾಶವೆಲ್ಲವೂ ತುಂಬಿ ಹೋಗಿರಲು, ಆ ಆರ್ಭಟದ ಮಹಾರವ ದಿಂದ ಮುನ್ನುಗ್ಗುತ್ತಿರುವ, ಆ ತರಂಗಗಳನ್ನು ಮರುಭೂಮಿಯು ನುಂಗುತ್ತಿರಲು ತರಂಗಗಳು ಚಲಿಸುತ್ತಿರುವ ಪರ್ವತಗಳಂತೆ ಕಾಣವುವು.

೩೮. ಚಲಿಸುತ್ತಿರುವ ತೀರಗಳುಳ್ಳ ಪರ್ವತ ಸಮೂಹಗಳಿಂದ ಬೀಳುತ್ತಿರುವ ನಿರ್ಝರಿಣಿಗಳು, ಭರ್ರನೆ ಸುತ್ತುತ್ತಿರುವ ದೊಡ್ಡದೊಡ್ಡ ಸುಳಿಗಳು ಎಸೆಯುತ್ತಿರುವ ಮಕರಗಳ ಸಮೂಹಗಳು (ಇರುವುವು.)

ವಿಲಙ್ಘಿಶಿಖರಿಮಾಲಾಗ್ರಜಲಮಾತಂಗಯೋಧಿನಃ।
ನೃತ್ಯಂತೀವ ತರಂಗೌಘೈರ್ಜಲಾವಲನವೇಧಿನಃ ॥ ೪೪ ॥
ಜಲಾಚಲಾಚಲಾನ್ಯೋನ್ಯಸಂಘಟ್ಟಸ್ಫೋಟಪಂಡಿತಾಃ ।
ಬೃಹದ್ಗಿರಿವನವ್ರಾತಪ್ರಾಣಿಮಂಡಲಮಂಡಿತಾಃ ॥ ೪೫ ॥
ಉಡ್ಡಾಮರವನೇಭೇಂದ್ರಭೇರೀವಾದನಭಾಸುರೈಃ ।
ಅಸುರೈರಿವ ಪಾತಾಲಂ ಕಲ್ಲೋಲೈರಲಮಾಕುಲಾಃ ॥ ೪೬ ॥

---

ಹೋಗುವ ನೀರುಗಳು, ಹಸಿಯು ಕಟ್ಟಿಗೆಗಳ ರಸವು ತಮ್ಮನ್ನು ಎಲ್ಲಿ ಆರಿಸಿಬಿಡುವುದೋ ಎಂದು ಹೆದರಿ ತಣ್ಣಗಾಗುತ್ತಿರುವ ಮಹಾಗ್ನಿಗಳು.

೪೪. ಬೆಟ್ಟಗಳ ಕೋಡುಗಳಲ್ಲಿ ಹೋರಾಡುತ್ತಿರುವ ಜಲಮಾತಂಗಗಳು, ತರಂಗಗಳೊಡನೆ ಕುಣಿಯುವಂತೆ ಕುಣಿಯುತ್ತ ನೀರಿನ ಪ್ರವಾಹವನ್ನು ತಿರುಗಿಸುತ್ತಿರುವುವು.

೪೫. ನೀರಿನಲ್ಲಿರುವ ಬೆಟ್ಟಗಳು ಒಂದಕ್ಕೊಂದು ಘಟ್ಟಿಸಿ, ಒಡೆದು, ಹಾಳಾಗುವುದರಲ್ಲಿ ತಾವೆಂತಹ ಪಂಡಿತರು ಎಂಬುದನ್ನು ತೋರಿಸಿಕೊಳ್ಳುತ್ತಿರುವುವು. ದೊಡ್ಡ ಪರ್ವತಗಳಲ್ಲಿರುವ ವನಪಂಕ್ತಿಗಳಲ್ಲಿ ಇರುವ ಪ್ರಾಣಿ ಮಂಡಲಗಳಿಂದ ಆ ಜಲ ಪ್ರವಾಹಗಳೆಲ್ಲ ಅಲಂಕೃತವಾದಂತಿರುವುವು

೪೬. ಎದ್ದೆದ್ದು ಕುಣಿಯುತ್ತಿರುವ ವನ್ಯ ಗಜೇಂದ್ರಗಳ ಕೂಗಿನಿಂದ, ಅಸುರರೇ ನಾದರೂ ಪಾತಾಲದಲ್ಲಿ ಭೇರಿವಾದನಗಳಿಂದ ಕೂಗಾಡುತ್ತಿರುವರೋ ಎಂಬಂತೆ ದಿಕ್ಕುದಿಕ್ಕುಗಳೆಲ್ಲವೂ ಆಕುಲವಾಗಿರುವುವು.

(ಉಡ್ಡಾಮರಾಃ ಉತ್ಪ್ಲವಂತ್ಯೋ ಯಾ ಪ್ಲುತವನ ಗಜೇತ್ಪ್ಲುಲ್ಲ ಶರೀರ ಲಕ್ಷಣಾ ಭೇರ್ಯಸ್ತಾಸಾಂ ತರಂಗಾಗ್ರತಾಡನೈರ್ಯದ್ವಾದನಂತೇನ ಭಾಸುರೈಃ ಕಲ್ಲೋಲೈ ರ್ಬೃಹತ್ತರಂಗೈರಸುರೈಃ ಪಾತಾಲಮಿವ ಅಲಮತ್ಯಂತಮಾಕುಲಾ ಇತಿ—ತಾ. ಪ್ರ.)

ಅಧೋದಪತದುನ್ಮತ್ತದಿಗ್ಗಜಗದನಧ್ವನಿಃ ।
ಪಾತಾಲತಲತಾಲ್ವಂತರ್ವಿಸ್ಫೋಟಾಮೋಟನೋದ್ಭಟಃ ॥ ೪೭ ॥

ಚಂಚಲಾಚಲಕೀಲೋರ್ವೀ ಚಚಾಲ ಕ್ಷಣಚಾಲಿತಾ ।
ಲೋಲಾ ಶೈವಾಲವಲ್ಲೀವ ವ್ಯಾಲೋಲಾಂಭೋಧಿಲಂಘಿತಾ ॥ ೪೮ ॥

ಅಥ ಮರ್ಮರನಿರ್ಘೋಷಸಂವರ್ತಕಾಡಂಬರಾನ್ವಿತಾ ।
ಪುಸ್ಫೋಟೇವ ಪತಂತೀ ದ್ಯೌರ್ದಿಶಾಂ ಪ್ರತಿರವಾರವೈಃ ॥ ೪೯ ॥

ಆವರ್ತವಲನಾಕಾರಾಃ ಕೇತವಃ ಪೇತುರಂಬರಾತ್ ।
ಹೇಮರತ್ನಮಯಾ ಮುಕ್ತಾಃ ಸಿಂಧೂರಭುಜಗಾ ಇವ ॥ ೫೦ ॥

೪೭. ನೀರು ಬೀಳುತ್ತಿರುವುದರಿಂದ ಸೊಂಡಿಲನ್ನೆತ್ತಿಕೊಂಡು ದಿಗ್ಗಜಗಳು ಆರ್ಭಟಿಸುತ್ತಿರಲು ಪಾತಾಲ ತಲವು ಆ ಧ್ವನಿಗೆ ಒಡೆಯುವುದೋ, ಉಂಡೆಯಾಗುವುದೋ, ಎಂಬಂತಾಗುತ್ತಿರುವುದು.

(ಆಸ್ಫೋಟನೇನ ಬಂಧನಿಕರಾಳೇನ — ತಾ. ಪ್ರ.)

೪೮. ಹೀಗೆ ದಿಗ್ಗಜಗಳು ಓಡಾಡುವುದಕ್ಕೆ ಆರಂಭಿಸಲು, ಭೂಮಿಯು ಅಚಲವಾದ ಕೀಲುಗಳೆಲ್ಲವೂ ಅಲಾಡಿ ಭೂಮಿಯೂ ಒಂದು ಗಳಿಗೆ ಅಲ್ಲಾಡಿ ಹೋಯಿತು. ಆಗ ಸಮುದ್ರಗಳೆಲ್ಲವೂ ಒಳನುಗ್ಗಲು ಶೈವಾಲ ಪಂಕ್ತಿಯಂತೆ ಅತಿ ಮನೋಹರವಾಗಿತ್ತು.

೪೯. ಪ್ರಳಯಮೇಘಗಳ ಸಿಡಿಲು ಗುಡುಗು ಮೊದಲಾದ ಆಡಂಬರಗಳ ಮಹಾಧ್ವನಿಯು ದಿಕ್ಕುವಿದಿಕ್ಕುಗಳಲ್ಲಿ ಪ್ರತಿಫಲಿಸಿ ಬಂದು ಇನ್ನೂ ಭಾರಿಯಾಗಲು ಭೂಮಂಡಲಕ್ಕೆ ಭೂಮಂಡಲವೇ ಒಡೆದಂತೆ ಕಾಣುವುದು.

೫೦ ಸುತ್ತಿಸುತ್ತಿಕೊಂಡು ಬೀಳುವ ಧೂಮಕೇತುಗಳು ಆಕಾಶದಿಂದ ಬಿದ್ದುವು. ಅದನ್ನು ನೋಡಿದರೆ, ಹೇಮ ರತ್ನಮಯಗಳಾಗಿರುವ ಸಿಂಧೂರ ವರ್ಣದ ಹಾವುಗಳನ್ನು ಯಾರಾದರೂ ಮೇಲಿನಿಂದ ಬಿಟ್ಟರೋ ಎಂಬಂತಿತ್ತು.

ಕಕುದ್ಭ್ಯೋ ನಭಸೋ ಭೂಮೇರುದಗುರ್ದಗ್ಧದಿಕ್ತಟಾಃ ।
ಚಲಜ್ಜ್ವಾಲಾಜಟಾಟೋಪಾ ವಿವಿಧೋತ್ಪಾತಪಂಕ್ತಯಃ ॥ ೫೧ ॥

ಪೃಥ್ವ್ಯಾದೀನ್ಯಸುರಾದೀನಿ ಬ್ರಹ್ಮೋಽಸ್ಮ್ಯಕ್ತಾನಿ ಸರ್ವತಃ ।
ದ್ವಿವಿಧಾನಿ ಮಹಾಭೂತಾನ್ಯಲಂ ಸಂಕ್ಷೋಭಮಾಯಯುಃ ॥ ೫೨ ॥

ಚಂದ್ರಾರ್ಕಾನಿಲಶಕ್ರಾಗ್ನಿಯಮಾಃ ಕೋಲಾಹಲಾಕುಲಾಃ ।
ಪರಿಪಾತಪರಾ ಆಸನ್ಬ್ರಹ್ಮಲೋಕಗತೇಶ್ವರಾಃ ॥ ೫೩ ॥

ಕಂಪೈಃ ಕಟಕಟಾರಾವಪತತ್ಪಾದಪಪಂಕ್ತಯಃ।
ಭೂಮೇರಭ್ವಭವನ್ಭೂರಿದೋಲಾನ್ದೋಲನಮುದ್ರಯಃ ॥ ೫೪ ॥

---

೫೧. ದಿಕ್ಕುಗಳಿಂದ, ಆಕಾಶದಿಂದ, ಭೂಮಿಯಿಂದ, ಚಲಿಸುತ್ತಿರುವ ಜ್ವಾಲಾ ಜಟೆಗಳ ಆಟೋಪಗಳುಳ್ಳ ವಿವಿಧವಾದ ಉತ್ಪಾತ ಪಂಕ್ತಿಗಳು ಎದ್ದು ದಿಕ್ತಟಗಳನ್ನು ಸುಟ್ಟವು.

೫೨. ಪೃಥಿವ್ಯಾದಿ ಲೋಕಗಳೂ ಅಸುರಾದಿ ಲೋಕಗಳೂ ಆ ಲೋಕಗಳುಳ್ಳ ಬ್ರಹ್ಮಾಂಡಕ್ಕೆ ಅಧಿಪತಿಯಾದ ಬ್ರಹ್ಮನು ಅಭಿಮಾನವನ್ನು ತ್ಯಜಿಸಲು, ದ್ವಿವಿಧವಾದ (?) ಮಹಾಭೂತಗಳೊಡನೆ ಸಂಕ್ಷೋಭವನ್ನು ಹೊಂದಿದವು.

೫೩. ಚಂದ್ರ, ಸೂರ್ಯ, ವಾಯು, ಇಂದ್ರ, ಅಗ್ನಿ, ಯಮ, (ಮೊದಲಾದ) ಬ್ರಹ್ಮಲೋಕದಲ್ಲಿದ್ದ ಈಶ್ವರರೆಲ್ಲರೂ ಕೋಲಾಹಲಗಳಿಂದ ವ್ಯಾಕುಲರಾಗಿ ಎಲ್ಲರೂ ಕೆಳಕ್ಕೆ ಬಿದ್ದುಹೋದರು.

೫೪. ಅಲ್ಲಾಡಿ ಅಲ್ಲಾಡಿ ಕಟಕಟನೆ ಶಬ್ದಮಾಡುತ್ತಾ ಹೆಮ್ಮರಗಳ ಸಾಲುಗಳು ಮುರಿದು ಬಿದ್ದವು. ಭೂಮಿಯ ಆಂದೋಲನದಿಂದ ಪರ್ವತಗಳೂ ಕೂಡ ಭೂಸಮವಾದುವು.

ಭೂಕಂಪಕೋಲಿಕೈಲಾಸಮೇರುಮಂದರಕಂದರಾಃ ।
ಪೇತುಃ ಕಲ್ಪತರೂನ್ಮುಕ್ತಾ ರಕ್ತಸ್ತಬಕವೃಷ್ಟಯಃ　　　　॥ ೫೫ ॥

ಲೋಕಾಂತರಾದ್ರಿಪುರವಾರಿಧಿಕಾನನಾಂತ-
ಮುತ್ಪಾತಕಲ್ಪಪವನೇನ ಮಿಥೋ ಹತಾನಾಂ ॥
ಕೋಲಾಹಲೈರ್ಜಗದಭೂತ್ಪರಿಕೀರ್ಣಶೀರ್ಣಂ ।
ಸ್ವರ್ಣಾರ್ಣವೇ ತ್ರಿಪುರಸ್ಪುರ ಇವಾಭಿಪಾತೈಃ　　　　॥ ೫೬ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಕಲ್ಪಕ್ಷೋಭ ವರ್ಣನಂ" ನಾಮ
ಏಕಸಪ್ತತಿತಮಃ ಸರ್ಗಃ

೫೫. ಭೂಕಂಪದಿಂದ ಅಲ್ಲಾಡಿ ಕೈಲಾಸ, ಮೇರು, ಮಂದರ, ಮೊದಲಾದ ಪರ್ವತಗಳೆಲ್ಲವೂ ನೆಲಸಮವಾದುವು. ಕಲ್ಪತರುಗಳಲ್ಲಿದ್ದ ರಕ್ತಸ್ತಬಕಗಳೆಲ್ಲವೂ ಕತ್ತರಿಸಿ ಬಿದ್ದುಹೋದುವು.

೫೬. ಲೋಕಾಂತರಗಳಲ್ಲಿರುವ ಅದ್ರಿಪುರವಾರಿಧಿ ಕಾನನಗಳು ಕೊನೆಯಾಗಿ ಎಲ್ಲವನ್ನೂ ಉತ್ಪಾತ ಪ್ರಲಯಮಾರುತನು ಧ್ವಂಸಮಾಡಿದನು. ಆ ಕೋಲಾಹಲಕ್ಕೆ ಜಗತ್ತು ಜರ್ಝರಿತವಾಗಿ ಹೋಯಿತು. (ರುದ್ರಬಾಣದಿಂದ ದಗ್ಧವಾಗಿ) ತ್ರಿಪುರಗಳು ಪೂರ್ಣವಾದ ಸಮುದ್ರದಲ್ಲಿ ಬಿದ್ದಾಗ ಆಗುವಂತೆ ಆಗಿ ಹೋಯಿತು.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಕಲ್ಪಕ್ಷೋಭ ವರ್ಣನ" ಎಂಬ
ಎಪ್ಪತ್ತೊಂದನೆಯ ಸರ್ಗವು.

# ದ್ವಿಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಅಥಾಕೃಷ್ಟವತಿ ಪ್ರಾಣಾನ್ಸ್ವಯಂಭುವಿ ನಭೋಭಣವಃ ।
ವಿರಾಡಾತ್ಮನಿ ತತ್ಯಾಜ ವಾತಸ್ಕಂಧಸ್ಥಿತಃ ಸ್ಥಿತಿಂ ॥ ೧ ॥

ತೇ ಹಿ ತಸ್ಯ ಕಿಲ ಪ್ರಾಣಸ್ತೇನ ಕ್ರಾಂತೇಷು ತೇಷ್ವಪಿ ।
ಋಕ್ಷಚಕ್ರೇ ಸ್ಥಿತಿಂ ಕೋಽನ್ಯೋ ಧತ್ತೇ ಭೂತೈಕಧಾರಿಣೀಂ ॥ ೨ ॥

ವಾತಸ್ಕಂಧೇ ಸಮಾಕ್ರಾಂತೇ ಬ್ರಹ್ಮಣಾ ಪ್ರಾಣಮಾರುತೇ ।
ಸಮಂ ಗಂತುಂ ಪರಿತ್ಯಜ್ಯ ಸಂಸ್ಥಿತಿಂ ಕ್ಷೋಭಮಾಗತೇ ॥ ೩ ॥

---

# ಎಪ್ಪತ್ತೆರಡನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಆ ಬ್ರಹ್ಮಾಂಡಕ್ಕೆ ಅಧಿಪತಿಯಾದ ಬ್ರಹ್ಮನು ತನ್ನ ಪ್ರಾಣಗಳನ್ನು ಆಕರ್ಷಣ ಮಾಡಿಕೊಂಡು ಉಪಸಂಹಾರ ಮಾಡಲು, ಅಲ್ಲಿದ್ದ ವಾಯುವು ಗ್ರಹನಕ್ಷತ್ರಗಳನ್ನು ಅವವುಗಳ ಸ್ಥಾನದಲ್ಲಿಟ್ಟಿರಬೇಕಾದ ತನ್ನ ಕಾರ್ಯವನ್ನು ತ್ಯಜಿಸಿದನು.

೨ (ಗ್ರಹನಕ್ಷತ್ರಗಳನ್ನು ಹಿಡಿದು ಸ್ವಸ್ಥಾನದಲ್ಲಿಟ್ಟಿರುವ) ಬ್ರಹ್ಮನ ಪ್ರಾಣಗಳು, ತಮ್ಮ ಸ್ಥಿತಿಯನ್ನು ಬಿಟ್ಟು ಹಿಂತಿರುಗಿದ ಮೇಲೆ, (ಉಪಸಂಹೃತವಾದ ಮೇಲೆ) ನಕ್ಷತ್ರ ಚಕ್ರದಲ್ಲಿ ಭೂತಧಾರಿಣಿಯಾದ ಸ್ಥಿತಿಯನ್ನು ವಹಿಸುವವರು ಯಾರು ?

೩. ಆ ಬ್ರಹ್ಮಾಂಡದ ಬ್ರಹ್ಮನು ಪ್ರಾಣವಾಯುವನ್ನು ಉಪಸಂಹಾರ ಮಾಡಲು, ವಾತಸ್ಕಂಧವೂ ಉಪಸಂಹೃತವಾಗಿ, ಎಲ್ಲವೂ ಕ್ಷೋಭವಾಗಿ, ಪ್ರಾಣ ವಾಯುಗಳು ಆತನೊಡನೆ ಹೊರಟುಹೋಗಲು ಸಂಸ್ಥಿತಿಯನ್ನು ಬಿಟ್ಟುಬಿಟ್ಟವು

ನಿರಾಧಾರಾಃ ಸಮಾತಾಗ್ನಿ ದಾಹೋಲ್ಮುಕವದಾಪತನ್ ।
ವ್ಯೋಮ್ನಸ್ತಾರಾಸ್ತರೋಃ ಪುಷ್ಪನಿಕರಾ ಇವ ಭೂತಲೇ ॥ ೪ ॥

ಕಾಲಪಾಕಚಲನ್ಮೂಲಾ ಜಗತ್ಖಂಡಫಲಾಲಯಾಃ ।
ಪ್ರಶಾಂತಪವನಾಧಾರಾ ವಿಮಾನಾವಲಯೋಽಪತನ್ ॥ ೫ ॥

ಪ್ರಲಯೋನ್ಮುಖತಾಂ ಯಾತೇ ಬ್ರಾಹ್ಮೇ ಸಂಕಲ್ಪನೇಂಧನೇ ।
ಸಿದ್ಧಾನಾಂ ಗತಯಃ ಶೇಮುರಿದ್ಧಾ ನಾನಾರ್ಚಿಷಾಮಿವ ॥ ೬ ॥

ಪ್ರಭ್ರಮಂತ್ಯೋಽಂಬರೇ ಕಲ್ಪಮಾರುತೈಸ್ತಸುತೂಲವತ್ ।
ಸ್ವಶಕ್ತ್ಯಪಚಯೇ ಮೂಕಾಃ ಸಿದ್ಧಸಂತತಯೋಽಪತನ್ ॥ ೭ ॥

ಸಂಕಲ್ಪದ್ರುಮಜಾಲಾನಿ ಸೇಂದ್ರಾದಿನಗರಾಣಿ ಚ ।
ಪೇತುರ್ಭೂಕಂಪಲೋಲಸ್ಯ ಶಿರಾಂಸ್ಯಮರಭೂಭೃತಃ ॥ ೮ ॥

---

೪. ಆಗ ತಾರೆಗಳೆಲ್ಲವೂ ನಿರಾಧಾರವಾಗಿ ಹೋದುವು. ಗಾಳಿಯುಳ್ಳೆಯೂ, ಬೆಂಕಿಯು ಬಿದ್ದಾಗಲೂ, ಮರಗಳಿಂದ ಉದುರುವ ಹೂಗಳಂತೆ, ಆ ನಕ್ಷತ್ರಗಳು ಆಕಾಶದಿಂದ ಉದುರಿದುವು.

೫. ಕಾಲಪಾಕದಿಂದ ಅವುಗಳ ಆಧಾರವು ಅಲ್ಲಾಡಲು, ಜಗತ್ತಿನ ಖಂಡ ಖಂಡಗಳಲ್ಲಿ ಆರ್ಜಿಸಿದ (ಪುಣ್ಯ) ಫಲಗಳು ಅನುಭವದ ಭೂಮಿಗಳಾದ ವಿಮಾನ ಪಂಕ್ತಿಗಳು ಅವುಗಳನ್ನು ಹಿಡಿದಿರುವ ಪವನನು ಇಲ್ಲವಾಗಲು, ಬಿದ್ದುಹೋದುವು.

೬. ಬ್ರಹ್ಮಸಂಕಲ್ಪವೆಂಬ ಇಂಧನವು ಪ್ರಳಯದ ಕಡೆ ತಿರುಗಿ ಇಲ್ಲವಾಗಲು, ಉರಿಯುತ್ತಿದ್ದ ಜ್ವಾಲೆಗಳು ಆರಿಹೋದಂತೆ, ಸಿದ್ಧರ ಗತಿಗಳು ಇಲ್ಲವಾದುವು

೭. ಆಕಾಶದಲ್ಲಿ ಕಲ್ಪಮಾರುತವು ಬೀಸುತ್ತಿರಲು, ಸೂಕ್ಷ್ಮವಾದ ಹತ್ತಿಯಂತೆ ಹಾರುತ್ತಿದ್ದ ಸಿದ್ಧರ ಗುಂಪುಗಳು ತಮ್ಮ ಶಕ್ತಿಯು ನಷ್ಟವಾಗಲು, ಮೂಕವಾಗಿ ಬಿದ್ದುಹೋದವು.

೮. ಸಂಕಲ್ಪವೆಂಬ ದ್ರುಮಗಳ ಗುಂಪಾಗಿದ್ದ ಇಂದ್ರಾದಿ ನಗರಗಳಿಂದ ಕೂಡಿದ್ದ ದೇವಪರ್ವತ ಶಿಖರಗಳು, ಭೂಕಂಪದಿಂದ ಅಲ್ಲಾಡಿದಂತೆ ಅಲ್ಲಾಡಿ ಬಿದ್ದುಹೋದುವು.

ಶ್ರೀರಾಮ ಉವಾಚ:—

ಚಿತಿಸಂಕಲ್ಪಮಾತ್ರಾತ್ಮಾ ವಿರಾಡ್ ಬ್ರಹ್ಮಾ ಜಗದ್ವಪುಃ ।
ಕಿಮಂಗಂ ಯಸ್ಯ ಭೂರ್ಲೋಕಃ ಕಿಂ ಸ್ವರ್ಗಃ ಕಿಂ ರಸಾತಲಂ ॥ ೯ ॥

ಕಥಮೇತಾನಿ ಚಾಂಗಾನಿ ಬ್ರಹ್ಮಂಸ್ತಸ್ಯ ಸ್ಥಿತಾನಿ ಚ ।
ಕಥಂ ವಾ ಸೋಽಂತರೇ ತಸ್ಯ ಸ್ವಸ್ಯೈವ ವಪುಷಃ ಸ್ಥಿತಃ ॥ ೧೦ ॥

---

ಶ್ರೀರಾಮನು ಕೇಳಿದನು:—

೯. ಚಿತಿಯ ಸಂಕಲ್ಪವೇ ಆತ್ಮವಾಗುಳ್ಳ ವಿರಾಟ್ ಸ್ವರೂಪನು, ಬ್ರಹ್ಮಾಂಡವೇ ದೇಹವಾಗುಳ್ಳವನು ಬ್ರಹ್ಮನೂ ಆ ಬ್ರಹ್ಮಾಂಡದಲ್ಲಿಯೇ ಇರುವವನು. ಅವನಿಗೆ ಸ್ವರ್ಗಮರ್ತ್ಯಪಾತಾಳಗಳು ಯಾವ ಯಾವ ಅಂಗಗಳು ?

(ನನು ಬ್ರಹ್ಮಣಃ ಸ್ಥೂಲದೇಹೋ ಬ್ರಹ್ಮಾಂಡರೂಪೋ ವಿರಾಟ್ ತದಂತರ್ಗತಃ ಸತ್ಯಲೋಕ ನಿವಾಸೀ ಚತುರ್ಮುಖ ದೇಹಸ್ತು ತನ್ಮನಃ ಕಲ್ಪಿತಃ ಪ್ರಾತಿಭಾಸಿಕ ಏವ । ನಚ ಸೋಽಪಿ ತಸ್ಯ ಸ್ಥೂಲದೇಹ ಏವೇತಿ ಯುಕ್ತಂ । ವಿರಾಡ್ ದೇಹಾಂತಃ ಸ್ಥಿತ್ಯಯೋಗಾತ್ । ನ ಹಿ ಕಸ್ಯಚಿದಪಿ ಸ್ಥೂಲದೇಹಾಂತಃ ಸ್ಥೂಲ ದೇಹಾಂತರಂ ದೃಷ್ಟಂ ಶ್ರುತಂ ವಾ ಸಂಭಾವಯಿತುಂ ವಾಶಕ್ಯಂ। ಏವಂ ಸತಿಮಾನಸೇ ಚತುರ್ಮುಖದೇಹೇ ಪ್ರಾತಿಭಾಸಿಕೇ ಸ್ವಾಪ್ನದೇಹ ಪ್ರಾಯೇ ಪ್ರಾಣೋಪಸಂಹಾರ ಸಂಕಲ್ಪೇನ ಕಥಂ ವಿರಾಡ್‌ದೇಹ ವಿಷ್ಟಂಭಕ ಪ್ರಾಣಸ್ಥಾನೀಯ ವಾತಸ್ಕಂಧಾದಿ ಕ್ಷಯಃ। ನಹಿ ಸ್ವಪ್ನದೇಹೇ ಪ್ರಾಣಾದ್ಯುಪ ಸಂಹಾರೇಣ ಮರಣದರ್ಶನೇ ಜಾಗ್ರತ್ಪ್ರಸಿದ್ಧ ಸ್ಥೂಲದೇಹಕ್ಷಯೋ ದೃಶ್ಯತ ಇತ್ಯಾಶಯೇನ ರಾಮಃ ಶಂಕತೇ–ಚಿತಿ ಸಂಕಲ್ಪಮಾತ್ರಾತ್ಮೇತ್ಯಾದಿನಾ । ಬ್ರಹ್ಮಾ ಚತುರ್ಮುಖಶ್ಚಿತಿ ಸಂಕಲ್ಪಮಾತ್ರಂ ಮನಸ್ತದಾತ್ಮ ಜಗದ್ವಪುರ್ಬ್ರಹ್ಮಾಂಡ ಶರೀರಕಃ ಪ್ರಸಿದ್ಧಃ। ತಸ್ಯಸಂಕಲ್ಪ ಮಾತ್ರಾತ್ಮನಶ್ಚತುರ್ಮುಖಸ್ಯ ಭೂರ್ಲೋಕಾದಯೋ ಲೋಕಾ ಅಂಗಂ ಅವಯವಾಃ ಕಿಂ। ನಹ್ಯ ಮೂರ್ತಸ್ಯಮನಸೋ। ಮೂರ್ತಾನ್ಯಂಗಾನಿ ಸಂಭವಂತಿ। ಯದಾಪಿ ಸಂಭವಂತಿ ತದಾ ಭೂರ್ಲೋಕಃ ಕಿಮಂಗಂ, ಪಾದಾ, ಅನ್ಯೋವಾ ಸ್ವರ್ಗಶ್ಚ ಕಿಮಂಗಂ ರಸಾತಲಂ ಚ ಕಿಮಂಗಂ ಕೋಽವಯವ ಇತಿ ವಿಭಾಗ ಪ್ರಶ್ನಃ ।—ತಾ.ಪ್ರ.)

೧೦. ಎಲೈ ಬ್ರಹ್ಮನೆ, ಈ ಅಂಗಗಳು ಇರುವುದಾದರೂ ಹೇಗೆ ? ಅಥವಾ

ಬ್ರಹ್ಮಾ ಸಂಕಲ್ಪಮಾತ್ರಾತ್ಮಾ ನಿರಾಕೃತಿರಿದಂ ಸ್ಥಿತಂ ।
ಜಗದಿತ್ಯೇವ ಜಾತೋ ಮೇ ನಿಶ್ಚಯಃ ಕಥಯೇತರತ್ ॥ ೧೧ ॥

ಶ್ರೀ ವಸಿಷ್ಠ ಉವಾಚ :—

ಆದೌ ತಾವದಿದಂ ನಾಸನ್ನ ಸದಾಸ್ತೇ ನಿರಾಮಯಂ ।
ಚಿನ್ಮಾತ್ರಪರಮಾಕಾಶ ಮಾಶಾಕೋಶೈಕಪೂರಕಂ ॥ ೧೨ ॥

ತಸ್ಮಾನ್ನಮಾಕಾರತಾಂ ಜ್ಞಪ್ತೇಶ್ಚೇತ್ಯಮಿತ್ಯವಬುಧ್ಯತೇ ।
ಸ್ವರೂಪಮತ್ಯಜನ್ನಿತ್ಯಂ ಚಿತ್ತ್ವಾದ್ವಸ್ತುವತಿ ಚೇತನಂ ॥ ೧೩ ॥

---

ಬ್ರಹ್ಮನು ಅವುಗಳಲ್ಲಿ ಇರುವನೆಂದರೆ, ತಾನೇ ತನ್ನ ದೇಹದ ಅಂಗಗಳಲ್ಲಿ ಇರುವು ದೆಂತು ?

(ತಸ್ಯಾಪಿ ಚತುರ್ಮುಖ ಬ್ರಹ್ಮಣಃ ವಿಸ್ತೃತತ್ಸಂಕಲ್ಪನೇನ ಬ್ರಹ್ಮಾಂಡಾತ್ಮತಾ ಯದುಚ್ಯೇತ, ತರ್ಹಿ ಸ್ವಸ್ಯೈವ ವಪುಷ ಏತಸ್ಯ ಬ್ರಹ್ಮಾಂಡಸ್ಯಾಂತಃ ಸತ್ಯ ಲೋಕೇ ಕಥಂ ಸ್ಥಿತಃ ॥—ತಾ. ಪ್ರ.)

೧೧. ಬ್ರಹ್ಮನು ಸಂಕಲ್ಪಮಾತ್ರಾತ್ಮನಾದ್ದರಿಂದ ನಿರಾಕೃತಿಯು. (ಅರ್ಮೂ ರ್ತನು) ಈ ಜಗತ್ತಾದರೋ ಮೂರ್ತವು ಇದು ನನ್ನ ನಿಶ್ಚಯವು. ಇದು ಸರಿಯಲ್ಲ ದಿದ್ದರೆ ಬೇರೆಯೇನು ಹೇಳು.

ಶ್ರೀ ವಸಿಷ್ಠನು ಹೇಳಿದನು:—

೧೨. ಆದಿಯಲ್ಲಿ ಈ ಸತ್-ಅಸತ್ ಗಳು ಯಾವುದೂ ಇಲ್ಲವೆ, ನಿರಾಮಯ ವಾದ ಬ್ರಹ್ಮವೊಂದೇ ಇತ್ತು. ಅದು ಚಿನ್ಮಾತ್ರನಾದ ಪರಮಾಕಾಶವಾಗಿತ್ತು ಅದು ಆಶಾಕೋಶಗಳನ್ನೆಲ್ಲ ಪೂರಯಿಸುತ್ತಿತ್ತು.

(ತತ್ರ ಪ್ರಥಮಂ ಪೃಷ್ಟಂ ಸೃಷ್ಟೇಃ ಪೂರ್ವಸ್ಯ ಮನೋಮಹದಾದ್ಯವ್ಯಕ್ತಂ ತದವಯವಾನಾಂತದವಧಿಸತ್ತ್ವಂ ಚಾಸಾಧನಮಿತಿ ಭೂಮಿಕಾಂ ಮೂಲೋದ್ಘಾ ಟನೇನ ರಚಯತಿ ಆದಾವಿತ್ಯಾದಿನಾ । ಆಶಾನಾಂ ಸರ್ವಾಭಿಪ್ರಾಯಾಣಾಂ ದಿಶಾಂಚ ಕೋಶಾನಾಂ ಭೂಮಾನಾಂ ಸತ್ತ್ವಸತ್ತ್ವಾದೇಕಸ್ಯೈವ ಪೂರಕಂ—ತಾ. ಪ್ರ.)

೧೩. ಆದ. ತನ್ನ ಸ್ವರೂಪವನ್ನು ಈ ಜ್ಞಪ್ತಿ (ಪ್ರಜ್ಞಾನದ) ...

ವಿದ್ಧಿ ತಚ್ಚೇತನಂ ಜೀವಂ ಸಘನತ್ವಾನ್ಮನಃ ಸ್ಥಿತಂ ।
ಏತಾವತಿ ಸ್ಥಿತಿಜಾಲೇ ನ ಕಿಂಚಿತ್ಸಾಕೃತಿ ಸ್ಥಿತಂ ॥ ೧೪ ॥

ಶುದ್ಧಂ ವ್ಯೋಮ್ನೈವ ಚಿದ್ವ್ಯೋಮ ಸ್ಥಿತಮಾತ್ಮನಿ ಪೂರ್ವವತ್ ।
ಯದೇತತ್ಪ್ರತಿಭಾತಂ ತು ತದನ್ಯನ್ನ ಶಿವಾತ್ತತಃ ॥ ೧೫ ॥

---

ಅನುಭವಿಸುವುದು. ಅದು ಹಾಗೆ ದೃಶ್ಯವು ಹೊರಗಿರುವುದೆಂದು ಕಾಣುತ್ತಿದ್ದರೂ ತನ್ನ ಸ್ವರೂಪವನ್ನು ಬಿಡದೆ ಚಿತ್ತ್ವವಾದ್ದರಿಂದ ಚೇತನವಾಗುವುದು.

೧೪. ಆ ಚೇತನವೇ ಜೀವವೆಂದು ತಿಳಿ. ಅದು ಘನವಾದರೆ ಮನಸ್ಸಾಗುವುದು. ಹೀಗಿರುವುದರಿಂದ ಸ್ಥಿತಿಸ್ವರೂಪವಾದ ದೃಕ್, ದೃಶ್ಯ, ದರ್ಶನಗಳಲ್ಲಿ ಯಾವುದೂ ಸಾಕೃತಿಯಲ್ಲ (ಮೂರ್ತವಲ್ಲ)

(ಪಂಚ ಭೂತಗಳಲ್ಲಿ ಆಕಾಶವಾಯುಗಳು ಮೂರ್ತಗಳಲ್ಲ; ಅಗ್ನಿ, ಜಲ, ಪೃಥ್ವಿಗಳು ಮೂರ್ತಗಳು. ಆದರೆ ಈ ಮೂರು ಭೂತಗಳೂ ಆ ಎರಡು ಭೂತಗಳಿಂದ ಹುಟ್ಟಿದವು ಹೀಗಾಗಿ, ಅಮೂರ್ತದಿಂದ, ಮೂರ್ತವು ಹುಟ್ಟಿದೆಯೆಂದ ಮೇಲೆ, ಮೂರ್ತಕ್ಕೆ ನಿಜವಾದ ಸ್ವಂತಸ್ವರೂಪವೂ ಒಂದಿದೆಯೇನು ?)

(ತತ್ರಬೋಧ್ಯ ಬೋಧ ಬೋದ್ಧೃ ಭಾವಲಕ್ಷಣ ತ್ರಿಪುಟೀಮನನೇನ ಸಘನತ್ವಾದ್ಘನೀಭಾವಾನ್ಮನೋ ವೇಷೇಣ ಸ್ಥಿತಂ ತಥಾ ಭೂತಂ ಚೇತನಂ ಜೀವಂ ವಿದ್ಧಿ । ಸ್ವಸ್ವರೂಪಮತ್ಯಜದಿತಿ ಯದುಕ್ತಂ ತದುಪಪಾದಯತಿ–ಏತಾವದೇತಿ । ಏತಾವತಿ ತ್ರಿಪುಟೀ ಜೀವಭಾವ ಪರ್ಯಂತೇ ಸ್ಥಿತಿಜಾಲೇ ಅಧ್ಯಾಸೇನ ಸಂಪನ್ನೇಽಪಿ ತೇಷು ನ ಕಿಂಚಿದಪಿ ಸಾಕೃತಿ ಪರಸ್ಪರ ವ್ಯಾವೃತ್ತಾಕಾಶ ಸಹಿತಂ ರೂಪ ಪರಮಾರ್ಥತಃ ಸ್ಥಿತಂ ಕಿಂತು ಶುದ್ಧಂ ವ್ಯೋಮ್ನೈವ ಶೂನ್ಯಮೇವೇತಿ—ಪರೇಣ ಸಂಬಂಧಃ —ತಾ. ಪ್ರ)

೧೫. ಶುದ್ಧವಾದ ಆಕಾಶವೇ ಚಿದಾಕಾಶವು. ಅದು ಆತ್ಮನಲ್ಲಿ ಮೊದಲಿನಂತೆಯೇ ಇರುವುದು ಅದೇ ಪ್ರತಿಭಾತವಾಗುವುದು. ಹಾಗೆ ಆದರೂ, (ಪ್ರಾತಿಭಾಸಿಕಸ್ವರೂಪದಿಂದ ಕಾಣಿಸಿದರೂ) ಅದು ಶಿವವೇ ಅಲ್ಲದೆ ಇನ್ನೇನೂ ಅಲ್ಲ.

ಅಥ ತನ್ಮನ ಆಭೋಗಿ ಭಾವಿತಾಹಂಕೃತಿ ಸ್ಫುರತ್ ।
ಸಂಕಲ್ಪಾತ್ಮಕಮಾಕಾಶಮಾಸ್ತೇ ಸ್ತಿಮಿತಮಕ್ಷಯಂ ॥ ೧೬ ॥

ತತ್ಸಂಕಲ್ಪಚಿದಾಭಾಸನಭೋಽಹಮಿತಿ ಭಾವಿತಂ ।
ಅಸತ್ತಮೇವಾನುಭವತ್ಸಂನಿವೇಶಂ ಖಮೇವ ಖೇ ॥ ೧೭ ॥

ನೇತ್ಥಂ ಭಾವಿತವಾನಾಕಾರಂ ಪಶ್ಯತ್ಯನುಭವತ್ಯಪಿ
ಸಂಕಲ್ಪಾತ್ಮಕಂ ಶೂನ್ಯಮೇವ ದೇವ ಇತಿ ಸ್ಥಿತಂ ॥ ೧೮ ॥

ಶೂನ್ಯಮೇವ ಯಥಾಕಾರಿ ಸಂಕಲ್ಪನಗರಂ ಭವಾನ್ ।
ಪಶ್ಯತ್ಯೇವಮಸೌ ದೇಹಂ ಖೇ ಖಮೇವಾನುಭೂತವಾನ್ ॥ ೧೯ ॥

೧೬. ಅನಂತರ, ಆ ಮನಸ್ಸು ಅಹಂಕಾರವನ್ನು ಅಂಗೀಕರಿಸಿಕೊಂಡು, ಬೆಳೆದು ವಿಸ್ತಾರವಾಗುವುದು. ಆದರೂ ಸಂಕಲ್ಪಾತ್ಮಕವಾದ ಆಕಾಶವೇ ಆಗಿ, ಸ್ತಿಮಿತವಾಗಿ, ಅಕ್ಷಯವಾಗಿ ಇರುವುದು.

೧೭. ಆ ಸಂಕಲ್ಪ ಚಿದಾಭಾಸದ ಆಕಾಶವನ್ನೇ ತಾನು ಎಂದು ಭಾವಿಸಿಕೊಂಡು, ಅಸತ್ತಾದ ಸಂನಿವೇಶವಾಗಿ ಕಾಣುವ ಆಕಾಶವನ್ನು ಆಕಾಶದಲ್ಲಿಯೇ ಅನುಭವಿಸುವುದು.

(ಅಹಂಕಾರ ಕಲ್ಪನೋತ್ತರು ಸ್ಫುಲವೇತಕಲ್ಪನಾ ತಸ್ಯಾಪಸ್ತು ಭೂತ್ಯವೇತ್ಯಾದಿ—ವಾ ಪ್ರ )

೧೮. ತಾನು ಏನಾಗಿ ಭಾವಿಸಿಕೊಳ್ಳುವುದೋ ಅದನ್ನೇ ಕಾಣುವುದು. ಅನುಭವಿಸುವುದು: ತಾನು ನಿಜವಾಗಿಯೂ ಶೂನ್ಯವಾಗಿದ್ದರೂ ಸಂಕಲ್ಪಾತ್ಮಕವಾಗಿ ತಾನೇ ದೇವ ಎಂದುಕೊಂಡು ಇರುವುದು.

೧೯. ಸಂಕಲ್ಪ ನಗರಕ್ಕೆ ಆಕಾರವು ಇದ್ದರೂ ಅದನ್ನು ಹೇಗೆ ನೀನು ಶೂನ್ಯವಾಗಿಯೇ ಕಾಣುವೆಯೋ, ಹಾಗೆಯೇ ಬ್ರಹ್ಮನೂ ತನ್ನ ದೇಹವನ್ನು ಆಕಾಶದಲ್ಲಿ ಆಕಾಶವಾಗಿಯೇ ಅನುಭವಿಸುವನು.

ಸಂವಿದೋ ನಿರ್ಮಲತ್ವಾತ್ಸ ಯಾವದಿತ್ಥಂ ತಥಾವಿಧಂ ।
ಅನುಭೂಯಾನುಭವನಂ ಸ್ವೇಚ್ಛಯೈವೋಪಶಾಮ್ಯತಿ ॥ ೨೦ ॥

ಯದಾ ತತ್ತ್ವಪರಿಜ್ಞಾನಮಸ್ಮದಾದೇಸ್ತದಾತತಂ ।
ಇದಂ ಸಂಸರಣಂ ವಿದ್ಧಿ ಶೂನ್ಯಂ ಸತ್ಯಮಿವ ಸ್ಥಿತಂ ॥ ೨೧ ॥

ಯಥಾಭೂತಪರಿಜ್ಞಾನಾದತ್ರ ಶಾಮ್ಯತಿ ವಾಸನಾ ।
ಅದ್ವೈತಾನ್ನಿರಹಂಕಾರಾತ್ತತೋ ಮೋಕ್ಷೋಽವಶಿಷ್ಯತೇ ॥ ೨೨ ॥

ಏವಮೇಷ ಸ ಯೋ ಬ್ರಹ್ಮಾ ಸ ಏವೇದಂ ಜಗತ್ಸ್ಥಿತಂ ।
ವಿರಾಜೋ ಬ್ರಹ್ಮಣೋ ರಾಮ ದೇಹೋ ಯಸ್ತದಿದಂ ಜಗತ್ ॥ ೨೩ ॥

---

೨೦. ಆತನ ಸಂವಿತ್ತು ನಿರ್ಮಲವಾಗಿರುವುದರಿಂದ, ಆ ಬ್ರಹ್ಮನು, ಹೀಗೆ, (ಪ್ರಲಯಮೋಕ್ಷಾದಿ ಕಲ್ಪನೆಗಳನ್ನೂ) ಅನುಭವಿಸುವನು. ಅನುಭವಾನಂತರದಲ್ಲಿ ಸ್ವೇಚ್ಛೆಯಿಂದಲೇ ಅವೂ ಶಾಂತವಾಗುವುವು.

೨೧. ಯಾವಾಗ ನಮ್ಮೆಲ್ಲರ ಪರಿಜ್ಞಾನವುಂಟಾಗುವುದೋ ಆಗ ಸಂವಿತ್ತು ಆತತವಾಗಿ ಎಂದರೆ ಹರಡಿ, ಸಂಸಾರವಾಗುವುದು. ಆಗ ಶೂನ್ಯವೇ ಸತ್ಯದಂತೆ ಕಾಣುವುದು.

೨೨. (ಹೀಗೆ ಹರಡಿರುವ) ವಾಸನೆಯು ಯಥಾ ಭೂತವಾಗಿರುವ ಸತ್ಯಾರ್ಥದ ಅರಿವಾದಾಗ, ಶಾಂತವಾಗುವುದು. ವಾಸನಾಕ್ಷಯವಾದ ಮೇಲೆ, ಬ್ರಹ್ಮವಲ್ಲದೆ ಇನ್ನೇನೂ ಇಲ್ಲವಾಗಿ, ಅಹಂಕಾರವು ಇರುವುದಿಲ್ಲವಾಗಿ, ಆ ಕೂಡಲೇ ಮೋಕ್ಷವೊಂದೇ ಉಳಿಯುವುದು

(ಯಥಾಭೂತಂ ಪರಮಾರ್ಥಸತ್ಯಂ ಬ್ರಹ್ಮ ತತ್ಪರಿಜ್ಞಾನಾನ್ಮಿಥ್ಯಾವಾಸನಾ ಅತ್ರಾಸ್ಮಿನ್ನೇವ ಜನ್ಮನಿ ಶಾಮ್ಯತಿ ॥—ತಾ. ಪ್ರ)

೨೩. ಹೀಗೆ, ಎಲೈ ರಾಮ, ಬ್ರಹ್ಮನೋ ಅವನೇ ಈ ಜಗತ್ತು. ಆದರಿಂದ, ಎಲೈ ರಾಮನೇ, ವಿರಾಡ್ ಬ್ರಹ್ಮನ ದೇಹವು ಯಾವುದಿಗೆಯೋ ಅದೇ ಈ ಜಗತ್ತು.

ಸಂಕಲ್ಪಾಕಾಶರೂಪಸ್ಯ ತಸ್ಯ ಯಾ ಭ್ರಾಂತಿರುತ್ಥಿತಾ ।
ತದಿದಂ ಜಗದಾಭಾತಿ ತದ್ಬ್ರಹ್ಮಾಂಡಮುದಾಹೃತಂ　　॥ ೨೪ ॥

ಸರ್ವಮಾಕಾಶಮೇವೇದಂ ಸಂಕಲ್ಪಕಲನಾತ್ಮಕಂ ।
ವಸ್ತುತಸ್ತ್ವಸ್ತಿ ನ ಜಗತ್ತ್ವತ್ತಾಮತ್ತೇ ಚ ನ ಕ್ವಚಿತ್　　॥ ೨೫ ॥

ಕ್ವಚಿನ್ಮಾತ್ರೇಽಮಲೇ ವ್ಯೋಮ್ನಿ ಕಥಂ ವಾ ಕೇನ ವಾ ಜಗತ್ ।
ಕಿಂ ಜಾಯತೇ ಕಿಮತ್ರಾಸ್ತಿ ಕಾರಣಂ ಸಹಕಾರಿ ಯತ್　　॥ ೨೬ ॥

ಅತೋಽಲೀಕಮಿದಂ ಜಾತಮಾಲೀಕಂ ಪರಿದೃಶ್ಯತೇ ।
ಅಲೀಕಂ ಸ್ವದತೇಽಲೋಕಮೇವಂ ಪಶ್ಯತಿ ಶೂನ್ಯಕಂ　　॥ ೨೭ ॥

---

೨೪. ಸಂಕಲ್ಪಾಕಾಶರೂಪನಾದ ಆ ಬ್ರಹ್ಮನಿಗೆ ಯಾವ ಭ್ರಾಂತಿಯು ಹುಟ್ಟಿತೋ, ಅದೇ ಈ ಜಗತ್ತಾಗಿ ತೋರುವುದು: ಅದನ್ನೇ ಬ್ರಹ್ಮಾಂಡವೆನ್ನುವರು.

೨೫. ಸಂಕಲ್ಪರೂಪವಾಗಿ ಪ್ರಕಟವಾಗುವುದೆಲ್ಲವೂ ಆಕಾಶವೇ ಆದ್ದರಿಂದ ಜಗತ್ತು ಎನ್ನುವುದು ವಸ್ತುತಃ ಇಲ್ಲ. ಹಾಗೆಯೇ ನೀನು, ನಾನು ಎಂಬ ತ್ವತ್ತಾ, ಮತ್ತಾ,ಗಳೂ ಕೂಡ ಇಲ್ಲ

(ಜಾಗ್ರದುನ್ಮುಖತಾಯಾಂ ಸ್ವಾಪ್ನದೇಹಾಂಗೋಪ ಸಂಹಾರೇಣ ಸ್ವಾಪ್ನ ಭೂರಾದಿಲೋಕೋಪ ಸಂಹಾರವದ್ವಾ ತದುಪಸಂಹಾರಃ । ಯೋರಪಿ ಸಂಕಲ್ಪಾ ಕಾಶಮಾತ್ರತ್ವಾದಿತ್ಯಾಶಯೇನಾಹ—ತಾ ಪ್ರ)

೨೬. ಶುದ್ಧವಾದ ಆಕಾಶದಲ್ಲಿ ಎಲ್ಲೋ ಒಂದು ಕಡೆ ಕಾಣುವ ಈ ಜಗತ್ತು ಹೇಗೆ ಯಾರಿಂದ, ಏನಾಗಿ ಹುಟ್ಟಿತು ? ಏನಾಗಿ ಇರುವುದು ? ಇದಕ್ಕೆ ಸಹಕಾರಿ ಕಾರಣವಾದರೂ ಯಾವುದು ?

೨೭. ಅದರಿಂದ, ಈ ದೃಶ್ಯ ಪ್ರಪಂಚವು ಅಲೀಕವಾಗಿ ಹುಟ್ಟಿತು ; ಅಲೀಕ ವಾಗಿಯೇ ಕಾಣುತ್ತಿರುವುದು ಅಲೀಕವಾಗಿಯೇ ಅನುಭವವಾಗಿ ತೋರುವುದು ಅಲೋಕವನ್ನೇ ಶೂನ್ಯವಾದಾಕಾಶವು ನೋಡುವುದು.

(ಸ್ವದತೇ ಪ್ರಿಯಾಪ್ರಿಯಭಾವೇನ ಪ್ರಥತೇ । ಅಲೋಕಂ ನಿಷ್ಪ್ರಪಂಚಂ ಬ್ರಹ್ಮೈವ ಭ್ರಾಂತ್ಯಾ ಶೂನ್ಯಕಂ ಜಗಚ್ಛೂನ್ಯಂ ಖಮೇವ ಏವಂ ಜಗದ್ಭಾವೇನ ಪಶ್ಯತಿ ।—ತಾ. ಪ್ರ.)

ಜಗದಾದಿಕಯಾ ಭಾಸಾ ಚಿನ್ಮಾತ್ರಂ ಸ್ವದತೇ ಸ್ವತಃ ।
ಆತ್ಮಾನಾತ್ಮಾಂಬರೇ ದ್ವೈತೇ ಸ್ಪಂದನೇನೇವ ಮಾರುತಃ ॥ ೨೮ ॥

ಇದಂ ಕಿಂಚಿನ್ನ ಕಿಂಚಿದ್ವಾ ದ್ವೈತಾದ್ವೈತವಿವರ್ಜಿತಂ ।
ಚಿದಾಕಾಶಂ ಜಗದ್ವಿದ್ಧಿ ಶೂನ್ಯಮಚ್ಛಂ ನಿರಾಮಯಂ ॥ ೨೯ ॥

ಶಾಂತಾಶೇಷವಿಶೇಷೋಽಹಂ ತೇನ ರಾಘವ ಸಂಸ್ಥಿತಃ ।
ಸನ್ನೇವಾಸನ್ನಿವಾತಸ್ತ್ವಮೇವಮೇವಾಸ್ಸ್ವ ನಿರ್ಮನಾಃ ॥ ೩೦ ॥

ನಿರ್ವಾಸನಃ ಶಾಂತಮನಾ ಮೌನೀ ವಿಗತಚಾಪಲಃ ।
ಸರ್ವಂ ಕುರು ಯಥಾಪ್ರಾಪ್ತಂ ಮಾ ವಾತ್ರ ಕಿಂ ಗ್ರಹಃ ॥ ೩೧ ॥

---

೨೮. ಚಿನ್ಮಾತ್ರವು ಜಗದಾದಿಕ ರೂಪವಾಗಿರುವ ತನ್ನನ್ನೇ ಅನುಭವವಾಗಿ ತೋರುವುದು. ಆತ್ಮನೇ ಆತ್ಮಾಕಾಶದಲ್ಲಿ ಸ್ಪಂದನದಿಂದ ಭಿನ್ನವಾಗಿ ತೋರುವ ಮಾರುತನಂತೆ ಎರಡಾಗಿ ತನ್ನನ್ನೇ ನೋಡಿಕೊಳ್ಳುವನು.

(ಜಗದಾದಿಕಯೇತಿ ಆದಿ ಪದಾತ್ತದ್ಧರ್ಮಾ ಉತ್ಪತ್ತ್ಯಾದಿ ಭಾವವಿಕಾರಾ ಗೃಹ್ಯಂತೇ—ತಾ. ಪ್ರ)

೨೯. ದ್ವೈತ–ಅದ್ವೈತ–ಎರಡನ್ನೂ ಬಿಟ್ಟುದು ಬ್ರಹ್ಮವಾದ್ದರಿಂದ ಅದೂ ಕಿಂಚಿತ್ತೂ ಅಲ್ಲ· ಅಕಿಂಚಿತ್ತೂ ಅಲ್ಲ: ಚಿದಾಕಾಶವೇ ಜಗತ್ತೆಂದು ತಿಳಿ. ಆ ಚಿದಾಕಾಶವು ಶೂನ್ಯವು: ಅಚ್ಛವು· ನಿರಾಮಯವು.

೩೦. ಅಶೇಷ ವಿಶೇಷಗಳೂ ಶಾಂತವಾಗಿ, ಎಲೈ ರಾಘವನೇ ನಾನೊಬ್ಬನೇ ಸತ್ ಆಗಿದ್ದರೂ ಅಸತ್ತಿನಂತೆ, ಇದ್ದೆನು. ನೀನೂ ಹಾಗೆಯೇ ನಿರ್ಮನನಾಗಿರು.

೩೧. ನಿರ್ವಾಸನನಾಗು: ಶಾಂತಮನನಾಗು· ಮೌನಿಯಾಗು: ವಿಗತಚಾಪಲನಾಗು: ಯಥಾಪ್ರಾಪ್ತವಾಗಿ ಏನು ಮಾಡಬೇಕಾಗಿ ಬಂದರೂ ಮಾಡು: ಮಾಡದಿದ್ದರೆ ಬಿಡು: ಯಾವುದಕ್ಕೂ ಹಟ ಬೇಡ.

ಅನಾದಿನಿತ್ಯಾನುಭವೋ ಯ ಏಕಃ
ಸ ಏವ ದೃಶ್ಯಂ ನತು ದೃಶ್ಯಮನ್ಯತ್ ।
ಸತ್ಯಾನುಭೂತೇಽನನುಭೂತಯೋ ಯಾಃ
ಸುವಿಸ್ತೃತಾ ದೃಶ್ಯಮಹಾದೃಶಸ್ತಾಃ ॥ ೩೨ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ನಿರ್ವಾಣ ವರ್ಣನಂ" ನಾಮ
ದ್ವಿಸಪ್ತತಿತಮಃ ಸರ್ಗಃ

---

೩೨. ಅನಾದಿಯೂ ನಿತ್ಯವೂ ಆದ ಅನುಭವವು ಯಾವುದೋ ಅದು ಒಂದೇ ಒಂದು! ಅದೇ ದೃಶ್ಯವೇ ಹೊರತು ಅದನ್ನು ಬಿಟ್ಟು ಇನ್ನು ಯಾವ ದೃಶ್ಯವೂ ಇಲ್ಲ. ಸತ್ಯವು ಅನುಭವಕ್ಕೆ ಬರುವವರೆಗೂ, ಅನನುಭೂತಿಗಳು (ಅಜ್ಞಾನ) ಯಾವವುಂಟೋ ಅವೆಲ್ಲ ಹರಡಿಕೊಂಡು ದೃಶ್ಯ ಮಹಾ ದೃಶ್ಯಗಳಾಗಿರುವುವು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ನಿರ್ವಾಣ ವರ್ಣನ" ಎಂಬ
ಎಪ್ಪತ್ತೆರಡನೆಯ ಸರ್ಗವು.

# ತ್ರಿಸಪ್ತತಿತಮಃ ಸರ್ಗಃ

ಶ್ರೀ ರಾಮ ಉವಾಚ —

ಬಂಧಮೋಕ್ಷಜಗದ್ಬುದ್ಧಿರ್ನ ಶೂನ್ಯಾ ನಾಪಿ ಸನ್ಮಯೀ ।
ನಾಸ್ತಮೇತಿ ನಚೋದೇತಿ ಕಿಮಪ್ಯಾದ್ಯವಸೌ ಕಿಲ ॥ ೧ ॥

ಉಪದಿಷ್ಟಮಿದಂ ಬ್ರಹ್ಮಂಸ್ತ್ವಯಾ ಬುದ್ಧಮಲಂ ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ವೋಽಮೃತಂ ॥ ೨ ॥

---

# ಎಪ್ಪತ್ತಮೂರನೆಯ ಸರ್ಗವು

ಶ್ರೀ ರಾಮನು ಕೇಳಿದನು —

೧. "ಬಂಧ ಮೋಕ್ಷ ಜಗತ್ತುಗಳುಂಟೆಂಬ ಬುದ್ಧಿಯು ಶೂನ್ಯವೂ ಅಲ್ಲ: ಸನ್ಮಯವೂ ಅಲ್ಲ ಅದು ಅಸ್ತವನ್ನು ಹೊಂದುವುದಿಲ್ಲ: ಉದಯವೂ ಆಗುವುದಿಲ್ಲ ಅದರಿಂದ ಈ ಬುದ್ಧಿಯೇ ಬ್ರಹ್ಮಸ್ವರೂಪ" ಎಂದು ಹೇಳಿದೆಯಲ್ಲವೇ ?

(ಕಿಮಂಗ ತಸ್ಯ ಭೂರ್ಲೋಕಃ ಕಥಮೇತಾನಿ ಚಾಂಗಾನಿ ಕಥಂ ವಾಪೋಂತರೇ ತಸ್ಯ ಇತಿ ಪ್ರಸ್ತುತ ಪ್ರಶ್ನತ್ರಯೋತ್ತರೋಪೋದ್ಘಾತತ್ವೇನ ವರ್ಣಿತಂ, ಶುದ್ಧೇ ಬ್ರಹ್ಮಣಿ ಜಗದಧ್ಯಾರೋಪಪ್ರಕಾರಂ ಪುನಃ ಕ್ರಮಶಸ್ತಾತ್ಪರ್ಯತಪ್ತ ಸಮ್ಯಗ್ವಿಜ್ಞಾಸಮಾನೋ ರಾಮಸ್ತತ್ರ ತಾತ್ಪರ್ಯತಃ ಸ್ವವಿಜ್ಞಾತಾಂಶಂ ದರ್ಶಯಿತುಂ ಸಿಂಹಾವಲೋಕನನ್ಯಾಯೇನ ವ್ಯವಹಿತೋಕ್ತಿ ನಿಷ್ಕರ್ಷಂ ಸ್ಮಾರಯತಿ-ಬಂಧೇತ್ಯಾದಿನಾ । ಸನ್ಮಯೀ ಸತ್ಯಾರ್ಥವಿಷಯಾ । ಸರ್ವಸಾಕ್ಷಿತ್ವಾದೇವ ಸ್ವಯಂ ನಾಸ್ತಮೇತಿ ॥ ನೋದೇತಿ ಚ । ಅತಃ ಅಸೌ ಸರ್ವಸಾಕ್ಷಿಣೀ ಬುದ್ಧಿರೇವ ವಿಷಯಮಾರ್ಜನೇ ಕಿಮಪಿ ವಾಂಗ್ಮನಸಾಗಮ್ಯಮಾದ್ಯಂ ಬ್ರಹ್ಮೇತಿ ತ್ವಯಾ ತಾತ್ಪರ್ಯಗತ್ಯಾ ಉಪದಿಷ್ಟಂ । ಕಿಲೇತಿ ಗುರುಬುದ್ಧಿವಿಸಂವಾದ ಶಂಕಾಪರಿಹಾರಾಯ ।—ತಾ ಪ್ರ)

೨. ಹೀಗೆಂದು ನೀನು ಉಪದೇಶ ಮಾಡಿದುದನ್ನು ನಾನೂ ಚೆನ್ನಾಗಿಯೇ

ಭಸರ್ಗಾದಿಸಂಭ್ರಮದೃಶಃ ಶೂನ್ಯತಾದಿದೃಶಸ್ತಥಾ ।
ನ ಕಾಶ್ಚನ ವಿಭೋ ಸತ್ಯಾ ಅಸತ್ಯಾಶ್ಚ ನ ಕಾಶ್ಚನ　　|| ೩ ||

ಏವಂಸ್ಥಿತೇ ತು ಯತ್ಸತ್ಯಂ ತತ್ಸರ್ವಂ ಬುದ್ಧವಾನಹಂ ।
ತಥಾಪಿ ಭೂಯೋ ಬೋಧಾಯ ಸರ್ಗಾನುಭವ ಉಚ್ಯತಾಂ　　|| ೪ ||

ಶ್ರೀ ವಸಿಷ್ಠ ಉವಾಚ:—

ಯದಿದಂ ದೃಶ್ಯತೇ ಕಿಂಚಿಜ್ಜಗತ್ಸ್ಥಾವರಜಂಗಮಂ ।
ಸರ್ವಂ ಸರ್ವಪ್ರಕಾರಾಢ್ಯಂ ದೇಶಕಾಲಕ್ರಿಯಾದಿಮತ್　　|| ೫ ||

---

ತಿಳಿದುಕೊಂಡೆನು. ಆದರೂ, ಅದನ್ನು ಮತ್ತೊಮ್ಮೆ ಹೇಳು. ಅಮೃತದಂತಿರುವ ಈ ವಿಚಾರವನ್ನು ಎಷ್ಟು ಕೇಳುತ್ತಿದ್ದರೂ ನನಗೆ ತೃಪ್ತಿಯೇ ಆಗುವುದಿಲ್ಲ.

೩. ಸರ್ಗಾದಿ ಸಂಭ್ರಮಗಳನ್ನು ಕಾಣುವ ದೃಷ್ಟಿಗಳೂ ಶೂನ್ಯತೆ ಮೊದಲಾದ ದೃಷ್ಟಿಗಳೂ ಯಾವವು ಸತ್ಯವೂ ಅಲ್ಲ: ಎಲೈ ವಿಭವೆ, ಅವು ಯಾವವೂ ಅಸತ್ಯವೂ ಅಲ್ಲ.

(ಸತ್ಯಾ ಅಬಾಧಿತಾರ್ಥಾ, ಅಸತ್ಯಾಬಾಧಿತಾರ್ಥಾ ಅಪಿ ನ। ತತ್ತದ್ದೃಷ್ಟೀವ ಹರ್ತೃದೃಶಾ ಬ್ರಹ್ಮಣಾ ಏವ ತಥಾಸ್ಥಿತೇರರ್ಥಕ್ರಿಯಾವಿಸಂವಾದಾದ ಸತ್ಯಾಕಾರ್ಯ ಪಕ್ಷಾನಭ್ಯುಪಗಮಾತ್ಸರ್ವಶಕ್ತಿಮತಿ ಬ್ರಹ್ಮಣಿ ಸರ್ವಶೂನ್ಯತಾವಾದನ ಶಕ್ತೇರಪಿ ಸಂಭವಾನ್ಮಾಯಯಾ ಸರ್ವವಿರೋಧಪರಿಹಾರಾಚ್ಚೇತಿ ಭಾವಃ ||—ತಾ. ಪ್ರ)

೪ ಹೀಗಿರಲು, ಯಾವುದು ಸತ್ಯವೋ ಅದನ್ನು ಪೂರ್ಣವಾಗಿ ನಾನು ಗ್ರಹಿಸಿರುವೆನು ಆದರೂ ಮತ್ತೆ ಜ್ಞಾನವು ದೃಢವಾಗಲೆಂದು ಸರ್ಗಾನುಭವವನ್ನು ಕುರಿತು ಹೇಳೋಣವಾಗಲಿ,

(ಮಾಯಾಶಬಲಬ್ರಹ್ಮಮಾಹಾತ್ಮ್ಯಮಿವ ತದಧಿಷ್ಠಾನ ನಿರ್ವಿಶೇಷ ನಿತ್ಯಮುಕ್ತ ಬ್ರಹ್ಮತತ್ತ್ವಮಪ್ಯಹಂ ಬುದ್ಧವಾನಿತ್ಯಾಹ–ಏವಮಿತಿ । ಸರ್ಗಾನುಭವಃ ಪ್ರಪಂಚಾಧ್ಯಾಸಕ್ರಮೋ ಭೂಯ ಉಚ್ಯತಾಂ। ಭೂಯಸಾಂ ಶ್ರೋತೄಣಾಂ ಬೋಧಾಯ ಬೋಧಬಾಹುಲ್ಯಾಯೇತಿ ವಾ ||—ತಾ. ಪ್ರ)

ಶ್ರೀ ವಸಿಷ್ಠನು ಹೇಳಿದನು.—

೫ ದೃಶ್ಯವಾಗಿ ಕಾಣುತ್ತಿರುವುದು ಯಾವುದುಂಟೋ, ಸ್ಥಾವರ ಜಂಗಮ

ತಸ್ಯ ನಾಶೇ ಮಹಾನಾಶೇ ಮಹಾಪ್ರಲಯನಾಮನಿ ।
ಬ್ರಹ್ಮೋಪೇಂದ್ರಮರುದ್ರುದ್ರಮಹೇಂದ್ರಪರಿಣಾಮಿನಿ ॥ ೬ ॥

ಶಿಷ್ಯತೇ ಶಾಂತಮತ್ಯಚ್ಛಂ ಕಿಮಪ್ಯಜಮನಾದಿಸತ್ ।
ಯತೋ ವಾಚೋ ನಿವರ್ತಂತೇ ಕಿಮನ್ಯವದಗಮ್ಯತೇ ॥ ೭ ॥

ಸರ್ಷಪಾಪೇಕ್ಷಯಾ ಮೇರುರ್ಯಥಾತಿವಿತತಾಕೃತಿಃ ।
ತಥಾಕಾಶಮಪಿ ಸ್ಥೂಲಂ ಶೂನ್ಯಂ ಸದ್ಯದಪೇಕ್ಷಯಾ ॥ ೮ ॥

ಶೈಲೇಂದ್ರಾಪೇಕ್ಷಯಾ ಸೂಕ್ಷ್ಮಾ ಯಥೇಮೇ ತ್ರಸರೇಣವಃ ।
ತಥಾ ಸೂಕ್ಷ್ಮತರಂ ಸ್ಥೂಲಂ ಬ್ರಹ್ಮಾಂಡಂ ಯದಪೇಕ್ಷಯಾ ॥ ೯ ॥

---

ಗಳಿಂದ ಕೂಡಿರುವ ಆ ಜಗತ್ತು, ದೇಶ ಕಾಲ ಕ್ರಿಯಾದಿಗಳಿಂದ ಕೂಡಿರುವ ಸರ್ವ ಪ್ರಕಾರವಾದ ಸರ್ವವೂ ಮಹಾನಾಶದಲ್ಲಿಯೂ,

೬. ಸ್ಥೂಲವಾದ ಭೂತಭೌತಿಕಗಳು ಸೂಕ್ಷ್ಮ ಭೂತಗಳಲ್ಲ ಲಯವಾಗಿ, ಭೂತಸೂಕ್ಷ್ಮಗಳೊಡನೆ ಅವ್ಯಾಕೃತವನ್ನು ಪ್ರವೇಶ ಮಾಡುವ ನಾಶದಲ್ಲಿಯೂ, ಪ್ರಾಕೃತಪ್ರಲಯಸ್ವರೂಪವಾದ ಮಹಾ ನಾಶದಲ್ಲಿಯೂ, ಬ್ರಹ್ಮೋಪೇಂದ್ರ ಮರುದ್ರುದ್ರ ಮಹೇಂದ್ರರುಗಳೆಲ್ಲರೂ ನಿರ್ನಾಮರಾಗುವ ಮಹಾಪ್ರಲಯದಲ್ಲಿಯೂ

೭ ಉಳಿಯುವುದು ಒಂದುಂಟು. ಅದು ಶಾಂತವು ಅತ್ಯಚ್ಛವಾದುದು. ಅಜವು. ಅನಾದಿಯು ಸತ್ಯವು, ಎಲ್ಲಿ ಮಾತು ಹಿಂದಿರುಗುವುದೋ ಅಲ್ಲಿಗೆ ಇನ್ನು, ಯಾವುದು ಹೋಗಬಲ್ಲುದು?

೮ ಸಾಸುವೆಗೆ ಹೋಲಿಸಿದರೆ ಮೇರುವು ಹೇಗೆ ಅತಿ ವಿಸ್ತಾರವಾದ ಆಕೃತಿ ಯುಳ್ಳುದೋ, ಹಾಗೆ ಆ ಬ್ರಹ್ಮಕ್ಕೆ ಹೋಲಿಸಿದರೆ ಅನ್ಯಾಪೇಕ್ಷೆಯಿಂದ ಶೂನ್ಯವಾಗಿ ಕಾಣುವ ಆಕಾಶವು ಅತಿಸ್ಥೂಲವಾಗಿ ಕಾಣುವುದು.

೯. ಶೈಲೇಂದ್ರಕ್ಕೆ ಹೋಲಿಸಿದರೆ ಈ ತ್ರಸರೇಣುಗಳು ಹೇಗೆ ಸೂಕ್ಷ್ಮವೋ ಹಾಗೆಯೇ ಆ ಬ್ರಹ್ಮದ ವ್ಯಾಪ್ತಿಧರ್ಮವನ್ನು ಕುರಿತು ಚಿಂತಿಸಿದರೆ ಸ್ಥೂಲಗಳೆನ್ನಿಸಿ ಕೊಳ್ಳುವ ಬ್ರಹ್ಮಾಂಡಗಳೂ ಸೂಕ್ಷ್ಮತರವಾಗಿ ಕಾಣುವುವು.

ಅಮಾನಕಲಿತೇ ಸೌಮ್ಯೇ ಕಾಲೇ ಪರಿಣತೇ ಚಿರಂ ।
ಶಾಂತೇ ತಸ್ಮಿನ್ಪರೇ ವ್ಯೋಮನ್ಯಾದ್ಯೇ ಹ್ಯನುಭವಾತ್ಮನಿ ॥ ೧೦ ॥

ಅಸಂಕಲ್ಪೋ ಮಹಾಶಾಂತೋ ದಿಕ್ಕಾಲೈರಮಿತಾಕೃತಿಃ ।
ಅಂತರ್ಮಹಾಶ್ಚಿದಾಕಾಶೋ ವೇತ್ತೀವ ಪರಮಾಣುತಾಂ ॥ ೧೧ ॥

ಅಸತ್ಯಾಮೇವ ತಾಮಂತರ್ಭಾವಯನ್ಸ್ವಪ್ನವತ್ಸ್ವತಃ ।
ತತಃ ಸ ಬ್ರಹ್ಮಶಬ್ದಾರ್ಥಂ ವೇತ್ತಿ ಚಿದ್ರೂಪತಾಂ ತತಾಂ ॥ ೧೨ ॥

ಚಿದ್ಭಾವೋಽನುಭವತ್ಯಂತಶ್ಚಿತ್ತ್ವಾಚ್ಚಿದಣುತಾಂ ನಿಜಾಂ ।
ತಾಮೇವ ಪಶ್ಯತೀವಾಥ ತತೊ ದ್ರಷ್ಟೇವ ತಿಷ್ಠತಿ ॥ ೧೩ ॥

---

೧೦. ಅಳತೆಗೇ ಸಿಕ್ಕದಿರುವ ಸೌಮ್ಯವಾದ ವಸ್ತುವು, ಅನುಭವಾತ್ಮ ಸ್ವರೂಪವಾದ ಆ ಪರಮ ಶಾಂತವಾದ ಆಕಾಶವು, ದೀರ್ಘವಾದ ಬ್ರಹ್ಮಾಯುರೂಪವಾದ ಕಾಲದಲ್ಲಿ ಪರಿಣತವಾಗಲು,

೧೧ ಅಸಂಕಲ್ಪವೂ ಮಹಾ ಶಾಂತವೂ ಆದ ದಿಕ್ಕಾಲಗಳಿಂದ ಮಿತವಲ್ಲದ, ಆ ಮಹಾ ಚಿದಾಕಾಶವು ತನ್ನಲ್ಲಿಯೇ ಪರಮಾಣುತೆಯನ್ನು ಹೊಂದಿದಂತಾಗುವುದು.

(ವೇತ್ತಿ ಪರ್ಯಾಲೋಚಯತೀವ—ತಾ. ಪ್ರ.)

೧೨. ಹಾಗೆ ತಾನು ಪರಮಾಣುವಾಗುವಿಕೆಯು ಅಸತ್ಯವಾದರೂ ಅದನ್ನು ತನ್ನೊಳಗೆ ತಾನೇ ಭಾವಿಸಿಕೊಂಡು, ಕನಸು ಕಾಣುವಂತೆ ಕಾಣುತ್ತ,ಬ್ರಹ್ಮ ಶಬ್ದದ ಬೆಳೆಯುವುದು ಎಂಬ ಅರ್ಥವನ್ನು, ಚಿದ್ರೂಪವಾಗಿ ಹರಡಿರುವುದರಲ್ಲಿ ಕಾಣುವುದು.

(ತಥಾ ಚ ಶ್ರುತಿಃ "ತಪಸಾ ಚೀಯತೇ ಬ್ರಹ್ಮ" ಇತಿ—ತಾ. ಪ್ರ.)

೧೩. ಚಿದ್ಭಾವವೇ, ತನ್ನ ಚಿತ್ತ್ವ ಬಲದಿಂದಲೇ, ತನ್ನೊಳಗೇ, ತನ್ನ ಚಿದಣುತೆಯನ್ನು ಅನುಭವಿಸುವುದು. ಆ ಚಿದಣುತೆಯನ್ನು ತಾನೇ ನೋಡುತ್ತ ತಾನೇ ದ್ರಷ್ಟೃವಾಗಿ ನಿಲ್ಲುವುದು.

ಯಥಾ ಸ್ವಪ್ನೇಽನ್ಯೃತಂ ಪಶ್ಯತ್ಯೇಕ ಏವಾತ್ಮನಾತ್ಮನಿ ।
ಮೃತ ಏವ ದೃತೇರ್ದ್ರಷ್ಟಾ ತಥಾ ಚಿದಣುರಾತ್ಮನಿ ॥ ೧೪ ॥

ತತಶ್ಚಿದ್ಭಾವ ಏಷೋಽಂತರೇಕ ಏವ ದ್ವಿತಾಮಿವ ।
ಪಶ್ಯನ್ಸ್ವರೂಪ ಏವಾಸ್ತೇ ದ್ರಷ್ಟೃದೃಶ್ಯಮಿವ ಸ್ಥಿತಃ ॥ ೧೫ ॥

ಚಿದ್ಭಾವಶೂನ್ಯ ಏವಾತಿನಿರಾಕಾರೋಽಪ್ಯಣುಂ ತನುಂ ।
ಪಶ್ಯನ್ದೃಶ್ಯಮಿವೋದೇತಿ ದ್ರಷ್ಟೇವ ಚ ತದಾ ದ್ವಿತಾಂ ॥ ೧೬ ॥

ಪ್ರಕಾಶಮಣುಮಾತ್ಮಾನಂ ಪಶ್ಯಂಸ್ತದನುಭಾವತಃ ।
ಉಚ್ಛೂನತಾಂ ಚೇತಯತೇ ಬೀಜಮಂಕುರತಾಮಿವ ॥ ೧೭ ॥

---

(ತದ್ಗೋಚರತಾ ಲಕ್ಷಣೇ ತದ್ವೇದನೇ ಚಿತ್ಸ್ವಭಾವಾತಿರಿಕ್ತೋ ಹೇತು ದುರ್ನಿರೂಪ ಇತ್ಯಾಹ ।–ತೇನೈವ ದ್ರಷ್ಟೃತಾ ಸಂಪತ್ತಿಂ ದರ್ಶಯತಿ।— ತಾ. ಪ್ರ

೧೪. ಕನಸಿನಲ್ಲಿ ಒಬ್ಬನು ತಾನು ತನ್ನಲ್ಲಿಯೇ ಮೃತನಾದಂತೆ ಕಾಣು ವನು..ಆಗ ಮೃತನಾದವನೇ ಮರಣವನ್ನು ಕಾಣುವನಲ್ಲವೆ? ಹಾಗೆಯೇ ಚಿತ್ತು ಚಿದಣುವಾಗಿ ತಾನೇ ಅದನ್ನು ಕಾಣುವ ದ್ರಷ್ಟೃವೂ ಆಗುವುದು.

೧೫. ಅದರಿಂದ, ಚಿದ್ಭಾವವೇ, ತಾನೇ ತನ್ನಲ್ಲಿಯೇ ತಾನಾಗಿಯೇ ಎರಡಾ ದಂತೆ ಆಗಿ, ಒಂದನ್ನೊಂದು ನೋಡಿಕೊಳ್ಳುತ್ತ, ದ್ರಷ್ಟೃ ದೃಶ್ಯ ಎಂದು ಎರಡಾಗಿ ರುವಂತೆ ಇದ್ದರೂ, ತನ್ನ ಸ್ವರೂಪದಲ್ಲಿಯೇ ಇರುವುದು.

(ತಥಾ ಕಲ್ಪನೇಽಪಿ ನ ವಾಸ್ತವೈಕ್ಯ ಕ್ಷತಿರಿತ್ಯಾಹ— ತಾ. ಪ್ರ )

೧೬. ಹೀಗೆ ಕಲ್ಪಿತನಾದ ದ್ರಷ್ಟೃವು ತಾನು ಅತಿ ನಿರಾಕಾರನಾದರೂ ಅಣು ದೇಹವುಳ್ಳವನು ಎಂದುಕೊಂಡು, ತನ್ನ ಚಿದ್ಭಾವವನ್ನು ಮರೆತು, ಅಣುದೇಹ ವನ್ನು ಕಾಣುತ್ತ, ದ್ರಷ್ಟೃ ದೃಶ್ಯಭೇದಗಳನ್ನು ಕಾಣುವನು.

೧೭. ಯಾವಾಗ ದ್ರಷ್ಟೃವು ಪ್ರಕಾಶರೂಪವಾದ ತನ್ನನ್ನು ಅಣುವಾಗಿ ಅನು ಭವಿಸುವನೋ ಆಗ ಅದರ ಫಲವಾಗಿ ಬೆಳೆದು, ಬೀಜವು ಅಂಕುರವಾದ ಹಾಗೆ ಆಗುವನು.

ದೇಶಕಾಲಕ್ರಿಯಾದ್ರವ್ಯದ್ರಷ್ಟೃದರ್ಶನದೃಗ್ದೃಶಃ ।
ಅರ್ಥಾಂತರಸ್ವಭಾವೇನ ತಿಷ್ಠಂತ್ಯನುದಿತಾಭಿಧಾಃ　॥ ೧೮ ॥

ಚಿದಣುರ್ಯತ್ರ ಭಾತೋಽಸೌ ದೇಶೋ ಮಿತಿಮುಪಾಗತಃ ।
ಯದಾ ಭಾತಸ್ತದಾ ಕಾಲೋ ಯದ್ಭಾನಂ ತತ್ಕ್ರಿಯಾ ಸ್ಮೃತಾ　॥ ೧೯ ॥

---

(ತಾನು ಪ್ರತ್ಯೇಕನೆಂದುಕೊಳ್ಳುವುದೇ ಪ್ರವೃತ್ತಿಮೂಲ· ತಾನೇ ಎಲ್ಲವೂ ಎಂದು ಅರಿಯುವಿಕೆಯೇ ನಿವೃತ್ತಿಮೂಲ: ವ್ಯಷ್ಟಿಭಾವದಿಂದ ಸಂಸಾರ : ಸಮಷ್ಟಿ ಭಾವದಿಂದ ಮುಕ್ತಿ.)

೧೮ ದರ್ಶನ ದೃಷ್ಟಿಗಳು, ಸ್ವಭಾವವಾಗಿ ಸ್ವಭಾವದಲ್ಲಿಯೇ ಅರ್ಥಾಂತರ ಗಳಾಗಿ ಅನುದಿತ–ಅಭಿಧಾಗಳಾಗಿ ಇದ್ದೇ ಇರುವುವು. (ಅವೆಲ್ಲವೂ ಹಿಂದೆ ಹೇಳಿ ದಂತೆ ಬೀಜವು ಅಂಕುರವಾದಾಗ ಪ್ರಕಟವಾಗುವುವು )

(ಈ ಭಾವಗಳೆಲ್ಲವೂ ಚಿದಣುವು ಬೀಜರೂಪವಾಗಿ ತಾನು ಪ್ರತ್ಯೇಕವೆಂದು ಕೊಂಡಮೇಲೆ, ಆ ಪ್ರತ್ಯೇಕತ್ವವನ್ನು ಸ್ಥಿರಮಾಡುವುದಕ್ಕೆ ಬಂದ ಭಾವಗಳು· ಆದರಿಂದ ಇವು ಬ್ರಹ್ಮದಲ್ಲಿ ಉಂಟು ಎನ್ನುವುದಕ್ಕಿಂತ ಪ್ರತ್ಯೇಕನೆಂದುಕೊಂಡ ಚಿದಣುವು ತಾನು ಹಾಗೆಂದುಕೊಂಡಾಗ ಅದರಲ್ಲಿ ಕಲ್ಪಿತವಾದವು ಆದರಿಂದ ಮಾಯೆ ಎನ್ನುವುದು ಸರಿ. ಮಾಯಾಕಲ್ಪಿತ ದೇಶಕಾಲ ಕಲನಾ ವೈಚಿತ್ರ್ಯ ಚಿತ್ರೀಕೃತಂ ಎಂಬ ಆಚಾರ್ಯೋಕ್ತಿಯನ್ನು ಇಲ್ಲಿ ಪರಿಭಾವಿಸಿ ನೋಡಿ. ಹಾಗೆಯೇ ಅನುದಿತ–ಅಭಿದಾ ಎಂಬ ಮಾತಿನಲ್ಲಿರುವ, ವಾಚ್ಯ, ಲಕ್ಷಣಾ, ವ್ಯಂಜನಾ ವೃತ್ತಿ ಗಳಿಂದ ದ್ಯೋತಿತವಾಗುವ ಅರ್ಥವನ್ನೂ ಪರಿಭಾವಿಸಿ.)

೧೯. ಚಿದಣುವು ಎಲ್ಲಿ ಭಾತವಾಯಿತೋ ಅಲ್ಲಿ ತಾನು ಎಲ್ಲದಕ್ಕಿಂತ ಬೇರೆ ಯಾಗಿ ಇಲ್ಲಿ ಇದ್ದೇನೆ ಎಂದುಕೊಂಡು ಕಲ್ಪಿಸಿಕೊಂಡ ಮಿತಿಯೇ ದೇಶವೆಂಬ (ಸ್ಥಲ) ಪರಿಚ್ಛೇದವಾಯಿತು. ಯಾವಾಗ ಈ ಕ್ರಿಯೆಯು ನಡೆಯಿತೋ ಆಗಲೇ ಕಾಲವೆಂಬ ಪರಿಚ್ಛೇದವಾಯಿತು ತಾನು ಚಿದಣುವೆಂದುಕೊಂಡುದು ಯಾವು ದುಂಟೋ ಅದೇ ಕ್ರಿಯೆಯಾಯಿತು

(ಇಲ್ಲಿ ಅಖಂಡವಾಗಿರುವ ಚಿತ್ತಿನಲ್ಲಿ ಖಂಡತ್ವವು ಹುಟ್ಟಿದ ಪ್ರಕಾರವನ್ನು ಹೇಳಿ,ಖಂಡತ್ವವು ಹುಟ್ಟಿತು ಎಂಬುದು ಕ್ರಿಯೆ, ಅದನ್ನು ಹಿಡಿದು ಕಾಲದೇಶಗಳೂ ಹುಟ್ಟಿದುವು ಎಂದು ಹೇಳಿರುವ ಸೊಗಸನ್ನು ನೋಡಿ ಆದರಿಂದ ಕ್ರಿಯಾ ದೇಶ

ಉಪಲಬ್ಧಂ ವಿದುರ್ದ್ರವ್ಯಂ ದ್ರಷ್ಟೃತಾಪ್ಯುಪಲಬ್ಧತಾ ।
ಆಲೋಕನಂ ದರ್ಶನತಾ ದೃಗಾಲೋಕನಕಾರಣಂ ॥ ೨೦ ॥

ಏವಮುಚ್ಛೂನತಾ ಭಾತಿ ಮಿತಾನಂತಾಥ ವಾ ಕ್ರಮಾತ್ ।
ಅಸತ್ತ್ಯೈವ ನಭಸ್ಯೇವ ನಭೋರೂಪೈವ ನಿಷ್ಕ್ರಮಾ ॥ ೨೧ ॥

---

ಕಾಲಗಳು ಮೂರು ಇದ್ದ ಮುಪ್ಪುರಿಯಾಗಿಯೇ ಇರಬೇಕು. ಹೋದರೆ ಮೂರೂ ಹೋಗಬೇಕು. ಇವು ಒಂದನ್ನೊಂದು ಬಿಟ್ಟಿರಲಾರವು ಎಂಬುದೇ ಸಿದ್ಧಾಂತ.)

೨೦. ಉಪಲಬ್ಧವಾದುದನ್ನು ದ್ರವ್ಯವೆನ್ನುವರು. ಉಪಲಬ್ಧತೆಯು ಯಾವುದುಂಟೋ ಅದನ್ನೇ ದ್ರಷ್ಟತಾ ಎನ್ನುವರು. ಆ ಲೋಕನವೇ (ದ್ರಷ್ಟ)ತಾ ಸಿದ್ಧಿಗೆ ಕಾರಣವಾದ) ದರ್ಶನತೆಯು. ಆ ಲೋಕನಕ್ಕೂ ದೃಕ್ಕೇ ಕಾರಣವು.

(ತದೇವ ತ್ರಿಪುಟೀವಿಭಾಜಕೋಪಾಧಿ ಭೇದಾನಾಂ ಸಾಕ್ಷಿಣಸ್ತದಾಲೋಕನ ನಿಮಿತ್ತ ಭಾವಾಸ್ಯ ಚ ಕಲ್ಪನಾ ಭವತೀತ್ಯಾಹ–ಉಪಲಬ್ಧಮಿತಿ । ದ್ರವ್ಯಗುಣ ಕ್ರಿಯಾದಿ ಕಲ್ಪನಾಧಾರತ್ವಾದ್ರವ್ಯಂ—ತಾ. ಪ್ರ)

೨೧. ಹೀಗೆ ಬೆಳೆವಣಿಗೆಯೆಂಬ ಉಚ್ಛೂನತೆಯು ಕಾಣುವುದು. ಈ ಉಚ್ಛೂನತೆಯು ಬೀಜದಲ್ಲಿ ಕಾಣುವ ಅಂಕುರತೆಯಂತೆ ಮಿತವಾಗಿರಬಹುದು. ಅಥವಾ ಇಷ್ಟೇ ಎಂದು ಗೊತ್ತಿಲ್ಲವಾದ್ದರಿಂದ ಅದೆಲ್ಲ ಅನಂತವಾಗಿರಬಹುದು. ಅಲ್ಲಿ ಒಂದು ಕ್ರಮವಿರುವಂತೆ ಕಂಡರೂ, ಆ ಉಚ್ಛೂನತೆಯು ಅಸತ್ಯವು. ಆಕಾಶದಲ್ಲಿ ಆಕಾಶರೂಪವಾದ ಹರಡುವಿಕೆಯೆಂಬುದರಿಂದ, ಅದು ನಿಷ್ಕ್ರಮವು (ಎಂದು ತಿಳಿಯುವುದು) (ಕ್ರಮವೆಂದರೆ ಆದಿಯಿಂದ ಅಂತದ ಕಡೆಗೆ ನಡೆವ ಹಾದಿ. ಅದುಂಟು ಎಂದರೆ, ಅಲ್ಲಿ ಆದ್ಯಂತ ಸಹಿತವಾದ ಖಂಡಭಾವವನ್ನು ಒಪ್ಪಬೇಕಾಗುವುದು ಆಕಾಶದಲ್ಲಿಯೇ ಈ ಖಂಡತ್ವವನ್ನು ಒಪ್ಪದಿರುವಾಗ ಇನ್ನು ಆತ್ಮನಲ್ಲಿ ಕಾಣುವುದೆಂತು ? ಅದರಿಂದ ನಿಷ್ಕ್ರಮವೆನ್ನುವುದೇ ಸರಿ.)

(ಏವಮೇವ ಕರ್ತಾ ಕಾರ್ಯಂ ಕಾರಣಂ, ಭೋಕ್ತಾ ಭೋಗ್ಯಂ ಭೋಗ, ಇತ್ಯಾದಿ ತ್ರಿಪುಟೀ ಭೇದಾನಾಂ ತತ್ಸಾಕ್ಷಿಣಸ್ತನ್ನಿಮಿತ್ತತಾಯಾಶ್ಚ ಕಲ್ಪನಂ ಸರ್ವತ್ರ ಬೋಧ್ಯಮಿತ್ಯಾಶಯೇನಾಹ–ಏವಮಿತಿ । ದೇಶಕಾಲವಸ್ತು ಪರಿಚ್ಛೇದೈರ್ಮಿತಾ, ಸಂಖ್ಯೇಯಯುತ್ತಾದಿನಾ ಅನಂತಾ ವಾ ।—ತಾ. ಪ್ರ)

ಚಿದಣೋರ್ಭಾಸನಂ ಭಾತಂ ತತ್ಪ್ರದೇಶೇನ ದೇಹಗಂ ।
ಯೇನ ಪಶ್ಯತಿ ತಚ್ಚಕ್ಷುಃ ಸಂಗ್ರಹೋಽಕ್ಷದೃಶಾಮಿತಿ ॥ ೨೨ ॥

ಚಿದಣುಪ್ರತಿಭಾಸೇಽಂತಃ ಪ್ರಥಮಂ ನಾಮವರ್ಜಿತಂ ।
ತನ್ಮಾತ್ರಶಬ್ದಮೇತೇಷಾಂ ಯತದಾಕಾಶರೂಪಿ ತತ್ ॥ ೨೩ ॥

---

೨೨. ಚಿದಣುವಿನ ಭಾಸನವು ಭಾತವಾದಾಗ ಸ್ಥಲವೆಂಬ ಕಲ್ಪನೆಯು ಒಂದು ದೇಶ ಕಲ್ಪನೆಯಾಗಿ ಅದು ದೇಹದಲ್ಲಿರುವ ದೇಶವಾಯಿತು: ಯಾವುದರಿಂದ ಅದನ್ನು ಕಂಡಿತೋ ಅದು ಚಕ್ಷುವಾಯಿತು. ಇಂದ್ರಿಯ, ದೃಕ್ಕು, ಇವುಗಳೂ ಹೀಗೇ ಆದವು

(ತತ್ರ ರೂಪಾದಿ ತ್ರಿಪುಟೀಸಿದ್ಧೌ ಚಕ್ಷುರಾದಿಕರಣವಿಭಾಗ ಕಲ್ಪನಾಪಿ ನಾಂತರೀಯಕೀಭವತೀತಿ ಸಂಕ್ಷೇಪೇಣ ದರ್ಶಯತಿ—ಚಿದಣೋರಿತಿ। ಚಿದಣೋ ರ್ಬೀಜಸ್ಯ ಭಾತಂ ಭಾಸನಂ ಸೌರಾದ್ಯಾಲೋಕಂ ಯೇನ ಗೋಲಕಪ್ರದೇಶೇನ ಛಿದ್ರೇಣ ಯೇನ ಚಾತೀಂದ್ರಿಯೇಣ ಕರಣೇನ ಪಶ್ಯತಿ ತದುಭಯಂ ಚಕ್ಷುಃ ಸರ್ವಾಸಾಂ ಶ್ರೋತ್ರಾದ್ಯಕ್ಷದೃಷ್ಟೀನಾಮಪ್ಯಯಂ ನ್ಯಾಯಃ ಸಮ ಇತಿ ಸಂಗ್ರಹಃ ಸಂಕ್ಷೇಪಃ ॥—ತಾ. ಪ್ರ.)

೨೩. ಹೀಗೆ ಚಿದಣುವಿನ ಪ್ರತಿಭಾಸವಾಗುವಾಗ ಮೊಟ್ಟಮೊದಲು, ನಾಮ ವರ್ಜಿತವಾಗಿ, ಇನ್ನೂ ಯಾವ ಹೆಸರೂ ಇಲ್ಲದೆ, ಆದ ತನ್ಮಾತ್ರ ಶಬ್ದವು ಯಾವು ದುಂಟೋ ಅದೇ ಎಲ್ಲದಕ್ಕೂ ಮೊದಲು, ಅದೇ ಆಕಾಶರೂಪಿಯು.

(ಶ್ರೋತ್ರಾದೀಂದ್ರಿಯ ಪಂಚಕ ವಿಷಯೇಷ್ವೇವ ನಾಮ ರೂಪ ಭೇದಕಲ್ಪ ನಾತ್ ಪ್ರಾಗವಸ್ಥಾ ತನ್ಮಾತ್ರ ಶಬ್ದೇನೋಚ್ಯತೇ॥ ಇತ್ಯಾಹ–ಚಿದಣ್ವಿತಿ। ಏತೇಷಾಂ ಶ್ರೋತ್ರಾದಿ ಪಂಚಕೇ ವಿಷಯಾಣಾಂ ಪ್ರಥಮಂ ಪ್ರಾಕ್ತನಂ ಯನ್ನಾಮ ವರ್ಜಿತಂ ಸ್ವರೂಪಂ ತತ್ತನ್ಮಾತ್ರಮಿತಿ ಶಬ್ದೋ ಯಸ್ಯ ತಥಾವಿಧಂ ಯತಸ್ತದೇತ ದಾಕಾಶರೂಪಿ ಸೂಕ್ಷ್ಮತಮಮಿತ್ಯರ್ಥಃ—ತಾ. ಪ್ರ.)

(ಇಲ್ಲಿ ಅನಾಹತಶಬ್ದಸ್ವರೂಪವನ್ನು ಹೇಳುತ್ತಿದ್ದಾರೆ. ಈ ಅನಾಹತ ಶಬ್ದವೇ ಮೂಲಾಧಾರದಲ್ಲಿದ್ದು ಎಲ್ಲದಕ್ಕೂ ಕಾರಣವಾಗಿರುವುದು. ಇದೇ ಉಚ್ಛೂನತೆಯನ್ನು ಹೊಂದಿ ಪರಾ ಪಶ್ಯಂತಿ ಮಧ್ಯಮಾ ವೈಖರಿಗಳಾಗುವುದು. ಪರಾಸ್ಥಾನದಿಂದ ವೈಖರೀ ಸ್ಥಾನಕ್ಕೆ ಹೋಗುವ ವೇಳೆಗೆ ದಾರಿಯಲ್ಲಿ ಎಂಬತ್ತು

ಚಿದಣುಪ್ರತಿಭಾಕಾಶಪಿಂಡ ಏವ ಘನಸ್ಥಿತಿಃ ।
ಅನುಸಂಧಾನವಿವಶಶ್ಚೇತತೀಂದ್ರಿಯಪಂಚಕಂ ॥ ೨೪ ॥

ಏವಂ ಚಿದಣುಸಂಧಾನಂ ದೃಶ್ಯಪೋಷಮುಪೈತ್ಯಲಂ ।
ತದೇವ ಜ್ಞಾನಮಿತ್ಯುಕ್ತಂ ಬುದ್ಧಿರಿತ್ಯಭಿಧೀಯತೇ ॥ ೨೫ ॥

ತತೋ ಮನಸ್ತದಾರೂಢಮಹಂಕಾರಪದಂ ಗತಂ ।
ದೇಶಕಾಲಪರಿಚ್ಛೇದ ಇತ್ಯಂಗೀಕೃತ ಆತ್ಮನಾ ॥ ೨೬ ॥

---

ನಾಲ್ಕು ಲಕ್ಷ ಸ್ಥಾನಗಳು ಏರ್ಪಟ್ಟು ಒರದೊಂದೂ ಒಂದೊಂದು ಯೋನಿಯಾಗು ವುದು.)

೨೪. ಚಿದಣುವಿನ ಪ್ರಭೆ (ಯೆಂದರೆ) ಹೊಳಹು ಅದೇ ಆಕಾಶವಾಗಿ ಪಿಂಡ ವಾಗಿ ಘನಸ್ಥಿತಿಯಾದ ದೇಹವಾಗುವುದು. ಅಲ್ಲಿ ಅನುಸಂಧಾನ ಮಾಡುತ್ತ ಇಂದ್ರಿಯ ಪಂಚಕಗಳನ್ನು ಕಲ್ಪಿಸಿಕೊಳ್ಳುವುದು

(ಅನುಸಂಧಾನ ವಿವಶವಾಗಿ ಇಂದ್ರಿಯ ಪಂಚಕಗಳನ್ನು ಕಲ್ಪಿಸಿಕೊಳ್ಳು ವುದು ಎಂಬ ಮಾತನ್ನು ಅನುಸಂಧಾನ ಮಾಡಿ ನೋಡಿ. ಹಿಂದೆ ತನ್ಮಾತ್ರ ಎಂಬ ಶಬ್ದವು ಬಂದಿದೆ. ತನ್ಮಾತ್ರವಶನಾಗಿ ಭೂತಾನುಸಂಧಾನಮಾಡಬೇಕಾಗಿ ಬಂದು ಘನಸ್ಥಿತಿಯಾದ ದೇಹದಲ್ಲಿ ಭೂತಪಂಚಕ ಪಂಚೀಕರಣದಿಂದ ಇಂದ್ರಿಯ ಪಂಚಕಗಳು ಏರ್ಪಡುವುವು. ಅದನ್ನಿಲ್ಲಿ ರೂಪಕವಾಗಿ ಹೀಗೆ ಹೇಳಲಾಗಿದೆ. —ಇತಿ ಶಿವಂ )

೨೫. ಹೀಗೆ ಚಿದಣು ಮಾಡುತ್ತಿರುವ ಕಾರ್ಯಗಳೆಲ್ಲವೂ ದೃಶ್ಯವನ್ನು ಪೋಷಣ ಮಾಡುವುವು. ಅದೇ ಎಂದರೆ ದೃಶ್ಯದ ವಿಸ್ತಾರವಾಗುವಿಕೆಯೇ ಜ್ಞಾನವೆನ್ನಿಸಿ ಕೊಳ್ಳುವುದು. ಅದನ್ನೇ ಬುದ್ಧಿಯೆನ್ನುವರು.

(ಅಂತಃಕರಣ ಚತುಷ್ಟಯ ಕಲ್ಪನಾ ಪ್ರಕಾರಮಾಹ–ಏವಮಿತಿ । ದೃಶ್ಯೇಷು ಶಬ್ದಾದಿಷು ಪುನಃಪುನರನುಭವಾತ್ ಪೋಷಮುಪಚಯಮುಪೈತಿ, ತತ್ರೇಂದ್ರಿಯ ಗೃಹೀತ ವಿಷಯಾಣಾಂ ಸ್ಮೃತಿದಶಾಯಾಂ ಜ್ಞಾನಂ ಚಿತ್ತಮಿತಿ ಅಧ್ಯವಸಾಯ ದಶಾಯಾಂ ಬುದ್ಧಿರಿತಿ ಚಾಽಭಿಧೀಯತೇ ॥—ತಾ. ಪ್ರ.)

೨೬. ಅನಂತರ ಮನಸ್ಸು, ಅದರಲ್ಲಿ ಆರೂಢವಾಗಿ ಅಹಂಕಾರವೆನ್ನಿಸಿ

ಚಿದಣೋರಸ್ಯ ಭಾವಸ್ಯ ಪ್ರತ್ಯಗ್ರಂ ಯತ್ರ ವೇದನಂ ।
ಸ ತತ್ಪೌರ್ವೋತ್ತರಕಾಲೇನ ಪೂರ್ವಾಭಿಖ್ಯಾಂ ಕರಿಷ್ಯತಿ　　　　॥ ೨೭ ॥

ಅನ್ಯಸ್ಮಿನ್ನೇಕದೇಶೇ ವಾ ಊರ್ಧ್ವಾಭಿಖ್ಯಾಂ ಕರಿಷ್ಯತಿ ।
ಏವಂ ದಿಗಭಿಧಾನಾದಿ ಕಲ್ಪಯಿಷ್ಯತಿ ಸ ಕ್ರಮಾತ್　　　　॥ ೨೮ ॥

---

ಕೊಳ್ಳುವುದು. ಆ ಅಹಂಕಾರವು ತಾನಾಗಿ ದೇಶಕಾಲ ಪರಿಚ್ಛೇದಗಳನ್ನು ಅಂಗೀಕರಿಸಿಕೊಳ್ಳುವುದು.

(ತತಃ ಸಂಕಲ್ಪ ವಿಕಲ್ಪದಶಾಯಾಂ ಮನೋ ಅಭಿಮಾನೇನ ಅಹಂಮಮತಯಾ ತದಾರೂಢಂ ತದಭಿನಿವಿಷ್ಟಂ ಸತ್ ಅಹಂಕಾರ ಪದಂ ಗತಂ । ದೇಶ ಕಾಲ ವಿಭಾಗ ಕಲ್ಪನಾಂ ವರ್ಣಯಿತುಂ ಪ್ರಸ್ತೌತಿ । ದೇಶೇತಿ ) —ತಾ. ಪ.)

೨೭. ಚಿದಣುವಿನ ಈ ದೇಶಕಾಲಾಂಗೀಕಾರದ ಭಾವವು ಯಾವುದುಂಟೋ ಅದರಲ್ಲಿ ಮೊದಲು ಆರಂಭವಾದ ವೇದನವನ್ನು ಆ ಮೇಲೆ ಬಂದುದನ್ನು ಗಮನಿಸಿ ಮೊದಲದನ್ನು ಪೂರ್ವ ಎನ್ನುವರು.

(ವೇದದಲ್ಲಿ ಬರುವ ಅಹಂ ಪೂರ್ವದ ಕಥೆಯನ್ನು ವಿಭಾವಿಸಿ.)

(ತತ್ರಕಾಲೇ ದೇಶೇ ಚ ಪೂರ್ವವತ್ಕಲ್ಪನಾ ಉತ್ತರ ಕಾಲ ಕಲ್ಪನಾಮಪೇಕ್ಷ್ಯೈವ ಪ್ರವರ್ತತ ಇತ್ಯಾಹ–ಚಿದಣೋರಿತಿ । ಅಸ್ಯ ಪ್ರಸಿದ್ಧಸ್ಯ ಭಾವಸ್ಯ ಶಬ್ದಾದಿ ವಿಷಯಸ್ಯ ಪ್ರತ್ಯಗ್ರಂ ನವಂ । ಆದ್ಯಮಿತಿ ಯಾವತ್ । ಯತ್ರ ದೇಶರೂಪೇ ಕಾಲ ರೂಪೇ ವಾ ಆಧಾರೇ ವೇದನಂ ಯಸ್ಯ ಚಿದಣೋರ್ಜೀವಸ್ಯ ಭವತಿ ಸ ಚಿದಣುಸ್ತಸ್ಯ ದೇಶಕಾಲಸ್ಯ ಪೌರ್ವೋತ್ತರಕಾಲೇನ ವ್ಯಾವರ್ತ್ಯೇನ ನಿಮಿತ್ತೇನ ಪೂರ್ವ ಇತ್ಯಭಿಖ್ಯಾಂ ನಾಮ ಕರಿಷ್ಯತಿ ಕಲ್ಪಯಿಷ್ಯತೀತಿ ಪ್ರತಿಜೀವಂ ಪ್ರತಿವಸ್ತು ಚೇದನುನಿಯತಮೇವೇತಿ ಭಾವಃ ॥—ತಾ. ಪ್ರ )

೨೮ ಹೀಗೆಯೇ ಇದೇ ವೇದನವು ಇನ್ನೊಂದೆಡೆ, ಏಕದೇಶದಲ್ಲಿ, ಊರ್ಧ್ವ ಎಂಬ ಹೆಸರನ್ನು ಹೊಂದುವುದು ಹೀಗೆಯೇ ಆ ಜೀವನು ದಿಕ್ಕುಗಳ ಅಭಿಧಾನಗಳನ್ನೂ ಕಲ್ಪಿಸಿಕೊಳ್ಳುವನು.

ದೇಶಕಾಲಕ್ರಿಯಾದ್ರವ್ಯಶಬ್ದಾನಾಮರ್ಥವೇದನಂ ।
ಭವಿಷ್ಯತಿ ಸ್ವಯಮಸಾವಾಕಾಶವಿಶದೋಽಪಿ ಸನ್ ॥ ೫೯ ॥

ಇತ್ಥಂ ಸ್ವಾನುಭವೇನೈಷ ವ್ಯೋಮ್ನ್ಯೇವ ವ್ಯೋಮರೂಪಭೃತ್ ।
ಆತಿವಾಹಿಕನಾಮಾಂತರ್ದೇಹಃ ಸಂಪದ್ಯತೇ ಚಿತೇಃ ॥ ೬೦ ॥

ಏಷ ಏವ ಚಿರಂ ಕಾಲಂ ತತ್ರ ಭಾವನಯಾ ತಯಾ ।
ಗೃಹ್ಣಾತಿ ನಿಶ್ಚಯಂ ಪೂರ್ಣಮಾಧಿಭೌತಿಕಮಾತ್ಮನಃ ॥ ೬೧ ॥

---

೫೯. ದೇಶ ಕಾಲ ಕ್ರಿಯಾ ದ್ರವ್ಯ ಶಬ್ದ ನಾಮ ಅರ್ಥ ವೇದನವೂ ಹೀಗೆಯೇ ಆಗುವುದು. ಆದರೂ ಇದನ್ನೆಲ್ಲಾ ಮಾಡುವ ಜೀವನು (ಚಿಚ್ಛಕ್ತಿಯು) ಆಕಾಶದಷ್ಟೇ ವಿಶದವಾಗಿರುವುದು.

(ಏವಂ ದೇಶಕಾಲವಸ್ತುಭೇದಾಂಸ್ತನ್ನಾಮಾನಿ ಚ ಕಲ್ಪಯಿತ್ವಾ ಗೃಹೀತ ಸಂಕೇತಾನಾಂ ಪುರುಷಾಣಾಂ ಶಬ್ದಶ್ರವಣೇ ತತ್ತದರ್ಥ ವೇದನಾತ್ಮನಾಪಿ ಸ್ವಯಮೇವ ಸಂಪತ್ಸ್ಯತೇ- ಇತ್ಯಾಹ- ದೇಶೇತಿ ॥— ತಾ. ಪ್ರ )

೬೦. ಹೀಗೆ ಸ್ವಾನುಭವದಿಂದಲೇ, ಆಕಾಶದಲ್ಲಿಯೇ, ಆಕಾಶರೂಪವನ್ನು ಧರಿಸಿರುವ, ಆತಿವಾಹಿಕವೆಂಬ ಹೆಸರುಳ್ಳ ಅಂತರ್ದೇಹವೊಂದು ಚಿತ್ತಿಗೆ ಏರ್ಪಡುವುದು.

(ಏವಂ ಸ್ವಯಮೇವ ಪ್ರಥಮಮಾತಿವಾಹಿಕ ದೇಹಸ್ತತೋ ದೇಶಕಾಲ ಕ್ರಿಯಾ ವಸ್ತುವಿಭಾಗಸ್ತ ತಸ್ತತ್ತನ್ನಾಮ ಭೇದ ಇತಿ ಕ್ರಮೇಣ ನಾಮಾಂತಂ ಸರ್ವಜಗಚ್ಛರೀರಂ ಸಂಪದ್ಯತ ಇತ್ಯರ್ಥಃ ॥— ತಾ. ಪ್ರ.)

೬೧. ಈ ಚಿದಣುರೂಪನಾದ ಜೀವನೇ ಬಹುಕಾಲ ಭಾವನಾ ಮಾಡುತ್ತ ಮಾಡುತ್ತ ಆ ಭಾವನಾ ಬಲದಿಂದ ನಿಶ್ಚಯವನ್ನು ಪೂರ್ಣವಾಗಿ ಹೊಂದಿ ತನ್ನ ಆಧಿಭೌತಿಕದೇಹವನ್ನು ಪಡೆಯುವನು.

ವ್ಯೋಮ್ನಾ ವ್ಯೋಮ್ನೀವ ರಚಿತೋ ನಿರ್ಮಲೇನೇತಿ ವಿಭ್ರಮಃ ।
ಅಸತಾ ಸತ್ಸಮಾಸ್ತೀರ್ಣಸ್ತಾವನದ್ಯಾ ಜಲಂ ಯಥಾ ॥ ೩೨ ॥

ಸಂಕಲ್ಪನಾಮುಪಾದತ್ತೇ ಸ್ವದೇಹೇ ಗಗನಾಕೃತಿಃ ।
ಶಿರಃಶಬ್ದಾರ್ಥದಾಂ ಕಾಂಚಿತ್ಪಾದಶಬ್ದಾರ್ಥದಾಂ ಕ್ವಚಿತ್ ॥ ೩೩ ॥

೩೨ ಆಕಾಶದಲ್ಲಿ ನಿರ್ಮಲವಾದ ಆಕಾಶದಿಂದಲೇ ರಚಿತವಾದ ಈ ವಿಭ್ರಾಂತಿಯು, ಅಸದ್ರೂಪದಿಂದ ಆಗಿರುವ ಸತ್ಪದಾರ್ಥದ ಹರಡುವಿಕೆಯು, ಇದು ಮರೀಚಿಕಾ ಪ್ರವಾಹದಲ್ಲಿ ಕಾಣುವ ಜಲವು ಹೇಗೋ ಹಾಗೆ !

೩೩. ಗಗನಾಕೃತಿಯಾಗಿರುವ ಜೀವನು ಸ್ವದೇಹದಲ್ಲಿ ಸಂಕಲ್ಪನವನ್ನು ವಹಿಸುವನು ಆ ಸಂಕಲ್ಪನವು ಶಿರಸ್ಸು ಮೊದಲಾದ ಶಬ್ದಗಳ ಅರ್ಥರೂಪವಾಗಿ ಅಷ್ಟು, ಪಾದಾದಿ ಶಬ್ದಗಳ ಅರ್ಥರೂಪವಾಗಿ ಅಷ್ಟು ಹೀಗಾಗಿರುವುದು.

(ಗರ್ಭಕ್ಕೆ ಪಿತೃತಃ ಅಗ್ನಿಶಕ್ತಿಸಂಪನ್ನವಾದ ಶುಕ್ಲವೂ ಮಾತೃತಃ ಸೋಮ ಶಕ್ತಿ ಸಂಪನ್ನವಾದ ಶೋಣಿತವೂ ಕಾರಣಗಳು ಇದನ್ನೇ ಈಗಿನ ಸೈನ್ಸ್ ವಿದ್ವಾಂಸರು, ತಂದೆತಾಯಿಗಳಿಂದ ಬರುವ ೨೪ ಜೊತೆ ಕ್ರೋಮೋಜೋಮ್‌ಗಳು ಎನ್ನುವರು. ಇವುಗಳಲ್ಲಿ ಕಾಲಿನಿಂದ ತಲೆಯುವರೆಗೂ ಇರುವ ಅಂಗಾಂಗಗಳನ್ನೆಲ್ಲಿ ಮಾಡುವ ಸಾಮಗ್ರಿಗಳೆಲ್ಲ ಬೀಜರೂಪದಿಂದ ಇರುವುವು ಎನ್ನುವುದು ಒಂದು ಮತ. ಅಥವಾ ಬೆಳೆದು ಬೆಳೆದು ಅಸಂಖ್ಯಾಕವಾದ ಈ ಕ್ರೋಮೋಜೋಂಗಳಿಂದ ಅಂಗಾಂಗಗಳಾಗುವುವು ಎನ್ನುವುದು ಇನ್ನೊಂದು ಮತ. ಎರಡನೆಯ ಮತವನ್ನು ಅಂಗೀಕರಿಸಿ, ಅಂಗಾಂಗಗಳನ್ನು ರಚಿಸುವ ಮೂಲವಸ್ತುಗಳಲ್ಲಿ ಏನೂ ಭೇದವಿರುವುದಿಲ್ಲ: ಅಲ್ಲಲ್ಲಿರುವ ಪಂಚಭೂತಗಳು ಜೀವನ ಇಚ್ಛಾಮಾತ್ರದಿಂದ ಅಂಗಾಂಗಗಳಾಗಿ ರಚಿತವಾಗುವುವು ಆಗ ಅವನ ಪೌರ್ವದೈಹಿಕ ಕರ್ಮಫಲದಿಂದ ಜನನಾತ್ಪೂರ್ವದಲ್ಲಿ ಗರ್ಭಸ್ಥನಾಗಿರುವಾಗಲೇ ನ್ಯೂನಾತಿರೇಕಗಳೂ, ಪಿತೃತಃ ಮಾತೃತಃ ಬರುವ ಗುಣ ದೋಷಗಳ ಜೊತೆಗೆ ಪ್ರಾದುರ್ಭವವನ್ನು ಪಡೆಯುವುವು ಎನ್ನುವುದು ಸರಿ.

ಈಗಿನ ಸೈನ್ಸ್ ವಿದ್ವಾಂಸರು "ಹೆರೆಡಿಟಿ"ಯನ್ನು ಒಪ್ಪಿಕೊಂಡ್, ಅಲ್ಲಿಂದಾಚೆಗೆ ಏನಿದೆಯೋ ಕಾಣೆವು ಎನ್ನುತ್ತಾರೆ. ಅದೇ ಉಸಿರಿನಲ್ಲಿ ತಂದೆಯಂತೆಯೇ

ಮಗನಾಗುವ ಯೋಗ 300,000,00 ಕೋಟಿಗೆ ಒಂದು ಎನ್ನುತ್ತಾರೆ ತಂದೆ ಯಂತೆ ಮಗನಾಗದಿರಲು ಕಾರಣವೇನು ಎನ್ನುವುದನ್ನು ಮಾತ್ರ ಹೇಳುವುದಿಲ್ಲ

"The chances of the 24 pairs of chromosomes that go to to make up individual to come together in any particular Individual at the time of conception are 1 to 300,000,000,000,000 which shows the chance of there being an individual exetly like our self, even in infinite time, to be virtually nil so, whether it is the birth of Shakespeare, or a Mahatma Gandhi or an imbecile, it is the chance combination of chromosomes that takes place as a coincidence,, at the union of a specific sparm, of which 200,000,000, to 500,000,000 sperms are injected in each circulation in a single act of inter course, with a single specific egg, at a specific time."

"The fertilised egg is the individual, with all its inherited capacities either for good or for evil such as whether we are going to be short, medium or tall, to be long lived or short-lived, dark fair, a boy or girl, with atendency to diabetes or cancer, and other iunumerable hereditomy characteristics, predestined by the geres in its particular chromosomes." "As regards personality, there are geres for normal personality traits just as there are for other aspects of human make up.... . what any one inherits are the potentialities for a wide range of personalities the precise form into which a porsonality will "jell" or at set being determined by circumstauces."

"We do not know of any other antial influence which can chart a fixed course for personality."

ಉರಃಪಾರ್ಶ್ವಾದಿಶಬ್ದಾರ್ಥಮಯೀಂ ಕ್ವಚಿದನಾವಿಲಾಂ ।
ಭಾವಾಭಾವಗ್ರಹೋತ್ಸರ್ಗಶಬ್ದಾದ್ಯರ್ಥಮಯೀಮಪಿ ॥ ೩೪ ॥

ನಿಯತಾಕಾರಕಲನಾಂ ದೇಶಕಾಲಾದಿಯಂತ್ರಿತಾಂ ।
ವಿಷಯೋನ್ಮುಖತಾಂ ಯಾತಾಮಿಂದ್ರಿಯವ್ರಾತವೇಧಿತಾಂ ॥ ೩೫ ॥

ಸೋಣುಃ ಪಶ್ಯತ್ಯಥಾಕಾರಮಾತ್ಮನಃ ಸ್ವಾತ್ಮಕಲ್ಪಿತಂ ।
ಹಸ್ತಪಾದಾದಿಕಲಿತಂ ಚಿತ್ತಾದಿಕಲನಾನ್ವಿತಂ ॥ ೩೬ ॥

ಏವಂ ಸಂಪದ್ಯತೇ ಬ್ರಹ್ಮಾ ತಥಾ ಸಂಪದ್ಯತೇ ಹರಿಃ ।
ಏವಂ ಸಂಪದ್ಯತೇ ರುದ್ರ ಏವಂ ಸಂಪದ್ಯತೇಕೃಮಿಃ ॥ ೩೭ ॥

(The new you and theredity by amram scteinfeld chatto and windus, 40—42, William IV St London)

ನಮ್ಮಲ್ಲಿರುವ "ದೋಹದ", ಪುಂಸವನ ವಿಧಾನ, ಸೀಮಂತೋನ್ನಯನ, ಮೇಧಾಜನನಗಳನ್ನು ಪರಿಭಾವಿಸಿ ನೋಡಿ.

೩೪. ಉರಸ್ಸು, ಪಾರ್ಶ್ವ, ಮೊದಲಾದ ಶಬ್ದಗಳ ಭಾವ, ಅಭಾವ, ಗ್ರಹ, ಉತ್ಸರ್ಗ, ಎಂಬ ಶಬ್ದಗಳ, ಅರ್ಥದಿಂದ ಕೂಡಿರುವ

೩೫. ದೇಶ ಕಾಲ ಆದಿಗಳಿಂದ ನಿಯಂತ್ರಿತವಾಗಿ ನಿಯತವಾದ ಆಕಾರ, ಸಂಕಲ್ಪಗಳುಳ್ಳ, ವಿಷಯಗಳ ಕಡೆ ತಿರುಗಿರುವ, ಇಂದ್ರಿಯ ಸಮೂಹಗಳಿಂದ ಹೊರಬೀಳುವ, ಸಂಕಲ್ಪನವನ್ನು ಹೊಂದುವುದು

೩೬. ಆ ಜೀವವು (ಚಿದಾಣುವು) ತನ್ನ ಆತ್ಮದಿಂದಲೇ ಕಲ್ಪಿತವಾಗಿರುವ ಸ್ವಾತ್ಮಾಕಾರವನ್ನು ನೋಡುವುದು. ಆ ಆಕಾರವು ಹಸ್ತ ಪಾದಾದಿ ಕಲಿತವಾಗಿ ರುವುದು ; ಚಿತ್ತಾದಿ ಕಲನಗಳಿಂದ ಕೂಡಿರುವುದು.

೩೭. ಬ್ರಹ್ಮನು ಹುಟ್ಟುವುದೂ ಹೀಗೆಯೇ! ಹರಿಯು ಹುಟ್ಟುವುದೂ ಹೀಗೆಯೇ! ರುದ್ರನು ಹುಟ್ಟುವುದೂ ಹೀಗೆಯೇ, ಕೃಮಿಯು ಹುಟ್ಟುವುದೂ ಹೀಗೆಯೇ!

ನಚ ಕಿಂಚನ ಸಂಪನ್ನಂ ಯಥಾಸ್ಥಿತಮವಸ್ಥಿತಂ ।
ಶೂನ್ಯಂ ಶೂನ್ಯೇ ವಿಲಸಿತಂ ಜ್ಞಪ್ತಿರ್ಜ್ಞಪ್ತೌ ವಿಜೃಂಭಿತಾ ॥ ೩೮ ॥

ಪ್ರತಿಕಂದಃ ಶರೀರಾಣಾಂ ಬೀಜಂ ತ್ರೈಲೋಕ್ಯವೀರುಧಾಂ ।
ಸರ್ಗಾರ್ಗಲಪ್ರದೋ ಮುಕ್ತೇಃ ಸಂಸಾರಾಸಾರವಾರಿದಃ ॥ ೩೯ ॥

ಕಾರಣಂ ಸರ್ವಕಾರ್ಯಾಣಾಂ ನೇತಾ ಕಾಲಕ್ರಿಯಾದಿಷು ।
ಸರ್ವಾದ್ಯಃ ಪುರುಷಃ ಸ್ವೈರಮಿತ್ಯನುತ್ಥಿತ ಉತ್ಥಿತಃ ॥ ೪೦ ॥

ನಾಸ್ಯ ಭೂತಮಯೋ ದೇಹೋ ನಾಸ್ಯಾಸ್ಥೀನಿ ಶರೀರಕೇ ।
ಅವಷ್ಟಬ್ಧುಮಸೌ ಮುಷ್ಟ್ಯಾ ಶಕ್ಯತೇ ನತು ಕೇನಚಿತ್ ॥ ೪೧ ॥

---

೩೮. ಯಾವುದೂ ಹೊಸದಾಗಿ ಹುಟ್ಟಿಬರಲಿಲ್ಲ, ಇದ್ದುದು ಇದ್ದಂತೆಯೇ ಇದೆ. ಶೂನ್ಯದಲ್ಲಿ ಶೂನ್ಯವೇ ಆಟವಾಡಿತು ಜ್ಞಪ್ತಿಯು ಜ್ಞಪ್ತಿಯಲ್ಲಿ ವಿಜೃಂಭಿಸಿತು. ಅಷ್ಟೇ!

೩೯. ಶರೀರ ಶರೀರಕ್ಕೂ ಕಂದವಿರುವಂತೆಯೇ ತ್ರೈಲೋಕ್ಯವೆಂಬ ಬಳ್ಳಿಗಳಿಗೂ ಬೀಜವಿರುವುದು. (ಆ ಬೀಜವೂ ಶರೀರ ಬೀಜದಂತೆಯೇ ಕಲ್ಪನೆಯಿಂದಲೇ ಆದುದು) ಅದೇ ಮುಕ್ತಿಯ ದ್ವಾರಕ್ಕೆ ಅಡ್ಡವಾಗಿ ನಿಂತಿರುವ ಸರ್ಗವು ಸತ್ಯವೆಂಬ ಅರ್ಗಲವು, ಅದೇ ಸಂಸಾರವೆಂಬ ಮಳೆಯನ್ನು ಕರೆಯುವ ಮೇಘವು.

(ವ್ಯಷ್ಟಿವತ್ ಸಮಷ್ಟ್ಯಾತ್ಮಾ ವಿರಾಡಪ್ಯೇವಮೇವ ಕಲ್ಪನಯೋತ್ಥಿತ ಇತ್ಯಾಹ–ಪ್ರತಿಸ್ಕಂದ ಇತಿ । ವ್ಯಷ್ಟಿ ಶರೀರಾಣಾಂ ಪ್ರತಿನಿಯತಃ ಕಂದಃ ಪ್ರತಿಕಂದಃ । ತದಾಧಾರತ್ರೈಲೋಕ್ಯವಲ್ಲೀನಾಮಪಿ ಸ ಏವ ಬೀಜಂ । ಮುಕ್ತೇರ್ದ್ವಾರೇಷು ಪ್ರತಿಬಂಧಕ ವಿಷಯ ಸರ್ಗಾರ್ಗಲಪ್ರದಃ ॥—ತಾ ಪ್ರ.)

೪೦. ಸರ್ವಕಾರ್ಯಗಳಿಗೂ ಕಾರಣವಾದುದೂ ಅದೇ! ಕಾಲಕ್ರಿಯಾದಿಗಳೆಲ್ಲವನ್ನೂ ಮಾಡಿಸುವುದೂ ಅದೇ! ಸರ್ವಕ್ಕೂ ಆದ್ಯನಾಗಿರುವ ಪುರುಷನೂ ಅದೇ! ತಾನಾಗಿ ಕಲ್ಪನೆಯಿಂದ ಹುಟ್ಟಿ ಬಂದುದರಿಂದ, ಅದು ಇದ್ದರೂ ಇಲ್ಲದಂತೆಯೇ!

೪೧. ಈ ಆದ್ಯಪುರುಷನಿಗೆ, ಪಂಚಭೂತಗಳಿಂದ ಆದ ದೇಹವಿರುವಂತೆ

ತೇನಾಬ್ಧಿಮೇಘಸಂಗ್ರಾಮಸಿಂಹಗಜೋರ್ಜಿತಾತ್ಮನಾ ।
ಅಪಿ ಸುಪ್ತನರೇಣೇವ ನೂನಂ ಮೌನವತಾ ಸ್ಥಿತಂ ॥ ೭೨ ॥

ಜಾಗ್ರತಃ ಸ್ವಪ್ನಸಂದೃಷ್ಟಯೋದ್ಧಾರಭಟವೇದನಂ ।
ಯಥಾಸ್ಮೃತಿ ಗತಂ ನಾಸನ್ನ ಸತ್ತದ್ವದಸೌ ಸ್ಥಿತಃ ॥ ೭೩ ॥

ಬಹುಯೋಜನಲಕ್ಷೌಘಪ್ರಮಾಣೋಽಪಿ ಬೃಹದ್ವಪುಃ ।
ಪರಮಾಣ್ವಂತರೇ ಭಾತಿ ಲೋಮಾಂತಸ್ಥಜಗತ್ತ್ರಯಃ ॥ ೭೪ ॥

---

ಕಂಡರೂ ದೇಹವಿಲ್ಲ: ದೇಹವಿದ್ದರೂ ಅದರಲ್ಲಿ ಅಸ್ಥಿ ಮೊದಲಾದುವುಗಳಿಲ್ಲ. ಅದರಿಂದ ಯಾರೂ ಆವನನ್ನು ಮುಷ್ಟಿಯಿಂದ ಹಿಡಿದುಕೊಳ್ಳಲು ಸಾಧ್ಯವಿಲ್ಲ.

೭೨. ಆತನೂ (ಸಮಷ್ಟಿ ಜೀವನಾದ ವಿರಾಟನು) ಕೂಡ ಕನಸಿನಲ್ಲಿ ಸಾಗರ, ಮೇಘ, ಸಂಗ್ರಾಮ, ಸಿಂಹ, ಗಜ ಮೊದಲಾದವುಗಳ ಭಾರಿ ಭಾರಿ ಗರ್ಜನಗಳಾಗುತ್ತಿದ್ದರೂ ಮೌನವಾಗಿ ಮಲಗಿರುವನಂತೆ ಇರುವನು.

(ಯಥಾ ಸ್ವಪ್ನೇ .... ಮಹಾಧ್ವನಿಭಿಶ್ಚೋರ್ಜಿತಾತ್ಮನಾಪಿ ಸುಪ್ತನರೇಣ ವಸ್ತುತೋ ಮೌನವತಾ ನಿಶ್ಶಬ್ದಮೇವ ಸ್ಥಿತಂ ತಥಾ ತೇನಾಪಿ ವಿರಾಜಾ ನಿಷ್ಪ್ರಪಂಚೇ ಸ್ವರೂಪೇ ಸ್ಥಿತಮಿತ್ಯರ್ಥಃ—ತಾ. ಪ್ರ.)

೭೩. ನಿದ್ದೆಯಿಂದೆಚ್ಚತ್ತವನಿಗೆ ಕನಸಿನಲ್ಲಿ ಕಂಡ ಯುದ್ಧದ ಆರ್ಭಟವೆಂತು ಸ್ಮೃತಿಯಲ್ಲಿ ಮಾತ್ರ ಉಳಿಯುವುದೋ, ಹಾಗೆ ಉಳಿದರೂ ಅದು ಹೇಗೆ ಸತ್ಯವಲ್ಲವೋ, (ಅಥವಾ, ಆರ್ಭಟವೆಂತು ಸತ್ಯವಲ್ಲದಿದ್ದರೂ ಸ್ಮೃತಿಯಲ್ಲಿ ಉಳಿಯುವುದೋ ಅಥವಾ ಆರ್ಭಟವೆಂತು ಸತ್ ಅಲ್ಲ ಅಸತ್ ಅಲ್ಲವೋ ಹಾಗೆ) ಈ ವಿರಾಟನು ಲೋಕ ವಿಷಯವನ್ನು ಧರಿಸಿರುವನು.

೭೪. ಈ ವಿರಾಟನು ಬಹುಯೋಜನ ಲಕ್ಷ ಲಕ್ಷ ಪ್ರಮಾಣನಾಗಿ ಭಾರಿಯ ದೇಹವನ್ನು ಧರಿಸಿದ್ದರೂ, ಪರಮಾಣುವಿನಲ್ಲಿಯೂ ಕಾಣಿಸಿಕೊಳ್ಳುವನು: ಹಾಗೆ ಪರಮಾಣುವಿನಲ್ಲಿ ಕಾಣಿಸಿಕೊಳ್ಳುವನಾದರೂ ಆತನ ರೋಮ ರೋಮದಲ್ಲಿಯೂ ಜಗತ್ತ್ರಯಗಳೂ ಇರುವುವು.

(ಮಾಯಾ ಮಾತ್ರತ್ವಾದೇವಾಸಂಭಾವಿತ ಸಹಸ್ರಮಪ್ಯತ್ರ ಸಂಭವತ್ಯೇವೇತ್ಯಾಶಯೇನಾಹ—ತಾ. ಪ್ರ.)

ಕುಲಶೈಲಗುಣೌಘಾತ್ಮಾ ಜಗದ್ವೃಂದಾತ್ಮಕೋಽಪಿ ಸನ್ ।
ಕುಲಾಯಂ ಧಾನಕಾಮಾತ್ರಮಪಿ ನೋ ಪೂರಯತ್ಯಜಃ ॥ ೪೫ ॥

ಜಗತ್ಕೋಟಿಶತಾಭೋಗವಿಸ್ತೀರ್ಣೋಽಪ್ಯಣುಮಾತ್ರಕಂ ।
ವಸ್ತುತೋ ವ್ಯಾಪ್ತವಾನೇಷ ನ ದೇಶಂ ಸ್ವಪ್ನಶೈಲವತ್ ॥ ೪೬ ॥

ಸ್ವಯಂಭೂರೇಷ ಕಥಿತೋ ವಿರಾಡೇಷ ಸ ಉಚ್ಯತೇ ।
ಬ್ರಹ್ಮಾಂಡಾತ್ಮಾ ಜಗದ್ದೇಹೋ ವಸ್ತುತಸ್ತು ನಭೋಮಯಃ ॥ ೪೭ ॥

ಸನಾತನ ಇತಿ ಪ್ರೋಕ್ತೋ ರುದ್ರ ಇತ್ಯಪಿ ಸಂಜ್ಞಿತಃ ।
ಇಂದ್ರೋಪೇಂದ್ರಮರುನ್ಮೇಘಶೈಲಜಾಲಾದಿದೇಹಕಃ ॥ ೪೮ ॥

ತೇಜೋಣುಮಾತ್ರಂ ಪ್ರಥಿತಂ ಚೇತಿತ್ವಾತ್ಪ್ರಥಮಂ ವಪುಃ ।
ಕ್ರಮೇಣ ಸ್ಫಾರಸಂವಿತ್ತಿರ್ಮಹಾನಹಮಿತಿ ಸ್ಥಿತಃ ॥ ೪೯ ॥

---

೪೫. ಕುಲಪರ್ವತಗಳಂತೆ ಮಹತ್ತಾದ ಗುಣೌಘಗಳನ್ನೂ ಜಗದ್ವೃಂದಗಳನ್ನೂ ತನ್ನಲ್ಲಿಯೇ ಧರಿಸಿರುವವನಾದರೂ, ಕಣಜದಲ್ಲಿರುವ ಸಣ್ಣಕಾಳುಗಳಲ್ಲಿ ಯಾವುದೊಂದೂ ಆ ಕಣಜವನ್ನು ಹೇಗೆ ತುಂಬಲಾರದೋ ಹಾಗೆಯೇ ಅಜನೂ (ಆ ಬ್ರಹ್ಮಾಕಾಶವನ್ನು) ತುಂಬಲಾರನು.

೪೬. ಜಗತ್ತುಗಳ ಕೋಟಿ ಶತಗಳು ತುಂಬುವಷ್ಟು ವಿಸ್ತೀರ್ಣನಾದರೂ ಅಣು ಮಾತ್ರಕನಾಗಿ, ಸ್ವಪ್ನಶೈಲದಂತಿರುವ ಈ ವಿರಾಟನು ವಾಸ್ತವವಾಗಿ ಯಾವ ದೇಶದಲ್ಲಿಯೂ ವ್ಯಾಪ್ತನಾಗಿರುವುದಿಲ್ಲ.

೪೭. ಈತನನ್ನು ಸ್ವಯಂಭೂ ಎನ್ನುವರು: ವಿರಾಟ್ ಎನ್ನುವರು: ಬ್ರಹ್ಮಾಂಡಾತ್ಮಾ ಎನ್ನುವರು: ಜಗದ್ದೇಹ ಎನ್ನುವರು: ಇಷ್ಟಾದರೂ ಈತನು ವಾಸ್ತವವಾಗಿ ಆಕಾಶಮಯನು.

೪೮ ಈತನನ್ನು ಸನಾತನನೆನ್ನುವರು: ರುದ್ರನೆನ್ನುವರು: ಇಂದ್ರ, ಉಪೇಂದ್ರ, ಮರುತ್ತು, ಮೇಘ, ಶೈಲಜಾಲ, ಮೊದಲಾದವುಗಳೆಲ್ಲ ಈತನ ದೇಹಗಳೇ!

೪೯. ಈ ವಿರಾಟನು ತೇಜೋಽಣು ಮಾತ್ರನು, ಪ್ರಥಮ ಚೇತಿತನಾದ

ಸ್ಪಂದಸಂವೇದನಾತ್ತೇನ ಸ್ಪಂದ ಇತ್ಯನುಭೂಯತೇ ।
ಯಃ ಸ ಏವಾನಿಲಾಭಿಖ್ಯೋ ವಾತಸ್ಕಂಧಾತ್ಮನಾ ಸ್ಥಿತಃ ॥ ೫೦ ॥

ಪ್ರಾಣಾಪಾನಪರಿಸ್ಪಂದೋ ವೇದನಾದನುಭೂಯತೇ ।
ತೇನ ಯಃ ಸೋಽಯಮಾಕಾಶೇ ವಾತಸ್ಕಂಧ ಉದಾಹೃತಃ ॥ ೫೧ ॥

ಚಿತ್ತಾದ್ಯೇ ಕಲ್ಪಿತಾಸ್ತೇನ ಬಾಲೇನೇವ ಪಿಶಾಚಿಕಾಃ ।
ತೇಜಃಕಣಾ ಅಸಂತೋಽಪಿ ತ ಏತೇ ಧಿಷ್ಣ್ಯತಾಂ ಗತಾಃ ॥ ೫೨ ॥

ಪ್ರಾಣಾಪಾನಪರಾವರ್ತದೋಲಾ ತದುದರೋದಿತಾ ।
ವಾತಸ್ಕಂಧಾಭಿಧಾಂ ಧತ್ತೇ ಜಗತ್ತದ್ಧೃದಯಂ ಮಹತ್ ॥ ೫೩ ॥

---

ಚಿದಣುರೂಪನಾದ್ದರಿಂದ, ಪ್ರಥಮ ದೇಹನೆಂದು ಪ್ರಸಿದ್ಧನಾಗಿರುವನು. ಬರು ಬರುತ್ತ ಕ್ರಮನಾಗಿ, ಸಂವಿತ್ತು ವಿಸ್ತಾರವಾಗುತ್ತ ಬಂದು ಅಹಂ ಮಹಾನ್ ಎಂದು ಕೊಂಡನು.

೫೦. ಆತನ ಮನಸ್ಸಿನಲ್ಲಿ ಸ್ಪಂದದ ಸಂವೇದನವು ಬಂದಾಗ ಆತನು ಸ್ಪಂದವನ್ನು ಅನುಭವಿಸುವನು. ಆಗ ಅನುಭವದಿಂದ ವಾಯುವಾಗಿ ವಾತಸ್ಕಂಧ ವಾಗುವನು.

೫೧. ವಾಯುವಿನಲ್ಲಿ ಪ್ರಾಣ, ಅಪಾನಗಳೆಂಬ ಪರಿಸ್ಪಂದಗಳ ಸಂವೇದನ ದಿಂದ ಆಕಾಶದಲ್ಲಿ ವಾತಸ್ಕಂಧವಾಗುವನು. [ಪ್ರಾಣವು ಊರ್ಧ್ವಗತಿ, ಅಪಾನವು ಅಧೋಗತಿ, ವ್ಯಾನವು ಆವರಿಸಿ ನಿಲ್ಲುವ ಸ್ಥಿತಿಯೇ ಗತಿಯಾಗುಳ್ಳದು. ಉದಾನವು ಶಬ್ದವನ್ನು ಈಚೆಗೆ ತರುವ ಪ್ರವಾಹ ಗತಿಯು, ಸಮಾನವನ್ನು ಎಲ್ಲನನ್ನೂ ಏಕ ರೂಪಕ್ಕೆ ತರುವ ಅವಧೂತಗತಿಯು. ಇವಿಷ್ಟೂ ಸೇರಿ ವಾತಸ್ಕಂಧವು. ಇದು ಪಿಂಡಾಂಡದಲ್ಲಿಯೂ ಉಂಟು. ಬ್ರಹ್ಮಾಂಡದಲ್ಲಿಯೂ ಉಂಟು.)

೫೨. ಆತನ ಚಿತ್ತದಲ್ಲಿ, ಬಾಲಕನು ಕಲ್ಪಿಸಿಕೊಂಡ ಪಿಶಾಚಕಗಳಂತೆ, ಕಲ್ಪಿತಗಳಾದ ತೇಜಃಕಣಗಳು ಅಸತ್‌ಗಳೇ ಆದರೂ, ಈ ಸೂರ್ಯಚಂದ್ರಾದಿ ತೇಜೋಮಂಡಲಗಳಾಗಿರುವುವು.

೫೩. ಪ್ರಾಣ ಅಪಾನಗಳು ಹೋಗಿ ಬರುವಿಕೆಯಿಂದ ಆದ ತೊಟ್ಟಿಲು

ಪ್ರತಿಚ್ಛಂದಶರೀರಾಣಾಂ ಪ್ರಥಮಂ ಬೀಜಮೇಷ ಸಃ ।
ಜಗದ್ಗತಾನಾಂ ಸರ್ವೇಷಾಮಾಕಲ್ಪವ್ಯವಹಾರಿಣಾಂ ॥ ೫೪ ॥

ಪ್ರತಿಛಂದ್ಯಾದ್ಯದೇತಸ್ಮಾದುತ್ಥಿತಾ ಜಗದಾತ್ಮನಾ ।
ದೇಹಾಸ್ತದಾ ಯಥಾ ಬಾಹ್ಯಮಂತರೇಷಾಂ ತಥಾ ಸ್ಥಿತಂ ॥ ೫೫ ॥

ಚಿತಿಸ್ತಸ್ಯಾದ್ಯಬೀಜಸ್ಯ ಪೂರ್ವಮೇವ ಯಥೋದಿತಾ ।
ತಥೈವಾದ್ಯಾಪಿ ಜೀವೇಽಂತಸ್ತಥೋದೇತಿ ತದೀಹಿತಾ ॥ ೫೬ ॥

---

ಹೊಟ್ಟೆಯಲ್ಲಿ ತೂಗುತ್ತಿರುವುದು. ಅದನ್ನೇ ವಾತಸ್ಕಂಧ ಎಂದು ಕರೆಯುವರು. ಜಗತ್ತು ಎನ್ನುವುದು ಅದನ್ನು ಹೃದಯವಾಗುಳ್ಳದು.

೫೪. ಪ್ರತಿಯೊಬ್ಬ ಜೀವನೂ ತನ್ನ ಕಲ್ಪನಾನುಸಾರವಾಗಿ ಸೃಜಿಸಿಕೊಳ್ಳುವ ಶರೀರಗಳಿಗೆಲ್ಲ ಈ ವಿರಾಟನೇ ಈ ಚಿದಣುವೇ ಬೀಜವು. ಜಗತ್ತಿನಲ್ಲಿದ್ದುಕೊಂಡು ಕಲ್ಪಾಂತದವರೆಗೂ ಈ ಜೀವರು ವ್ಯವಹಾರ ಮಾಡುವರು.

(ಹಿಂದೆ ಹೇಳಿದಂತೆ ಈ ವಿರಾಟನು ತನ್ನ ಅಭಿಮಾನವನ್ನು ಉಪಸಂಹರಿಸುವುದೇ ಪ್ರಲಯವು.)

೫೫. ಈ ಜೀವರೆಲ್ಲರೂ ಈ ವಿರಾಟನ ಸಂಕಲ್ಪದಿಂದಲೇ ಹುಟ್ಟಿದವರು. ಆತನು ಜಗತ್ಸಂಕಲ್ಪ ಮಾಡಿದಾಗಲೇ ಇವರೆಲ್ಲರೂ ಹುಟ್ಟಿದರು. ಆ ಜಗದ್ದೇಹದ ಒಳಗೆ ಹೊರಗೆ ಎಲ್ಲಾ ಇವರು ತುಂಬಿರುವರು.

(ಪರೇಚ್ಛಾಕಲ್ಪಿತಾ ದೇಹಾಃ ಕಥಮೇತಸ್ಯ ವ್ಯಷ್ಟಿತಾಂ ಗತಾಸ್ತತ್ರಾಹ— ಪ್ರತಿಚ್ಛಂದ್ಯಾದಿತಿ । ಪ್ರತಿಚ್ಛಂದಂ ಭವಃ ಪ್ರತಿಚ್ಛಂದ್ಯಃ ।– ಯದ್ಯಸ್ಮಾದ್ಧೇತೋಸ್ತಥಾ ವಿಧಾದಸ್ಮಾದುತ್ಥಿತಾಃ ಪ್ರತಿ ಪುರುಷ ದೇಹಂ ತತ್ತದ್ವಾಸನಾಮಯಾ ಬ್ರಹ್ಮಾಂಡಾ ಏವಮೇವ ಬೋಧ್ಯಾ ಇತ್ಯಾಹ-ದೇಹಾ ಇತಿ ।—ತಾ. ಪ್ರ.)

೫೬. ಆ ಆದ್ಯಬೀಜದ ಚಿತಿಯು ಮೊದಲು ಹೇಗೆ ಉದಿತವಾಯಿತೋ ಹಾಗೆಯೇ ಅದ್ಯಾಪಿ ಜೀವ ಜೀವನ ಹೃದಯದಲ್ಲಿ ಆಯಾ ಜೀವನ ವಾಸನಾನುಗುಣವಾಗಿ ಚಿತಿಯು ಉದಯಿಸುತ್ತಲೇ ಇರುವುದು.

ಶ್ಲೇಷ್ಮಪಿತ್ತಾನಿಲಾಸ್ತಸ್ಯ ಚಂದ್ರಾರ್ಕಪವನಾಸ್ತ್ರಯಃ ।
ಗ್ರಹಾ ಋಕ್ಷಗಣಾಸ್ತಸ್ಯ ಪ್ರಾಣಾಷ್ಠೀವನಸೀಕರಾಃ ॥ ೫೭ ॥

ತಸ್ಯಾಸ್ಥೀನ್ಯದ್ರಿಜಾಲಾನಿ ಮೇದಸೋ ಜಾತಿಕಾ ಘನಾಃ ।
ಶಿರಃ ಪಾದೌ ತ್ವಚಂ ದೇಹಾನ್ಪಶ್ಯಾಮಸ್ತಸ್ಯ ನೋ ವಯಂ ॥ ೫೮ ॥

ವಪುರ್ವಿರಾಜೋ ಜಗದಂಗ ವಿದ್ಧಿ
ಸಂಕಲ್ಪರೂಪಸ್ಯ ಹಿ ಕಲ್ಪನಾತ್ಮ ।
ಆಕಾಶಶೈಲಾವನಿಸಾಗರಾದಿ
ಸರ್ವಂ ಚಿದಾಕಾಶಮತಃ ಪ್ರಶಾಂತಂ ॥ ೫೯ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು**
**ನಿರ್ವಾಣ ಪ್ರಕರಣೇ "ವಿರಾಡಾತ್ಮ ವರ್ಣನಂ" ನಾಮ**
**ತ್ರಿಸಪ್ತತಿತಮಃ ಸರ್ಗಃ**

---

(ತತ್ರೈಕಬೀಜಾನ್ತರನ್ತರ್ಯಥಾ ವೃಕ್ಷಜೀವ ಪರಂಪರಾ ಕ್ರಮೇಣೋದ್ಭವ ದರ್ಶನಾದಸ್ತೀತಿ ಸಂಭಾವ್ಯತೇ ತದ್ವದತ್ರಾಪಿ ಸಂಭಾವ್ಯತಾಮಿತ್ಯಾಹ- ಚಿತಿರಿತಿ । ತದೀಹಿತಾ ತೇನ ಹಿರಣ್ಯಗರ್ಭೇಣ ವಾಂಚಿತಾ ।—ತಾ ಪ್ರ)

೫೭. ಆ ಹಿರಣ್ಯ ಗರ್ಭನ ದೇಹದಲ್ಲಿರುವ ಶ್ಲೇಷ್ಮಪಿತ್ತ ವಾಯುಗಳೇ ಚಂದ್ರ, ಸೂರ್ಯ, ಪವನ, ಎಂಬ ಮೂರ್ತಿತ್ರಯಗಳು, ಗ್ರಹಗಳು, ನಕ್ಷತ್ರಗಣಗಳು, ಇವೆಲ್ಲ ಆತನ ಪ್ರಾಣವು ಈಚೆಗೆ ಕಾರಿದ ತುಂತುರುಗಳು.

೫೮ ಆತನ ದೇಹದ ಅಸ್ಥಿಗಳೇ ಅದ್ರಿಜಾಲಗಳು: ಮೇದಸ್ಸಿನಿಂದ ಆದವು ಈ ಘನಗಳು: ಆತನ ಶಿರಸ್ಸನ್ನೂ ಪಾದಗಳನ್ನೂ ಚರ್ಮವನ್ನೂ ನಾವು ಕಾಣುವುದಿಲ್ಲ.

೫೯. ಆ ವಿರಾಟನ ದೇಹವೇ ಈ ಜಗತ್ತು ಎಂದು ತಿಳಿ. ಆತನು ಸಂಕಲ್ಪ ರೂಪನು. ಕಲ್ಪನಾಮಯವಾದ ಆತ್ಮವುಳ್ಳವನು. ಅದರಿಂದ ಆಕಾಶ, ಶೈಲ, ಭೂಮಿ, ಸಾಗರ, ಮೊದಲಾದವುಗಳೆಲ್ಲ ಪ್ರಶಾಂತವಾದ ಚಿದಾಕಾಶವಲ್ಲದೆ ಇನ್ನೇನೂ ಇಲ್ಲ.

**ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ**
**ನಿರ್ವಾಣ ಪ್ರಕರಣದಲ್ಲಿ "ವಿರಾಡಾತ್ಮ ವರ್ಣನ" ಎಂಬ**
**ಎಪ್ಪತ್ಮೂರನೆಯ ಸರ್ಗವು.**

## ಚತುಃಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ತಸ್ಮಿನ್ಕಲ್ಪೇ ತು ಸಂಕಲ್ಪೇ ತಸ್ಯ ಯದ್ವಪುರಾಸ್ಥಿತಂ ।
ಶೃಣು ತತ್ರ ವ್ಯವಸ್ಥೇಯಂ ವಿಚಿತ್ರಾಚಾರಹಾರಿಣೀ ॥ ೧ ॥

ಪರಮಂ ಯಚ್ಚಿದಾಕಾಶಂ ತದ್ವಿರಾಡಾತ್ಮನೋ ವಪುಃ ।
ಆದ್ಯಂತಮಧ್ಯರಹಿತಂ ಲಘುತ್ವಸ್ಯ ವಪುರ್ಜಗತ್ ॥ ೨ ॥

---

## ಎಪ್ಪತ್ತನಾಲ್ಕನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. (ಶಿಲೋದರ ಬ್ರಹ್ಮಾಂಡದ ಅಧಿಪತಿಯಾದ ವಿರಾಟನ) ಸಂಕಲ್ಪದಲ್ಲಿ ಆದ ಆಕಲ್ಪದಲ್ಲಿ ಆತನು ಯಾವ ದೇಹವನ್ನು ಪಡೆದಿದ್ದನು? ಅಲ್ಲಿ ವ್ಯವಸ್ಥೆಯು ಹೇಗಿತ್ತು? ಅಲ್ಲಿ ಯಾವ ಯಾವ ವಿಚಿತ್ರವಿಚಿತ್ರವಾದ ಆಚಾರಗಳು ಇದ್ದು ಆ ವ್ಯವಸ್ಥೆಯು ಹೇಗೆ ಮನೋಹಾರಿಣಿಯಾಗಿತ್ತು ಎಲ್ಲವನ್ನೂ ಕೇಳು.

(ಇದಾನೀಂ ಕಿಮಂಗ ತಸ್ಯ ಭೂರ್ಲೋಕಃ ಕಿಂ ಸ್ವರ್ಗಃ ಕಿಂ ರಸಾತಲಮಿತಿ ವಿಭಾಗಪ್ರಶ್ನಸ್ಯ, "ಕಥಂ ವಾಸೋಽಂತರೇ ತಸ್ಯ" ಇತಿ ಪ್ರಥಮ ಪ್ರಶ್ನಸ್ಯ, "ಕಥಂ ವಾ ತನ್ಮನೋಮಾತ್ರಂ ನಿರಾಕೃತಿರಿದಂ ಸ್ಥಿತಂ" ಇತಿ ಪ್ರಶ್ನಸ್ಯ ಚ ವಿಸ್ತರೇಣೋತ್ತರಂ ವಕ್ತುಂ ಶ್ರೋತಾರಮವಧಾಪಯತಿ—ತಸ್ಮಿನ್ನಿತಿ ।—ತಾ. ಪ್ರ.)

೨. ಪರಮವಾದ ಚಿದಾಕಾಶವು ಯಾವುದುಂಟೋ ಅದೇ ಆ ವಿರಾಡಾತ್ಮನ ದೇಹವು ಅದು ಆದ್ಯಂತ ಮಧ್ಯರಹಿತವಾದುದು. ಆ ದೇಹರೂಪವಾದ ಆ ಜಗತ್ತು ಬಹು ಲಘುವಾದುದು.

ಸಂಕಲ್ಪರಹಿತೋ ಬ್ರಹ್ಮಾ ಸ್ವಾಂಡಂ ಸಂಕಲ್ಪನಾತ್ಮಕಂ ।
ವಪುಷಃ ಪರಿತೋ ಭಾಸ್ವತ್ಪಶ್ಯತ್ಯಾಕಾಶಮೇವ ತತ್ ॥ ೩ ॥

ಬ್ರಹ್ಮಾತ್ಮೈಷ ಸ್ವಸಂಕಲ್ಪಂ ಸ್ವಮಂಡಮಕರೋದ್ದ್ವಿಧಾ ।
ತೈಜಸಂ ತೈಜಸಾಕಾರಃ ಪುಷ್ಟಃ ಪುಷ್ಟಂ ವಿಹಂಗವತ್ ॥ ೪ ॥

ಅಂಡಸ್ಯೈಕಂ ನಭೋದೂರಂ ಗತಂ ಸಂಬುದ್ಧವಾನಸೌ ।
ಭುವೋಧಃಸಂಸ್ಥಿತಂ ಭಾಗಂ ವ್ಯತಿರಿಕ್ತಂ ಚ ನಾತ್ಮನಾ ॥ ೫ ॥

---

೩. ಆ ಬ್ರಹ್ಮನು ಸಂಕಲ್ಪರಹಿತನಾಗಿದ್ದುಕೊಂಡು ತನ್ನ ಸಂಕಲ್ಪದಿಂದ ಆದ ತನ್ನ ಬ್ರಹ್ಮಾಂಡವನ್ನು ನೋಡುವನು. ಆಗ ಬ್ರಹ್ಮಾಂಡದ ಸುತ್ತಲೂ ಆಕಾಶವೇ ಆಗಿ ಕಾಣುವುದು.

(ಚಿದಾಕಾಶಮಾದ್ಯಂತ ಮಧ್ಯರಹಿತಂ ತಸ್ಯ ಸ್ವರೂಪಮಿತಿ ಕಥಂ ಜ್ಞಾಯತೇ? ತತ್ರಾಹ—ಸಂಕಲ್ಪರಹಿತ ಇತಿ । ಯತಃ ಸ ಬ್ರಹ್ಮಾಸ್ವ ಸಂಕಲ್ಪವಪುಷೋ ಬ್ರಹ್ಮಾಂಡಾದ್ಬಹಿಃ ಸಂಕಲ್ಪರಹಿತಃ, ನಿಸ್ಸಂಕಲ್ಪ ಸಾಕ್ಷಿ ಚಿದಾಕಾಶಮಾತ್ರಃ ಸ್ಸ ಸಂಕಲ್ಪ ನಾಮಕಂ ಸ್ವಾಂಡಂ ಪಶ್ಯತಿ ತಚ್ಚ ಪರಮಾರ್ಥದೃಶಾ ಆಕಾಶಮೇವೇತ್ಯರ್ಥಃ ॥ —ತಾ. ಪ್ರ.

೪. ಈ ಬ್ರಹ್ಮನೂ ಆತ್ಮನೇ ! ಈತನು ಸ್ವಸಂಕಲ್ಪರೂಪವಾದ ಸ್ವಾಂಡವನ್ನು ಎರಡಾಗಿ ಒಡೆದನು ಆ ಅಂಡವು ತೈಜಸವೆಂದರೆ ಹಿರಣ್ಮಯವು. ತಾನೂ ತೈಜಸಾಕಾರನಾಗಿ, ಬೆಳೆದ ಅಂಡದೊಡನೆ ತಾನೂ ಬೆಳೆದು, ಹಕ್ಕಿಯಂತೆ ಅದನ್ನು ಎರಡಾಗಿ ಒಡೆದನು

(ತತ್ರಾದೌ ತಸ್ಯ ಶಿರಃ ಪಾದೋ ನಿತಂಬ ಚ ವಕ್ತ್ರಂ ಬ್ರಹ್ಮಾಂಡಸ್ಯ ಊರ್ಧ್ವಾಧಃ ಕಪಾಲದ್ವಯ ವಿಭಾಗಮಾಹ–ಬ್ರಹ್ಮೇತಿ । ತೈಜಸಂ ಹಿರಣ್ಮಯಂ । ತೈಜಸಾಕಾರೋ ಲಿಂಗಸಮಷ್ಟ್ಯಭಿಮಾನಿ ಚಿದಾಕಾರಃ॥—ತಾ ಪ್ರ)

(ಮೊಟ್ಟೆಯೊಳಗೆ ಮರಿಯು ಬೆಳೆದು ಅದನ್ನೆಲ್ಲಾ ತುಂಬಿ ಚಿಪ್ಪನ್ನು ಒಡೆದು ಕೊಂಡು ಈಚೆಗೆ ಬರುವುದನ್ನು ಇಲ್ಲಿ ಚಿಂತಿಸಿ)

೫. ಒಂದು ಪಾಲು ಮೇಲಕ್ಕೆ ಹೋಗಲಿ, ಒಂದು ಪಾಲು ಕೆಳಗೆ ಇರಲಿ ಎಂದು ತನ್ನ ಸಂಕಲ್ಪದಿಂದ ವ್ಯವಸ್ಥೆ ಮಾಡಿದನು.

ಬ್ರಹ್ಮಾಂಡಭಾಗ ಊರ್ಧ್ವಸ್ಥೋ ವಿರಾಜಃ ಶಿರ ಉಚ್ಯತೇ ।
ಅಧೋಭಾಗೋಽಸ್ಯ ಪಾದಾಖ್ಯೋ ನಿತಂಬೋ ಮಧ್ಯಮಾತ್ರಕಂ ॥ ೬ ॥

ದೂರಂ ವಿಮುಕ್ತಯೋಃ ಸಂಧಿಃ ಖಂಡಯೋರಿತಿ ವಿಸ್ತೃತಾ ।
ಅನಂತಾ ವ್ಯೋಮಲೇಖಾ ಸಾ ಶ್ಯಾಮಾ ಶೂನ್ಯೇತಿ ದೃಶ್ಯತೇ ॥ ೭ ॥

ದ್ಯೌ ಸ್ತಾಲು ವಿಪುಲಂ ತಸ್ಯ ತಾರಾರುಧಿರಬಿಂದವಃ ।
ಸಂವಿದ್ವಾತಲವಾ ದೇಹೇ ಸುರಾಸುರನರಾದಯಃ ॥ ೮ ॥

ದೇಹಾಂತಃ ಕೃಮಯಸ್ತಸ್ಯ ಭೂತಪ್ರೇತಪಿಶಾಚಕಾಃ ।
ಲೋಕಾಂತರಾಣಿ ರಂಧ್ರಾಣಿ ಸುಷಿರಾಣ್ಯಸ್ಯ ದೇಹಕೇ ॥ ೯ ॥

ಬ್ರಹ್ಮಾಂಡಖಂಡಮಸ್ಯಾಧೋ ವಿಸ್ತೃತಂ ಪಾದಯೋಸ್ತಲಂ ।
ಜಾನುಮಂಡಲರಂಧ್ರಾಣಿ ಪಾತಾಲಕುಹರಾಣ್ಯಧಃ ॥ ೧೦ ॥

---

೬. ಊರ್ಧ್ವಭಾಗದಲ್ಲಿರುವ ಬ್ರಹ್ಮಾಂಡವು ಆ ವಿರಾಟನ ಶಿರವು ಎನ್ನುವರು. ಅಧೋ ಭಾಗವು ಪಾದಗಳು: ಮಧ್ಯದಲ್ಲಿರುವುದು ನಿತಂಬವು ಎನ್ನುವರು.

೭. ಹಾಗೆ ಒಡೆದು ದೂರದೂರ ಹೋದ ಖಂಡಗಳ ಸಂಧಿಯು ಅನಂತವಾದ ಆಕಾಶವಾಗಿ ಶ್ಯಾಮವರ್ಣವಾಗಿ ಶೂನ್ಯವಾಗಿ ಕಾಣುವುದು.

೮. ಅಂತರಿಕ್ಷವು ಆತನ ತಾಲು ಪ್ರದೇಶವು. (ಎರಡು ದವಡೆಗಳ ನಡುವೆ ಇರುವ ಪ್ರದೇಶವು) ತಾರೆಗಳು ರುಧಿರಬಿಂದುಗಳು. ಆ ದೇಹದಲ್ಲಿರುವ ಸಂವಿತ್ತು (ಬುದ್ಧಿ) ವಾತ (ಪ್ರಾಣ)ಗಳ ಅಂಶಗಳು ಸುರ, ಅಸುರ, ನರಾದಿಗಳು.

೯ ದೇಹದೊಳಗಿರುವ ಕೃಮಿಗಳು ಭೂತಪ್ರೇತ ಪಿಶಾಚಗಳು. ಅಲ್ಲಿರುವ ರಂಧ್ರಗಳು, ಸುಷಿರಗಳು ಲೋಕಲೋಕಾಂತರಗಳು.

೧೦. ಬ್ರಹ್ಮಾಂಡ ಖಂಡವಾಗಿ ಈತನಿಗೆ ಪಾದವಾಗಿರುವ ಭಾಗಗಳೂ ಜಾನು ಮಂಡಲದ ರಂಧ್ರಗಳೂ, ಅಧೋಭಾಗದಲ್ಲಿ ಪಾತಾಲ ಕುಹರ ಗಳಾಗಿರುವುವು

ಜಲೈಶ್ಚಲಚಲಾಯಂತೀ ಸುಷಿರಾನೇಕರಂಧ್ರಿಕಾ ।
ಭೂರಂತರ್ಮಂಡಲೀಲೋಲಾ ಸಮುದ್ರದ್ವೀಪವೇಷ್ಟನಾ ॥ ೧೧ ॥

ಜಲೈರ್ಗುಡಗುಡಾಯಂತ್ಯೋ ನದ್ಯೋ ನಾಡ್ಯಃ ಸರಿದ್ರಸಃ ।
ಜಂಬೂದ್ವೀಪಂ ಹೃದಂಭೋಜಮಸ್ಯ ಹೇಮಾದ್ರಿಕರ್ಣಿಕಂ ॥ ೧೨ ॥

ಕುಕ್ಷಯಃ ಕಕುಭಃ ಶೂನ್ಯಾ ಯಕೃತ್ಪ್ಲೀಹಾದಯೋಽಚಲಾಃ ।
ಮೃದ್ವ್ಯಃ ಸ್ನಿಗ್ಧಾಃ ಪಟಾಕಾರಾ ಮೇದಸೋ ಜಾಲಿಕಾ ಘನಾಃ ॥ ೧೩ ॥

ಚಂದ್ರಾರ್ಕೌ ಲೋಚನೇ ತಸ್ಯ ಬ್ರಹ್ಮಲೋಕೋ ಮುಖಂ ಸ್ಮೃತಂ
ತೇಜಃ ಸೋಮೋಽಸ್ಯ ಕಥಿತಃ ಶ್ಲೇಷ್ಮಾ ಪ್ರಾಲೇಯಪರ್ವತಃ ॥ ೧೪ ॥

ಅಗ್ನಿಲೋಕಸ್ತಥೌರ್ವಾಗ್ನಿಃ ಪಿತ್ತಮಸ್ಯಾತಿದುಃಸಹಂ ।
ವಾತಸ್ಕಂಧಮಹಾವಾತಾಃ ಪ್ರಾಣವಾಸಾ ಹೃದಿ ಸ್ಥಿತಾಃ ॥ ೧೫ ॥

---

೧೧ ಜಲಗಳಿಂದ ಚಲಚಲಿಸುತ್ತ ಭೂಮಂಡಲಗಳನ್ನು ತನ್ನಲ್ಲಿಟ್ಟುಕೊಂಡು ಇರುವ ಸಮುದ್ರ ದ್ವೀಪಗಳಿಂದ ಬಳಸಲ್ಪಟ್ಟಿರುವ ಲೋಕಗಳು ಸುಷಿರಗಳಲ್ಲಿರುವ ರಂಧ್ರಗಳು.

೧೨ ಗುಳುಗುಳನೆ ಹರಿಯುತ್ತಿರುವ ನೀರುಗಳಿರುವ ನದಿಗಳೇ ನಾಡಿಗಳು ಆ ದೇಹದ ರಸವೇ ಈ ನದಿಗಳ ನೀರುಗಳು. ಜಂಬೂದ್ವೀಪವೇ ಹೃದಯ ಕಮಲವು ಇದರಲ್ಲಿರುವ ಮೇರು ಪರ್ವತವೇ ಕರ್ಣಿಕವು.

೧೩ ಕುಕ್ಷಿಗಳು ಶೂನ್ಯಗಳಾದ ದಿಕ್ಕುಗಳು. ಯಕೃತ್ತು, ಪ್ಲೀಹ ಮೊದಲಾದವು ಪರ್ವತಗಳು. ಮೃದುವಾಗಿ, ಸ್ನಿಗ್ಧವಾಗಿ, ಬಟ್ಟೆಗಳ ಹಾಗಿರುವ ಮೇದಸ್ಸಿನ ಜಾಳಿಕೆಗಳು ಮೇಘಗಳು.

೧೪. ಚಂದ್ರನೂ ಸೂರ್ಯನೂ ಆತನ ಕಣ್ಣುಗಳು. ಬ್ರಹ್ಮಲೋಕವು ಮುಖವು ಆತನ ತೇಜಸ್ಸೇ ಸೋಮವು. ಶ್ಲೇಷ್ಮವೇ ಹಿಮಾಲಯ ಪರ್ವತವು.
(ತೇಜೋರೀತಃ)—ತಾ. ಪ್ರ)

೧೫ ಈತನ ದೇಹದಲ್ಲಿರುವ ಅತಿ ದುಃಖಕರವಾದ ಪಿತ್ತವೇ ಅಗ್ನಿಲೋಕವು: ಔರ್ವಾಗ್ನಿಯು ಆತನ ಹೃದಯದಲ್ಲಿರುವ ಪ್ರಾಣ, ಅಪಾನಗಳೇ, ವಾತಸ್ಕಂಧದಲ್ಲಿರುವ ಆವಹ ನಿವಹ ಪ್ರವಹ ಮೊದಲಾದ ಮಹಾವಾತಗಳು.

ಕಲ್ಪದ್ರುಮವನಾನ್ಯಸ್ಯ ಸರ್ಪವೃಂದಾನಿ ಚ ಕ್ವಚಿತ್ ।
ಲೋಮಜಾಲಾನ್ಯನಂತಾನಿ ವನಾನ್ಯುಪವನಾನಿ ಚ ॥ ೧೩ ॥

ಊರ್ಧ್ವಗಂ ಬ್ರಹ್ಮಾಂಡಖಂಡಂ ತು ಸಮಸ್ತಮುರುಮಸ್ತಕಂ ।
ಬ್ರಹ್ಮಾಂಡಪ್ರಾಂತರಂಧ್ರಾರ್ಚಿರಸ್ಯ ದೀಪ್ತಾ ಶಿಖೋತ್ಥಿತಾ ॥ ೧೪ ॥

ಸ್ವಯಮೇಷ ಮನಸ್ತೇನ ಮನೋ ನಾಸ್ಯೋಪಯುಜ್ಯತೇ ।
ಆತ್ಮೈವ ಭೋಕ್ತೃತಾಮೇತಿ ಕಿಲ ಕಸ್ಯ ಕಥಂ ಕುತಃ ॥ ೧೫ ॥

---

೧೩. ದೇಹದಲ್ಲಿರುವ ರೋಮಜಾಲಗಳೇ ಕಲ್ಪವೃಕ್ಷದ ವನಗಳು ಉಪವನಗಳು. ಈ ರೋಮಗಳೇ ಒಂದೊಂದೆಡೆ ಹಾವುಗಳಾಗಿರುವುವು.

(ಕ್ವಚಿತ್ಪಾತಾಲಾದೌ ಪ್ರಸಿದ್ಧಾನಿ ಸರ್ಪವೃಂದಾನಿ ಚಾಸ್ಯ ಲೋಮಜಾಲಾನಿ.)

೧೪. ಊರ್ಧ್ವವಾದ ಬ್ರಹ್ಮಾಂಡ ಖಂಡವೇ ಆತನ ಹೃದಯ ಮಸ್ತಕಗಳು ಬ್ರಹ್ಮಾಂಡಗಳ ಕೊನೆಯಲ್ಲಿರುವ ಜ್ಯೋತಿರ್ಗೋಳಗಳು ಈತನ ದೇಹದಲ್ಲಿ ಪ್ರಜ್ವಲಿಸುತ್ತಿರುವ ಅಗ್ನಿ ಶಿಖೆಗಳು. (ಶಿಖೆಯೆಂದರೆ ಜುಟ್ಟು ಎಂದು–ತಾ ಪ್ರ )

(ಬ್ರಹ್ಮಾಂಡಸ್ಯೋರ್ಧ್ವಪ್ರಾಂತೇ ರಂಧ್ರೇ ಪ್ರಸಿದ್ಧಂ ದೀಪ್ತಾರ್ಚಿಃ "ಅಥ ಯದತಃ ಪರೋ ದಿವೋಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷು "ಇತಿ ಶ್ರುತಿಪ್ರಸಿದ್ಧಮರ್ಚಿಜ್ಯೋತಿರಸ್ಯ ದೀಪ್ತಾ ಶಿಖಾ ಚೂಡಾ—ತಾ ಪ್ರ )

೧೫. ಈತನು ತಾನೇ ಮನಸ್ಸ್ವರೂಪನಾಗಿರುವುದರಿಂದ, ಈತನ ಮನಸ್ಸು ಮತ್ತೇನೂ ಅಲ್ಲ. ತಾನೇ ಭೋಕ್ತೃವಾಗಿರುವ ಮನಸ್ಸು ಇನ್ನೊಬ್ಬರ ಮನಸ್ಸನ್ನು ಹೇಗೆ, ಯಾತಕ್ಕಾಗಿ ಉಪಯೋಗಿಸೀತು ?

(ಏವಂ ವಿಧವಿರಾಡ್ದೇಹ ಕಲ್ಪನಾ ಕರ್ತುಸ್ತಸ್ಯ ಕಿಂ ಮನಃ ಕಾನೀಂದ್ರಿಯಾಣಿ ತತ್ರಾಹ–ಯತಃ ಸರ್ವಮನಃ ಸಮಷ್ಟ್ಯಾತ್ಮಾ ಏಷ ವಿಧಾತಾ ಸ್ವಯಂ ಮನ ಏವ। ಅತೋಽಸ್ಯ ಸರ್ವಕಲ್ಪನಾಸು ಅನ್ಯನ್ಮನೋ ನೋಪಯುಜ್ಯತೇ ಅನವಸ್ಥಾ ಪ್ರಸಂಗಾತ್। ಯದಿ ತು ಆತ್ಮೈವ ಸ್ವಭೋಗಾಯ ಭೋಗ್ಯವರ್ಗಂ ಕಲ್ಪಯತೀತಿ ಮನ್ಯೇಥಾಸ್ತನ್ನ। ತಸ್ಯ ಕೂಟಸ್ಥಾದ್ವಯ ಸ್ವಭಾವತ್ವಾದಿತ್ಯಾಹ–ಆತ್ಮೈವೇತಿ। ಕಿಂವೃತ್ತಾನಿ ಪ್ರಾಗ್ವತ್—ತಾ.ಪ್ರ )

ಸ್ವಯಮೇವೇಂದ್ರಿಯಾಣ್ಯೇಷ ತೇನಾನ್ಯತ್ರಾಸ್ತಿತಾ ಕೃತಾ ||
ಯತಸ್ತತ್ಕಲ್ಪನಾಮಾತ್ರಮೇವೇಂದ್ರಿಯಗಣಃ ಕಿಲ || ೧೯ ||

ಅವಯವಾವಯವಿನೋರಿವೇಹೇಂದ್ರಿಯಚಿತ್ತಯೋಃ |
ನ ಮನಾಗಪಿ ಭೇದೋಽಸ್ತಿ ಚೈಕ್ಯಮೇಕಶರೀರಯೋಃ || ೨೦ ||

ತಸ್ಯ ತಾನ್ಯೇವ ಕಾರ್ಯಾಣಿ ಜಗತಾಂ ಯಾನಿ ಕಾನಿಚಿತ್ |
ಸಂಕಲ್ಪಾ ಏವ ಪುಂವೃತ್ತ್ಯಾ ಚಲಂತ್ಯಾರ.ಪಿತದ್ವಿತಾಃ || ೨೧ ||

---

೧೯. ತಾನೇ ಇಂದ್ರಿಯಗಳಾಗಿರುವುದರಿಂದ ಈತನು ಬೇರೆಡೆಯಲ್ಲಿಯೂ ಅವುಗಳನ್ನು ಇಟ್ಟಿರುವನು. ಆತನ ಕಲ್ಪನಾ ಮಾತ್ರದಿಂದಲೇ ಇಂದ್ರಿಯ ಗಣ ಗಳೆಲ್ಲವೂ ಆಗುವುವು.

(ಏವಮಿಂದ್ರಿಯಾಣ್ಯಸ್ಯ ನೋಪಯುಜ್ಯಂತೇ। ಯತಸ್ತೇನಾನ್ಯತ್ರ ಅಸ್ಮ ದಾದಿಷು ಇಂದ್ರಿಯಾಣಾಮಸ್ತಿತಾ ಕೃತಾ ಕಲ್ಪಿತಾ। ನ ಚೇಂದ್ರಿಯ ಕಲ್ಪನಾಯಾ ಮಿಂದ್ರಿಯಾಣಾಂ ನಿಮಿತ್ತತ್ವಮನವಸ್ಥಾಪ್ರಸಂಗಾದಿತಿ ಭಾವಃ—ತಾ ಪ್ರ.)

೨೦. ಅವಯವ-ಅವಯವಿಗಳಿಗೆ ಏನು ಸಂಬಂಧವೋ ಇಂದ್ರಿಯ ಚಿತ್ತ ಗಳಿಗೂ ಅದೇ ಸಂಬಂಧವು. ಇವೆರಡಕ್ಕೂ ಏನೂ ಭೇದವಿಲ್ಲ ಇವೆರಡೂ ಒಂದೇ ಶರೀರವಾದ್ದರಿಂದ ಇವೆರಡಕ್ಕೂ ಐಕ್ಯವು.

(ಕಥಂ ತರ್ಹಿ ಇಂದ್ರಿಯ ಮನಸೋರ್ಭೇದ ವ್ಯವಹಾರಃ? ತತ್ರಾಹ- ಅವಯವೇತಿ। ಅಸ್ತಿ ಚೈಕ್ಯಂ ಮನಃ ಪ್ರವೃತ್ತ್ಯನ್ವಯ ವ್ಯತಿರೇಕ ದರ್ಶನಾದಿಂದ್ರಿಯ ಪ್ರವೃತ್ತೇಃ ಸ್ವಪ್ನೇ ಮನಸೈವ ೀವೇಂದ್ರಿಯ ಕಾರ್ಯ ನಿರ್ವಾಹ ದರ್ಶನಾ ಚ್ಚೇತಿ ಭಾವಃ —ತಾ ಪ್ರ)

೨೧ (ಅದರಿಂದ) ಜಗತ್ತಿನಲ್ಲಿ ನಡೆಯುವ ಯಾವ ಯಾವ ಕಾರ್ಯ ಗಳುಂಟೋ ಅವೆಲ್ಲಾ ಆತನದೇ ಕಾರ್ಯಗಳು। ಆತನ ಸಂಕಲ್ಪಗಳೇ ಪುರುಷ ರೂಪಗಳಾಗಿ ಭೇದವನ್ನು ಕಲ್ಪಿಸಿಕೊಂಡು ನಡೆಯುವುವು

(ಅತಏವ ಚ ಸರ್ವಜಗತ್ಕ್ರಿಯಾಸ್ತತ್ಕ್ರಿಯಾ ಏವೇತಿ ನ ಕ್ರಿಯಾಪಿ ಪೃಥಕ್ ಪ್ರಷ್ಟವ್ಯೇತ್ಯಾಹ ತಸ್ಯೇತಿ। ಯತಸ್ತದೀಯಸಂಕಲ್ಪ ಏವ ಪುಂವೃತ್ತ್ಯಾ ಸೃಷ್ಟಿ

ಜಾಗತೇ ತಸ್ಯ ವಿಜ್ಞೇಯೇ ನಾನ್ಯೇಽಸ್ಯ ಮೃತಿಜನ್ಮನೀ ।
ಸ ಏವೇದಂ ಜಗತ್ಯಸ್ಮತ್ಸಂಕಲ್ಪಾತ್ಮಾಪ್ಯ ನೇತರತ್ ॥ ೨೨ ॥

ತತ್ಸತ್ತಯಾ ಜಗತ್ಸತ್ತಾ ತನ್ಮೃತ್ಯೈವ ಜಗನ್ಮೃತಂ ।
ಯಾದೃಶೀ ಸ್ಪಂದಮರುತೋಃ ಸತ್ತೈಕಾ ತಾದೃಶೀ ತಯೋಃ ॥ ೨೩ ॥

---

ಸರ್ವ ಪುರುಷವೇಷೇಣ ಆರುಪಿತದ್ವಿತಾ ಆರೋಪಿತ ಭೇದಾಃ। ಸರ್ವ ವ್ಯವಹಾರಾತ್ಮನಾ ಚಲಂತಿ ।— ತಾ ಪ್ರ.)

೨೨ ಜಗತ್ತಿನ ಜನ್ಮ (ಸೃಷ್ಟಿ) ಮರಣ (ಪ್ರಲಯ)ಗಳೇ ಈತನ ಜನ್ಮ ಮರಣಗಳಲ್ಲಿದೆ ಬೇರೆ ಜನನ ಮರಣಗಳಿಲ್ಲ ನಮ್ಮೆಲ್ಲರ ಸಂಕಲ್ಪ ಒಟ್ಟುಗೂಡಿದರೂ ಸಹ ಆತನಲ್ಲದೆ ಇನ್ನೇನೂ ಇನ್ನು ಯಾರೂ ಇಲ್ಲ

(ತರ್ಹ್ಯಸ್ಮದಾದಿಮರಣ ಜನ್ಮನೀ ಏವತಸ್ಯ ಮರಣ ಜನ್ಮನೀ ವಿಜ್ಞೇಯೇ ಅನ್ಯೇ ಅಸ್ಮದಾದಿ ವ್ಯಷ್ಟಿ ಮಾತ್ರ ಪ್ರಸಿದ್ಧೇತು ಅನ್ಯ ನ । ಯತ ಇದಂ ಜಗತಿ ಸಮಷ್ಟಿರೂಪಂ ಸ ಏವ ಅಸ್ಮತ್ಸಂಕಲ್ಪಾತ್ಮಾಪಿ ಸ ಏವ ನೇತರನ್ನೇತರ ಇತ್ಯರ್ಥಃ। ಅಥವಾ ತಸ್ಯ ವಿಧಾತುಃ ಸಹ ಸಿದ್ಧಂ ಚತುಷ್ಟಯಮಿತಿ ಪುರಾಣ ದರ್ಶಿತ ನ್ಯಾಯೇನ ತತ್ವಜ್ಞತಯಾ ಜೀವನ್ಮುಕ್ತಸ್ಯ ದ್ವಿಪರಾರ್ಧಾಂತಾದಿ ಕಾಲ ಪ್ರಸಿಧ್ಧೇ ಅಸ್ಮದಾದಿ ವ್ಯಷ್ಟಿಷು ಪ್ರಸಿದ್ಧೇ ಚ–ಮೃತಿಜನ್ಮನೀ ಜಾಗತೇ ಜಗದಂತರ್ಗತಾಸ್ಮದ್ದೃಷ್ಟಿ ಕಲ್ಪಿತೇ ಏವ ನಾನ್ಯೇ। ಸ್ವದೃಷ್ಟಿಸಿದ್ಧೇ ಇತ್ಯರ್ಥಃ। ಯತಸ್ಯ ಏವೇದಂ ಜಗತಿ ಪ್ರಸಿದ್ಧಃ। ಅಸ್ಮತ್ಸಂಕಲ್ಪಾತ್ಮಾ ವ್ಯವಹಾರೋಽಪ್ಯಸ್ಯೈವ ರೂಪಂನೇತರವಿತ್ಯರ್ಥಃ। ಅಥವಾ ಇಂದ್ರಿಯ ಮನಾಂಸೀವ ತಸ್ಯ ಮೃತಿಜನ್ಮನೀ ಅಪಿ ಜಾಗತೇ ಅಸ್ಮದಾದಿ ಪ್ರಸಿದ್ಧೇ ವಿಜ್ಞೇಯೇ ನಾನ್ಯೇ। ಪೃಥಕ್ಕಲ್ಪೇ ತಸ್ಯ ಸಂಕಲ್ಪಾತ್ಮಾಪಿ ಜಗತಿ ಪ್ರಸಿದ್ಧಃ ಅಸ್ಮತ್ಸಂಕಲ್ಪಾತ್ಮೈವ। ಯತಸ್ಸ ಏವೇದಂ ಸರ್ವಂ ನೇತರತ್ಕಿಂಚಿದಸ್ತೀತ್ಯರ್ಥಃ॥— ತಾ ಪ್ರ.)

೨೩. ಆತನು ಇರುವುದರಿಂದಲೇ ಜಗತ್ತು ಇರುವುದು ಆತನು ಇಲ್ಲವಾದರೆ ಜಗತ್ತೂ ಇಲ್ಲವಾಗುವುದು ಮಾರುತನಿಗೂ ಆತನ ಸ್ಪಂದಕ್ಕೂ ಸತ್ತೆಯು ಒಂದೆ ಹೇಗೋ ಹಾಗೆಯೇ ವಿರಾಟನಿಗೂ ಬ್ರಹ್ಮಾಂಡಕ್ಕೂ ಸತ್ತೆ ಒಂದೇ !

ಜಗದ್ವಿರಾಜೋಃ ಸತ್ತೈಕಾ ಪವನಸ್ಪಂದಯೋರಿವ ।
ಜಗದ್ಯತ್ಸ ವಿರಾಡೇವ ಯೋ ವಿರಾಟ್ ತಜ್ಜಗತ್ಸ್ಮೃತಂ　　॥ ೨೪ ॥

ಜಗದ್ಬ್ರಹ್ಮ ವಿರಾಟ್ ಚೇತಿ ಶಬ್ದಾಃ ಪರ್ಯಾಯವಾಚಕಾಃ ।
ಸಂಕಲ್ಪಮಾತ್ರಮೇವೈತೇ ಶುದ್ಧಚಿದ್ವ್ಯೋಮರೂಪಿಣಃ　　॥ ೨೫ ॥

**ಶ್ರೀರಾಮ ಉವಾಚ —**

ಸಂಕಲ್ಪಾತ್ಸ ವಿರಾಡೇವ ಖಮೇವಾಕೃತಿಮಾಗತಂ ।
ಅಸ್ತು ನಾಮ ಸ್ವದೇಹಾಂತಃ ಕಥಂ ಬ್ರಹ್ಮೈವ ತಿಷ್ಠತಿ　　॥ ೨೬ ॥

೨೪ ಜಗತ್ತು ವಿರಾಟ್‌ಗಳಿಬ್ಬರಿಗೂ ಒಂದೇ ಸತ್ತೆಯು. ಆ ಸತ್ತೈಕ್ಯವು ಪವನ ಸ್ಪಂದಗಳಿಗಿರುವಂತೆ! ಯಾವುದು ಜಗತ್ತೋ ಅದೇ ವಿರಾಟ್! ಯಾವುದು ವಿರಾಟ್ಟೋ ಅದೇ ಜಗತ್ತು ಎನ್ನುವರು.

೨೫. (ಆದರಿಂದ) ಜಗತ್ತು, ವಿರಾಟ್, ಬ್ರಹ್ಮ, ಎಂಬಿವು ಪರ್ಯಾಯ ಶಬ್ದಗಳು, ಇವೆಲ್ಲವೂ ಸಂಕಲ್ಪಮಾತ್ರಗಳು ಶುದ್ಧವಾದ ಚಿದಾಕಾಶಗಳೇ!

(ಏತೇ ವಿರಾಟ್ ಜಗತೀ ಶುದ್ಧಚಿನ್ಮಾತ್ರರೂಪಿಣಃ ಪರಮಾತ್ಮನೋ "ಬಹು ಸ್ಯಾಂ ಪ್ರಜಾಯೇಯ" ಇತ್ಯಾದಿ ಶ್ರುತಿ ಪ್ರಸಿದ್ಧಂ ಸಂಕಲ್ಪಮಾತ್ರಂ ತಚ್ಚ ನಿಸ್ಸ್ವರೂಪಂ ಬ್ರಹ್ಮೈವ ಪರಿಶಿಷ್ಟಮಿತಿ ನಿಷ್ಕರ್ಷಃ ।—ತಾ ಪ್ರ)

**ಶ್ರೀ ರಾಮನು ಕೇಳಿದನು:—**

೨೬. ಆ ವಿರಾಟ್‌ನು ಸಂಕಲ್ಪದಿಂದಲೇ ತನ್ನ ದೇಹವನ್ನು ಮಾಡಿಕೊಂಡನೆಂದ ಮೇಲೆ, ತನ್ನ ದೇಹದೊಳಗೆ ತಾನು ಬ್ರಹ್ಮನಾಗಿಯೇ ಇರುವನು ಎನ್ನುವುದು ಹೇಗೆ?

(ಅಸ್ತು ನಾಮ ಇತ್ಯಂತೇನ ಉಕ್ತಮಭ್ಯುಪಗಮ್ಯ ಶ್ರೀರಾಮಃ ಶಿಷ್ಟಂ ಪ್ರಶ್ನಂ ಸ್ಮಾರಯತಿ–ಸ್ವದೇಹಾಂತರಿತಿ । "ಕಥಂ ವಾಸೋಽಂತರೇ ತಸ್ಯ ಸ್ವಸ್ಯೈವ ವಪುಷಃ ಸ್ಥಿತಃ" ಇತಿ ಪ್ರಶ್ನಸ್ಯ ಉತ್ತರಂ ವದ–ಇತ್ಯರ್ಥಃ ॥—ತಾ. ಪ್ರ)

ಶ್ರೀ ವಸಿಷ್ಠ ಉವಾಚ :—

ಯಥಾ ಧ್ಯಾನೇನ ದೇಹಾಂತಸ್ತಿಷ್ಠಸಿ ತ್ವಂ ಯಥಾಸ್ಥಿತಂ ।
ತಥಾಸ್ತೇ ನಿಜದೇಹೇಽಂತಃ ಸಂಕಲ್ಪಾತ್ಮಾ ಪಿತಾಮಹಃ ॥ ೨೭ ॥

ನೃಣಾಂ ತಥಾ ಚ ಮುಖ್ಯಾನಾಂ ಜೀವೋ ಬ್ರಹ್ಮಪುರೋದರೇ ।
ಉತ್ಪತ್ತಿಪುತ್ರಿಕಾದೇಹಃ ಪ್ರತಿಬಿಂಬೋಪಮೋಽಸ್ತಿ ಸಃ ॥ ೨೮ ॥

ಯತ್ರ ತ್ವಮಪಿ ದೇಹಾಂತಃ ಕರ್ತುಂ ಶಕ್ತೋಽಸ್ಯಲಂ ಸ್ಥಿತಿಂ ।
ಸಂಕಲ್ಪಾತ್ಮಾ ವಿಭುಸ್ತತ್ರ ಬ್ರಹ್ಮಾ ಕಿಂ ನ ಕರಿಷ್ಯತಿ ॥ ೨೯ ॥

ಬೀಜಾಂತಃ ಸ್ಥಾವರಂ ಹ್ಯಾಸ್ತೇ ಪದಾರ್ಥೇ ಯತ್ರ ಜಂಗಮಃ ।
ಕಿಂ ನಾಸ್ತೇ ತತ್ರ ದೇಹೇಽಂತರ್ನಿಜಚಿತ್ಕಲ್ಪನಾತ್ಮಿಕಾ ॥ ೩೦ ॥

---

ಶ್ರೀ ವಸಿಷ್ಠನು ಹೇಳಿದನು —

೨೭. ನೀನು ಹೇಗೆ ಧ್ಯಾನದಿಂದ, ಏನೊಂದೂ ವ್ಯತ್ಯಾಸವೇ ಇಲ್ಲದೆ ದೇಹದೊಳಗೆ ನಿಲ್ಲುವೆಯೋ ಹಾಗೆ, ತನ್ನ ದೇಹದಲ್ಲಿ ಸಂಕಲ್ಪಾತ್ಮನಾದ ಪಿತಾಮಹನೂ ಇರುವನು.

(ಧ್ಯಾನೇನೇತಿ । ಮಾನಸ ಪೂಜಾಯಾಂ ಹಿ ಹೃದಿ ಕಲ್ಪಿತೇ ರತ್ನಖಂಡೇ ದೇವಮುಪವೇಶ್ಯ ಸ್ವಂ ತತ್ಸಮೀಪಸ್ಥಂ ಛತ್ರಚಾಮರ ವ್ಯಜನದರ್ಪಣತಾಂಬೂಲಾದಿಭಿರ್ದೇವಂ ಪರಿಚರಂತಂ ಯಥಾನುಭವಸಿ ತದ್ವತಿತ್ಯರ್ಥಃ—ತಾ. ಪ್ರ )

೨೮. ಮುಖ್ಯ ಎಂದರೆ ವಿವೇಕಿಗಳಾದ ಜನರಿಗೆ ಬ್ರಹ್ಮಪುರವಾದ ದೇಹದಲ್ಲಿ ಪ್ರತಿಬಿಂಬ ಸದೃಶವಾಗಿ ಔತ್ಪತ್ತಿಕದೇಹಗಳು ಇರುವುದುಂಟಷ್ಟೆ ?

೨೯. ನೀನೂ ಕೂಡ ದೇಹದೊಳಗೆ ( ಸಂಚಾರಾದಿಗಳನ್ನು ಮಾಡುತ್ತ) ಇರಬಲ್ಲೆಯಲ್ಲವೇ ? ಹೀಗಿರಲು ಸಂಕಲ್ಪಾತ್ಮನಾಗಿ ವಿಭುವಾಗಿರುವ ಬ್ರಹ್ಮನು ಏನು ತಾನೇ ಮಾಡಲಾರನು ?

೩೦. ಬೀಜದೊಳಗೆ ಸ್ಥಾವರವಾದ ವೃಕ್ಷವೆಲ್ಲವೂ ಇರುವುದು. ಪದಾರ್ಥದಲ್ಲಿ ಜಂಗಮವು ಇರುವುದು ಹೀಗಿರಲು ದೇಹದಲ್ಲಿ ಕಲ್ಪನಾತ್ಮಿಕವಾದ ನಿಜಚಿತ್ತು ಇರಲಾರದೆ ?

(ಯತ್ರ ಸ್ಥಾವರಾಣುಮಪಿ ಸ್ವಬೀಜದೇಹಾಂತರಸ್ಥಾನ ಸಾಮರ್ಥ್ಯಂ ತತ್ರಾ

ಸಾಕಾರೋ ಗಗನಾತ್ಮಾಸ್ತು ನಿರಾಕಾರಂ ಖಮಸ್ತು ವಾ ।
ಅಸ್ತೀ ಬಹಿರಥಾಂತಶ್ಚ ಭಿನ್ನೇ ಬಾಹ್ಯಾಂತರೇ ಬಹಿಃ ॥ ೩೧ ॥

ಆತ್ಮಾರಾಮಃ ಕಾಷ್ಠಮೌನೀ ನ ಜಡೋಽಪಿ ದೃಷಜ್ಜಡಃ ।
ಅಹಂತ್ವಮಿತ್ಯಾದಿಮಯೋ ವಿರಾಡಾತ್ಮನಿ ತಿಷ್ಠತಿ ॥ ೩೨ ॥

---

ವಿಭೂರ್ತ ಸರ್ವಶಕ್ತಿಕಚಿತ್ಕಲ್ಪನಾತ್ಮಿಕಾಯಾಶ್ಚತುರ್ಮುಖ ಮೂರ್ತೇಃ ಕಿಂ ತದ್ವಾಚ್ಯಮಿತ್ಯಾಹ ।— ತಾ. ಪ್ರ.)

೩೧ ಆಕಾಶಾತ್ಮನು ಸಾಕಾರನಾಗಲಿ, ಆಕಾಶವು ನಿರಾಕಾರವಾಗಲಿ, ಆಕಾಶವು ಬಹಿಃ ಅಂತಃಗಳೆರಡರಲ್ಲೂ ತುಂಬಿರುವುದು. (ನೀನೆಂದು ಕೊಂಡಿರುವಂತೆ) ಸ್ವರೂಪವು ಬೇರೆ ಬಾಹ್ಯವು ಬೇರೆ ಎಂಬ ಭೇದಗಳಿಲ್ಲ.

(ತಥಾಚ ಬ್ರಹ್ಮಾ ಬ್ರಹ್ಮಾಂಡಾಕಾರೇಣ ಸಾಕಾರಃ ಸಂಶ್ಚಿದ್ಗಗನಾತ್ಮಾವಾಸ್ತು, ಮನಃ ಸಮಷ್ಟಿರೂಪೇಣ ನಿರಾಕಾರಂ ಖಮಸ್ತು, ವಾ, ಪಕ್ಷದ್ವಯೇಽಪಿ ಬಹಿರಂತಶ್ಚಾಸ್ತೇ ಬಾಹ್ಯಾಂತರ ಭಾವಕಲ್ಪನೇ ಏವ ಪರಂ ಸ್ವರೂಪಾದ್ಬಹಿಃ ಸ್ಥಿತೇ ಭಿನ್ನೇ ನತ್ವತ್ಕಲ್ಪಿತಮಾಂತರಂ ಸದ್ರೂಪಂ ಭಿದ್ಯತ ಇತ್ಯರ್ಥಃ—ತಾ. ಪ್ರ)

೩೨ ಆತ್ಮಾರಾಮನು ಕಾಷ್ಠಮೌನಿಯು ಜಡನಲ್ಲದಿದ್ದರೂ ಶಿಲಾಜಡನು ಅಹಂ–ತ್ವಂ–ಇತ್ಯಾದಿಗಳಿಂದ ಪೂರ್ಣನಾಗಿ ವಿರಾಡಾತ್ಮನಲ್ಲಿ ಇರುವನು.

(ಸತರ್ಹಿ ಬಹಿರಂತಶ್ಚ ಕೀದ್ರುಶಃ ಕೀದೃಶೇ ಸ್ವಭಾವೇ ಪರಮಾರ್ಥತಸ್ತಿಷ್ಠತಿ ತದಾಹ–ಆತ್ಮಾರಾಮ ಇತಿ । ಸ ಬಹಿರ್ವಿರಾಟ್ ಬ್ರಹ್ಮಾಂಡಾತ್ಮಾ ಅಂತಸ್ತು ಅಹಂತ್ವಮಿತ್ಯಾದಿ ವ್ಯಷ್ಟಿ ಸಮಷ್ಟಿ ಭೂತ ಭೌತಿಕಮಯಃ। ಆತ್ಮನಿ ತು ಆತ್ಮಾರಾಮಃ ಸರ್ಗ ಕಾಷ್ಠಮೌನೀ ನಿರ್ವಾಕ್ಯೋ ದೃಷದಿವ ಜಡಃ ಸ್ಥಿತಃ ಸೋಽಪಿ ಚಿದೇಕರಸತ್ವಾನ್ನ ಜಡಸ್ತಿಷ್ಠತಿ ॥—ತಾ ಪ್ರ )

ಆವೇಷ್ಟಿತೋಜ್ಝಿತಲತಾತೃಣದಾರುಪುಂವ-
ದುಚ್ಛೃಬ್ಧಮಂಬುರಯವಚ್ಚ ವಿರೋಪಿತಾಂಗಃ ||
ನಾನಾವಿಧೇಽಪಿ ವಿಹರನ್ನಪಿ ಕಾರ್ಯಜಾಲೇ |
ತಜ್ಜ್ಞಃ ಶಿಲಾಜಠರಶಾಂತಮನಸ್ಕ ಏವ || ೩೩ |

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ವಿರಾಡಾತ್ಮ ವರ್ಣನಂ" ನಾಮ ಚತುಃಸಪ್ತತಿತಮಃ ಸರ್ಗಃ**

---

೩೩. ಲತೆ, ತೃಣ, ದಾರು, ಪ್ರತಿಮೆಗಳು, ವಿಭೂಷಣಗಳನ್ನಿಟ್ಟು ಅಲಂಕಾರ ಮಾಡಿದರೂ ಅವುಗಳೆಲ್ಲವನ್ನೂ ತೆಗೆದು ಬಿಟ್ಟರೂ, ಏನೂ ವಿಕಾರವಿಲ್ಲದೆ ಸ್ತಬ್ಧನಾಗಿರುವಂತೆ, ಜಲಪ್ರವಾಹವು ಅಡ್ಡಿ ಸಿಕ್ಕಿ ನೂರಾರು ಭಾಗವಾಗಿ ಒಡೆದರೂ ಸುಮ್ಮನಿರುವಂತೆ, ವಿರಾಡಾತ್ಮನು ಮಾತ್ರವಲ್ಲ ಆ ವಿರಾಟ್ಸ್ವರೂಪವನ್ನು ಬಲ್ಲ ತಜ್ಜ್ಞನೂ ಕೂಡ, ನಾನಾ ವಿಧವಾದ ಕಾರ್ಯಜಾಲಗಳಲ್ಲಿ ವಿಹಾರ ಮಾಡುತ್ತಿದ್ದರೂ ಕೂಡ ಶಿಲಾಜಠರದಂತೆ ಶಾಂತವಾದ ಮನಸ್ಸುಳ್ಳವನಾಗಿಯೇ ಇರುವನು

(ನ ಕೇವಲಂ ವಿರಾಜ ಏವೇದೃಶೀ ಸ್ಥಿತಿಃ ಕಿಂತು ತತ್ವಜ್ಞಾನಾಂ ಸರ್ವೇಷಾಮಿತಿ ದರ್ಶಯಿತುಂ ತಾಮೇವ ದೃಷ್ಟಾಂತೈರ್ವಿಶದಯತಿ |—ತಾ. ಪ್ರ)

**ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ವಿರಾಡಾತ್ಮ ವರ್ಣನ" ಎಂಬ ಎಪ್ಪತ್ತನಾಲ್ಕನೆಯ ಸರ್ಗವು**

## ಪಂಚಸಪ್ತತಿತಮಃ ಸರ್ಗಃ

**ಶ್ರೀ ವಸಿಷ್ಠ ಉವಾಚ :—**

ಅಥಾಗ್ರಸ್ಥಬ್ರಹ್ಮಲೋಕೋ ಬ್ರಹ್ಮಣಿ ಧ್ಯಾನಶಾಲಿನಿ ।
ನಿಕ್ಷಿಪ್ತಾಕ್ಷಃ ಶನೈರ್ದಿಕ್ಷು ದೃಷ್ಟವಾನಹಮಗ್ರತಃ ॥ ೧ ॥

ದ್ವಿತೀಯಮರ್ಕಂ ಮಧ್ಯಾಹ್ನೇ ಪಶ್ಚಾದಭ್ಯುದಿತಂ ಸ್ಫುಟಂ ।
ದಿಗ್ದಾಹಮಿವ ದಿಗ್ವಕ್ತ್ರೇ ವನದಾಹಮಿವಾಚಲೇ ॥ ೨ ॥

ವಹ್ನಿಲೋಕಮಿವ ವ್ಯೋಮ್ನಿ ವಡವಾಗ್ನಿಮಿವಾರ್ಣವೇ ।
ತತೋಽಪಶ್ಯಮಹಂ ದೀಪ್ತಂ ಸೂರ್ಯಂ ನೈಋರ್ತದಿಙ್ಮುಖೇ ॥ ೩ ॥

---

## ಎಪ್ಪತ್ತೈದನೆಯ ಸರ್ಗವು

**ಶ್ರೀ ವಸಿಷ್ಠನು ಹೇಳಿದನು —**

೧. ಆ (ಶಿಲಾಬ್ರಹ್ಮಾಂಡಾಧಿಪತಿಯಾದ) ಬ್ರಹ್ಮನು ಧ್ಯಾನಾರೂಢನಾಗುತ್ತಲೂ ಬ್ರಹ್ಮಲೋಕದ ಎದುರಿನಲ್ಲಿದ್ದ ನಾನು, ದಿಕ್ಕುದಿಕ್ಕುಗಳನ್ನು ನೋಡುತ್ತಾ ಇದ್ದು ಎದುರಿಗೇ,

೨. ಮಧ್ಯಾಹ್ನ ಕಾಲದಲ್ಲಿ·ಎರಡನೆಯ ಸೂರ್ಯನು ಹುಟ್ಟಿರುವುದನ್ನು ಸ್ಫುಟವಾಗಿ ನೋಡಿದೆನು. ದಿಕ್ಕುಗಳೇ ಹೊತ್ತಿಕೊಂಡಿತೋ? ಪರ್ವತದಲ್ಲಿ ಕಾಳ್ಗಿಚ್ಚು ಮೂಡಿತೋ?

೩. ಆಕಾಶದಲ್ಲಿ ಅಗ್ನಿಲೋಕವು ಆವಿರ್ಭವಿಸಿತೋ? ಸಮುದ್ರದಲ್ಲಿರುವ ಔರ್ವವೇನಾದರೂ ಹೊರಬಿತ್ತೋ? ಎಂಬಂತಿತ್ತು. ಜೊತೆಗೆ ನೈರುತ್ಯ ದಿಕ್ಕಿನಲ್ಲಿ ಇನ್ನೊಬ್ಬ ಉರಿಯುತ್ತಿರುವ ಸೂರ್ಯನು ಹುಟ್ಟುತ್ತಿರುವುದನ್ನು ಕಂಡೆನು

ದೃಢಹಸ್ತತಲಾಘಾತಹತಕಂದುಕವನ್ನಭಃ ।
ಅಪಶ್ಯಂ ಗಗನಸ್ಥೋಽಹಮುದಿತಂ ಚಂಡತೇಜಸಂ ॥ ೧೨ ॥

ತಪಂತಂ ದ್ವಾದಶಾದಿತ್ಯಗಣಂ ದಿಕ್ಷು ದಶಸ್ವಪಿ ।
ಬೃಹತ್ತತ್ರ ಸತಾರಾವಜ್ವಾಲೇವ ಭಗಣಂ ಚಲಂ ॥ ೧೩ ॥

ಮಹಾಕುಹಕುಹಾಶಬ್ದಂ ಕ್ವಥತ್ಸಪ್ತಾಬ್ಧಿಡಂಬರಂ ।
ಸಜ್ವಾಲೋಲ್ಮುಕನೀರಂಧ್ರಲೋಕಾಂತರಪುರಾಂತರಂ ॥ ೧೪ ॥

ಜ್ವಾಲಾಘನಪಟಾಟೋಪಸಿಂದೂರೀಕೃತಪರ್ವತಂ ।
ದೀಪ್ಯಮಾನಮಹಾಗಾರಸ್ಥಿರವಿದ್ಯುತ್ಕಕುತ್ಪಟಂ ॥ ೧೫ ॥

ಸ್ಫುರತ್ಕಟಕಟಾಟೋಪಚಟಚಟತ್ಪತ್ತನಮಂಡಲಂ ।
ವಿದಧದ್ಭೂತಲೋದ್ಭೂತಧೂಮದಂಡೈಃ ಶಿಲಾಘನೈಃ ॥ ೧೬ ॥

---

೧೨ ಭದ್ರವಾಗಿರುವ ಕರತಲದಿಂದ ಏಟುತಿಂದು ಕೆಳಕ್ಕೆ ಬಿದ್ದು ಮೇಲಕ್ಕೇಳುವ ಪುಟಚಂಡಿನಂತೆ ಪ್ರಚಂಡ ತೇಜಸ್ಸಿನಿಂದ ಮೇಲಕ್ಕೆ ನೆಗೆಯುತ್ತಿರುವ ಆದಿತ್ಯ ಗಣವನ್ನು ಆಕಾಶದಲ್ಲಿ ನಿಂತಿದ್ದ ನಾನು ನೋಡಿದೆನು.

೧೩ ಹತ್ತುದಿಕ್ಕುಗಳಲ್ಲಿಯೂ ಜ್ವಲಿಸುತ್ತಿರುವ ದ್ವಾದಶಾದಿತ್ಯಗಣವನ್ನು ಆಕಾಶವೇ ಹೊತ್ತಿಕೊಂಡಿರುವುದೋ ಎಂಬಂತೆ ಉರಿಯುತ್ತಿರುವ ಭಚಕ್ರವನ್ನೂ

೧೪. ಮಹಾ ಕುಹಕುಹಾ ಶಬ್ದದಿಂದ ಸಪ್ತಸಮುದ್ರಗಳೂ ಕುದಿಯುತ್ತಿರಲು, ಉರಿಯುತ್ತಿರುವ ಉಲ್ಮುಕಗಳು ಲೋಕಾಂತರ ಪುರಾಂತಗಳನ್ನೆಲ್ಲಾ ತುಂಬಿರಲು,

೧೫. ಜ್ವಾಲೆಗಳು ಘನವಾಗಿ ಪಟಪಟನೆ ಆರ್ಭಟಿಸುತ್ತಾ ಪರ್ವತಗಳನ್ನೆಲ್ಲಾ ಸಿಂಧೂರದಂತೆ ಮಾಡಿರಲು, ಮಹಾಪುರುಷರಾದ ದಿಕ್ಪಾಲಕರ ಅರಮನೆಗಳೆಲ್ಲವೂ ಹೊತ್ತಿಕೊಂಡು ಸ್ಥಿರವಾದ ಮಿಂಚುಗಳಂತೆ ಹೊಳೆಯುತ್ತಿರಲು,

೧೬. ಪ್ರಜ್ವಲಿಸುತ್ತ ಕಟಕಟ ಎಂಬ ಆಟೋಪದಿಂದ ಚಟಚಟ ಎನ್ನುತ್ತಿರುವ ಪಟ್ಟಣಗಳ ಗುಂಪನ್ನು ಭೂಮಿಯಿಂದ ಏಳುತ್ತಿರುವ ಶಿಲಾಘನಗಳಾದ ಧೂಮದಂಡಗಳು ಹಿಡಿದುಕೊಂಡಿವೆಯೋ ಎನ್ನುವಂತಿರಲು,

ತದ್ಧಿ ರೌದ್ರಂ ವಪುಸ್ತತ್ರ ತನ್ಮಧ್ಯೇ ಲೋಚನತ್ರಯಂ ।
ತದ್ದ್ವಾದಶಪರೀಮಾಣಂ ದೀಪ್ತಂ ವೃಂದಂ ವಿವಸ್ವತಾಂ ॥ ೮ ॥

ಸರ್ವದಿಕ್ಕಂ ದದಾಹೋಚ್ಚೈಃ ಶುಷ್ಕಂ ವನಮಿವಾನಲಃ ।
ಅಥೋದಭೂಜ್ಜಗತ್ಖಂಡಶೋಷಣಗ್ರೀಷ್ಮವಾಸರಃ ॥ ೯ ॥

ಅನಗ್ನಿರಗ್ನಿದಾಹೋ ದ್ರಾಗದೃಶ್ಯೋಲ್ಮುಕಗುಲ್ಮಕಃ ।
ಅನಗ್ನಿನಾಗ್ನಿದಾಹೇನ ತೇನ ತಾಮರಸೇಕ್ಷಣ ॥ ೧೦ ॥

ಅಂಗಾನಿ ದಾವದಗ್ಧಾನಿ ಖಿನ್ನಾನೀವ ಮಮಾಭವನ್ ।
ಪ್ರದೇಶಂ ತಮಥ ತ್ಯಕ್ತ್ವಾ ದೂರಮಾರೂಢವಾಹನಂ ॥ ೧೧ ॥

---

ಶ್ಲೋಕಾತ್ಮಕಸ್ಯ ಪೂರ್ವರಾಮಾಯಣಸ್ಯ ಸಾರಸಂಗ್ರಹಾತ್ಮಕೇ ಆದಿತ್ಯಹೃದಯೇ "ಬ್ರಹ್ಮೇಶಾನಾಚ್ಯುತೇಶಾಯ ರೌದ್ರಾಯ ವಪುಷೇ ನಮಃ" ಇತಿ ತ್ರಿಮೂರ್ತಿ ಮೂಲ ಪರಶಿವತ್ವೇನ ನಮಸ್ಕೃತಮಿತಿ ತದೇವ ಸರ್ವೋತ್ಕೃಷ್ಟ ಮುಪಾಸ್ಯ ಮಿತ್ಯಾಹುಃ ॥—ತಾ.ಪ್ರ )

೮. ಅಬ್ಬಾ! ಅವರ ರೌದ್ರಸ್ವರೂಪವನ್ನೇನು ಹೇಳಲಿ! ಆ ಮೂವರು (ತ್ರಿಮೂರ್ತಿರೂಪ) ಸೂರ್ಯರಲ್ಲಿ ಒಬ್ಬನಾದ ರುದ್ರಮೂರ್ತಿಗೆ ಲೋಚನತ್ರಯವಿತ್ತು. ಆ ಹಣೆಗಣ್ಣು ಒಂದೇ ಹನ್ನೆರಡು ಸೂರ್ಯರಿಗಿಂತ ಹೆಚ್ಚಾಗಿ ಲೋಕಗಳನ್ನು ಸುಡುತ್ತಿತ್ತು.

೯. ಆ ಹಣೆಗಣ್ಣು ಸರ್ವದಿಕ್ಕುಗಳಲ್ಲಿಯೂ ಒಣಗಿದ ಕಾಡನ್ನು ದಹಿಸುವ ಬೆಂಕಿಯಂತೆ ಬೇಕಾದ ಹಾಗೆ ಸುಟ್ಟಿತು. ಆಗ ಜಗತ್ಖಂಡವನ್ನು ಶೋಷಣ ಮಾಡುವ ಗ್ರೀಷ್ಮದ ದಿನವು ಹುಟ್ಟಿತು (ಎನ್ನುವಂತಾಯಿತು )

೧೦. ಅಗ್ನಿಯಿಲ್ಲದಿದ್ದರೂ ಅಗ್ನಿದಾಹವು ಇದ್ದು, ಕೊಳ್ಳಿಗಳೂ ಉರಿಯುವ ಪೊದರುಗಳೂ ಇಲ್ಲದೆ ಸುಡುವುದಕ್ಕೆ ಆರಂಭವಾಯಿತು. ಅಗ್ನಿಯಿಲ್ಲದ ಅಗ್ನಿ ದಾಹದಿಂದ ಎಲ್ಲವೂ, ಎಲೈ ಪದ್ಮನೇತ್ರನೇ, ದಗ್ಧವಾಯಿತು.

೧೧. ನನ್ನ ದೇಹದ ಅಂಗಾಂಗಗಳೂ ಕಾಳ್ಗಿಚ್ಚಿಗೆ ಸಿಕ್ಕಿ ಬೆಂದಂತೆ ಆಗಿ ಖಿನ್ನ ವಾದುವು. ಆಗ ನಾನು ಆ ಸ್ಥಳವನ್ನು ಬಿಟ್ಟು ದೂರದಲ್ಲಿ ಹೋಗಿ ನಿಂತೆನು

ಸೂರ್ಯಂ ಯಾಮ್ಯೇ ಕಕುಬ್ಭಾಗೇ ಸೂರ್ಯಮಗ್ನಿ ಕಕುಬ್ಮುಖೇ ।
ಸೂರ್ಯಮೈಂದ್ರಕಕುಬ್ಭಾಗೇ ಸೂರ್ಯಮೀಶಾನದಿಙ್ಮುಖೇ ॥ ೪ ॥

ಕುಬೇರಕಕುಭಿ ಸೂರ್ಯಂ ಸೂರ್ಯಂ ವಾಯುವ್ಯದಿಕ್ತಟೇ ।
ಸೂರ್ಯಂ ವರುಣದಿಗ್ಭಾಗೇ ತೇನ ವಿಸ್ಮಯವಾನಹಂ ॥ ೫ ॥

ಯಾವದ್ವಿಚಾರಯಾಮ್ಯಾಶು ವಿಧಿವೈಧುರ್ಯಮಾಕುಲಂ ।
ಉದಭೂದ್ಭೂತಲಾತ್ತಾವದರ್ಕ ಔರ್ವ ಇವಾರ್ಣವಾತ್ ॥ ೬ ॥

ಏಕಾದಶೇಽಖಿಲಾರ್ಕಾಣಾಂ ಪ್ರತಿಬಿಂಬಮಿವೋತ್ಥಿತಂ ।
ಉದಭೂತ್ತ್ರಯಮರ್ಕಾಣಾಮಂತರೇ ದಿಗ್ಗಣಾಂಬರೇ ॥ ೭ ॥

---

೪-೫. ದಕ್ಷಿಣ ದಿಕ್ಕಿನಲ್ಲಿ ಇನ್ನೊಬ್ಬ ಸೂರ್ಯನು ಉದಯಿಸಿದನು ಆಗ್ನೇಯ ದಿಕ್ಕಿನಲ್ಲಿ ಮತ್ತೊಬ್ಬ ಸೂರ್ಯನು ಉದಯಿಸಿದನು ಪೂರ್ವದಿಕ್ಕಿನಲ್ಲಿ, ಈಶಾನ್ಯ ದಿಕ್ಕಿನಲ್ಲಿ, ಉತ್ತರ ದಿಕ್ಕಿನಲ್ಲಿ, ವಾಯುವ್ಯದಿಕ್ಕಿನಲ್ಲಿ ಒಬ್ಬೊಬ್ಬ ಸೂರ್ಯನು ಹುಟ್ಟಿದರು. ಅದನ್ನು ಪಶ್ಚಿಮ ದಿಕ್ಕಿನಲ್ಲಿ ಕಂಡು ನನಗೆ ವಿಸ್ಮಯವಾಯಿತು

(ಅಪಸವ್ಯ ಕ್ರಮವನ್ನು ಗಮನಿಸಿ)

೬. ಆಕುಲನಾಗಿ ವಿಧಿಯ ವೈಪರೀತ್ಯವನ್ನು ನೋಡಿದೆಯಾ ಎಂದು ವಿಚಾರಮಾಡುತ್ತಿದ್ದ ಹಾಗೆಯೇ ಇನ್ನೊಬ್ಬ ಸೂರ್ಯನು, ಸಮುದ್ರದಿಂದ ಏಳುವ ಬಡಬಾಗ್ನಿಯಂತೆ, ಭೂಮಿಯಿಂದ ಮೇಲಕ್ಕೆದ್ದನು.

೭. ಹೀಗೆ ಹನ್ನೊಂದು ಸೂರ್ಯರು ಉದಯಿಸಿದ ಮೇಲೆ ಆ ಸೂರ್ಯರ ಪ್ರತಿಬಿಂಬಗಳೇನಾದರೂ ಮತ್ತೆ ಮೂಡಿದುವೋ ಎಂಬಂತೆ, ದಿಗಂತರಾಳಗಳಲ್ಲಿ ಇನ್ನು ಮೂವರು ಸೂರ್ಯರು ಉದಯಿಸಿದರು.

(ತೇಷು ಮಧ್ಯಮೇ ಏಕಾದಶೇ ಅರ್ಕೇ ದರ್ಪಣೋದರೇ ಪ್ರತಿಬಿಂಬಮಿವಾನ್ಯದರ್ಕಾಣಾಂ ತ್ರಯಮುದ್ಭೂತ । ತದ್ಧಿ ಮಧ್ಯತನಾದಿತ್ಯಾಂತ ರುದಿತಮರ್ಕತ್ರಯಾತ್ಮಕಮೇಕಂ ಬ್ರಹ್ಮ ವಿಷ್ಣು ಶಿವಾತ್ಮಕಸ್ಯೈಕಸ್ಯ ರುದ್ರಸ್ಯೇದಂ ರೌದ್ರಂ ವಪುಃ । ತದೇವ ತತ್ಸವಿತುರ್ವರೇಣ್ಯಂ ಭರ್ಗ ಇತಿ ಗಾಯತ್ರ್ಯಾ ಪ್ರಕಾಶ್ಯತೇ । ಅತಏವ ಹಿ ತಚ್ಚತುರ್ವಿಂಶತ್ಯಕ್ಷರ ಪ್ರಸೂತ ಚತುರ್ವಿಂಶತಿ ಸಹಸ್ರ

ಕಾಚಸ್ತಂಭಸಹಸ್ರಾಢ್ಯಂ ಭುವನಸ್ಥಾನಮಂಡಪಂ ।
ಕ್ವಥದ್ಭೂತಮಹಾಭೂತತಾರಾಕ್ರಂದಾತಿಘರ್ಘರಂ ॥ ೧೭ ॥

ಭೂತಲೋಕಪುರಾವಾತಸ್ಫುಟಚ್ಚಟಚಟೋದ್ಭಟಂ ।
ತಾರಾವಿಶರಣೋದ್ಭಾತಘೈಷ್ಟರತ್ನಧರಾತಲಂ ॥ ೧೮ ॥

ಸರ್ವಸ್ಥಲಾಲಯಚಲದ್ವಹ್ಯಮಾನಜನವ್ರಜಂ ।
ಕ್ಷೀಣಾಕ್ರಂದಕ್ವಥದ್ಭೂತಗಣದುರ್ವಾಸದಿಕ್ತಟಂ ॥ ೧೯ ॥

ಉತ್ತಪ್ತಾಂಬೂದರಾಖಿನ್ನಜಲೇಚರಮಹಾರ್ಣವಂ ।
ಸರ್ವದಿಕ್ಕಾನಲಪ್ಲೋಷಕ್ಷೀಣಾಕ್ರಂದಪುರಾಂತರಂ ॥ ೨೦ ॥

---

೧೭ ಕಾಚಸ್ತಂಭಗಳು ಸಾವಿರಾರು ಉಳ್ಳ ಭುವನ ಸ್ಥಾನವೆಂಬ ಮಂಟಪವು ಒದ್ದಾಡುತ್ತಿರುವ ಪ್ರಾಣಿಗಳ ಪಂಚ ಮಹಾಭೂತಗಳು ಎತ್ತರವಾದ ಆಕ್ರಂದನ ದಿಂದ ಅತಿಘೋರವಾಗಿರಲು,

೧೮. ಪ್ರಾಣಿವರ್ಗಗಳು, ಲೋಕಗಳು, ಪುರಗಳು ಬಿದ್ದು ಸಿಡಿಯುತ್ತಿರಲು ಚಟಚಟ ಎಂಬ ಸದ್ದಿನಿಂದ ಘೋರವಾಗಿ ಆಕಾಶದಿಂದ ನಕ್ಷತ್ರಗಳು ಉರುಳು ತ್ತಿರಲು ಭೂಮಿಯೆಲ್ಲವೂ ಉತ್ತಮ ರತ್ನಗಳನ್ನು ಹರಡಿದಂತಾಗುತ್ತಿರಲು,

೧೯ ಸರ್ವಸ್ಥಲಗಳಲ್ಲಿಯೂ, ಅವರವರ ಮನೆಗಳಲ್ಲಿಯೂ ಇದ್ದ ಒಂದೊಂದು ಕಲ್ಪ ಆಯುಸ್ಸುಳ್ಳ ಬ್ರಹ್ಮಮಾನದ ಜನರು ಬೆಂಕಿಯ ಉರಿಯನ್ನು ತಡೆಯಲಾರದೆ ಓಡುತ್ತಿದ್ದರು. ದಿಕ್ತಟಗಳಲ್ಲಿ ಜನಗಳ ಅಳುವು ಕಡಿಮೆಯಾಗುತ್ತಿತ್ತು. ಸುಟ್ಟ ಹೆಣಗಳ ವಾಸನೆಯು ತಾನೇ ತಾನಾಗುತ್ತಿತ್ತು.

೨೦. ನೀರೆಲ್ಲವೂ ಕಾದು ಕುದಿಯುತ್ತಿರಲು ಒಳಗಿರುವ ಜಲಚರಗಳೆಲ್ಲವೂ ಬೆಂದು ಹೋಗಿರುವ ಮಹಾರ್ಣವಗಳು, ಎಲ್ಲ ದಿಕ್ಕುಗಳಲ್ಲಿಯೂ ಹರಡುತ್ತಿರುವ ಬೆಂಕಿಯಿಂದ ಸುಟ್ಟುಹೋಗಿರುವುದರಿಂದ ಗೋಳುಗಳೆಲ್ಲವೂ ಕಡಿಮೆಯಾಗಿರುವ ಪಟ್ಟಣಗಳು, (ಇರುವುವು)

ವಿದಳದ್ದಗ್ಧದಿಗ್ದಂತಿದಂತೋತ್ತಂಭಿತಭೂಧರಂ ।
ಧರಾಧರದರೀರಂಧ್ರಧೂಮಮಂಡಲಕುಂಡಲಂ ॥ ೨೧ ॥

ಪತತ್ಪರ್ವತನಿಷ್ಪಿಷ್ಟಪ್ಲುಷ್ಟಪತ್ತನಮಂಡಲಂ ।
ಪಚತ್ಪಚತ್ಪಚಾಶಬ್ದಶಬ್ದಿತಾದ್ರೀಂದ್ರಕುಂಜರಂ ॥ ೨೨ ॥

ತಾಪತಪ್ತೋನ್ನಮದ್ಭೂತಜ್ವರಿತಾರ್ಣವಪರ್ವತಂ ।
ಹೃದಯಸ್ಫೋಟನಿಃಸಾರಪತದ್ವಿದ್ಯಾಧರಾಂಗನಂ ॥ ೨೩ ॥

ಆಕ್ರಂದರೋದನಶ್ರಾಂತಮೂರ್ಧನಿಃಸರಣಾಮರಂ ।
ನಾಗಲೋಕಜ್ವಲಜ್ಜ್ವಾಲಾಪಾತಾಲೋತ್ತಪ್ತಭೂತಲಂ ॥ ೨೪ ॥

---

೨೧. ಸುಟ್ಟುಹೋಗಿ ಸುಲಿದು ಬೀಳುತ್ತಿರುವ ದಿಗ್ದಂತಿಗಳ ದೇಹದಿಂದ ಕೊಂಬುಗಳೂ ಬಿದ್ದು ನಿಂತಿರಲು, ಭೂಮಿಯು ಅದರ ಮೇಲೆ ನಿಂತಿರುವಂತಿರುವುದು. ಬೆಟ್ಟಗಳ ಕಮರಿಗಳಲ್ಲಿ ಹೊಗೆಯು ತುಂಬಿಕೊಂಡಿರಲು, ಅದು ಅವು ಧರಿಸುವ ಕುಂಡಲಗಳಂತಿರುವುದು.

೨೨. ಬೆಟ್ಟಗಳು ಕುಸಿದುಬಿದ್ದು ಬೆಂಕಿಗಳೆದ್ದು ಪತ್ತನಗಳನ್ನು ಗುಂಪು ಗುಂಪಾಗಿ ಸುಡುತ್ತಿರುವುವು. ಪಚಪಚನೆ ಶಬ್ದ ಮಾಡುತ್ತ ಬೆಟ್ಟಗಳು ಆನೆಗಳಂತೆ ಬೇಯುತ್ತಿರುವುವು.

೨೩. ಅಗ್ನಿದಾಹಕ್ಕೆ ಸಿಕ್ಕಿ ಹಾರಿಬೀಳುತ್ತಿರುವ ಪ್ರಾಣಿಗಳಿಂದ ಅರ್ಣವ ಪರ್ವತಗಳೆಲ್ಲವೂ ಸಂತಾಪಪಡುತ್ತಿರುವುವು. ವಿದ್ಯಾಧರಾಂಗನೆಯರು ಎದೆಯೊಡೆದು ಸತ್ತುಬೀಳುತ್ತಿರುವರು.

೨೪. ಅತ್ತು ಅತ್ತು ಸಾಕಾಗಿ ಅಮರರು ಸೊಪ್ಪಾಗಿ ಬಿದ್ದಿರುವರು ನಾಗಲೋಕವು ಹತ್ತಿಕೊಂಡು ಉರಿಯುತ್ತಿರಲು, ಆ ಉರಿಯಿಂದ ಭೂಮಿಯು ಬೆಂದು ಹೋಗುತ್ತಿರುವುದು.

ಶುಷ್ಕಾರ್ಣವಸದಾಪಕ್ವವಿವರ್ತೋಗ್ರಜಲೇಚರಂ ।
ಔರ್ವೇಣಾಬಿಂಧನಾಭಾವಾತ್ಪ್ರೋಡ್ಡೀಯೇವ ಸಹಸ್ರಧಾ ।
ಗತೇನ ನೃತ್ಯತೋತ್ಥಾಯ ಗೃಹೀತಗಗನಾಂಗನಂ ॥ ೩೫ ॥

ಅಧೋದಭೂಜ್ಜ್ವಲಜ್ಜ್ವಾಲಾಕಿಂಶುಕಾಂಶುಕಶೋಭಿತಃ ।
ತಾಂಡವಾಯೇವ ಕಲ್ಪಾಗ್ನಿಸ್ತರಲೋಲ್ಮುಕಮಾಲ್ಯವಾನ್ ॥ ೩೬ ॥

ತಾರಂ ಪಟಪಟಾಟೋಪೀ ರಟದ್ಭಟ ಇವೋದ್ಭಟಃ ।
ಜ್ವಾಲೋದ್ಭುಜೋ ಧೂಮಕಚೋ ಜಗಜ್ಜೀರ್ಣಕುಟೀನಟಃ ॥ ೩೭ ॥

ಜಜ್ವಲುರ್ವನಜಾಲಾನಿ ಪುರಾಣಿ ನಗರಾಣಿ ಚ ।
ಮಂಡಲದ್ವೀಪದುರ್ಗಾಣಿ ಜಂಗಲಾನಿ ಸ್ಥಲಾನಿ ಚ ॥ ೩೮ ॥

---

೩೫ ಅಂಬುಧಿಯೆಲ್ಲವೂ ಒಣಗಿಹೋಗಲು, ಅಲ್ಲಿದ್ದ ಜಲಚರಗಳೆಲ್ಲವೂ ಬೆಂದು ಅಂಗತಂಗನಾಗಿ ಬಿದ್ದಿರುವುದನ್ನು ನೋಡಿದರೆ ಹೆದರಿಕೆಯಾಗುವಂತಿರವುದು. ಬಡಬಾಗ್ನಿಯು ನೀರು ಕುಡಿಯದೆ ಬಿಟ್ಟುಬಿಡಲು ನೀರು ಸಹಸ್ರಧಾರೆಗಳಾಗಿ ಉಕ್ಕುತ್ತ ಭಯಂಕರವಾಗಿ ಆಕಾಶದವರೆಗೂ ಹಾರಿ ಅಲ್ಲಿರುವ ಅಪ್ಸರೆಯರನ್ನು ಹಿಡಿಯುತ್ತಿರುವುದು

೩೬–೩೭. ಆಗ, ಉರಿಯುತ್ತಿರುವ ಉರಿಗಳೆಂಬ ಕಿಂಶುಕವರ್ಣದ ಬಟ್ಟೆಗಳನ್ನುಟ್ಟು, ಚಂಚಲಗಳಾದ ಉಲ್ಮುಖಗಳೆಂಬ ಮಾಲ್ಯವನ್ನು ಧರಿಸಿರುವ, ತಾರಸ್ವರದಲ್ಲಿ ಪಟಪಟನೆ ಶಬ್ದ ಮಾಡುತ್ತ ಸುತ್ತುವ ಭಟರಿಗಿಂತ ಆರ್ಭಟೆ ಮಾಡುತ್ತ, ಜ್ವಾಲೆಗಳೆಂಬ ತೋಳುಗಳನ್ನು ಚಾಚಿಕೊಂಡು, ಧೂಮವೆಂಬ ಕೇಶಪಾಶಗಳನ್ನುಳ್ಳ ಜಗತ್ತೆಂಬ ಜೀರ್ಣಕುಟಿಯಲ್ಲಿ ನರ್ತಿಸುವ ಕಲ್ಪಾಗ್ನಿಯು ತಾಂಡವಮಾಡಬೇಕೆಂದು ಎದ್ದನು.

೩೮. ವನ ವನಗಳು ಉರಿದುಹೋದುವು : ಪುರಗಳೂ ನಗರಗಳೂ ಸುಟ್ಟು ಬೂದಿಯಾದುವು : ಮಂಡಲಗಳು, ದ್ವೀಪಗಳು, ದುರ್ಗಗಳು, ಜಂಗಲಗಳು, ಸ್ಥಲಗಳು ಎಲ್ಲವೂ ದಗ್ಧವಾಗಿ ಹೋದುವು.

ಸರ್ವಖಾನಿ ಮಹಾಕಾಶಮಾಶಾದಶದಿವಃ ಶಿರಃ |
ಶ್ವಭ್ರರೂಪಾರಘಟ್ಟಾಟ್ಟಪಟ್ಟನೋದಾರದಿಕ್ತಟಃ || ೨೯ ||

ಶೃಂಗಾಣಿ ಸಿದ್ಧವೃಂದಾನಿ ಗಿರಯಃ ಸಾಗರಾರ್ಣವಾಃ || ೩೦ ||

ಸರಃ ಸರಸ್ಯಃ ಸರಿತೋ ದೇವಾಸುರನರೋರಗಾಃ |
ಆಶಾಃ ಶನಶನಾಶಬ್ದೈಃ ಪುರುಷೈಶ್ಚ ಶಿವಾರ್ಚಿಷಾಂ || ೩೧ ||

ಆಸನ್ಷ್ವೇಡಾಕುರಾಕ್ಷಸ್ಯೋ ಜ್ವಾಲಾಜಾಲೋಜ್ಜ್ವಲೋರ್ಧ್ವಜಾಃ |
ಭಮದ್ಭಮಿತಿ ಭಾಂಕಾರೈರ್ಭೀಷಣೈರ್ಭೂರಿಭಸ್ಮಭಿಃ || ೩೨ ||

ಜ್ವಾಲಾಃ ಶ್ವಭ್ರಾದ್ರಿಭೂಮೀನಾಂ ಗುಹಾಭ್ಯಃ ಪರಿನಿರ್ಯಯುಃ |
ಜ್ವಾಲೋದರಸ್ಥಾ ಅರುಣಾಃ ಸಮಸ್ತಾ ಭೂತಜಾತಯಃ || ೩೩ ||

---

೨೯ ಹತ್ತು ದಿಕ್ಕುಗಳೂ ಆಕಾಶವೂ ಮೇಲಿನ ಕಲ್ಲಾಗಿ, ಹಳ್ಳಗಳೆಲ್ಲವೂ ಕೆಳಗಿನ ಕಲ್ಲಾಗಿ, ಪಟ್ಟಣದಿಂದ ದಿಕ್ತಟದವರೆಗೂಹಬ್ಬಿದ ಭೂಮಿಯನ್ನೆಲ್ಲಾ ಬೀಸುವ ಕಲ್ಲಿನಲ್ಲಿ ಬೀಸಿದಂತೆ ಚೂರ್ಣ ಮಾಡಿದುವು

೩೦–೩೧ ಸಿದ್ಧವೃಂದ ಸಂಸೇವಿತವಾದ ಶೃಂಗಗಳೂ ಗಿರಿಗಳೂ ಸಾಗರಗಳೂ ಅರ್ಣವಗಳೂ ಸರಸ್ಸುಗಳೂ ಸರಸಿಗಳೂ ಸರಿತ್ತುಗಳೂ ದೇವಾಸುರ ನರೋರಗರೂ ದಿಕ್ಕುಗಳೂ ಸಹ ಶನಶನ ಶಬ್ದಗಳನ್ನು ಮಾಡುತ್ತಿರುವ ಪುರುಷರೊಡನೆ, ಶಿವಪಾಲ ನೇತ್ರಾಗ್ನಿಯಿಂದ ದಗ್ಧರಾಗಿ ಹೋದುವು.

೩೨. ಜ್ವಾಲಾಜಾಲಗಳೆಂಬ ಬೆಳಗುತ್ತಿರುವ ಕೂದಲುಗಳನ್ನು ಕೆದರಿಕೊಂಡು ಭಮತ್ ಭಮತ್ ಎಂಬ ಭಯಂಕರ ಭಾಂಕಾರಗಳಿಂದ ಬೂದಿಯನ್ನು ಬೇಕಾದ ಹಾಗೆ ಚೆಲ್ಲುತ್ತಾ ದಿಕ್ಕುಗಳು ಆಟವಾಡುವ ರಾಕ್ಷಸಿಯರಂತಿದ್ದರು.

(ಷ್ವೇಡಾ ಪರಸ್ಪರ ಧೂಲಿಜಲಾದಿಪ್ರಕ್ಷೇಪೈಃ ಕ್ರೀಡಾತತ್ಪರಾ ಕುರಾಕ್ಷಸ್ಯ ಇವ (ಆಶಾಃ) ಆಸನ್—ತಾ. ಪ್ರ )

೩೩. ಹಳ್ಳಬೆಟ್ಟಗಳಲ್ಲಿರುವ ಗುಹೆಗಳಿಂದ ಪ್ರಾಣಿವರ್ಗಗಳನ್ನು ತಮ್ಮ ಉದರದಲ್ಲಿಟ್ಟುಕೊಂಡಿರುವ ಜ್ವಾಲೆಗಳು ಹೊರಬಿದ್ದುವು ಆ ಪ್ರಾಣಿಗಳು ಸುಟ್ಟು ಕೆಂಪಾಗಿದ್ದುವು

ಸ್ಥಲಪದ್ಮೋದರಾಲೀನಾಮಾಜಹ್ರುಃ ಶ್ರಿಯಮಶ್ರಿಯಃ ।
ಸದ್ಯೋ ನಿಃಸೃತರಕ್ತಾಭ್ರೈಃ ಸಿಂದೂರಾಂಭೋದಸುಂದರೈಃ　　　　॥ ೩೪ ॥

ಘಗದ್ಧಗಿತಿ ಗಾಯದ್ಭಿರ್ಜ್ವಾಲಾಜಾಲೈರ್ಜಗದ್ಗತೈಃ ।
ಆಸೀದ್ರಕ್ತಾಂಶುಕೈಃ ಕೀರ್ಣಂ ಸಂಧ್ಯಾಭ್ರೈರಿವ ವಾ ನಭಃ　　　　॥ ೩೫ ॥

ಉತ್ಫುಲ್ಲಕಿಂಶುಕವನೈರುಡ್ಡೀನೈರಿವ ವಾವೃತಂ ।
ಔರ್ವೇಣ ಚಾವೃತಾ ಆಸನ್ಫುಲ್ಲಾಶೋಕವನಾ ಇವ　　　　॥ ೩೬ ॥

ಇವ ಸ್ಥಲಾಬ್ಜವಲಿತಾ ರಾವಿರಾ ಇವ ಚಾರ್ಣವಾಃ ।
ನಾನಾವರ್ಣಜ್ವಲಜ್ಜ್ವಾಲಾಧೂಮವಿನ್ಯಾಸ ಬಂಧವಾನ್　　　　॥ ೩೭ ॥

ರೂಢಂ ವಹ್ನಿಮಿವಾಧಾತುಂ ಚಿತ್ರಸೌಧಲತಾಶ್ರಯಂ ।
ಅನಂತ ಇವ ವಿನ್ಯಾಸವನಯೌವನಪಾವಕಃ　　　　॥ ೩೮ ॥

---

೩೪. ಆಗತಾನೇ ಹೊರಚೆಲ್ಲುತ್ತಿರುವ ರಕ್ತಪ್ರವಾಹಗಳಿಂದ ಸಿಂಧೂರ ವರ್ಣದ ಮೇಘಗಳಂತೆ ಸುಂದರವಾದರೂ ಸೌಭಾಗ್ಯರಹಿತವಾಗಿ ಕಾಣುತ್ತಿರುವ ಆಶಾಂಗನೆಯರು ಸ್ಥಲಪದ್ಮಿನಿಯರಂತೆ ಕಾಣುತ್ತ ಅವುಗಳ ಸೌಂದರ್ಯವನ್ನು ಅಪಹರಿಸಿದರು.

೩೫. ಧಗದ್ಧಗದ್ ಎಂದು ಹಾಡುತ್ತಿರುವ ಜ್ವಾಲಾಜಾಲಗಳೆಲ್ಲವೂ ಲೋಕವನ್ನೆಲ್ಲಾ ಆವರಿಸಲು, ಆಕಾಶವು ಕೆಂಪು ಬಟ್ಟೆಗಳು ಹರಡಿದೆಯೋ, ಸಂಧ್ಯಾಭ್ರಮಗಳು ತುಂಬಿವೆಯೋ ಎಂಬಂತಿತ್ತು

೩೬ ಹೂಬಿಟ್ಟಿರುವ ಮುತ್ತುಗದ ಕಾಡುಗಳು ಏನಾದರೂ ಎದ್ದು ಕುಣಿಯುತ್ತಿವೆಯೋ ? ಹೂಬಿಟ್ಟಿರುವ ಅಶೋಕ ವನವನ್ನು ಬಡಬಾಗ್ನಿ ಮುತ್ತಿಕೊಂಡಿರುವುದೋ ? ಎಂಬಂತಿತ್ತು

೩೭. ಸ್ಥಲಪದ್ಮಗಳಿಂದ ತುಂಬಿದೆಯೋ ? ಸಾಗರವು ಬಾಲಕರ ಕಿರಣಗಳಿಂದ ಉಜ್ಜ್ವಲವಾಗಿರುವುದೋ ? ಎಂಬಂತೆ ನಾನಾ ವರ್ಣಗಳಿಂದ ಉರಿಯುತ್ತಿರುವ ಜ್ವಾಲೆಗಳಿಂದಲೂ ಧೂಮಗಳಿಂದಲೂ ತುಂಬಿತ್ತು

೩೮ ಸೌಧಗಳಲ್ಲಿ ಚಿತ್ರಗತವಾಗಿದ್ದ ದಾವಾಗ್ನಿಯು ನಿಜವಾಗಿ ಹೋದನೋ ಎಂಬಂತೆ, ವನಗಳನ್ನು ಆಕ್ರಮಿಸಿ ಚೆನ್ನಾಗಿ ಬೆಳೆದು ತಾರುಣ್ಯವನ್ನು ಹೊಂದಿದ ಪಾವಕನು ಅನಂತನೋ ಎಂಬಂತೆ ಆಗಿದ್ದನು

ಉದಯಾಸ್ತಮಯಾದಿಭ್ಯೋ ವಿಂಧ್ಯೋ ವಿಧುರತಾಮಗಾತ್ ॥ ೩೯ ॥

ಅಂಗಾರಕಲ್ಪವಿಟಪೈರ್ಜ್ವಾಲಾವನವಿವಲ್ಗನೈಃ ।
ಶನೈರೀಷದಿವ ಕ್ಷುಭ್ಧೈಃ ಸಹ್ಯೋಽಸಹ್ಯತ್ವಮಾಯಯೌ ॥ ೪೦ ॥

ಮಧ್ಯಮಧ್ಯಕಚತ್ಕಾಷ್ಣ್ಯರ್ಭ್ರಮದ್ಧೂಮಾಲಿಮಾಲಿತಂ ।
ಮಲಜ್ವಾಲಾಬ್ಜಮಲಿನಂ ದೃಷ್ಟಂ ಸರ ಇವಾಂಬರಂ ॥ ೪೧ ॥

ಖೇಽದ್ರೀಣಾಂ ಶಿಖರೇ ವ್ಯೋಮ್ನಿ ಶಿಖಾಶಿಖರಶೇಖರಾಃ ।
ನನೃತುರ್ನಿರಸಾನಾಶನರ್ತಕ್ಯಃ ಕೇತುಕುಂತಲಾಃ ॥ ೪೨ ॥

ತಲಾಹಿತಾನಲಜ್ವಾಲಾ ಬ್ರಹ್ಮಾಂಡೋರ್ಧ್ವಕಪಾಟಭೂಃ ।
ಕರ್ಜನಪ್ರೋತ್ಪತದ್ಭೂತಧಾನೌಘಾ ಭ್ರಾಷ್ಟ್ರಭೂಮಿಕಾ ॥ ೪೩ ॥

---

೩೯. ಉದಯಾಸ್ತಮಯಗಳ ಕಾಲದ ಕೆಂಪಿನಿಂದ ವಿಂಧ್ಯವು ಕೂಡಿ ವಿಧುರ ವಾಯಿತೋ ಎಂಬಂತಾಯಿತು.

೪೦. ಅಂಗಾರಕನಂತೆ ಕೆಂಪಗಿರುವ ಮರಗಳೂ ಜ್ವಾಲಾವೃತಗಳು ವನಗಳ ಚೆಲ್ಲಾಟಗಳೂ ತುಂಬಿರಲು, ಎಲ್ಲವೂ ಕ್ಷುಬ್ಧವಾಗಿರಬೇಕೆಂದು ತೋರುತ್ತ ಸಹ್ಯವು ಅಸಹ್ಯವಾಯಿತು.

೪೧. ಅಲ್ಲಲ್ಲಿ ಕಾಣುವ ಕಪ್ಪು ಹೊಗೆಗಳು ಮೂಲೆಗಳಂತೆ ಮುಸುಕಿಕೊಂಡಿರಲು, ಓಡಾಡುತ್ತಿರುವ ಧೂಮಗಳಿಂದ ಮೊಂಕಾದ ಜ್ವಾಲೆ ಕಮಲಗಳಿಂದ ಮೊಂಕಾಗಿರುವ ಸರಸ್ಸಿನಂತೆ ಆಕಾರವೂ ಮೊಂಕಾಗಿತ್ತು.

೪೨. ಬೆಟ್ಟಗಳ ಶಿಖರದಲ್ಲಿಯೂ ಆಕಾಶದಲ್ಲಿಯೂ ಜ್ವಾಲಾ ಮಾಲೆಗಳೆಂಬ ಹೂಮಾಲೆಗಳನ್ನು ಮುಡಿದಿರುವ, ಧೂಮಕೇತುಗಳೆಂಬ ಕುರುಳುಗಳುಳ್ಳ ನಿಷ್ಕರುಣೆಯರಾದ ನಾಶನರ್ತಕಿಯರು ಕುಣಿದರು.

೪೩. ಪಾತಾಲದಲ್ಲಿ ಉರಿಯುತ್ತಿರುವ ಬೆಂಕಿಯು ಬ್ರಹ್ಮಾಂಡದ ಮೇಲ್ಭಾಗವಾದ ಸ್ವರ್ಗದವರೆಗೂ ವ್ಯಾಪಿಸಿ ಅಲ್ಲಿನವರು ತಾಪವನ್ನು ತಡೆಯಲಾರದೆ ನೆಗೆದು ನೆಗೆದು ಬೀಳುತ್ತಿರಲು, ಬ್ರಹ್ಮಾಂಡ ಖರ್ಪರವು ಅರಳು ಹುರಿಯುವ ಓಡಿನಂತಿತ್ತು.

ಕ್ವಣಚ್ಛ್ರೋಣೀ ವ್ಯುಜ್ಜ್ವಲಾಗ್ನಿರ್ನಾನಾವರ್ಣಾನನಾರುಣಾ ।
ಸ್ಫುಟತ್ಪ್ರಕೋಷ್ಠೇ ಜಗಲ್ಲಕ್ಷ್ಮ್ಯಾಃ ಸೌವರ್ಣೀವಾಭವತ್ತದಾ ॥ ೪೪ ॥

ಶೈಲಾಶ್ಚಟಚಟಾಸ್ಫೋಟೈರ್ವೃಕ್ಷಾಃ ಕಟಕಟಾರವೈಃ ।
ದೇಶಾ ಹಲಹಲೋಲ್ಲಾಸೈರಲಂ ವಿದಲನಂ ಯಯುಃ ॥ ೪೫ ॥

ಅಬ್ಧಯಃ ಕ್ವಥಿತಾಕಾರಾಃ ಫೇನಿಲೋಲ್ಲಾಸಮಾಂಸಲಾಃ ।
ವೀಚೀಕರತಲಾಘಾತಾಂಶ್ಚಕ್ರುರರ್ಕಮುಖೇ ಮುಖೇ ॥ ೪೬ ॥

ಅನ್ಯೋನ್ಯವೇಲ್ಲಿತೋಲ್ಲೋಲಭೂತಲಾಕಾರಪರ್ವತಂ ।
ಜಹ್ನುರ್ವೀಚೀಕರೈರ್ದೇಹೇ ಜಡಾಃ ಪ್ರಕುಪಿತಾ ಇವ ॥ ೪೭ ॥

ಆಶಾಕಾಶಾಶಿನಾಮೇಷಾಂ ಗುಹಾಗುಹಗುಹಾರವಾನ್ ।
ಜಘಾನ ಶಬ್ದ ಆಗ್ನೇಯೋ ಜ್ವಾಲಾತಟತಟೋದ್ಭವಃ ॥ ೪೮ ॥

---

೪೪. ಪಕ್ಕಗಳೆಲ್ಲವೂ ಶಬ್ದವಾಗುತ್ತಿರಲು, ಸಪ್ತದ್ವೀಪಗಳೂ ಸಮುದ್ರಗಳೂ ಬೆಂಕಿ ಹೊತ್ತಿಕೊಂಡಿರಲು, ಜಗಲ್ಲಕ್ಷ್ಮಿಯು ಅತ್ತತ್ತ ಕೆಂಪಾಗಿರುವ ಮುಖವೋ, ಬಡಿದುಕೊಂಡಿರುವುದರಿಂದ ಕೆಂಪಾಗಿ ಚಿನ್ನದಂತಾಗಿರುವ ಹೃದಯವೋ ಎಂಬಂತಿತ್ತು

೪೫ ಶೈಲಗಳು ಚಟಚಟನೆ, ಮರಗಳು ಕಟಕಟನೆ, ದೇಶಗಳು ಹಲ ಹಲನೆ ಮುರಿದುಬಿದ್ದುವು

೪೬ ಸಮುದ್ರಗಳೆಲ್ಲವೂ ಕುದಿಕುದಿಯುತ್ತಾ ನೊರೆಗಳಿಂದ ಕೂಡಿ, ತರಂಗಗಳೆಂಬ ಕೈಗಳಿಂದ ಸೂರ್ಯಬಿಂಬವೆಂಬ ಮುಖದಲ್ಲಿ ಹೊಡೆದುಕೊಂಡುವು

೪೭. ಪರಸ್ಪರವಾಗಿ ಹೋರಾಡಿ ನೆಲಸಮವಾಗಿ ಪರ್ವತವನ್ನು ಜಲಗಳು, ಕೋಪಗೊಂಡ ಮೂರ್ಖರು ಕಲ್ಲುಮಣ್ಣು ತೆಗೆದುಕೊಳ್ಳುವಂತೆ ತೆಗೆದು ಕೊಂಡುವು.

೪೮. ದಿಕ್ಕುಗಳಲ್ಲಿರುವ ಆಕಾಶವನ್ನೇ ತಿನ್ನಬೇಕೆಂದು ಹೊರಟವೋ ಎಂಬಂತೆ ರೇಗುತ್ತಿರುವ ಸಮುದ್ರಗಳ ಗುಹೆಗಳಿಂದ ಹೊರಟ ಗುಹಗುಹಾರವನ್ನು ಆ ಸಮುದ್ರಗಳ ಅಂಚುಗಳಲ್ಲಿ ಸುಡುತ್ತಿರುವ ಪರ್ವತಗಳಿಂದ ಹೊರಟ ಬೆಂಕಿಯ ಶಬ್ದವು ಅಣಗಿಸಿತು.

ಲೋಕಪಾಲಪುರಾಪಾತತಪ್ತಾಂಗಾರಾದ್ರಿಭಿತ್ತಯಃ ।
ದಿಶೋ ದಶಾಪಿ ವೈವಶ್ಯಂ ಯಯುಉರುನ್ಮತ್ತವೃತ್ತಯಃ ॥ ೪೯ ॥

ಕಾಂಚನದ್ರವಸಾದ್ರೀಂದ್ರದ್ರುಮಾಗಾರಗುಹಾಗೃಹಃ ।
ಶನ್ಯೈಶ್ಚಾರ್ವಾಕೃತಿರ್ಮೇರುರಾಸೀದ್ಧಿಮ ಇವಾತಪೇ ॥ ೫೦ ॥

ಕ್ಷಣೇನೈವಾನಲಾತ್ತಸ್ಮಾದ್ಧಿಮವಾಂಜತುವದ್ದ್ರುತಃ ।
ಸರ್ವಾಂತಃಶೀತಲಃ ಶುದ್ಧೋ ದುರ್ಜನಾದಿವ ಸಜ್ಜನಃ ॥ ೫೧ ॥

ತಸ್ಯಾಮಪಿ ದಶಾಯಾಂ ತು ಮಲಯೋಽಮಲಸೌರಭಃ ।
ಆಸೀತ್ತ್ಯಜತ್ಯುದಾರಾತ್ಮಾ ನ ನಾಶೇಽಪ್ಯುತ್ತಮಂ ಗುಣಂ ॥ ೫೨ ॥

ನಶ್ಯನ್ನಪಿ ಮಹಾನಾಹ್ಲಾದಂ ನ ಖೇದಂ ಸಂಪ್ರಯಚ್ಛತಿ ।
ಚಂದನಂ ದಗ್ಧಮಪ್ಯಾಸೀದಾನಂದಾಯೈವ ಜೀವತಾಂ ॥ ೫೩ ॥

---

೪೯. ಲೋಕಪಾಲಕರ ಪತ್ತನಗಳು ಉರಿದು ಬಿದ್ದಾಗ ಬಿದ್ದ ಬೆಂಕಿಯಿಂದ ಬೆಟ್ಟ ಬೆಟ್ಟಗಳೂ ದಿಕ್ಕುದಿಕ್ಕುಗಳು ಕೆಟ್ಟು ಹುಚ್ಚರಂತೆ ಕುಣಿದಾಡಿದುವು.

೫೦. ಪರ್ವತಶ್ರೇಷ್ಠವಾದ ಮೇರುವು ಕಲ್ಪವೃಕ್ಷ ವನಗಳಿಗೂ ಗುಹಾಗೃಹಗಳಿಗೂ ಆಕಾರವಾಗಿತ್ತು. ಅದೂ ಕರಗಿ ಚಿನ್ನದ ನೀರಾಗಿ, ಬಿಸಿಲಿನಲ್ಲಿ ಕರಗುವ ಹಿಮದಂತಾಗಿ-ಹೋಯಿತು.

೫೧. ಒಂದೇ ಕ್ಷಣದಲ್ಲಿ ಹಿಮವಂತವು ಆ ಪ್ರಲಯಾಗ್ನಿಯಲ್ಲಿ ಅರಗಿನಂತೆ ಕರಗಿಹೋಯಿತು. ಸಮಸ್ತ ವಿಧದಲ್ಲಿಯೂ ಶಾಂತನೂ ಶುದ್ಧನೂ ಆಗಿರುವ ಸಜ್ಜನನು ದುರ್ಜನನಿಂದ ಕೆಡುವ ಹಾಗೆ ಆಯಿತು

೫೨. ಆಗ ಅಂತಹ ದುರ್ದಶೆಯಲ್ಲಿಯೂ ಕೂಡ ಮಲಯವು ವಿಮಲ ಪರಿಮಳವುಳ್ಳುದಾಗಿಯೇ ಇತ್ತು ನಾಶದಲ್ಲಿಯೂ ಕೂಡ ಸಜ್ಜನನು ತನ್ನ ಉತ್ತಮ ಗುಣವನ್ನು ಬಿಡುವನೆ ?

೫೩. ತಾನು ನಾಶವಾಗುತ್ತಿದ್ದರೂ (ಸಜ್ಜನನು) ಇತರರಿಗೆ ಆಹ್ಲಾದವನ್ನು ಕೊಡುವನಲ್ಲದೆ, ಖೇದವನ್ನುಂಟುಮಾಡುವುದಿಲ್ಲ ಚಂದನವು ತಾನು ದಗ್ಧವಾಗುತ್ತಿದ್ದರೂ ಜೀವಂತವಾಗಿರುವವರಿಗೆ ಆನಂದವನ್ನೇ ಕೊಡುತ್ತಿತ್ತು.

ನ ಕದಾಚನ ಸಂಯಾತಿ ವಸ್ತೂತ್ತಮಮವಸ್ತುತಾಂ ।
ಪ್ರಲಯಾನಲನಿರ್ದಗ್ಧಮಪಿ ಹೇಮ ನ ನಷ್ಟವತ್ ॥ ೫೪ ॥

ದ್ವೇ ಹೇಮನಭಸೀ ತಸ್ಮಿನ್ನ ನಷ್ಟೇ ಪ್ರಲಯಾನಲೇ ।
ತಯೋರೇವ ವಪುಃ ಶ್ಲಾಘ್ಯಂ ಸರ್ವನಾಶೇಽಪ್ಯನಾಶಯೋಃ ॥ ೫೫ ॥

ನಭೋ ವಿಭುತಯಾಽನಾಶಿ ಹೇಮಾಕೃಷ್ಟತಯಾಕ್ಷಯಂ ।
ಸತ್ವಮೇಕಂ ಸುಖಂ ಮನ್ಯೇ ನ ರಜೋ ನ ಚ ವಾ ತಮಃ ॥ ೫೬ ॥

ಚಲದುಚ್ಚವನಾನೀವ ವಿಕೀರ್ಣಾಂಗಾರವರ್ಷಣಃ ।
ದಗ್ಧಾಬ್ಧಾದ್ರಿರ್ಮಹಾಧೂಮಜ್ವಾಲೋಽಭೂದ್ವಹ್ನಿವಾರಿದಃ ॥ ೫೭ ॥

---

೫೪. ಉತ್ತಮವಾದ ವಸ್ತುವು ಎಂದಿಗೂ ಅವಸ್ತುವಾಗುವುದಿಲ್ಲ (ಎಂಬುದನ್ನು ತೋರಿಸಕೊಡಲೋ ಎಂದು) ಪ್ರಲಯಾಗ್ನಿಗೆ ಸಿಕ್ಕಿದ್ದರೂ ಚಿನ್ನವು ನಾಶವಾಗಲಿಲ್ಲ.

೫೫ ಆ ಪ್ರಲಯಾಗ್ನಿಗೆ ಸಿಕ್ಕಿದ್ದರೂ ಹೇಮವೊಂದು, ಆಕಾಶವೊಂದು, ಇವೆರಡು ಮಾತ್ರ ನಷ್ಟವಾಗಲಿಲ್ಲ. ಆ ಎರಡು ಪದಾರ್ಥಗಳ ದೇಹವು ಸರ್ವ ನಾಶದಲ್ಲಿಯೂ ನಾಶವಾಗಲಿಲ್ಲವಾಗಿ ಅವೇ ಧನ್ಯಗಳು.

೫೬. ಆಕಾಶವು ವಿಭುವಾದ್ದರಿಂದ ಅನಾಶಿಯು: ಚಿನ್ನವು ನಿರ್ದೋಷವಾದ್ದರಿಂದ ಅಕ್ಷಯವು ಸತ್ವವೊಂದೇ ಸುಖವಲ್ಲದೆ ರಜಸ್ಸೂ ಅಲ್ಲ: ತಮಸ್ಸೂ ಅಲ್ಲ.

೫೭. ಆ ಬೆಂಕಿಯ ಮೋಡವು ತುಂಬಿದ ಬೆಂಕಿ ಕೆಂಡಗಳ ಮಳೆಯನ್ನು ಕರೆಯುತ್ತಾ, ಜಲಮೇಘಗಳನ್ನೂ ಬೆಟ್ಟಗಳನ್ನೂ ಸುಡುತ್ತ, ವನವನಗಳನ್ನೂ ಸುಟ್ಟು, ಮಹಾ ಧೂಮಜ್ವಾಲೆಗಳಿಂದ ಕೂಡಿ ಮೆರೆಯುತ್ತಿತ್ತು.

ರಸವಿಸ್ಮರಣಾರ್ತಾನಾಂ ಶೂನ್ಯಾನಾಂ ಸ್ಫಾರದೇಹಿನಾಂ ।
ಶುಷ್ಕಾಣಾಂ ವ್ಯೋಮವಿಟಪಿಪತ್ರಾಣಾಂ ಪಾತ್ರರೂಪಿಣಾಂ ॥ ೫೮ ॥

ವಾರಿದಾನಾಂ ಸವಾರೀಣಾಂ ದಗ್ಧಾನಾಂ ಪ್ರಲಯಾರ್ಚಿಷಾ ।
ಜ್ಞಸ್ಯೇವಾಂಗ ನ ದೋಷಾಣಾಂ ದೃಷ್ಟಂ ಭಸ್ಮಾಪಿ ನ ಕ್ವಚಿತ್ ॥ ೫೯ ॥

ನ ಲಂಘಯತಿ ಕೈಲಾಸಂ ಯಾವದುಲ್ಲಸಿತೋಽನಲಃ ।
ತಾವತ್ತಂ ಕಲ್ಪಕುಪಿತೋ ರುದ್ರೋ ನೇತ್ರಾಗ್ನಿನಾದಹತ್ ॥ ೬೦ ॥

ದಾಹಸ್ಫುಟದ್ದ್ರುಮಸ್ಥೂಲಶಿಲಾಚಟಚಟಾರವಾಃ ।
ಲಕುಟೋಪಲಲೋಷ್ಟೌಘೈರಯುಧ್ಯಂತೇವ ಭೂಭೃತಃ ॥ ೬೧ ॥

---

೫೮ ರಸವು ಸಂಪೂರ್ಣವಾಗಿ ಒಣಗಿಹೋಗಿ ಇತ್ತು ಎಂಬುದೇ ಮರೆಯು ವಷ್ಟಾಗಿರುವುದರಿಂದ ಶೂನ್ಯವಾಗಿರುವ, ವಿಸ್ತಾರವಾಗಿರುವ ದೇಹಗಳುಳ್ಳವಾಗಿದ್ದರೂ ಒಣಗಿರುವ, ಆಕಾಶವೃಕ್ಷಗಳ ಪತ್ರಗಳೋ ಎಂಬಂತೆ, ಇರುವ, ದೊನ್ನೆ ಕಟ್ಟಿಕೊಂಡಿರುವ (ಚತುರ್ವಿಧ ಭೂತಜಾತಿಗಳು)

೫೯. ನೀರುಗಳಿದ್ದರೂ ಪ್ರಲಯಾಗ್ನಿಗಳಿಂದ ದಗ್ಧವಾಗಿ ಹೋಗಿರುವ ಮೋಡಗಳ ಭಸ್ಮಗಳೂ ಕೂಡ, ಬ್ರಹ್ಮಜ್ಞನ ಜ್ಞಾನಾಗ್ನಿಯಿಂದ ದಗ್ಧವಾಗುವ ದೋಷಗಳಂತೆ ಸಿಕ್ಕಲಿಲ್ಲ

೬೦. ಪ್ರಲಯವಾಯುವು ಎಷ್ಟೇ ವಿಜೃಂಭಿಸಿದರೂ ಕೈಲಾಸವನ್ನು ದಾಟಲಾಗಲಿಲ್ಲ. ಆಗ ಅದರ ಮೇಲೆ ಕೋಪಿಸಿಕೊಂಡು ರುದ್ರನು ಅದನ್ನು ತನ್ನ ನೇತ್ರಾಗ್ನಿಯಿಂದ ಸುಟ್ಟನು.

೬೧. ಬೆಂಕಿಯಿಂದ ಮಹಾವೃಕ್ಷಗಳೂ ಸ್ಥೂಲ ಶಿಲೆಗಳ ಚಟ ಚಟ ಎಂದು ಒಡೆದು ಹಾರುತ್ತಿರಲು, ಭೂಭೃತ್ತುಗಳು (ಪರ್ವತಗಳು–ಕ್ಷತ್ರಿಯರು) ದೊಣ್ಣೆಗಳಿಂದಲೂ ಶಿಲೆಗಳಿಂದಲೂ ಘೋರವಾಗಿ ಯುದ್ಧ ಮಾಡುತ್ತಿರುವರೋ ಎನ್ನುವಂತಿತ್ತು.

ಜ್ವಾಲಾಘನಘಟಾಟೋಪಸಾವತಂಸಚಲಾಂತಿಮಾಃ ।
ಬಭೂವುರ್ವ್ಯೋಮವಿಕಸತ್ಸ್ಥೂಲಪದ್ಮವನಾ-ಇವ　　　　|| ೬೨ ||

ಸರ್ಗಃ ಕದಾಚಿದೇವಾಸೀದಿತ್ಯಗಾತ್ಸ್ಮರಣೀಯತಾಂ ।
ಕಲ್ಪಾಂತಃ ಸ್ಮಾರಯನ್ಮೂರ್ಖಾನಗಾದಸ್ಮರಣೀಯತಾಂ　　　　|| ೬೩ ||

ತಾಪೋಪತಾಪಪರಮಾಃ ಪರಮಾರಣತತ್ಪರಾಃ ।
ವಹ್ನಯೋಽವಹ್ನವಂ ಚಕ್ರುರ್ಜಗತಾಮಸತಾಮಿವ　　　　|| ೬೪ ||

ವವುರಶನಿನಿಪಾತಪೀಡಿತಾಂಗಾಃ
ಕಂಚದನಲೋಲ್ಮುಕಗುಲ್ಮಮಂಡಲಾಭಾಃ ।
ಪ್ರಲಯಸಮಯವಾಯವೋಽನಲಾಂತಾ-
ದ್ದಲದಮರಾವಲಯೋ ಲಯೀ ಲಿಹಂತಃ　　　　|| ೬೫ ||

---

೬೨. ಜ್ವಾಲೆಗಳೆಂಬ ಘಟಘಟಗಳ ಆಟೋಪದಿಂದ ಅವತಂಸ ಮಾಡಿಕೊಂಡಿರುವ, ಕುಣಿಯುತ್ತಿರುವ ಜ್ವಾಲೆಗಳ ಅಂಚುಲಗಳು, ವ್ಯೋಮದಲ್ಲಿ ವಿಕಾಸವನ್ನು ಹೊಂದುತ್ತಿರುವ ಸ್ಥೂಲ ಪದ್ಮವನಗಳೋ ಎಂಬಂತಿದ್ದುವು

೬೩. ಹೀಗೆಲ್ಲ ಆಗಿ, ಸೃಷ್ಟಿಯು ಯಾವಾಗಲೋ ಇತ್ತು ಎಂಬ ಸ್ಮರಣೆಯು ಮಾತ್ರ ಉಳಿಯುವಂತಾಯಿತು. ಕಲ್ಪಾಂತ ಪ್ರಲಯವೂ ಮುಗಿದು ಅದೂ ಸ್ಮರಣಮಾತ್ರವಾಯಿತು. ಜಗತ್ತು ಅಸಾರವೆಂದು ಮೂರ್ಖರಿಗೆ ಎಚ್ಚರಿಕೆಯನ್ನು ಕೊಟ್ಟವೋ ಎಂಬಂತಾಯಿತು

೬೪ ತಾಪ, ಉಪತಾಪಗಳಿಂದ ಪರಮವಾದ, ಪರರನ್ನು ಮಾರಣ ಮಾಡುವುದರಲ್ಲೇ ತತ್ಪರಗಳಾದ, ಅಗ್ನಿಗಳು ಅಸತ್ತಾದ ಜಗತ್ತನ್ನು ನಾಶ ಮಾಡಿದಂತೆಯೇ ತಾವು ನಿರ್ನಾಮವಾದುವು.

೬೫ ಸಿಡಿಲುಗಳನ್ನು ಹಾಕಿ ಎಲ್ಲವನ್ನೂ ಪೀಡಿಸುತ್ತಾ, ಬೀಸುವ ವೇಗದಿಂದ ಮರಗಿಡ ಪೊದರುಗಳನ್ನು ಎತ್ತಿ ಎಸೆಯುತ್ತಾ, ಪ್ರಲಯವಾಯುಗಳು, ಅಗ್ನಿಯಿಂದ ಎದ್ದು ಲೋಕಗಳನ್ನೆಲ್ಲಾ ನೆಕ್ಕಿಬಿಡುತ್ತಿವೆಯೋ ಎಂಬಂತೆ ಬೀಸಿದುವು.

ವ್ಯಾಲೋಲಸ್ಫುಟದಾನಲದ್ರುಮವನಪ್ರೋದ್ಭೂತಭಸ್ಮೋಷ್ಮಣಾ
ದತ್ತಾಭ್ರಾಭ್ರಮದುಲ್ಮುಕಾಹತಿವಹತ್ಸಾಂಗಾರಗೌರಾರ್ಚಿಷಃ ।
ಭ್ರಶ್ಯತ್ಪಾವಕಶೃಂಗಮಧ್ಯವಿಲಸಜ್ಜ್ವಾಲಾವಲೀಶ್ಯಾಮಲಾ
ನಿಃಶೇಷಾಗ್ನಿನಿಕಾಶಸುಸ್ತವಜವಾ ವೇಗೇನ ವಾತಾ ವವುಃ ॥ ೬೫ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಮಹಾಕಲ್ಪಾಂತಾಗ್ನಿವರ್ಣನಂ" ನಾಮ
ಪಂಚಸಪ್ತತಿತಮಃ ಸರ್ಗಃ

---

೬೬. ಆಗ ವಾಯುಗಳು ಮಹಾವೇಗದಿಂದ ಬೀಸಿದುವು: ಆ ವಾಯುಗಳು ಅಲ್ಲಾಡುತ್ತಿರುವ ಹೊಸ ಚಿಗುರುಗಳಿಂದ ಕೂಡಿರುವ ಮಹಾಗ್ನಿಯೆಂಬ ವೃಕ್ಷಗಳ ವನಗಳಲ್ಲಿ ಹುಟ್ಟಿದ ಬಿಸಿ ಬೂದಿಯ ಶಾಖವನ್ನು ಆಕಾಶಕ್ಕೆಲ್ಲ ಹಂಚಿ, ಅಲ್ಲಿ ತಿರುಗುತ್ತಿರುವ ಉಲ್ಕೆಗಳ ಗುಂಪುಗಳ ಬೆಂಕಿಯಿಂದ ಕೂಡಿದ ಗೌರಜ್ವಾಲೆಗಳಿಂದ ಕೂಡಿದ್ದುವು ಆಗಾಗ ಕಳಲಿಹೋಗಿ ಬೀಳುವ ಪಾವಕ ಶೃಂಗಗಳ ಮಧ್ಯದಲ್ಲಿ ಕಪ್ಪಗೆ ಕಾಣಿಸುವ ಇದ್ದಲನ್ನು ಮುತ್ತಿರುವ ಜ್ವಾಲೆಗಳಿರಲು, ಎಲ್ಲವನ್ನೂ ಸಂಪೂರ್ಣವಾಗಿ, ನಿರ್ನಾಮವಾಗಿ ಸುಡುವ ಪಾವಕನಿಗೆ ವಿಜೃಂಭಣದಿಂದ ಹುಟ್ಟಿದ ಆ ಮಹಾವಾತಗಳ ವೇಗವು ಶ್ಲಾಘನೆಗೆ ಯೋಗ್ಯವಾಗುವ ಮಟ್ಟಿಗೂ ಇತ್ತು.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಮಹಾಕಲ್ಪಾಂತಾಗ್ನಿ ವರ್ಣನ" ಎಂಬ
ಎಪ್ಪತ್ತೈದನೆಯ ಸರ್ಗವು.

## ಷಟ್‌ಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಅಥ ಕಲ್ಪಾಂತಮರುತಿ ವಹತ್ಯವಧುತಾಚಲೇ ।
ಬಲೇನಾಂಭೋಧಿಕಲ್ಲೋಲೈರ್ನಭಸ್ಯಾವರ್ತಕಾರಿಣಿ ॥ ೧ ॥

ಸಮುದ್ರೇಷು ವಿಮುದ್ರೇಷು ಮರ್ಯಾದೋಲ್ಲಂಘನೇ ಘನೇ ।
ಅಥನೇಷು ಧನಿಷ್ವಂಬುದಾರಿದ್ರ್ಯೋಪದ್ರವದ್ರುತೇ ॥ ೨ ॥

ಭೂತಲೇ ಭೂತಲೇಶಾಂಶವರ್ಜಿತೇ ವಹ್ನಿಭರ್ಜಿತೇ ।
ಪಾತಾಲಮಪಿ ಪಾತಾಲೇ ಗತೇ ಕಿಮಪಿ ಕಾಲತಃ ॥ ೩ ॥

---

## ಎಪ್ಪತ್ತಾರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ಅನಂತರದಲ್ಲಿ ಕಲ್ಪಾಂತವಾಯುವು ಬೀಸಿತು. ಬೆಟ್ಟಗಳೆಲ್ಲಾ ನಡುಗಿ ಹೋದುವು. ಅಂಬೋಧಿಯು ಅಲ್ಲೋಲಕಲ್ಲೋಲವಾಗಿ, ಆ ನೀರು ಮೇಲಕ್ಕೆ ಹಾರಿ ಆಕಾಶದಲ್ಲಿ ನೀರಿನ ಸುಳಿಗಳು ಕಾಣಿಸಿದುವು.

೨. ಸಮುದ್ರಗಳು ತಮ್ಮ ಮರ್ಯಾದೆಯನ್ನು ಬಹುವಾಗಿ ಆಕ್ರಮಿಸಿ ಬಂದು ವಿಮುದ್ರಗಳಾದುವು ಐಶ್ವರ್ಯವನ್ನು ಕಳೆದುಕೊಂಡ ಐಶ್ವರ್ಯವಂತರು ತಲೆತಪ್ಪಿಸಿಕೊಂಡು ಓಡುವಂತೆ, ನೀರೆಲ್ಲವನ್ನೂ ಕಳೆದುಕೊಂಡ ಸಮುದ್ರಗಳು ಓಡಿದುವು.

೩. ಭೂತಲವು ಪೃಥ್ವೀಭೂತದ ಲೇಶಾಂಶವೂ ಇಲ್ಲದೆ ಹೋಗಿ ಎಲ್ಲವೂ ಬೆಂಕಿಗೆ ಹಾಕಿ ಹುರಿದಂತಾಯಿತು. ಪಾತಾಲವೂ ಕಾಲ ಯೋಗದಿಂದ ಪಾತಾಲಕ್ಕಿಳಿದು ಹೋಯಿತು.

ದಿವಿ ವಾ ವಿದ್ಯಮಾನಾಯಾಂ ವಿಶೀರ್ಣೇ ಸರ್ಗವರ್ಗಕೇ ।
ಲೋಕೇ ವ್ಯೋಮಗತಾಲೋಕೇ ಶೋಕೌಕಸಿ ಕಕುಬ್ಗಣೇ ॥ ೪ ॥

ಕುತೋಪ್ಯಾಕಾಶಕುಹರಾದ್ದೃಪ್ತದೈತ್ಯಗಣಾ ಇವ ।
ಪುಷ್ಕರಾವರ್ತಕಾ ಮೇಘಾಶ್ಚಕ್ರುರ್ಗುಲುಗುಲಾರವಂ ॥ ೫ ॥

ಬ್ರಹ್ಮವಿಸ್ಫೋಟತಸ್ಸ್ವಾಂಡಕುಡ್ಯವಿಸ್ಫೋಟನೋದ್ಭಟಂ ।
ಅನ್ಯೋನ್ಯಾಸ್ಫಾಲನೋತ್ಫಾಲವುತ್ತಾರ್ಣವರವಾವಿಲಂ ॥ ೬ ॥

ಲೋಕಾರ್ಣವಪುರೋದ್ಗೀರ್ಣಘನಕೋಲಾಹಲೋಲ್ಬಣಂ ।
ಏತತ್ಕುಲಾಚಲಸ್ಕಂಧಬದ್ಧೋಗ್ರರವಘರ್ಘರಂ ॥ ೭ ॥

ಬ್ರಹ್ಮಾಂಡಶಂಖಜಠರಪೂರಣಾವರ್ತಮಂಥರಂ ।
ಸ್ವರ್ಲೋಕರೋದಃ ಪಾತಾಲತಲತೋಽತಿನಗುಲ್ಮಕಂ ॥ ೮ ॥

---

೪ ಅಂತರಿಕ್ಷವು ಇನ್ನೂ ಇತ್ತು ಸೃಷ್ಟಿಸಮೂಹಗಳು ಧ್ವಂಸವಾಗಿ ಹೋದುವು ಲೋಕವು ಆಕಾಶದಲ್ಲಿ ಬೆರೆತುಹೋಗಿ ಶೋಕಪಡುತ್ತಿರುವ ದಿಕ್ಕುಗಳು ಮಾತ್ರ ಉಳಿದಿದ್ದುವು.

೫. ಹೀಗಿರುವಾಗ ಆಕಾಶದಲ್ಲಿ ಎಲ್ಲಿಯೋ ಇದ್ದ ಕುಹರದಿಂದ ಎದ್ದು ಬಂದ ವ ದಿಸಿದ ದೈತ್ಯಗಣಗಳೋ ಎಂಬಂತೆ, ಪುಷ್ಕರಾವರ್ತಕಗಳೆಂಬ ಮೇಘಗಳು ಎದ್ದು ಗುಲುಗುಲು ಎಂದು ಗುಡುಗಿದವು.

೬. ತನ್ನ ಅಂಡವನ್ನು ಬ್ರಹ್ಮನೇ ಒಡೆಯಲು, ಆ ಬ್ರಹ್ಮಾಂಡದ ಗೋಡೆಯು ಒಡೆದ ಆರ್ಭಟವೋ, ಅಥವಾ ರೇಗಿ ವಿಜೃಂಭಿಸಿರುವ ಸಾಗರಗಳು ಒಂದನ್ನೊಂದು ಢಿಕ್ಕಿ ಹೊಡೆದ ಮಹಾ ಶಬ್ದವೋ ? (ಎಂಬಂತಿತ್ತು ಆ ಗುಡುಗು.)

೭. ಆ ಗುಡುಗು ಲೋಕಲೋಕಗಳಲ್ಲಿರುವ ಸಮುದ್ರ ಸಮುದ್ರ ಪತ್ತನ ಪತ್ತನಗಳಲ್ಲಿಯೂ ಪ್ರತಿಧ್ವನಿತವಾಗಿ ಆ ಶಬ್ದವು ಕೋಲಾಹಲವಾಯಿತು ಕುಲಾಚಲಗಳ ಸ್ಕಂದಗಳಲ್ಲಿ ಪ್ರತಿಫಲಿಸಿ ಉಗ್ರವಾಗಿ ಅದ್ಭುತವಾಯಿತು.

೮. ಬ್ರಹ್ಮಾಂಡವೆಂಬ ಶಂಖದ ಹೊಟ್ಟೆಯೊಳಗೆ ನುಗ್ಗಿ ಅದನ್ನು ತುಂಬಿ ಅಲ್ಲಿ ತಿರುಗಿತಿರುಗಿ ಬೆಳೆಯಿತೋ ? ಸ್ವರ್ಗಲೋಕ, ಅಂತರಿಕ್ಷ, ಪಾತಾಳಗಳಲ್ಲಿ ಅದು ಕವಲೊಡೆಯಿತೋ ? ಎಂಬಂತಾಯಿತು.

ಸಮಸ್ತದೂರದಿಗ್ಭಿತ್ತಿಹೇಲಾಹೇಲನಘರ್ಘರಂ ।
ಮಹಾಪ್ರಲಯಸಂಪನ್ನಾ ಪಾನಕಾಪಾನತರ್ಷುಲಂ　　　　॥ ೯ ॥

ಪ್ರಸೃತಪ್ರಲಯಾಖ್ಯೇಂದ್ರಮತ್ತೈರಾವತಬೃಂಹಿತಂ ।
ಆಕಲ್ಪಕ್ಷುಬ್ಧಮೇಘಾಬ್ಧಿನಿರ್ಹ್ರಾದಮಿವ ಸಂಭೃತಂ　　　　॥ ೧೦ ॥

ಮಹಾಪ್ರಲಯಸಂಕ್ಷುಬ್ಧಕ್ಷೀರೋದಮಥನಾರವಂ ।
ಬ್ರಹ್ಮಾಂಡೋಗ್ರಾರಘಟ್ಟೇಽಸ್ಮಿನ್ವಾರ್ಯಂತ್ರಮಿವ ಸಾರವಂ　　　　॥ ೧೧ ॥

ಅಥಾಸ್ಮಿನ್ಸತಿ ಕಲ್ಪಾಗ್ನೌ ಸ್ಥಿತಿಮೇತಿ ಕಥಂ ಘನಃ ।
ಇತಿ ವಿಸ್ಮಿತವಾನಸ್ಮಿ ದೃಶಂ ದಿಗ್ನವಕೇಽತ್ಯಜಂ　　　　॥ ೧೨ ॥

ಯಾವನ್ನ ಕ್ವಚಿದೇವಾತ್ರ ಪಶ್ಯಾಮ್ಯಾಶಾಸು ಕೇವಲಂ ।
ತರಂತಿ ತರಲಾನ್ಸ್ಫಾಲಮುಲ್ಕಾಕಾಶನಿವೃಷ್ಟಯಃ　　　　॥ ೧೩ ॥

---

೯. ದೂರದೂರದಲ್ಲಿರುವ ಸಮಸ್ತ ದಿಗಂತಗಳನ್ನು ವ್ಯಾಪಿಸಿ ಅವುಗಳನ್ನು ಗೋರಿಕೊಂಡು ಬಂತೋ ? ಮಹಾ ಪ್ರಲಯಾಗ್ನಿಯು ಏಳು ಸಮುದ್ರಗಳನ್ನೂ ಸೇರಿಸಿ ಪಾನ ಮಾಡುತ್ತಿರುವಾಗ ಕೇಳುವ ಗರ್ಗರ ಧ್ವನಿಯೋ ? ಎಂಬಂತಿತ್ತು.

೧೦ ವಿಜಯ ಯಾತ್ರೆ ಹೊರಟಿರುವ ಪ್ರಲಯವೆಂಬ ಐರಾವತದ ಬೃಂಹಿತವೋ ? ಪ್ರಲಯದವರೆಗೂ ಬಹು ದಿನಗಳಿಂದ ಸೆರೆಯಾಗಿದ್ದು, ಒದ್ದಾಡುತ್ತಿದ್ದು ಈಗ ತಪ್ಪಿಸಿಕೊಂಡಿರುವ ಪ್ರಲಯ ಮೇಘಗಳೆಂಬ ಮಹಾರ್ಣವಗಳ ಆರ್ಭಟವೋ ?

೧೧ ಮಹಾಪ್ರಲಯದಲ್ಲಿ ಸಂಕ್ಷುಬ್ಧವಾದ ಕ್ಷೀರಸಾಗರದ ಮಥನದ ಮಹಾಶಬ್ದವೋ ? ಬ್ರಹ್ಮಾಂಡವೆಂಬ ಉಗ್ರವಾದ ಆರಘಟ್ಟವೆಂಬ (ನೀರು ಸೇದುವ) ತಿರುಗಣೆಯ ಆರ್ಭಟವೋ ? ಎಂಬಂತಿತ್ತು

೧೨. ಈ ಪ್ರಲಯಾಗ್ನಿಯು ರೇಗುತ್ತಿರುವಾಗ ಈ ಘನಗಳು ಎಲ್ಲಿಂದ ಬಂದುವು ಎಂದು ವಿಸ್ಮಯಪಡುತ್ತ ಸುತ್ತಲೂ ನೋಡಿದೆನು.

೧೩ ಯಾವ ದಿಕ್ಕಿನಲ್ಲಿಯೂ ಏನೂ ಕಾಣಿಸದಿದ್ದರೂ ಆಕಾಶದಿಂದ ಎರಚಿ ಹೊಡೆದಂತೆ ಇರುವ ಬೆಂಕಿ ಸಿಡಿಲುಗಳ ಮಳೆಯು ಆರಂಭವಾಯಿತು

ತೇನ ಜ್ವಲನತಾಪೇನ ಬಹುಯೋಜನಕೋಟಿಷು ।
ಪದಾರ್ಥಾ ಭಸ್ಮತಾಂ ಯಾಂತಿ ದೂರೇ ದಿಕ್ಷು ದಶಸ್ವಪಿ ॥ ೧೪ ॥

ಅನಂತರಂ ಕ್ಷಣಾದ್ವ್ಯೋಮ್ನಿ ದೂರೇಽಹಮನುಭೂತವಾನ್ ।
ಊರ್ಧ್ವತಃ ಶೀತಲಂ ವಾತಮಧಸ್ತಾದನಲೋಪಮಂ ॥ ೧೫ ॥

ಏತಾವತಿ ನಭೋಮಾರ್ಗೇ ದೂರೇ ಕಲ್ಪಾಂಬುದಾಃ ಸ್ಥಿತಾಃ
ಯಸ್ತೇಷಾಮಗ್ನಿತಾಪಾನಾಂ ವಿಷಯೋ ನ ಚ ಸದ್ದೃಶಾಂ ॥ ೧೬ ॥

ಅಥ ವಾರುಣದಿಗ್ಭಾಗಾದಾಯಯೌ ಕಲ್ಪಮಾರುತಃ ।
ಯಸ್ಮಿಂಸ್ತೃಣವದುಹ್ಯಂತೇ ವಿಂಧ್ಯಮೇರುಹಿಮಾಲಯಾಃ ॥ ೧೭ ॥

ತೇನ ಜ್ವಾಲಾಚಲಾಃ ಪ್ರಾಂತೋಡ್ಡೀನಾಂಗಾರವಿಹಂಗಮಾಃ ।
ಲೋಲೋಲ್ಮುಕವನಾಕ್ರಾಂತಾ ಜಗ್ಮುರಗ್ನಿದಿಶಂ ದ್ರುತಂ ॥ ೧೮ ॥

---

೧೪. ಆ ಬೆಂಕಿಯ ಮಳೆ ಸುರಿಯಲು ಕೋಟಿ ಕೋಟಿ ಯೋಜನ ಪ್ರದೇಶಗಳಲ್ಲಿ ಹತ್ತು ದಿಕ್ಕುಗಳಲ್ಲಿಯೂ ಇದ್ದ ಪದಾರ್ಥಗಳೆಲ್ಲವೂ ಭಸ್ಮವಾಗಿ ಹೋದುವು.

೧೫. ಅನಂತರ ಮರುಗಳಿಗೆಯಲ್ಲಿಯೇ ಆಕಾಶದಲ್ಲಿ ಎಲ್ಲಿಯೋ ದೂರದಲ್ಲಿ ಮೇಲಿನಿಂದ ಬೀಸುತ್ತಿರುವ ತಂಗಾಳಿಯನ್ನೂ ಕೆಳಗಿನಿಂದ ಬೀಸುತ್ತಿರುವ ಬೆಂಕಿಯಂತಿರುವ ಬಿಸಿಗಾಳಿಯನ್ನೂ ಅನುಭವಿಸಿದೆನು

೧೬. ಇದುವರೆಗೂ ನಭೋ ಮಾರ್ಗದಲ್ಲಿ ಎಲ್ಲಿಯೋ ದೂರದಲ್ಲಿದ್ದ ಪ್ರಲಯ ಮೇಘಗಳು ಮುಂದೆ ಬಂದುವು. ಅಗ್ನಿ ತಾಪಗಳಾದ ಅಂತಹ ಮೇಘಗಳನ್ನು ಯಾರೂ ನೋಡುವುದಕ್ಕೂ ಆಗುವುದಿಲ್ಲ.

೧೭. ಪಶ್ಚಿಮ ದಿಕ್ಕಿನಿಂದ ಕಲ್ಪವಾಯುವು ಬೀಸಿತು. ಆ ವಾಯುವು ವಿಂಧ್ಯ, ಮೇರು, ಹಿಮಾಲಯಗಳನ್ನೂ ಹುಲ್ಲುಕಡ್ಡಿಯಂತೆ ಹಾರಿಸಬಲ್ಲುದು.

೧೮. ಆ ವಾಯುವು ತನ್ನ ಪಕ್ಕಗಳಲ್ಲಿ ಹಾರುತ್ತಿರುವ ಅಗ್ನಿಪಕ್ಷಿಗಳನ್ನುಳ್ಳ ಲೋಲವಾದ ಕೊಳ್ಳಿಗಳೆಂಬ ಮರಗಳು ಕಾಡನ್ನುಳ್ಳ ಜ್ವಾಲಾ ಪರ್ವತಗಳನ್ನು ಆಗ್ನೇಯ ದಿಕ್ಕಿಗೆ ಹೊಡೆದುಕೊಂಡುಹೋದುವು.

ಸಂಧ್ಯಾಭ್ರಸದೃಶಾಕಾರಾಸ್ತೇರುರಂಗಾರವಾರಿದಾಃ ।
ಭ್ರೇಮುರ್ಭಸ್ಮಭರಾಭ್ರಾಣಿ ಪೂತಾಂಗಾರರಜಾಂಸಿ ಖೇ || ೧೯ ||

ಸ ಜ್ವಾಲವಿಲಸದ್ವಾತೋ ದುಷ್ಪ್ರೇಕ್ಷನಲದೃಶಂ ವ್ರಜ೯ ।
ಹೇಮಾದ್ರೀಣಾಂ ಸಪಕ್ಷಾಣಾಮನೀಕಂ ದ್ರವತಾಮಿವ || ೨೦ ||

ಧರಾದ್ರಿಮಂಡಲಾಭೋಗೇ ಸೌಮ್ಯಾಂಗಾರಭರಾತ್ಮನಿ ।
ಜ್ವಾಲಾವಲಿಗಣೇ ಜಾತೇ ಭಾತೇ ತೇಜಸಿ ಭಾಸ್ವತಾಂ || ೨೧ ||

ಅರ್ಣವೇಷ್ವನಲಾರ್ಣಸ್ಸು ಕ್ವತನೋತ್ಪಾಲವಾರಿಷು ।
ವನೇಷ್ವಸ್ಮೃತಪರ್ಣೇಷು ದೀಪ್ತಾಗ್ನಿತರುದಾರಿಷು || ೨೨ ||

---

೧೯. ಸಂಧ್ಯಾಕಾಶದಂತೆ ಕೆಂಪಾಗಿದ್ದ ಆ ಅಗ್ನಿ ಮೇಘಗಳು ಆಕಾಶದಲ್ಲಿ ಊದಿದ ಬೆಂಕಿಯ ಕೆಂಡಗಳೆಂಬ ಧೂಳನ್ನು ಆಕಾಶದಲ್ಲಿ ತೋರಿದುವು. ಭಸ್ಮದಿಂದ ತುಂಬಿರುವ ಆ ಮೇಘಗಳು ಆಕಾಶದಲ್ಲಿ ತಿರುಗಿದವು

೨೦ ಬೀಸುತ್ತಿದ್ದ ಗಾಳಿಯು ಜ್ವಾಲಾಮಾಲೆಗಳಿಂದ ಕೂಡಿತ್ತು ದುಷ್ಟವಾಗಿ ತಾನೇ ಬೆಂಕಿಯಂತಿತ್ತು. ನೋಡಿದರೆ ಸಪಕ್ಷಗಳಾದ ಮೇರು ಪರ್ವತಗಳು ಕರಗಿ ಹರಿಯುತ್ತಿವೆಯೋ ಎಂಬಂತಿತ್ತು.

೨೧. ಭೂಮಿ ಪರ್ವತ ದೇಶಗಳನ್ನೆಲ್ಲಾ ಆವರಿಸಿ, ಸೌಮ್ಯವಾಗಿರುವ ಬೆಂಕಿಯ ಕೆಂಡಗಳನ್ನು ಧರಿಸಿರುವ ಜ್ವಾಲಾವಲಿಗಳೆಲ್ಲವೂ ಸೂರ್ಯನಂತೆ ಬೆಳಗುತ್ತಿರಲು,

೨೨. ಸಮುದ್ರಗಳೆಲ್ಲವೂ ಅಗ್ನಿ ಸಮುದ್ರಗಳಾಗಿರಲು, ಅಗ್ನಿ ರಸವೆಲ್ಲವೂ ಕಾದು, ಕುದಿದು ಮೇಲಕ್ಕೆ ಎರಚುತ್ತಿರಲು, ವನಗಳೆಲ್ಲವೂ ವಿಸ್ಮೃತ ವರ್ಣಗಳಾಗಿರಲು ಉರಿಯುತ್ತಿರುವ ಅಗ್ನಿವೃಕ್ಷಗಳಿಂದ ತುಂಬಿರಲು,

ಬ್ರಹ್ಮಲೋಕಸ್ಥನಾಥೇಷು ಬ್ರಹ್ಮಲೋಕಪುರೇಷು ಚ ।
ಸಾಂಗನಾಬಾಲವೃದ್ಧೇಷು ದಗ್ಧೇಷು ನಿಪತತ್ಸು ಖಂ ॥ ೨೩ ॥

ಕಲ್ಪಾಂತಾನಲಪದ್ಮಿನ್ಯಾ ಬ್ರಹ್ಮಾಗ್ರಾವನಸರೋವರೇ ।
ಜ್ವಾಲಾಪಲ್ಲವಶಾಲಿನ್ಯಾಃ ಸಬೀಜಾಯಾಃ ಸಟೋಲ್ಮುಕೈಃ ॥ ೨೪ ॥

ಆಸಿಲಾತ್ಮಸು ಮೂಲೇಷು ನಾಗೇಷು ಚ ನಗೇಷು ಚ ।
ಆಪಾತಾಲಂ ನಿಮಗ್ನೇಷು ಮಹತ್ಯಾಂಗಾರಕರ್ದಮೇ ॥ ೨೫ ॥

ಉಷ್ಟ್ರಸೈನ್ಯಮಿವಾಲಕ್ಷ್ಯ ಗತಿಮನ್ನಿಕಟಂ ನಭಃ ।
ಆಯಯಾವಂಜನಶ್ಯಾಮಃ ಕಲ್ಪಾಂಬುದಗಣಃ ಕ್ವಣನ್ ॥ ೨೬ ॥

ಸ್ಥಿರಕಲ್ಪಾನಲಜ್ವಾಲಾತುಲ್ಯವಿದ್ಯುನ್ಮಯಾಚಲಃ ।
ಏಕಕೋಣಕವಿಶ್ರಾಂತಸಪ್ತಾರ್ಣವಪಯೋಭರಃ ॥ ೨೭ ॥

---

೨೩. ಒಡೆಯರೆಲ್ಲರೂ ಬ್ರಹ್ಮಲೋಕದಲ್ಲಿರುವರಾದರು ಬ್ರಹ್ಮಲೋಕದ ಪುರಗಳೂ ಬಾಲವೃದ್ಧ ನಾರೀ ಸಮೇತವಾಗಿ ಸುಟ್ಟು ಉರುಳಿಹೋಗುತ್ತಿರಲು,

೨೪. ಬ್ರಹ್ಮವೆಂಬ, ನಿಶ್ಶಿಲಾಸರೋವರದಲ್ಲಿ ಜ್ವಾಲಾಪಲ್ಲವಗಳನ್ನು ಹರಡುತ್ತ ಸಬೀಜವಾದ, ಕಲ್ಪಾತಾಗ್ನಿಯೆಂಬ ಪದ್ಮಿನಿಯು, ಜ್ವಾಲಾಮಾಲೆಗಳನ್ನು ಉಗುಳುತ್ತ

೨೫–೨೬. ಪಾತಾಲದವರೆಗೂ ಹೋಗಿರುವ ಅಸಿಲಾತ್ಮಕವೂ ಸರ್ವರೂಪವೂ ಆದ ಪರ್ವತಗಳಲ್ಲಿ, ಮಹತ್ತಾದ ಬೆಂಕಿಯೆಂಬ ಕೆಸರಿನಲ್ಲಿ, ತನ್ನ ಉಷ್ಟ್ರಸೇನೆಯನ್ನಾದರೂ ನಡೆಸುತ್ತಿರುವಳೋ ಎಂಬಂತೆ, ಕಾಡಿಗೆಯಂತೆ ಕಪ್ಪಾಗಿರುವ ಕಲ್ಪಮೇಘಗಳ ಸಮೂಹವು ಆಕಾಶದಲ್ಲಿ ಸಮೀಪಕ್ಕೆ ಬಂತು.

೨೭. ಸ್ಥಿರವಾಗಿರುವ ಕಲ್ಪಾಗ್ನಿಯ ಜ್ವಾಲೆಗಳೋ ಎಂಬಂತೆ, ವಿದ್ಯುತ್ತಿಗಳಿಂದಾದ ಪರ್ವತವೋ ಎಂಬಂತೆ, ಸಪ್ತಸಮುದ್ರಗಳ ನೀರೆಲ್ಲವೂ ಒಂದೇ ಕಡೆ ಸೇರಿದಂತಿರುವುದೋ ಎಂಬಂತೆ,

ಭಿತ್ತಿಭಾಸುರನೀಹಾರಭಾರನಿರ್ವಾರದಿಕ್ತಟಃ ।
ಬ್ರಹ್ಮಾಂಡಕುಡ್ಯನಿಬಿಡಮಂಡಲಾಸ್ಫೋಟಪಂಡಿತಃ ॥ ೨೮ ॥

ಕಲ್ಪಾಂತಕ್ಷುಭಿತಾಂಭೋಧಿರ್ವರ್ತುಲಾವರ್ತವೃತ್ತಿಮಾನ್ ।
ತಡಿಜ್ಜಲಚರಃ ಸಾರನಿರ್ಹ್ರಾದಃ ಖಮಿವಾಗತಃ ॥ ೨೯ ॥

ಮೃತೋ ದಗ್ಧೋ ನಿಶಾನಾಥಸ್ತತೋ ದ್ವಿಗುಣಶೀತಲಃ ।
ಅನ್ಯಮಾಕಾರಮಾಶ್ರಿತ್ಯ ಪರಂ ಲೋಕಮಿವಾಗತಃ ॥ ೩೦ ॥

ಹೇಮಸಂಭಾರರೂಪೇಣ ಹಿಮಾಲಯಮಿವಾಖಿಲಂ ।
ಜಾಡ್ಯಸ್ತಂಭಿತನಿಃಶೇಷಜಲಕಾಷ್ಠಾಚಲಂ ದಧತ್ ॥ ೩೧ ॥

ಅಥ ಬ್ರಹ್ಮಾಂಡವಿಸ್ಫೋಟಕರಿಣಂ ಘಟಿತಾಂಬರಂ ।
ಪ್ರಾಗ್ದ್ವಿತೋದ್ಘಟಿತಾಸಾರಕಾಷ್ಠಾವೃಷ್ಟಿಃ ಪವಾತಃ ॥ ೩೨ ॥

---

೨೮. ಗೋಡೆಗಳಂತಿರುವ ಮಂಜಿನಿಂದ ನಿರವಕಾಶವಾಗಿ ತುಂಬಿರುವ ದಿಕ್ತಟವೋ! ಭದ್ರವಾಗಿರುವ ಬ್ರಹ್ಮಾಂಡದ ಗೋಡೆಗಳನ್ನು ಒಡೆಯುವುದನ್ನು ಬಲ್ಲ ಪಂಡಿತನೋ!

೨೯. ಕಲ್ಪಾಂತದಲ್ಲಿ ಕ್ಷುಭಿತವಾಗಿ ಗರ್ರನೆ ತಿರುಗುತ್ತಿರುವ ಅಬೋಧಿಯು, ತನ್ನಲ್ಲಿರುವ ವಿದ್ಯುತ್ತುಗಳೆಂಬ ಪ್ರಾಣಿಗಳನ್ನೂ ತನ್ನ ಸಾರವಾದ ಗರ್ಜನೆಗಳನ್ನು ತೆಗೆದುಕೊಂಡು ಆಕಾಶದಲ್ಲಿ ಬರುತ್ತದೆಯೋ (ಎಂಬಂತಿತ್ತು ಆ ಪ್ರಲಯ ಮೇಘ.)

೩೦. ಆಗ ನಿಶಾನಾಥನು ಮೃತನಾಗಿ ದಗ್ಧವಾಗಿ ಹೋಗಿ ಮತ್ತೆ ದ್ವಿಗುಣಶೀತಲನಾಗಿ, ಮತ್ತೊಂದು ಆಕಾರದಿಂದ ಬಂದವನಂತೆ ಕಾಣಿಸಿದನು.

೩೧. ಹಿಮಾಚಲವನ್ನೆಲ್ಲ ಚಿನ್ನದ ಒಡವೆಯಂತೆ ಧರಿಸಿಕೊಂಡು, ಶೈತ್ಯ ದಿಂದ ತನ್ನಲ್ಲಿರುವ ನೀರನ್ನೆಲ್ಲ ಸ್ತಂಭಿತವನ್ನಾಗಿ ಮಾಡಿ ಆ ಪರ್ವತವನ್ನೇ ಹೊತ್ತುಕೊಂಡುಬರುತ್ತಿರುವುದೋ ಎಂಬಂತಿತ್ತು

೩೨. ಆಗ ಬ್ರಹ್ಮಾಂಡವನ್ನು ಒಡೆಯುವುದಕ್ಕಾಗಿಯೋ ಆಯಿತೋ ಎಂಬಂತಿರುವ ಗುಡುಗು ಆಕಾಶವನ್ನೆಲ್ಲಾ ವ್ಯಾಪಿಸಿತು. ಮೊದಲು ಎರಡು ಹನಿಗಳು ಬಿದ್ದು ಭಾರಿಯ ಮಳೆಯಾಯಿತು.

ಅಗ್ನಿದಾಹವನಾಕಾಶವಿದ್ಯುದುನ್ಮೇಷಭೀಷಣಾ ।
ಚಟದ್ಗಡಗಡಾಸ್ಫೋಟಸ್ಫುಟದ್ಬ್ರಹ್ಮಾಂಡಮಂಡಲಾ ॥ ೩೩ ॥

ಪ್ರಥಿತೋತ್ಥಿತಶೀತ್ಕಾರಶತಕ್ಷ್ವೇಡಾಕ್ಷಯಾರವಾ ।
ಶೀತಸೀಕರನೀಹಾರಭಿತ್ತಿಬಂಧಮಯಾಂಬರಾ ॥ ೩೪ ॥

ರೋದೋಮಂಡಪವೈದೂರ್ಯಸ್ತಂಭಸಂಭಾರಭಾಸುರೈಃ ।
ಧಾರಾಸಾರೈರ್ಧರಾಧುರ್ಯಶೈಲಶಾತಕಶಾಲಿನೀ ॥ ೩೫ ॥

ಧರಾಚಟಚಟಾಸ್ಫೋಟಸ್ಫುರದಂಗಾರಪತ್ತನಾ ।
ಗರ್ಜಿತೋರ್ಜಿತಸಂಪಾತಪತಲೋಕಾಂತರಾಕುಲಾ ॥ ೩೬ ॥

ಸಾ ಬಭೂವಾಥ ನಾಂಗಾರಜಗದ್ಗೇಹವಿಲಾಸಿನೀ ।
ಕೃತಪುತ್ಯುದ್ಗಮಾ ಬಾಷ್ಪಶ್ರಿಯಾ ಜ್ವಲನಯಾ ಭುವಃ ॥ ೩೭ ॥

---

೩೩ ಆ ವೃಷ್ಟಿಯು, ಬೆಂಕಿಯನ್ನು ಸುರಿದು ಸುಟ್ಟಂತೆ ಮಿಂಚುಗಳು ಹೊಡೆಯುತ್ತಿರಲು ವನ, ಆಕಾಶ, ಎರಡಕ್ಕೂ ಭಯಂಕರವಾಗಿತ್ತು. ಚಟಚಟನೆ, ಗಡಗಡನೆ, ಆಸ್ಫೋಟಗಳಾಗುತ್ತಿರಲು, ಬ್ರಹ್ಮಾಂಡವನ್ನೇ ಒಡೆಯುವುದೋ ಎಂಬಂತಿತ್ತು

೩೪. ಆಗ ತಾವೇತಾವಾಗಿ ಸಿಡಿಯುತ್ತಿರುವ ಹನಿಗಳು ನೂರಾರರಿಂದ ಬೇಕಾದ ಹಾಗೆ ಸದ್ದುಮಾಡುತ್ತ, ತಣ್ಣಗೆ ಮಂಜಿನಂತೆ ಹಬ್ಬಿ ಆಕಾಶದಲ್ಲೆಲ್ಲಾ ಗೋಡೆಕಟ್ಟಿದುವು.

೩೫ ದಿಕ್ತಟಮಂಟಪಗಳಲ್ಲಿ ವೈಢೂರ್ಯ ಸ್ತಂಭಗಳನ್ನು ಕಟ್ಟುತ್ತಿರುವುವೋ ಎಂಬಂತೆ ಸುರಿಯುವ ಧಾರೆಗಳು ಭೂಮಂಡಲವನ್ನು ಹೊತ್ತಿರುವ ಶೈಲಶೈಲಗಳನ್ನೂ ಸಾಣೆಹಿಡಿಯುವಷ್ಟು ಘೋರವಾಗಿರಲು,

೩೬. ಭೂಮಂಡಲವು ಚಟಚಟನೆ ಒಡೆಯುತ್ತ, ಅಂಗಾರ ಪತ್ತನಗಳು ಬಿರಿಯುತ್ತ, ಆ ಮೇಘ ಗರ್ಜನಗಳಿಂದ ಮಳೆಯು ಇನ್ನೂ ಹೆಚ್ಚುತ್ತಿರಲು ಲೋಕಾಂತರಗಳೆಲ್ಲವೂ ಬಿದ್ದು ಹೋಗುವುವೋ ಎಂದು ಭೀತಿಯಾಗುತ್ತಿರಲು,

೩೭. ಅಂಗಾರ ರೂಪವಾಗಿ ಜಗತ್ತಿನ ದೇಹದಲ್ಲಿ ವಿಲಾಸಮಾಡುತ್ತ ಆ

ಜ್ವಾಲಾಲವೋಲ್ಲಲನಡಂಬರಮಂಬರಂ ತ-
ದ್ವ್ಯೂಢಸ್ಥಲಾಬ್ಜದಲಜಾಲಮಿವಾಲಮಾಸೀತ್ ।
ಜ್ವಾಲಾಭ್ರಮದ್ಭ್ರಮರಪಂಕ್ತಿನಿಭಾಸ್ತದಾಸಂ-
ಸ್ತತ್ರ ಸ್ಫುರಚ್ಛಿಶಿರಸೀಕರಪಕ್ಷಪುಂಜಾಃ ॥ ೩೮ ॥

ಉದ್ಯದ್ಭೃಹಚ್ಚಟಚಟಾರವಪೂರಿತಾಶೋ
ಭೀಮೋಽಭವತ್ಸಲಿಲದಾನಲಸನ್ನಿಪಾತಃ ।
ದುರ್ವಾರವೈರಿವಿಷಮೋ ಮಹತಾಂ ಬಲಾನಾಂ
ಸಂಗ್ರಾಮ ಉಗ್ರ ಇವ ಹೇತಿಹತೋಗ್ರಹೇತಿಃ ॥ ೩೯ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಪುಷ್ಕರಾವರ್ತಡಂಬರವರ್ಣನಂ" ನಾಮ
ಷಟ್‌ಸಪ್ತತಿತಮಃ ಸರ್ಗಃ

---

ಮಳೆಯು ಸುರಿಯಿತು. ಉರಿಯುತ್ತಿರುವ ಮಂಜು ಭೂಮಿಯಿಂದ ಮೇಲಕ್ಕೆದ್ದಿತು.

(ಅಥ ಅಜ್ವಲನಯಾ ಭುವೋ ಬಾಷ್ಪಶ್ರಿಯಾ ಸಖೀವ ಕೃತ ಪ್ರತ್ಯುದ್ಗಮಾ ಬಭೂವ—ತಾ ಪ್ರ)

೩೮. ಆಗ ಆಕಾಶವು ಆ ಜ್ವಾಲೆಯ ಲವಮಾತ್ರದಿಂದಲೇ ನಡುಗಿ ಹೋಯಿತು ರೂಢಿಸಿ ಬೆಳೆದಿರುವ ಸ್ಥಲ ಕಮಲಗಳಿಂದ ತುಂಬಿದಂತೆ ಆಯಿತು. ಅಲ್ಲಿ ಹೊಳೆಯುತ್ತಿರುವ ತಣ್ಣಗಿರುವ ನೀರಿನ ಹನಿಗಳ ಗುಂಪು, ಜ್ವಾಲೆಗಳೆಂಬ ಅಲೆಯುತ್ತಿರುವ ಭ್ರಮರಗಳ ಸಾಲುಗಳಾದಂತೆ ತೋರುತ್ತಿತ್ತು. (?)

೩೯. ಏರುತ್ತಿರುವ ಚಟಚಟಾರವದಿಂದ ದಿಕ್ತಟಗಳೆಲ್ಲವೂ ತುಂಬಿಹೋದವು. ಕರೆಯುತ್ತಿರುವ ಮಳೆಯು ಭಯಂಕರವಾಗಿತ್ತು. ಮಹತ್ತರವಾದ ಸೇನಾಬಲವುಳ್ಳವರು ನಿವಾರಿಸಲಾಗದ ವೈರದಿಂದ ವಿಷಮವಾದ ಹೃದಯವುಳ್ಳವರಾಗಿ ಹೋರಾಡುವಾಗ ಆ ಯುದ್ಧದಲ್ಲಿ ಆಗುವಂತೆ ಉಗ್ರಶಸ್ತ್ರಾಸ್ತ್ರಗಳನ್ನೂ ಉಗ್ರ ಶಸ್ತ್ರಾಸ್ತ್ರಗಳು ಹೊಡೆಯುವಂತೆ ಆಗಿ, ಬಹಳ ಉಗ್ರವಾಗಿತ್ತು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಪುಷ್ಕರಾವರ್ತಡಂಬರ ವರ್ಣನ" ಎಂಬ
ಎಪ್ಪತ್ತಾರನೆಯ ಸರ್ಗವು.

## ಸಪ್ತಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಅಥಾವನಿಪಯಸ್ತೇಜಃಪವನಾನಾಂ ಯುಗಕ್ಷಯೇ ।
ಜಾತೇ ಪರಮಸಂಕ್ಷೋಭೇ ಬಭೂವಾಸ್ಮಿನ್ಜಗತ್ತ್ರಯಂ ॥ ೧ ॥

ತಾಪಿಚ್ಛವಿಪಿನೋಡ್ಡೀನಿಭಭಸ್ಮಾಭ್ರಭಾಸುರಂ ।
ಮಹಾರ್ಣವಮಹಾವರ್ತವೃತ್ತಿ ಧೂಮವಿವರ್ತನಂ ॥ ೨ ॥

ನೀಲಜ್ವಾಲಾಲವೋಲ್ಲಾಸಂ ಹೇಲಾಟಮಿಟಮಾರಟಿ ।
ಕೃತಭಸ್ಮಾಭ್ರಸಂಭಾರ ಪೂರ್ಣಲೋಕಾಂತರಾಂತರಂ ॥ ೩ ॥

---

## ಎಪ್ಪತ್ತೇಳನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ಆ ಯುಗಾಂತ್ಯದಲ್ಲಿ ಭೂಮಿ, ಜಲ, ತೇಜಸ್ಸು, ಪವನರಿಗೆ ಪರಮ ಸಂಕ್ಷೋಭವು ಹುಟ್ಟಲು, ಜಗತ್ತ್ರಯವೂ (ಹೇಗೆ) ಇತ್ತು ಎಂಬುದನ್ನು ಕೇಳು.

೨ ಹೊಗೆಯ ಕಾಡು ಮೇಲಕ್ಕೆದ್ದಿತೋ ಎಂಬಂತೆ ಬೂದಿಯ ಮೋಡಗಳು ಮುಸರಿಕೊಂಡಿದ್ದವು. ಮಹಾರ್ಣವಗಳು ಮಹಾವರ್ತ (ಸುಳಿ)ಗಳಿಂದ ಸುತ್ತುತ್ತಿರುವುವೋ ಎಂಬಂತೆ ಹೊಗೆಯು ಆವರಿಸುತ್ತಿತ್ತು.

೩ ನೀಲ ಜ್ವಾಲಾವಳಿಗಳು ಅಲ್ಲಲ್ಲಿ ಕುಣಿಯುತ್ತಿದ್ದವು ಲೀಲಾ ವಿಲಾಸದಿಂದ ಟಮಟಮ ಎಂದು ಆರ್ಭಟಮಾಡುತ್ತಿದ್ದವು ಭಸ್ಮವೆಂಬ ಸಂಭಾರವನ್ನು ಲೋಕಾಂತರಗಳಲ್ಲೆಲ್ಲಾ ತುಂಬಿದಂತಿತ್ತು.

ಉಚ್ಛಲದ್ಧಿರ್ಘರುತ್ಕಾರೈಶ್ಛಮುಚ್ಛಮುಮಯಾತ್ಮಕೈಃ ।
ತೂರ್ಯಮುನ್ನಮದಾಸಾರವಿಸಾರಿಜಯಘೋಷಣಂ || ೪ ||

ಭ್ರಮದ್ಭಸ್ಮಾಭ್ರಧೂಮ್ರಾಭ್ರಂ ಬೃಹತ್ಕಲ್ಪಾಭ್ರಸಂಭ್ರಮಂ ।
ಬಾಷ್ಪಾಭ್ರವಿಭ್ರಮೋದ್ಭ್ರಾಂತಶೀಕರೋಗ್ರಾಭ್ರವೃಂದವತ್ || ೫ ||

ಬ್ರಹ್ಮಾಂಡಭಿತ್ತಿಭಾಕಾಂರಭೀಷಣೈರ್ಮಾತರಿಶ್ವನಃ !
ಪ್ರಸರ್ಶೈರಂಬರೋಡ್ಡೀನದಗ್ಧೇಂದ್ರಾದಿಪುರೋತ್ಕರಂ || ೬ ||

ಜಲಾನಲಾನಿಲೋಲ್ಲಾಸಸ್ಫುಟತ್ಕೋಟಿಗತಾಶ್ಮನಾಂ ।
ಪ್ರವಿಘಟ್ಟನಟಂಕಾರೈರ್ಜಡೀಭೂತಾಕ್ಷಕಶ್ರುತಿ || ೭ ||

ನಭಃಸ್ತಂಭನಿಭಾಬಂಧಧಾರಾನೀರಂಧ್ರವರ್ಷಣೈಃ ।
ಕರ್ಷಣೈಃ ಕಲ್ಪವಹ್ನೀನಾಂ ಛಮುಚ್ಛಮಘನಧ್ವನಿ || ೮ ||

---

೪ ಹಸಿಯ ಸೌದೆಗಳು ಉರಿಯುವಾಗ ಆಗ ಛಮುಚ್ಛಮುಗಳೆಂಬ ಉತ್ಕಾರಗಳು ಏಳುತ್ತಿರಲು, ಅವು ಮಳೆಗಳಿಗೆ ಹೇಳುತ್ತಿರುವ ಜಯ ಜಯ ಎಂಬ ಜಯಕಾರಗಳೋ ಜಯ ತೂರ್ಯಧ್ವನಿಯೋ ಎಂಬಂತಿತ್ತು

೫. ಭಸ್ಮಮೇಘಗಳೂ ಧೂಮಮೇಘಗಳೂ ತಿರುಗುತ್ತಿದ್ದವು. ಬೃಹತ್ತಾದ ಕಲ್ಪಮೇಘದ ಸಂಭ್ರಮವು ತಾನೇತಾನಾಗಿತ್ತು ಮಂಜಿನ ಮೋಡವು ತಿರುಗುತ್ತಿರಲು ಹಾರುತ್ತಿರುವ ನೀರಿನ ಹನಿಗಳು ಮೋಡಗಳ ಗುಂಪಿನಂತೆ ಕಾಣುತ್ತಿದ್ದವು

೬. ಬ್ರಹ್ಮಾಂಡದ ಭಿತ್ತಿಗಳನ್ನು ಹೊಡೆದು ಭಂ ಎಂದು ಹಿಂತಿರುಗಿದ ಮಾರುತಗಳು ಸುಟ್ಟು ಹೋದ ಇಂದ್ರಾದಿ ದಿಕ್ಪಾಲಕರ ಪಟ್ಟಣಗಳ ಅವಶೇಷಗಳನ್ನು ಆಕಾಶದಲ್ಲಿ ತೂರುತ್ತಿದ್ದವು.

೭ ಜಲ, ಅನಲ, ಅನಿಲ, ಇವರುಗಳ ವಿಜೃಂಭಣದಿಂದ ಒಡೆದು ಹೋಗುತ್ತಿರುವ ದೊಡ್ಡ ದೊಡ್ಡ ಬಂಡೆಗಳ ಹೊಡೆದಾಟದಿಂದ ಆದ ಠಂರಂಕಾರಗಳಿಂದ ಕಿವಿಗಳು ಕಿವುಡಾಗುತ್ತಿದ್ದುವು

೮ ಮಳೆಯು ಸಂದಿಲ್ಲದಂತೆ ಧಾರೆಗಳನ್ನು ಸುರಿಯುತ್ತಿರಲು, ಆ ಧಾರೆ

ಗಂಗಾತರಂಗಿಕಾ ಯೇಷಾಂ ತಾದೃಶೈಃ ಸರಿತಾಂ ಗಣೈಃ ।
ಅಭ್ರೈರಿವನಭೋಭೀಮೈಃ ಪೂರ್ಯಮಾಣಾಖಿಲಾರ್ಣವಂ ॥ ೯ ॥

ತಾಪಿಚ್ಛಪತ್ರವೃಂದಸ್ಥಪುಷ್ಪಗುಚ್ಛಸಮೋಪಮೈಃ ।
ತಪದ್ಭಿರರ್ಕೈರಾಲೀಢಪೀಠಕಲ್ಪಾಭ್ರಮಂಡಲಂ ॥ ೧೦ ॥

ವಹದ್ಗಿರಿಸರಿದ್ವ್ಯೂಹಶಿಖರಿದ್ವೀಪಪತ್ತನಂ ।
ಕಲ್ಪಾನಿಲಘನಕ್ಷೋಭಕೃತಪರ್ವತಕುಟ್ಟನಂ ॥ ೧೧ ॥

ಗ್ರಹತಾರಾಗಣೈರುಗ್ರೈರ್ವ್ಯಗ್ರೈರ್ವಿಗ್ರಹದುರ್ಗ್ರಹೈಃ ।
ಪತದ್ಭಿರ್ದ್ವಿಗುಣಾಲಾತಲತಾಮಾವರ್ತಪಾತಿಭಿಃ ॥ ೧೨ ॥

---

ಗಳು ಆಕಾಶವನ್ನು ಹೊತ್ತಿರುವ ಜಲಸ್ತಂಭಗಳೆಂಬಂತಿರಲು, ಕಲ್ಪಾಗ್ನಿಗಳು ಆರುತ್ತ ಛಮುಚ್ಛಮ ಎಂದು ಭಾರಿಯ ಧ್ವನಿಯನ್ನು ಮಾಡುತ್ತಿದ್ದವು.

೯. ಗಂಗಾ ಮಹಾನದಿಯೂ ಒಂದೊಂದು ತರಂಗ ಎಂಬಷ್ಟು ದೊಡ್ಡದಾಗಿರುವ ಮಹಾನದಿಗಳ ಗಡಣದಿಂದ ಕೂಡಿ ಆಕಾಶಕ್ಕೂ ಭಯಂಕರವಾಗಿರುವಂತಹ ಮೋಡಗಳು ಅಖಿಲಾರ್ಣವವನ್ನು ತುಂಬುವಂತಿದ್ದವು.

೧೦. ಹೊಂಗೆಯಮರಗಳ ಗುಂಪುಗಳಲ್ಲಿರುವ ಪುಷ್ಪ ಗುಚ್ಛಗಳೋ ಎಂಬಂತಿರುವ ಸುಡುತ್ತಿರುವ ಸೂರ್ಯರು ನೆಕ್ಕುತ್ತಿರುವ ಆಧಾರ ಪೀಠವೋ ಎಂಬಂತೆ ಅಭ್ರಮಂಡಲವು ಹಬ್ಬಿತ್ತು

(ಅಬಿಂಧನಾನಾಮರ್ಕಾಣಾಂತದಾಸ್ವಾದಕತ್ವಾದಿತಿ:—ತಾ. ಪ್ರ)

೧೧ ಗಿರಿ, ಸರಿತ್ತು, ಶಿಖರಿಗಳು ದ್ವೀಪ, ಪತ್ತನಗಳು ಇವೆಲ್ಲವನ್ನೂ ವಹಿಸಿರುವ, ಕಲ್ಪವಾಯುವಿನಿಂದಾದ ಘನಕ್ಷ್ಯೋಭದಿಂದಾದ ಪರ್ವತಗಳ ಕುಟ್ಟನವುಳ್ಳ,

೧೨ ಒಂದನ್ನೊಂದು ಹೊಡೆಯುತ್ತಾ ಮೊನೆಗಳೆಲ್ಲ ಮುರಿದು ವ್ಯಗ್ರವಾಗಿರುವ ಗ್ರಹತಾರಾಗಣಗಳು ಭೂಮಿಯಲ್ಲಿ ಕಾಣುವ ಆಲಾತಗಳಿಗಿಂತ ದ್ವಿಗುಣವಾಗಿರುವ ಆಲಾತಲತೆಗಳಂತೆ ಕಾಣುತ್ತ ಭೂಮಿಗೆ ಬೀಳುತ್ತಿರಲು,

ಆವಹೋತ್ಥಜಲಾದ್ರೀಂದ್ರಸಂಘಟ್ಟಾಸ್ಫೋಟಘಟ್ಟಿತಂ ।
ಮಹಾಪ್ರಲಯಪರ್ಯಸ್ತ ಪರ್ವತಪ್ರಾಂತಕುಟ್ಟಿಮಂ　　॥ ೧೩ ॥

ಘನಸೀಕೃತಬಾಷ್ಪಾಭ್ರೈಃ ಕಲ್ಪಾಭ್ರೈರಪಿ ಮೇದುರೈಃ ।
ಅಂಧೀಕೃತಾರ್ಕಜಾಲಾಂಶುತಮೋನಿಬಿಡಮಂಥರಂ　　॥ ೧೪ ॥

ವಿಶೀರ್ಣವಸುಧಾಪೀಠಖಂಡಖಂಡೈರ್ಗಲತ್ತಟೈಃ ।
ಉಹ್ಯಮಾನೈರ್ಲುಠಚ್ಛೈಲಪತನೈಃ ಸಂಕಟಾರ್ಣವಂ　　॥ ೧೫ ॥

ಊರ್ಮ್ಯುದ್ಯದುಪಲಚ್ಛಿನ್ನಘನೈರ್ಘಸ್ಮರಮಾರುತೈಃ ।
ಸಮುದ್ರಘೋಷೈರ್ನಿರ್ಘಾತಗಂಭೀರೈರ್ಭಗ್ನದಿಕ್ತಟಂ　　॥ ೧೬ ॥

---

೧೩. ಆವಹವೆಂಬ ವಾತಸ್ಕಂಧ ವಾಯುವಿನಿಂದ ಎದ್ದ ಜಲಪರ್ವತದ ಸಂಘಟ್ಟನದಿಂದ ಸ್ಫೋಟವಾಗಿ ಪರ್ವತ ಪ್ರಾಂತಗಳು ಮಹಾಪ್ರಲಯದಲ್ಲಿ ಮುಳುಗಿ ಹೋಗುತ್ತಿರಲು,

೧೪. ಘನವಾದ ತುಂತುರುಗಳಿಂದಲೂ ಹಬೆಯಿಂದಲೂ ಆದ ಮೋಡಗಳಿಂದಲೂ ದಟ್ಟವಾದ ಕಲ್ಪ ಮೇಘಗಳಿಂದಲೂ ಕತ್ತಲೆ ಕಟ್ಟಿಕೊಂಡು ಸೂರ್ಯ ಕಿರಣಗಳೇ ಕಾಣದಂತಾಗಿರಲು, ಎಲ್ಲೆಲ್ಲೂ ಕತ್ತಲು ತಾನೇ ತಾನಾಗಿರಲು,

೧೫. ವಸುಧಾಪೀಠವು ಒಡೆದು ಚೂರುಚೂರಾಗಿ, ತಟಗಳೆಲ್ಲವೂ ಖಂಡು ಖಂಡಗಳಾಗಿ ಬಿದ್ದುಹೋಗುತ್ತಿರಲು, ಖಂಡವಾಗಿ ಕತ್ತರಿಸಿ ಬಿದ್ದು ಹೋಗಿ ಕೊಚ್ಚಿ ಹೋಗುತ್ತಿರುವ ಪರ್ವತ ಖಂಡಗಳಿಂದ ಸಮುದ್ರವು ಸಂಕಟಪಡುತ್ತಿರಲು,

೧೬. ತೆರೆಗಳು ಹೊತ್ತುತಂದಿರುವ ಶಿಲೆಗಳಿಂದ ಒಡೆದುಹೋದ ಮೋಡಗಳಿಂದಲೂ ಪ್ರಲಯವಾಯುಗಳಿಂದಲೂ ಸಮುದ್ರ ಘೋಷಗಳಿಂದಲೂ ಗಂಭೀರವಾದ ಗುಡುಗುಗಳಿಂದಲೂ ದಿಕ್ತಟಗಳು ಭಗ್ನವಾಗುತ್ತಿರುವುವು.

ಬ್ರಹ್ಮಾಂಡಕುಡ್ಯಕ್ರೋಡಾಗ್ರಕುಟ್ಟೈಃ ಕಟುಟಾಂಕೃತೈಃ ।
ಕಲ್ಪಾಭ್ರವಿಟಪಾಸ್ಫೋಟೈರ್ಘಟ್ಟಿತೈಕಾರ್ಣವಾರಟಿ ॥ ೧೭ ॥

ಸ್ವರ್ಗಪಾತಾಲಭೂಲೋಕಖಂಡಖಂಡೈರ್ವಿಮಿಶ್ರಿತೈಃ ।
ಯಥಾಸ್ವಭಾವಂ ತಿಷ್ಠದ್ಭಿರ್ಮರುಭುಭ್ಮ್ಯೈರ್ವೃತಾಂಬರಂ ॥ ೧೮ ॥

ಮೃತಾರ್ಧಮೃತದಗ್ಧಾರ್ಧದಗ್ಧಾಂಗೈರ್ದೇವದಾನವೈಃ ।
ಅನ್ಯೋನ್ಯದರ್ಶನಾದ್ವಾತವೇಲ್ಲಿತೈರ್ಭ್ರಾಮಿತಾಯುಧಂ ॥ ೧೯ ॥

ಕಲ್ಪಾಂತಪವನೋದ್ಭ್ರಾಂತೈರ್ಲೋಕಾಂತರಜರತ್ತೃಣೈಃ ।
ಆರಬ್ಧಾರ್ಜುನವಾತಾಖ್ಯಾಸ್ತಂಭಮುದ್ಧೂತಭಸ್ಮಭಿಃ ॥ ೨೦ ॥

---

೧೭. ಬ್ರಹ್ಮಾಂಡ ಭಿತ್ತಿಗಳೆಂಬ ಎದೆಯನ್ನು ಬಡಿದುಕೊಳ್ಳುತ್ತ ಕಟವಾದ ಠಾಂಕಾರಗಳನ್ನು ಮಾಡುತ್ತ ಕಲ್ಪಮೇಘಗಳೆಂಬ ಕೈಗಳನ್ನು ಬಡಿಯುತ್ತ ಏಕಾರ್ಣವ ನಟಿಯು (ಅಳುವಂತಿರುವುದು.)

೧೮. ಸ್ವರ್ಗ, ಪಾತಾಲ, ಭೂಲೋಕಗಳ ಖಂಡ ಖಂಡಗಳಷ್ಟಷ್ಟು ಸೇರಿ ಆಗಿರುವ ಮರುಭೂಮಿಗಳು ಯಥಾಸ್ವಭಾವವಾಗಿ ಎಂದರೆ ನೀರಿಲ್ಲದ ಆಕಾಶದಲ್ಲಿ ಅಲ್ಲಲ್ಲಿ ಇರುವುವು (?)

೧೯. ಮೃತರೂ ಅರ್ಧಮೃತರೂ ಆಗಿ, ದಗ್ಧರೂ ಅರ್ಧದಗ್ಧರೂ ಆಗಿದ್ದರೂ ದೇವದಾನವರು ಗಾಳಿಯು ಹೊತ್ತುಕೊಂಡು ಹೋಗುತ್ತಿರುವಾಗ ಅನ್ಯೋನ್ಯ ದರ್ಶನವಾಗಲು ಆಯುಧಗಳನ್ನೆತ್ತಿ ಹೊಡೆಯ ಹೋಗುವರು.

೨೦ ಕಲ್ಪಾಂತಪವನನು ಎತ್ತಿ ತೂರಿದ ಲೋಕಾಂತರಗಳೆಂಬ ಕುಳಿತ ಹುಲ್ಲುಗಳಿಂದಲೂ ಹಾರಾಡುತ್ತಿರುವ ಭಸ್ಮಗಳಿಂದಲೂ ವಾತವು ಅರ್ಜುನ (ಬಿಳಿ)ವರ್ಣವಾದ ಸ್ತಂಭವನ್ನು ರಚಿಸುವಂತಿರುವುದು.

(ಅರ್ಜುನವಾತಾ ಇತಿ ವಾತರೋಗ ವಿಶೇಷಸ್ಯನಾಮ। ತೇನ ಹಿ ರೋಗೇಣ ರೋಗಿಣೋನಭಸ್ಯಡ್ಡೀಯ ಭ್ರಾಮ್ಯಂತೇ। ನನ-ತಸ್ಯ ರೋಗಸ್ಯ ಅರ್ಜುನ ವರ್ಣತಾಸ್ತೀತಿ ತನ್ನಾಮ ನಿರಾಲಂಬನಂ ಮಾಭೂದಿತಿ ಲೋಕಾಂತರ ಜರತ್ತೃಣೈಃ

ಉಹ್ಯಮಾನಶಿಲಾಜಾಲಪ್ರಹಾರವಿಲುಠತ್ತಟೈಃ ।
ಪತಲ್ಲೋಕಾಂತರೈಃ ಸ್ಫಾರದುಷ್ಕಾಲಕಟುಟಾಂಕೃತಂ ॥ ೨೧ ॥

ವಾತೋದ್ವ್ಯೂಹಗಿರಿವ್ರಾತಗುಹಾಭಾಂಕಾರಭಾಸುರಂ ।
ಪತದ್ಭಿರ್ವಿಹಿತಾವರ್ತಲೋಕಪಾಲಪುರೀಪುರೈಃ ॥ ೨೨ ॥

ಕೃತಕರ್ಕಶನಿರ್ಹ್ರಾದೈರಸುರೈರಿವ ಮಾರುತೈಃ ।
ಉಹ್ಯಮಾನವನವ್ಯೂಹಪ್ರೋತವಾತಾಯನೈರ್ವೃತಂ ॥ ೨೩ ॥

ಪುರಮಂಡಲದೈತ್ಯಾಗ್ನಿಸುರನಾಗವಿವಸ್ವತಾಂ ।
ನಿಕುರಂಬಂ ದಧದ್ವ್ಯೋಮ್ನಿ ಮಶಕಾನಾಮಿವೋಚ್ಚಯಂ ॥ ೨೪ ॥

---

ಸ್ವೋದ್ಭೂತ ಭಸ್ಮಭಿರ್ವಾತಂ ಧವಲೀಕೃತ್ಯ ಆರಬ್ಧಃ ಅರ್ಜುನವಾತಾಖ್ಯಾಯಾಃ ಸ್ತಂಭಃ ಪ್ರತಿಷ್ಠಾ ಸಾಲಂಬನತಾ ಯಸ್ಮಿನ್ನಿತ್ಯುತ್ಪ್ರೇಕ್ಷಾ—ತಾ. ಪ್ರ.)

೨೧. ಹಾರುತ್ತಿರುವ ಶಿಲಾಖಂಡಗಳಿಂದ ಏಟುತಿಂದು ಮುರಿದು ಬೀಳುತ್ತಿರುವ ತಟಗಳಿಂದಲೂ ಬಿದ್ದು ಹೋಗುತ್ತಿರುವ ಲೋಕಾಂತರಗಳಿಂದಲೂ ಪ್ರಾಪ್ತವಾಗಿರುವ ದುಷ್ಕಾಲರ ಕಟು ಧ್ವನಿಗಳಿಂದ ಎಲ್ಲವೂ ತುಂಬಿಹೋಗಿತ್ತು.

೨೨ ಗಾಳಿಯು ಹೊತ್ತುಕೊಂಡು ಹೋಗುತ್ತಿರುವ ಗಿರಿಗಳ ಗುಹೆಗಳಲ್ಲಿ ಮೊರೆಯುವ ಭಂಕಾರವು ಸುಂದರವಾಗಿರುವುದು. ಲೋಕಪಾಲಕರ ಪುರಗಳು ಗಿರ್ರನೆ ಸುತ್ತುತ್ತ ಬೀಳುತ್ತಿರುವುವು.

೨೩. ಮಾರುತಗಳು ರಾಕ್ಷಸರ ಹಾಗೆ ಕರ್ಕಶ ಧ್ವನಿಯಿಂದ ಮೊರೆಯುತ್ತಿದ್ದವು ಗಾಳಿಯಲ್ಲಿ ಹೊಡೆದುಕೊಂಡು ಹೋಗುತ್ತಿರುವ ವನವ್ಯೂಹಗಳು ಸರಂಧ್ರಗಳಾಗಿ ಕಾಣುತ್ತಿದ್ದವು.

೨೪. ದೈತ್ಯ, ಸುರ, ನಾಗ, ಮೊದಲಾದ ಆಕಾಶಚರರ ಪುರಮಂಡಲಗಳ ಗುಂಪುಗುಂಪುಗಳನ್ನು ಧರಿಸಿರುವ ಆಕಾಶದಲ್ಲಿ ಅವು ಸೊಳ್ಳೆಗಳ ಗುಂಪುಗಳಂತೆ ಕಾಣಿಸುತ್ತಿದ್ದವು

ನಶ್ಯನ್ನಗವರಾಭೋಗೈರ್ಭಾಗಭಗ್ನೈರ್ಗ್ನಸುರಾಲಯೈಃ ।
ಆವರ್ತಘೊರ್ಘರಾರಾವೈರ್ಜಲಮೂರ್ಧ್ವಮಧೋನಲಂ ॥ ೨೫ ॥

ಕುರ್ವಜ್ಜ್ವಾಲಾದ್ರಿನಿಷ್ಪೇಷೈರ್ದಿಕ್ಪಾಲಪುರಕುಟ್ಟನಂ ।
ನಿಪತದ್ದೇವದೈತ್ಯೇಂದ್ರಸಿದ್ಧಗಂಧರ್ವಪತ್ತನಂ ॥ ೨೬ ॥

ಕುಟ್ಟನಂ ಪರ್ವತಾದೀನಾಂ ಪ್ರಶಾಂತಾಂಗಾರರೂಪಿಣಾಂ ।
ವಾತೈಃ ಕುರ್ವತ್ಪದಾರ್ಥಾನಾಮಸಾರಂ ರಜಸಾಮಿವ ॥ ೨೭ ॥

ಪುರಾಣ್ಯಮರದೈತ್ಯಾನಾಂ ಭ್ರಮದ್ಭಿತ್ತೀನಿ ಶಾತಯತ್ ।
ರತ್ನೈಃ ಖಣಖಣಾಯಂತಿ ಪಯಾಂಸೀವ ಪಯಸ್ವತಾಂ ॥ ೨೮ ॥

ಪೂರ್ಣಾಂಬರಂ ಪತಲ್ಲೋಕಲೋಕಸಪ್ತಕಮಂದಿರೈಃ ।
ಚಕ್ರಾವೃತ್ತ್ಯಾ ಭ್ರಮದ್ರೂಪೈರಮರೈಃ ಸಾಗರೈರಿವ ॥ ೨೯ ॥

---

೨೫. ನಾಶವಾಗುತ್ತಿರುವ ವಿಶಾಲ ನಗರಗಳಿಂದಲೂ, ಭಾಗಭಾಗವಾಗಿ ಭಗ್ನವಾಗುತ್ತಿರುವ ಸುರಾಲಯಗಳಿಂದಲೂ ಸುಳಿ ಸುತ್ತುತ್ತ ಭಯಂಕರವಾದ ಧ್ವನಿ ಮಾಡುತ್ತಿರುವ (ವೃಷ್ಟಿ) ಜಲವು ಮೇಲೆ ಸುರಿಯುತ್ತಿದ್ದರೂ ಕೆಳಗೆ ಸುಡುತ್ತಿರುವ ಪ್ರಲಯಾಗ್ನಿಯು ಕಾಣುತ್ತಿತ್ತು.

೨೬. ಆ ಪ್ರಲಯ ವೃಷ್ಟಿಯು ಬೆಟ್ಟಗಳನ್ನೂ ಅರೆದು ಬಿಡುವಷ್ಟು ಬಲವಾಗಿತ್ತು: ದಿಕ್ಪಾಲಕರ ಪಟ್ಟಣಗಳನ್ನು ಕುಟ್ಟುವುದೆಂಬಂತಿತ್ತು. ದೇವ ದೈತ್ಯ ಇಂದ್ರ ಸಿದ್ಧ ಗಂಧರ್ವ ಪತ್ತನಗಳು ಬೀಳುತ್ತಿದ್ದುವು.

೨೭. ಬೆಂಕಿಯು ಆರಿ ಇಜ್ಜಲಾಗಿರುವ ಪರ್ವತಾದಿಗಳನ್ನೆಲ್ಲ ಕುಟ್ಟಿ, ಪದಾರ್ಥಗಳನ್ನೆಲ್ಲ ಸಾರವಿಲ್ಲದ ಧೂಳುಮಾಡಿ ಗಾಳಿಗೆ ಎರಚುವಂತಿತ್ತು.

೨೮. ಅಮರ ಅಸುರರ ಪುರಗಳು ಸುತ್ತುತ್ತಿರಲು ಆ ನಗರಗಳ ಭಿತ್ತಿಗಳು ತೆಳುವಾಗಿ ರತ್ನಗಳನ್ನು ಮೇಘಗಳು ನೀರು ಚೆಲ್ಲುವಂತೆ ಚೆಲ್ಲುತ್ತಿರಲು, ಅವು ಖಣ ಖಣ ಎಂದು ಉದುರುವುವು.

೨೯. ಸಪ್ತಲೋಕಗಳಲ್ಲಿರುವ ಮಂದಿರಗಳೆಲ್ಲವೂ ಬೀಳುತ್ತಿರಲು, ಅವುಗ

ಡೀನೋಡ್ಡೀನೈಃ ಪರಿವೃತಂ ವಿಚಲದ್ವಾತವೇಲ್ಲಿತೈಃ ।
ದಗ್ಧಾದಗ್ಧೈಃ ಪದಾರ್ಥೈಃ ಖೇ ಶೀರ್ಣಪರ್ಣಗಣೈರಿವ ॥ ೩೦ ॥

ಹೇಮಸ್ಫಟಿಕವೈದೂರ್ಯಸುಸಾರಮಣಿಮಂದಿರೈಃ ।
ದಿವಃ ಪತದ್ಭಿರಾಕೀರ್ಣಮುದ್ಯಜ್ಝುಣಝುಣಸ್ವನೈಃ ॥ ೩೧ ॥

ಉತ್ಪೇತುರ್ಧೂಮಭಸ್ಮಾಬ್ದಾಃ ಪೇತುರ್ವಾರಾ ಪುರೋತ್ಕರಾಃ ।
ಉನ್ಮಮಮಜ್ಜುಸ್ತರಂಗೌಘಾ ಮಮುಜ್ಜುರ್ಭೂತಲಾದ್ರಯಃ ॥ ೩೨ ।

ಆವರ್ತಘರ್ಘರಾರಾವಾ ಮಿಥೋ ವಿದಲನೋದ್ಯತಾಃ ।
ಜುಘೂರ್ಣುರರ್ಣವಾಕೀರ್ಣಪರ್ಣವತ್ಪ್ರೌಢಪರ್ವತಾಃ ॥ ೩೩ ॥

ಕ್ರಂದಚ್ಛಿಷ್ಟಾಮರಗಣಂ ಚಲತ್ಸಜ್ಜೀವಭೂತಕಂ ।
ಭ್ರಮತ್ಕೇತುಶತೋತ್ಪಾತಂ ದುಷ್ಪ್ರೇಕ್ಷ್ಯಮಭವಜ್ಜಗತ್ ॥ ೩೪ ॥

---

ಳಿಂದ ಪೂರ್ಣವಾಗಿರುವ ಆಕಾಶವು, ಆವು ಚಕ್ರಗಳಂತೆ ಸುತ್ತುತ್ತಿರಲು, ಸುಳಿಗಳಾಗಿ ಸುತ್ತುತ್ತಿರುವ ಸಾಗರಗಳಂತೆ ಇತ್ತು (?)

೩೦. ಬೀಸುತ್ತಿರುವ ಗಾಳಿಯು ಹೊತ್ತು ತಂದಿರುವ ದಗ್ಧಾದಗ್ಧ ಪದಾರ್ಥಗಳು ಹಾರಾಡುತ್ತಿರಲು ಆಕಾಶವು ತರಗೆಲೆಗಳಿಂದ ತುಂಬಿದಂತಿತ್ತು.

೩೧ ಹೇಮ, ಸ್ಫಟಿಕ, ವೈದೂರ್ಯ, ಮೊದಲಾದ ಸಾರವತ್ತಾದ ಮಣಿಗಳಿಂದ ಆದ ಮಂದಿರಗಳು ಮುರಿದು ಬೀಳುತ್ತಿರಲು ಆಕಾಶವೂ ಅವುಗಳ ಝಣಝಣತ್ಕಾರಗಳಿಂದ ತುಂಬಿಹೋದಂತಿತ್ತು.

೩೨. ಹೊಗೆಯೂ ಬೂದಿಯೂ ಮೋಡಗಳಂತೆ ಏಳುತ್ತಿದ್ದುವು. ಮಳೆಯು ಪುರಪುರಗಳನ್ನು ಕೆಡವುತ್ತಿತ್ತು. ತರಂಗ ಗಣಗಳು ಎಲ್ಲವನ್ನೂ ಮುಳುಗಿಸಿದುವು ಭೂಮಿಯಲ್ಲಿದ್ದ ಬೆಟ್ಟಗಳೆಲ್ಲವೂ ಮುಳುಗಿ ಹೋದುವು.

೩೩. ಘರ್ಘರ ಶಬ್ದಗಳು ಸುತ್ತಿಸುತ್ತಿಕೊಂಡು ಬರುತ್ತಾ ಒಂದನ್ನೊಂದು ಸೀಳಬೇಕೆಂದಿವೆಯೋ ಎಂಬಂತಿತ್ತು ದೊಡ್ಡ ದೊಡ್ಡ ಪರ್ವತಗಳು ತರಗೆಲೆಗಳಂತೆ ತುಂಬಿ ಹೋಗಿರುವ ಸಮುದ್ರಗಳು ಘೂರ್ಣಿಸುತ್ತಿದ್ದುವು

೩೪ ನಾಶವಾಗದೆ ಉಳಿದಿದ್ದ ಅಮರ ಗಣವು ಅಳುತ್ತಿತ್ತು. ಇನ್ನೂ ಕೊಂಚ

ವೃತಾರ್ಧವೃತಯಾ ಭೂತಸಂತತ್ಯಾನಿಲಲೋಲಯಾ ।
ಅಭೂನ್ನಿರಂಧ್ರಮಾಕಾಶಂ ಜೀರ್ಣಪರ್ಣಸವರ್ಣಯಾ ॥ ೩೫ ॥

ಜಗದಾಸೀತ್ಪತಚ್ಛೃಂಗಸ್ಥೂಲಧಾರೌಘನಿರ್ಭರಂ ।
ವಹದ್ವಹದ್ಗಿರಿಪುರವ್ರಾತಪೂರ್ವಸರಿಚ್ಛತಂ ॥ ೩೬ ॥

ಶಾಮ್ಯಚ್ಛಮಶಮಾಶಬ್ದಶತಶಾಖಹುತಾಶಂ ।
ಚಲಾಬ್ಧಿವಲನಾಂದೋಲಲೋಲಶೈಲಲಸತ್ತಟಂ ॥ ೩೭ ॥

ತೃಣರಾಶಿಸರಿನ್ನ್ಯಾಯಮಿಶ್ರದ್ವೀಪಾರ್ಣವೋತ್ಕಟಂ ।
ಅತ್ಯಂತದೂರಚಿದ್ವ್ಯೋಮಕ್ಷಣಜ್ವಾಲಾಸಹಾವನಂ ॥ ೩೮ ॥

---

ಜೀವವು ಹತ್ತಿಕೊಂಡಿದ್ದ ಪ್ರಾಣಿಗಳು ಸುಳಿದಾಡುತ್ತಿದ್ದವು. ಸುತ್ತುತ್ತಿರುವ ಧೂಮ ಕೇತುಗಳು ನೂರಾರು ಬಿದ್ದು ಉತ್ಪಾತಗಳಾಗುತ್ತಿದ್ದುವು. ಹೀಗಾಗಿ ಜಗತ್ತು ನೋಡುವುದಕ್ಕೆ ಅಸಾಧ್ಯವಾಗಿಹೋಗಿತ್ತು.

೩೫. ವೃತಗಳೂ ಅರ್ಧವೃತಗಳೂ ಆಗಿರುವ ಭೂತಸಂತತಿಗಳು ಜೀರ್ಣ ಪರ್ಣಗಳಂತೆ ಗಾಳಿಯಲ್ಲಿ ಹಾರಾಡುತ್ತಿರಲು, ಆಕಾಶವು ಎಡೆಬಿಡದಂತೆ ತುಂಬಿತ್ತು.

೩೬. ಒಂದೊಂದು ಪರ್ವತ ಶೃಂಗದಷ್ಟು ಸ್ಥೂಲವಾಗಿ ಬೀಳುತ್ತಿರುವ ವೃಷ್ಟಿ ಬಿಂದುಗಳಿಂದ ಎಲ್ಲವೂ ಕದಲಿ ಹೋಗಿ, ಗಿರಿ ಪುರಗಳು ಗುಂಪುಗುಂಪಾಗಿ ತೇಲಿಕೊಂಡು ಬರುತ್ತಿರುವ ನದಿಗಳು ಜಗತ್ತಿನಲ್ಲೆಲ್ಲಾ ತುಂಬಿಹೋದುವು.

೩೭. ಪ್ರಲಯಾಗ್ನಿಯೂ ಕೂಡ (ಆ ವೃಷ್ಟಿಯಲ್ಲಿ) ಶಮ ಶಮ ಎಂದು ಶಬ್ದ ಮಾಡುತ್ತ ಆರಿಹೋಯಿತು. ಸಮುದ್ರವು ಮುಂದೆ ನುಗ್ಗುತ್ತಿರಲು ಶೈಲಶೈಲಗಳು ಅದರಲ್ಲಿ ಹೊರಳಾಡುತ್ತಿದ್ದುವು

೩೮. ತೃಣರಾಶಿ ಸರಿನ್ನ್ಯಾಯದಿಂದ ದ್ವೀಪಗಳು ಅರ್ಣವಗಳಲ್ಲಿ ತೇಲಿ ಹೋದುವು ಅತ್ಯಂತ ದೂರವಾದ ಚಿದ್ವ್ಯೋಮದಲ್ಲಿ (ಜ್ಞಾನಾಗ್ನಿಯ) ಜ್ವಾಲೆ ಯನ್ನು ಸಹಿಸಲಾರದ ಜಗತ್ ಸ್ಥಿತಿಯು ಹೀಗೆ ನಾಶವಾಗಲು ಬಹುಕಾಲವನ್ನು ಹಿಡಿಯಿತು.

ವರ್ಷಶಾಮ್ಯದ್ಧುತಾಶೋತ್ಥಭಸ್ಮಾಮೋದಪತತ್ಸುರಂ ।
ಭೂತಪೂರ್ವಜಗದ್ಭೂತಂ ಪರಿವಿಸ್ಮೃತಸರ್ಗಕಂ　　॥ ೩೯ ॥

ನಿರರ್ಗಲೋಲ್ಲಸನ್ನಾದಂ ಸರ್ಗಲೋಪಶಮಕ್ರಮಂ ।
ಸರ್ಗಲೋಪೋಲ್ಲಸಚ್ಛೇಷಂ ಸರ್ಗಲೋಪವಿವರ್ಜಿತಂ　　॥ ೪೦ ॥

ಅನಾರತವಿಪರ್ಯಾಸಕಾರಿಮಾರುತನಿರ್ವೃತಂ ।
ಬೀಜರಾಶಿರಿವಾಜಸ್ರಂ ಪೂರ್ಯಮಾಣಂ ಪುನಃ ಪುನಃ　　॥ ೪೧ ॥

ಉಲ್ಮುಕಾನ್ಯೋನ್ಯನಿಷ್ಪೇಷವಹ್ನಿಚೂರ್ಣಸುವರ್ಣಜೈಃ ।
ರಜೋಭಿರ್ವಿವೃತೈರ್ಹೇಮಕುಟ್ಟಿಮಾಕಾಶಕೋಟರಂ　　॥ ೪೨ ॥

---

(ತತ್ವಜ್ಞಾನೇದ್ಧಚಿದ್ವ್ಯೋಮ ಕ್ಷಣದಾಹ್ಯಸ್ಯಾಸ್ಯ ಜಗತಃ ಪ್ರಲಯೋ ಚಿರೇಣ ನಾಶೋ ನಾಶ್ಚರ್ಯ ಪದಮಿತ್ಯಾಶಯೇನಾಹ–ಅತ್ಯಂತೇತಿ। ತತ್ವಜ್ಞಾನ ದೌರ್ಲಭ್ಯ ದ್ಯೋತನಾಯಾತ್ಯಂತ ದೂರೇತ್ಯುಕ್ತಿಃ। ಚಿದ್ವ್ಯೋಮ್ನಿ ಕ್ಷಣಜ್ವಾಲಾಂ ನ ಸಹತೇ ತಥಾ ವಿಧ ಮವನಂ ಸ್ಥಿತಿರ್ಯಸ್ಯ—ತಾ. ಪ್ರ.)

೩೯. ವರ್ಷದಿಂದ ಶಾಂತವಾಗಿರುವ ಅಗ್ನಿಯಿಂದ ದಿಕ್ಕು ದಿಕ್ಕುಗಳಲ್ಲಿ ಹುಟ್ಟಿರುವ ಅದ್ಭುತವಾದ ಭಸ್ಮಾಮೋದವೂ ಸುರರನ್ನು ಉರುಳಿಸುತ್ತಿತ್ತು. ಜಗತ್ತು ಭೂತಪೂರ್ವವಾಗಿ, ಈಗಿಲ್ಲವಾಗಿ, ಹಿಂದೆ ಇತ್ತೇ ಎಂದು ಮರೆತೂ ಹೋಗುವ ಮಟ್ಟಿಗೆ ಸೃಷ್ಟಿಯಾಯಿತು

೪೦ ಅಡ್ಡಿಯಿಲ್ಲದೆ ನಾದವು ಹರಡಿತು ಸರ್ಗವು ನಾಶವಾಗುವ ಕ್ರಮವು ಮುಗಿಯಿತು ಸರ್ಗಲೋಪವಾದ ಮೇಲೆ ಉಳಿಯುವ ಸರ್ವ ಶೇಷವು ತಾನೇ ತಾನಾಯಿತು. ಸರ್ಗವು ಲೋಪವಾಗಿದ್ದರೂ ಲೋಪವಾಯಿತು ಎನ್ನಿಸಲಿಲ್ಲ

೪೧. ಒಂದೇ ಸಮನಾಗಿ ಬದಲಾವಣೆಮಾಡುತ್ತಲೇ ಇರುವ ಮಾರುತವು ಶಾಂತವಾದರೂ, ಬೀಜರಾಶಿಗಳಂತೆ (ಬ್ರಹ್ಮಾಂಡವು) ಮತ್ತೆ ಮತ್ತೆ ಪೂರ್ಣವಾಗುತ್ತಲೇ ಇತ್ತು.

೪೨ ಉಲ್ಮುಕಗಳು ಒಂದಕ್ಕೊಂದು ತಾಕಿ ಪುಡಿಪುಡಿಯಾಗಿ ಅಗ್ನಿಚೂರ್ಣ

ಭೂಮಂಡಲಬೃಹತ್ಖಂಡೈರ್ಭ್ರಷ್ಟೈಃ ಸದ್ವೀಪಸಾಗರೈಃ ।
ಪೂರ್ಣಸಪ್ತಮಪಾತಾಲಂ ಲುಠತ್ಪಾತಾಲಮಂಡಲೈಃ ॥ ೪೩ ॥

ಆಸಪ್ತಮಸುತಾಲಾಂತಮಾಮಹೀತಲಪರ್ವತಂ ।
ಆವ್ಯೋಮ್ನೈಕಾರ್ಣವೀಭೂತಂ ಪೂರ್ಣಂ ಪ್ರಲಯವಾಯುಭಿಃ ॥ ೪೪ ॥

ಏಕಾರ್ಣವೋಽಥ ವವೃಧೇ ಶನೈಃ ಶೀಘ್ರಂ ಸರಿಚ್ಛತೈಃ ।
ಭುವನೇ ಜಲಕಲ್ಲೋಲೈಃ ಕೋಪೋ ಮೂರ್ಖಾಶಯೇ ಯಥಾ ॥ ೪೫ ॥

ಮುಸಲೋಪಮಯಾ ಪೂರ್ವಂ ತತಃ ಸ್ತಂಭನಿಭಾಂಗಯಾ ।
ತತಸ್ತಾಲದ್ರುಮಾಕಾರಧಾರಯಾಸಾರಸಾರಯಾ ॥ ೪೬ ॥

---

ವನ್ನು ಎಸೆಯಲು ಅದು ಚಿನ್ನದ ಧೂಳು ಎರಚಿದಂತಿತ್ತು. ಆ ಧೂಳು ಆಕಾಶ ಕೋಟರವನ್ನೆಲ್ಲಾ ವ್ಯಾಪಿಸಿತ್ತು.

೪೩. ಭೂಮಂಡಲದಂತಹ ಬೃಹತ್ಖಂಡಗಳಿಂದ ಜಾರಿರುವ ದ್ವೀಪಸಾಗರಗಳು ಸಪ್ತಮಪಾತಾಲ ಲೋಕವನ್ನು ತುಂಬಿದುವು. ಅಲ್ಲಿ ಮಿಕ್ಕ ಪಾತಾಲಗಳೂ ಬಂದು ಬಿದ್ದು ಒದ್ದಾಡುತ್ತಿದ್ದುವು.

೪೪. ಸಪ್ತಮ ಪಾತಾಲವಾದ ಸುತಲದಿಂದ ಹಿಡಿದು ಭೂಮಿಯಲ್ಲಿರುವ ಪರ್ವತದವರೆಗೂ ಆಕಾಶ ಸಾಗರವಾಗಿ ಹೋಯಿತು ಪ್ರಲಯ ವಾಯುಗಳು ಅದನ್ನೂ ತುಂಬಿದ್ದುವು.

೪೫ ಆ ಏಕಾರ್ಣವವು ಮತ್ತೆ ನೂರಾರು ನದಿಗಳಿಂದ ಕ್ರಮವಾಗಿ ಬೇಗ ಬೇಗ ತುಂಬಿತು. ಮೂರ್ಖರ ಹೃದಯದಲ್ಲಿ ಕೋಪವು ಬೆಳೆಯುವಂತೆ, ಭುವನ ದಲ್ಲಿ ಜಲಕಲ್ಲೋಲಗಳಿಂದ ಬೆಳೆದು ತಾನೇ ತಾನಾಯಿತು.

೪೬ ಮೊದಲು ಮಳೆಯ ಹನಿಗಳು ಒನಕೆಗಳಂತೆ ಇದ್ದುವು. ಆ ಮೇಲೆ ಕಂಭಗಳಷ್ಟು ಗಾತ್ರವಾದವು ಅನಂತರ ತಾಲವೃಕ್ಷಗಳಂತೆ ಆದುವು. ಮಳೆಯ ಸಾರವೇ ಈ ರೂಪವಾಗಿ ಇಳಿಯುತ್ತಿದೆಯೋ ಎಂಬಂತಿತ್ತು.

ತತೋ ನದೀಪ್ರವಾಹೋಗ್ರಜಲಪಾತೈಕಪಾತಯಾ ।
ಸಪ್ತದ್ವೀಪಮಹೀಪೀಠಸಮಮೇದುರಮೇಘಯಾ　　　　॥ ೪೭ ॥

ವಹ್ನಿರ್ವಿದಾಹಕೃದ್ವೃಷ್ಟ್ಯಾ ಶಮಮಭ್ಯಾಯಯೌ ತಥಾ ।
ಶಾಸ್ತ್ರಸಜ್ಜನಸಂಗತ್ಯಾ ಗಾಢಮಾಪತ್ಪದಂ ಯಥಾ　　　　॥ ೪೮ ॥

ಊರ್ಧ್ವಾಧರಸ್ಥಪರಿವೃತ್ತಪದಾರ್ಥಜಾತ-
ಮಂತಃಕಣೈಃ ಖಣಖಣಾಯಿತಶೈಲಮಜ್ಜಂ ।
ಬ್ರಹ್ಮಾಂಡಕೋಟರಮಭೂದ್ವಿಧುರಂ ಕುಬಾಲ-
ಲೀಲಾವಿಲೋಲಮಿವ ಬಿಲ್ವಫಲಂ ವಿಶುದ್ಧಂ　　　　॥ ೪೯ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಪುಷ್ಕರಾವರ್ತವೃಷ್ಟಿವಿಸಂಷ್ಠುಲಜಗದ್ವರ್ಣನಂ" ನಾಮ ಸಪ್ತಸಪ್ತತಿತಮಃ ಸರ್ಗಃ**

---

೪೭. ಅನಂತರ, ನದೀ ಪ್ರವಾಹಗಳು ಉಗ್ರಜಲಪಾತಗಳೂ, ಎಲ್ಲವನ್ನೂ ಬೀಳಿಸುತ್ತ, ನಡೆದುವು. ಸಪ್ತ ದ್ವೀಪವಾದ ಮಹೀಪೀಠವನ್ನೂ ಆಕ್ರಮಿಸುವ ಮೇಘಗಳಿಂದ ತುಂಬಿಹೋಯಿತು

೪೮. ವಿದಾಹವನ್ನು ಮಾಡುವ ವೃಷ್ಟಿಯಿಂದ ಅಗ್ನಿಯು ಶಾಂತವಾಯಿತು. ಶಾಸ್ತ್ರ ಸಜ್ಜನ ಸಂಗತಿಗಳಿಂದ ದುಃಖ ಶತಗಳಿಂದ ಗಾಢವಾದ, ಅಹಂಕಾರವನ್ನು ಬೆಳೆಸುವ ಅಜ್ಞಾನವು ಶಾಂತವಾಗುವ ಹಾಗೆ ಆಯಿತು.

೪೯. ಮೇಲೆ, ಕೆಳಗೆ, ಸುತ್ತಲೂ ಇದ್ದ ಪದಾರ್ಥ ಜಾತವೆಲ್ಲವೂ ಕಣ ಕಣಗಳಾಗಿ ಹೋದುವು ಶೈಲವೆಂಬ ಬ್ರಹ್ಮಾಂಡ ಮಜ್ಜೆಯು ಖಣ ಖಣ ಎಂಬಂತೆ ಆಗಿ ಹೋಯಿತು ಬ್ರಹ್ಮಾಂಡ ಕೋಟರವು, ಕೆಟ್ಟ ಹುಡುಗರ ಆಟಕ್ಕೆ ಚೂರು ಚೂರಾಗಿ ಹೋದ ಶುದ್ಧವಾದ ಬಿಲ್ವಫಲದಂತೆ ಆಗಿ ಹೋಯಿತು.

**ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಪುಷ್ಕರಾವರ್ತವೃಷ್ಟಿವಿಸಂಷ್ಠುಲಜಗದ್ವರ್ಣನ" ಎಂಬ ಎಪ್ಪತ್ತೇಳನೆಯ ಸರ್ಗವು.**

# ಅಷ್ಟಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ವಾತವರ್ಷಹಿಮೋತ್ಪಾತಪಾತಭಗ್ನೇ ಧರಾತಲೇ ।
ಜಡವೇಗೋಽಗಮದ್ವೃದ್ಧಿಂ ಕಲಾವಿವ ಮಹೀಪತಿಃ ॥ ೧ ॥

ಗಂಗಾಪ್ರವಾಹಪತಿತಧಾರಾಪಾತವಿವರ್ಧಿತಃ ।
ಸರಿತ್ಸಹಸ್ರೈಃ ಸಹಸಾ ಮೇರುಮಂದರಘಾಸುರೈಃ ॥ ೨ ॥

ಆದಿತ್ಯಪಥಸಂಪ್ರಾಪ್ತಕಂದರೋ ಜಡಮಂಥರಃ ।
ಏಕಾರ್ಣವಃ ಸಮುಚ್ಛೂನ ಆಸೀನ್ಮೂರ್ಖ ಇವೇಶ್ವರಃ ॥ ೩ ॥

---

# ಎಪ್ಪತ್ತೆಂಟನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ವಾತ, ವರ್ಷ, ಹಿಮ, ಉತ್ಪಾತಪಾತಗಳಿಂದ ಭಗ್ನವಾದ ಧರಾತಲದಲ್ಲಿ, ಕಲಿಯಲ್ಲಿ ಮಹೀಪತಿಗಳು ಹೆಚ್ಚಿಕೊಳ್ಳುವಂತೆ, ಜಡ (ಲ) ವೇಗವು ವೃದ್ಧಿಯನ್ನು ಹೊಂದಿತು

೨ ಗಂಗಾ ಪ್ರವಾಹದಂತೆ ಬೀಳುತ್ತಿರುವ ಧಾರೆಗಳಿಂದ ಆ ಪ್ರಲಯಾರ್ಣವವು ಬೆಳೆಯಿತು. ಮೇರು ಮಂದರಗಳಂತಹ ಅಲೆಗಳನ್ನು ಮೆರೆಯುತ್ತಾ ಸಾವಿರಾರು ನದಿಗಳಿಂದ ಥಟ್ಟನೆ ಬೆಳೆಯಿತು

೩. ಆದಿತ್ಯನ ಮಾರ್ಗವನ್ನು ಆ ಬೆಟ್ಟದಂತಹ ತಡೆಯುವ ಮಟ್ಟಿಗೆ ಜಲದ ಪ್ರಭಾವವು ಹೆಚ್ಚಿತು. ಮೂರ್ಖನು ಒಡೆಯನಾದರೆ ಆಗುವಂತೆ, ಏಕಾರ್ಣವವು ತಾನೇ ತಾನಾಯಿತು.

ವಿಪುಲಾವರ್ತವೃತ್ತಾತ್ಯುತ್ತವಿವೃತ್ತಾದ್ರಿಜರತ್ತೃಣಃ ।
ಸ್ಫುರತ್ತುಂಗತರಂಗಾಗ್ರನಿಗೀರ್ಣಾದಿತ್ಯಮಂಡಲಃ ॥ ೪ ॥

ಮೇರುಮಂದರಕೈಲಾಸವಿಂಧ್ಯಸಹ್ಯಜಲೇಚರಃ ।
ಗಲಿತಾವನಿಪಂಕಾಂತರ್ಲೀನವ್ಯಾಲಮೃಣಾಲಕಃ ॥ ೫ ॥

ಅರ್ಧದಗ್ಧದ್ರುಮವನವ್ಯೂಹಶೈವಲಸಂಕಟಃ ।
ತ್ರೈಲೋಕ್ಯಭಸ್ಮಸಂಪೃಷ್ಟ ಆಸೀತ್ಕರ್ದಮಕುತ್ಸಿತಃ ॥ ೬ ॥

ನಭಃಸ್ತಂಭಬೃಹದ್ಧಾನೋತ್ತಾಲಭಾಸ್ಕರಪುಷ್ಕರಃ ।
ಧಾರಾಜಾಲಮಹಾಂಭೋದವಿಲೀನನಲಿನೀದಲಃ ॥ ೭ ॥

ಡಿಂಡೀರಪರ್ವತವ್ರಾಂತನದದುನ್ಮತ್ತವಾರಿದಃ ।
ಭ್ರಮದಿಂದ್ರಾನಿಲಾರ್ಕೇಂದುಪುರಪತ್ತನಪೂರಣೈಃ ॥ ೮ ॥

---

೪ ವಿಸ್ತಾರವಾಗಿರುವ ಸುಳಿಗಳು ಬೆಟ್ಟಗಳನ್ನು ಜರತ್ತೃಣಗಳಂತೆ ತಿರ್ರನೆ ತಿರುಗಿಸುತ್ತಿದ್ದುವು. ಏರುತ್ತಿರುವ ಅರ್ಣವದ ಬೆಟ್ಟದಂತಹ ಅಲೆಗಳು ಆದಿತ್ಯ ಮಂಡಲವನ್ನು ತುಡುಕಿದುವು.

೫ ಮೇರು ಮಂದರ ಕೈಲಾಸ ವಿಂಧ್ಯ ಸಹ್ಯಗಳಂತಿರುವ ಜಲಚರಗಳು ಆ ಸಮುದ್ರದಲ್ಲಿ ತುಂಬಿದುವು. ಅವನಿಯು ಗಲಿತವಾಗಿ ಹೋಗಿ ಕೆಸರಾಯಿತು : ಅಲ್ಲಿ ಶೇಷಾದಿ ಸರ್ಪರಾಜರೆಲ್ಲರೂ ಮೃಣಾಲ (ತಾವರೆಯ ದಂಟು) ಗಳಂತೆ ಆದರು.

೬ ಅರ್ಧದಗ್ಧವಾಗಿರುವ ಮರಗಳ ಕಾಡುಗಳು ಗುಂಪು ಕಟ್ಟಿಕೊಂಡು ತೇಲುತ್ತಿದ್ದರೆ ಪಾಚಿಯಿದ್ದಂತಿತ್ತು. ಸುಟ್ಟು ಹೋದ ಜಗತ್ತ್ರಯಗಳ ಭಸ್ಮವು ಕುತ್ಸಿತವಾದ ಕರ್ದಮ (ಗಂಧ) ದಂತೆ ಇತ್ತು.

೭. ಆಕಾಶ ಸ್ತಂಭಗಳು ಭಾರಿಯ ಕರ್ಣಿಕೆಯನ್ನು ಎತ್ತಿ ಹಿಡಿದಿದ್ದುವು. ಆ ನಾಲಗಳ ಮೇಲೆ ಭಾಸ್ಕರರೆಂಬ ಕಮಲಗಳು ಅರಳಿದ್ದುವು ಆ ಮಹಾ ಮೇಘ ಗಳ ಮಹಾಧಾರಾಜಲಗಳಿಂದ ಆ ಕಮಲಗಳ ದಳಗಳೆಲ್ಲವೂ ಉದುರಿ ಹೋಗಿದ್ದವು

೮. ನೊರೆಯು ಪರ್ವತದಂತಿರಲು, ಅದರ ಮೊಗ್ಗುಲಲ್ಲಿ ಉನ್ಮತ್ತ ಮೇಘ

ಕಾಷ್ಠವತ್ಪ್ರೋಹ್ಯಮಾಣೋಗ್ರಸುರಾಸುರಜನೋತ್ಕರಃ ।
ಶನೈಃ ಕ್ರಮೋಚ್ಛೂನತಯಾ ಲಿಹನ್ನಾದಿತ್ಯಮಂಡಲಂ ॥ ೯ ॥

ತರತ್ತಾರತರಾರಾವಧಾರಾಧರಸಮುದ್ಭವೈಃ ।
ಬುದ್ಬುದೈಃ ಪರಿಸಂದಿಗ್ಧಪ್ರೋಹ್ಯಮಾಣಮಹಾಚಲಃ ॥ ೧೦ ॥

ಭ್ರಮದ್ಬುದ್ಬುದವಿಶ್ರಾಂತಭ್ರಾಂತಕಲ್ಪಾಂತವಾರಿದಃ ।
ಉತ್ತಾಲೈಸ್ತೈರನಾಧಾರೈಃ ಪಶ್ಯನ್ನಪರವಾರಿದಂ ॥ ೧೧ ॥

ಮಹಾಪ್ರವಾಹವಾರ್ಯೋಘಘೋಷಘುಂಘುಮಿತಾಂಬರಃ ।
ಏಕಪ್ರವಾಹಮಹಿತಸವ್ಯೋಮಕುಲಪರ್ವತಃ ॥ ೧೨ ॥

---

ಗಳು ಮೊರೆಯುತ್ತಿದ್ದವು ಇಂದ್ರ, ಅಗ್ನಿ, ಸೂರ್ಯ, ಚಂದ್ರರ ಪುರಪತ್ತನಗಳು ತೇಲಿಕೊಂಡು ಹೋಗುತ್ತಿದ್ದವು

೯. ಆಗ ಉಗ್ರ ಸುರಾಸರ ಗುಂಪುಗುಂಪುಗಳು ಕಡ್ಡಿಗಳಂತೆ ಕೊಚ್ಚಿ ಹೋಗುತ್ತಿದ್ದವು. ಪ್ರವಾಹವು ಹೆಚ್ಚು ಹೆಚ್ಚುತ್ತಾ ಬಂದು ಆದಿತ್ಯಮಂಡಲವನ್ನು ನೆಕ್ಕುವ ಮಟ್ಟಿಗಾಯಿತು.

೧೦ ಧಾರಾಧರಗಳು ತಾರಸ್ವರದಿಂದ ಮೊರೆಯುತ್ತಿದ್ದವು ಪರ್ವತಗಳು ಕೊಚ್ಚಿಹೋಗುತ್ತಿದ್ದರೆ ಗುಳ್ಳೆಗಳೋ ಎಂಬಂತಿತ್ತು

೧೧ ಅಲೆಯುತ್ತಿರುವ ಬುದ್ಬುದಗಳು (ಗುಳ್ಳೆಗಳು) ಪ್ರಲಯಮೇಘಗಳು ಭ್ರಾಂತಿಗೊಂಡು ಅಲ್ಲಿ ವಿಶ್ರಾಂತಿಗೆಂದು ನಿಲ್ಲುವಷ್ಟು ಭಾರಿಯಾಗಿದ್ದುವು ಆ ಬುದ್ಬುದಗಳು ಎತ್ತರವಾಗಿ ಅನಾಧಾರವಾಗಿದ್ದು, ಇವೂ ಒಂದು ಜಾತಿಯ ಮೋಡ ಗಳೋ ಎನ್ನುವಂತಿದ್ದವು.

(ಉತ್ತಾಲೈಃ ರಲಯೋರಭೇದಾದುದ್ಗತಾಸ್ತಾರಾಃ ಕನೀನಿಕಾ ಯೇಷಾಂತಥಾ ವಿಧೈಸ್ತೈಃ ಸಮೇಘೈ ಬುದ್ಬುದೈರನಾಧಾರೈಃ ಸ್ವಾಧಾರ ಮುಖಮಾತ್ರ ರಹಿತೈ ರ್ನೇತ್ರೈಃ ಅಪರಂ ಸನ್ನಿಹಿತಂವಾರಿದಂ ಪಶ್ಯ ಇತ್ಯುತ್ಪ್ರೇಕ್ಷಾ—ತಾ.ಪ್ರ)

೧೨. ಮಹಾಪ್ರವಾಹದ ಜಲಪೂರದಲ್ಲಿ ಆದ ಮಹಾ ಘೋಷದಿಂದ ಆಕಾಶವೆಲ್ಲವೂ ತುಂಬಿಹೋಯಿತು ತನ್ನನ್ನು ಬಳಿಸಿರುವ ವ್ಯೋಮದೊಡನೆ ಕುಲಪರ್ವತವು ಒಂದು ಪ್ರವಾಹದಲ್ಲಿ ಬಿದ್ದು ಹೋಯಿತು.

ಚಂಡವಾತಕೃತಾಪೂರ್ವಜಲೌಘೈಕುಲಪರ್ವತೈಃ ।
ಮಹಾಘುರಘುರಾರಾವಘೋರೋಗ್ರಮಹಾರಯಃ ॥ ೧೩ ॥

ಬ್ರಹ್ಮಾಂಡಖಂಡಸಂಘಟ್ಟಪರಾವೃತ್ತಿಭಿರುದ್ಧತಃ ।
ಕುರ್ವನ್ಯೋಜನಲಕ್ಷಾಣಿ ವಿತತಾನ್ಯುನ್ನತಾನಿ ಚ ॥ ೧೪ ॥

ತೃಣೈರಿವ ತರಂಗೇಷು ದೋಲಾಂದೋಲನಮದ್ರಿಭಿಃ ।
ಕುರ್ವದ್ಭಿರ ಪಲಾಘಾತಭಗ್ನಭಾಸ್ಕರಮಂಡಲಃ ॥ ೧೫ ॥

ಶೂನ್ಯಬ್ರಹ್ಮಾಂಡವಿಪುಲಜಲಘಾತಕುಲಾಯಕೇ ।
ನೀಲಾನಚಲಕಾಕೋಲಾಂಜಹ್ರನ್ಸಲಿಲಜಾಲಕೈಃ ॥ ೧೬ ॥

ಮೃತಾಮೃತಮಹದ್ಭೂತಮಜ್ಜನೋನ್ಮಜ್ಜನಾಕುಲಾನ್ ।
ತರಂಗಮಕರಾವರ್ತಪ್ರತಿಬಿಂಬಾನ್ವಿತಾನಿವ ॥ ೧೭ ॥

---

೧೩. ಚಂಡಮಾರುತನಿಂದ ಆದ ಅಪೂರ್ವವಾದ ಜಲೌಘವು ಕುಲಪರ್ವತಗಳಂತಿದ್ದವು. ಅವುಗಳಿಂದ ಹುಟ್ಟಿದ ಘುರ ಘುರ ಎಂಬ ಮಹಾಶಬ್ದವು ಮಹೋಗ್ರವಾಗಿತ್ತು.

೧೪. ಬ್ರಹ್ಮಾಂಡ ಖಂಡಗಳು ಒಂದಕ್ಕೊಂದು ಸಂಘಟ್ಟಿಸಿ ಹಿಂತಿರುಗುತ್ತಾ ನುತ್ತಲೂ ಮೇಲಕ್ಕೂ ಯೋಜನ ಲಕ್ಷಗಳಷ್ಟು ಹಾರುತ್ತಿದ್ದುವು

೧೫ ತರಂಗಗಳಲ್ಲಿ ತೃಣಗಳಂತೆ ಹಿಂದಕ್ಕೂ ಮುಂದಕ್ಕೂ ತೂಗುತ್ತಿರುವ ಪರ್ವತಗಳು ಒಂದಕ್ಕೊಂದು ತಗುಲಿದಾಗ ಹಾರಿದ ಕಲ್ಲಿನ ಚೂರುಗಳು ಆದಿತ್ಯ ಮಂಡಲಕ್ಕೆ ಹಾರಿ ಆ ಮಂಡಲವನ್ನು ಮುರಿದುವು.

೧೬. ಎಲ್ಲವೂ ಹೋಗಿ ಶೂನ್ಯವಾದ ಬ್ರಹ್ಮಾಂಡವನ್ನು ತುಂಬಿರುವ ಅಪಾರ ಜಲಪೂರವೆಂಬ ಗೂಡಿನಲ್ಲಿ ಕುಳಿತಿರುವ ಕಪ್ಪನೆಯ ದೊಂಬರ ಕಾಗೆಗಳನ್ನು ಹಿಡಿದು ನೀರೆಂಬ ಬಲೆಯು ಹಾಕಿ ಹೊತ್ತುಕೊಂಡು ಹೋಗುತ್ತಿರುವರೋ [ಎಂಬಂತೆ ಪರ್ವತಗಳು ಇದ್ದುವು.]

೧೭. ಮೃತವಾಗಿ ಮೃತಪ್ರಾಯುವಾಗಿರುವ ಮಹದ್ಭೂತಗಳೆಲ್ಲವೂ ಎದ್ದೆದ್ದು

ವೃತಶಿಷ್ಯಾನ್ಪುರಭ್ರಷ್ಟಾನ್ಫೇನಾದ್ರಿತಟಕೋಟಿಷು ।
ದಧಜ್ಜಲಬಲಶ್ರಾಂತಾಂಸ್ತ್ರಿದಶಾನ್ಮಶಕಾನಿವ ॥ ೧೮ ॥

ವಿಪುಲಾದ್ಯತನಾಕಾಶವಿಪುಲಾನಂಬುದ್ಬುದಾನ್ ।
ಸಹಸ್ರಸಂಖ್ಯಾನ್ಕಲಯನ್ಲ್ಲೋಚನಾನೀವ ವಾಸವಃ ॥ ೧೯ ॥

ಶರದ್ವ್ಯೋಮಸಮಾಭೋಗೈರ್ವಲದ್ಭಿರ್ಬುದ್ಬುದೇಕ್ಷಣೈಃ ।
ಪಶ್ಯನ್ನಿವ ನದೀಧಾರಾನ್ಮೇಘಾನಾತಾಮ್ರಪೂರಕಾನ್ ॥ ೨೦ ॥

ಪುಷ್ಕರಾವರ್ತಕಾಭ್ರಾಣಾಂ ಬಹುಭಿರ್ವೀಚಿಮಂಡಲೈಃ ।
ಕುರ್ವನ್ನಾಲಿಂಗನಾನೀವ ಸಪಕ್ಷಾದ್ರಿವದುತ್ಥಿತೈಃ ॥ ೨೧ ॥

---

ಮುಳುಗುತ್ತಾ ಆಕುಲಪಡುತ್ತಿರಲು ಅವುಗಳ ಪ್ರತಿಬಿಂಬಗಳನ್ನು ನೋಡಿ, ತರಂಗಗಳೆಂಬ ಮಕರಗಳು ಅವುಗಳನ್ನು ಹಿಡಿಯಲು ಸುತ್ತುತ್ತಿರುವುವೋ ಎಂಬಂತಿತ್ತು.

೧೮ ವ್ರತಶಿಷ್ಯರಾಗಿ, ಪುರಭ್ರಷ್ಟರಾಗಿ, ಫೇನಪರ್ವತಗಳ ತಟತಟಗಳಲ್ಲಿ ನೀರಿನಲ್ಲಿ ಒದ್ದಾಡಿ ಆಯಾಸಪಟ್ಟು ಸೇರಿಕೊಂಡಿರುವ ತ್ರಿದಶರೆಂಬ ಮಶಕಗಳು (ಒದ್ದಾಡುತ್ತಿದ್ದವು.)

೧೯. ವಿಪುಲವಾಗಿರುವ ಆಗಿನ ಆಕಾಶದಷ್ಟೇ ವಿಪುಲವಾಗಿ ಹರಡಿಕೊಂಡಿರುವ ಸಾವಿರಾರು ಮಹಾಮೇಘಗಳನ್ನು ನೋಡಲು, ಇಂದ್ರನಂತೆ ತಾನೂ ಕಣ್ಣುಗಳನ್ನು ಮಾಡಿಕೊಂಡು,

೨೦ ಶರತ್ಕಾಲದ ಮೇಘಗಳಂತೆ ವಿಪುಲವಾಗಿ ಅಲೆಯುತ್ತಿರುವ ಬುದ್ಬುದಗಳೆಂಬ ಕಣ್ಣುಗಳಿಂದ ನದಿಗಳನ್ನೇ ಧಾರೆಯಾಗಿ ಕರೆಯುತ್ತಿರುವ ಕೆಂಪು ಬಣ್ಣದ ಮೇಘಗಳನ್ನು ನೋಡುತ್ತಿರುವನೋ ಎಂಬಂತಿತ್ತು

೨೧. ರೆಕ್ಕೆಗಳುಳ್ಳ ಪರ್ವತಗಳಂತೆ ಹುಟ್ಟಿರುವ ಪುಷ್ಕರಾವರ್ತಕಗಳೆಂಬ ಮೇಘಗಳನ್ನು ಬಹುವಾಗಿರುವ ವೀಚಿಮಂಡಲಗಳಿಂದ ಸಮುದ್ರವು ಆಲಿಂಗನ ಮಾಡುತ್ತಿರುವನೋ ಎಂಬಂತಿತ್ತು.

ತ್ರಿಜಗದ್ಗ್ರಾಸಸಂತೃಪ್ತಃ ಪ್ರಗಾಯನ್ನಿವ ಘರ್ಘರೈಃ ।
ಸ್ವೈರನೃತ್ಯನ್ನಿವ ಚೋಗ್ರಾದ್ರಿಕಟಕೈರ್ವೀಚಿದೋರ್ದ್ರುಮೈಃ ॥ ೨೨ ॥

ನದೀಧಾರಾಧರೈರೂರ್ಧ್ವೇ ಮಧ್ಯೇ ದಗ್ಧೈರ್ಧರಾಧರೈಃ ।
ಅಧೋ ಧರಾಧರೈರ್ನಾಗೈರಧರಃ ಪಂಕಗೈರ್ವೃತಃ ॥ ೨೩ ॥

ಧಾರಾತ್ರಿಪಥಗಾಪೂರೈರ್ನಿಪತದ್ಭಿರ್ನಿರಂತರಂ ।
ಮಗ್ನೋನ್ಮಗ್ನೋಹ್ಯಮಾನಾದ್ರಿಶೃಂಗಡಿಂಡೀರಬುದ್ಬುದಃ ॥ ೨೪ ॥

ಉಹ್ಯಮಾನಸದಲತ್ಸ್ವರ್ಗಖಂಡಕ್ರಂದನ್ನಭಶ್ಚರಃ ।
ವಹದ್ವಿದ್ಯಾಧರೀವೃಂದಪದ್ಮಿನೀಸುಂದರಾಂತರಃ ॥ ೨೫ ॥

ಏಕಾರ್ಣವಪಯಃ ಪೂರೈರ್ಘರ್ಘರಾರಾವರಂಹಸಿ ।
ತ್ರೈಲೋಕ್ಯಖಂಡಸಂಹಾರೇ ಪ್ರೋಹ್ಯಮಾಣೇ ಮಹಾಂಭಸಿ ॥ ೨೬ ॥

---

೨೨ ಆ ಪ್ರಲಯ ಸಮುದ್ರವು ತ್ರಿಜಗತ್ತುಗಳನ್ನೂ ತಿಂದು ತೇಗಿ, ಘರ್ಘರ ಶಬ್ದಗಳಿಂದ ಹಾಡುತ್ತಿರುವನೋ ಎಂಬಂತೆ ಉಗ್ರವಾಗಿರುವ ಅದ್ರಿಕಟಕ ಭೂಷಣಗಳನ್ನು ಧರಿಸಿಕೊಂಡು ಮರಗಳಂತಿರುವ ವೀಚಿಬಾಹುಗಳನ್ನು ಎತ್ತಿಕೊಂಡು ಕುಣಿಯುತ್ತಿರುವನೋ ಎಂಬಂತಿತ್ತು.

೨೩ ನದಿಗಳನ್ನೇ ಸುರಿಯುತ್ತಿರುವ ಧಾರಾಧರಗಳು ಮೇಲೆ ದಗ್ಧವಾಗಿರುವ ಧಾರಾಧರಗಳು ಮಧ್ಯೆ ಧರಾಧರಗಳಾದ ನಾಗಗಳು ಕೆಳಗೆ ಪಂಕದಲ್ಲಿ ಒದ್ದಾಡುತ್ತಿರಲು ಅಧರನಾಗಿ ಮೆರೆಯುತ್ತಿದ್ದನು.

೨೪. ಧಾರೆಗಳು ಗಂಗಾಪ್ರವಾಹದಂತೆ ನಿರಂತರವಾಗಿ ಸುರಿಯುತ್ತಿರಲು, ಲೆಕ್ಕವಿಲ್ಲದಷ್ಟು ಅದ್ರಿ ಶೃಂಗಗಳೆಂಬ ನೊರೆಗಳೂ ಗುಳ್ಳೆಗಳೂ ಎದ್ದೆದ್ದು ಮುಳುಗುತ್ತಿದ್ದುವು.

೨೫ ಕೊಚ್ಚಿಹೋಗುತ್ತಿರುವ, ಒಡೆಯುತ್ತಿರುವ ಸ್ವರ್ಗಖಂಡದಲ್ಲಿ ಅಳುತ್ತಿರುವ ನಭಶ್ಚರರು ವಿದ್ಯಾಧರೀ ವೃಂದಗಳೆಂಬ ಪದ್ಮಸುಂದರ ಮಾಲೆಗಳನ್ನು ಧರಿಸಿರುವರು.

೨೬. ಘರ್ಘರ ಶಬ್ದದಿಂದ ವೇಗವಾಗಿ ಹೋಗುತ್ತಿರುವ ತ್ರೈಲೋಕ್ಯ

ನಾಸೀತ್ಕಶ್ಚಿತ್ಪರಿತ್ರಾತಾ ಹಂತಾ ವೀಚಿವಶೋಽಪಿ ಚ ।
ಶಕ್ನೋತಿ ಕಃ ಪರಿತ್ರಾತುಂ ಕಾಲೇನ ಕವಲೀಕೃತಂ ॥ ೨೭ ॥

ನಾಕಾಶಮಾಸೀನ್ನ ದಿಗಂತ ಆಸೀ—
ದಧೋಽಪಿ ನಾಸೀನ್ನ ತದೂರ್ಧ್ವಮಾಸೀತ್ ।
ಭೂತಂ ನ ಆಸೀನ್ನ ಚ ಸರ್ಗ ಆಸೀ—
ದಾಸೀತ್ಪರಂ ಕೇವಲಮೇವ ವಾರಿ ॥ ೨೮ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಸು
ನಿರ್ವಾಣ ಪ್ರಕರಣೇ "ಏಕಾರ್ಣವವರ್ಣನಂ" ನಾಮ
ಅಷ್ಟಸಪ್ತತಿತಮಃ ಸರ್ಗಃ

---

ಖಂಡಸಂಹಾರದಲ್ಲಿ ಉಳಿದಿರುವ ಮಹಾ ಭಸ್ಮವನ್ನು ಹೊತ್ತುಕೊಂಡು ಹೋಗುತ್ತಿರುವ ಏಕಾರ್ಣವ ಜಲಪ್ರವಾಹಗಳು ಮೆರೆಯುತ್ತಿದ್ದವು.

೨೭ ಆ ಪ್ರಲಯಕಾಲದಲ್ಲಿ ಕಾಯುವವನು ಯಾರೂ ಇರಲಿಲ್ಲ. ಹಂತಕನೂ ವೀಚಿವಶನಾಗಿದ್ದನು. ಕಾಲನು ಕಬಳಿಸಿದವನನ್ನು ಕಾಯುವುದಕ್ಕೆ ಯಾರ ಕೈಲಾದೀತು ?

೨೮ ಆಗ ಆಕಾಶವು ಇರಲಿಲ್ಲ. ದಿಗಂತಗಳು ಇರಲಿಲ್ಲ ಅಧಸ್ಸು ಇರಲಿಲ್ಲ. ಊರ್ಧ್ವವಿರಲಿಲ್ಲ ಭೂತ (ಕಾಲ) ವಿರಲಿಲ್ಲ. ಸ್ವರ್ಗವಿರಲಿಲ್ಲ. ಬರಿಯ ನೀರೇ ನೀರಾಗಿ ನೀರೊಂದೇ ಇತ್ತು.

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಏಕಾರ್ಣವವರ್ಣನ" ಎಂಬ
ಎಪ್ಪತ್ತೆಂಟನೆಯ ಸರ್ಗವು

## ಏಕೋನಾಶೀತಿತಮಃ ಸರ್ಗ

**ಶ್ರೀ ವಸಿಷ್ಠ ಉವಾಚ :—**

ಏತಸ್ಮಿನ್ನಂತರೇ ಚಕ್ಷುರ್ವ್ಯೋಮಸ್ಥೋಽಹಮಥಾತ್ಯಜಂ ।
ಬ್ರಹ್ಮಲೋಕೇ ಮಹಾಲೋಕೇ ಪ್ರಭಾತೇಽರ್ಕಪ್ರಭಾಮಿವ ॥ ೧ ॥

ಯಾವದ್ದೃಷ್ಟೋ ಮಯಾ ತತ್ರ ಶೈಲಾದಿವ ವಿನಿರ್ಮಿತಃ ।
ಪರಮೇಷ್ಠೀ ಸಮಾಧಿಸ್ಥಃ ಪ್ರಧಾನಪರಿವಾರವಾನ್ ॥ ೨ ॥

---

## ಎಪ್ಪತ್ತೊಂಭತ್ತನೆಯ ಸರ್ಗವು

**ಶ್ರೀ ವಸಿಷ್ಠನು ಹೇಳಿದನು :—**

೧ ಇದಿಷ್ಟೂ ಆದ ಮೇಲೆ, ಪ್ರಭಾತ ಕಾಲದಲ್ಲಿ ಹರಡಿದ ಸೂರ್ಯಕಿರಣಗಳನ್ನು ಕಾಣುವವನಂತೆ, ಚಿದಾಕಾಶದಲ್ಲಿದ್ದ ನಾನು ಮಹಾಲೋಕ (ಬೆಳಕು) ತುಂಬಿದ ಬ್ರಹ್ಮಲೋಕದ ಕಡೆ ತಿರುಗಿ ನೋಡಿದೆನು.

(ಅಥ ಏತಸ್ಮಿನ್ನಂತರೇ ತಪೋಲೋಕ ಪರ್ಯಂತಮೇಕಾರ್ಣವವಾರಿ ಪೂರಣೋತ್ತರ ಕಾಲಂ ಸತ್ಯಲೋಕ ಸಂನಿಹಿತವ್ಯೋಮಸ್ಥೋಽಹಂ ಮಹಾಲೋಕೇ ಪ್ರಕಾಶಬಹುಲೇ ಬ್ರಹ್ಮಲೋಕೇ ಚಕ್ಷುಃ ಅತ್ಯಜಂ । ದರ್ಶನಾಯ ಪ್ರೇರಿತವಾನಿತಿ ಯಾವತ್॥—ತಾ ಪ್ರ.)

೨. ಅಲ್ಲಿ ಶೈಲದಿಂದ ನಿರ್ಮಿತವಾಗಿರುವವನಂತೆ, (ಶೈಲಾಂತರ್ಗತ ಬ್ರಹ್ಮಾಂಡದ) ಪರಮೇಷ್ಠಿಯು ತನ್ನ ಪ್ರಧಾನ ಪರಿವಾರದವರೊಡನೆ ಸಮಾಧಿಸ್ಥನಾಗಿ ಕುಳಿತಿರುವುದು ಕಣ್ಣಿಗೆ ಕಾಣಿಸಿತು.

(ಪ್ರಧಾನಃ ಪರಿವಾರಃ ಪ್ರಾಣಾದ್ಯುಪಾಸನಾಭಿಃ ಸಾಲೋಕ್ಯಾದಿ ಮುಕ್ತಿಂ

ಸಮೂಹಶ್ಚೈವ ದೇವಾನಾಂ ಮುನೀನಾಂ ಭಾವಿತಾತ್ಮನಾಂ ।
ಶುಕ್ರೋ ಬೃಹಸ್ಪತಿಶ್ಚೈವ ಶಕ್ರೋ ವೈಶ್ರವಣೋ ಯಮಃ ॥ ೩ ॥

ಸೋಮೋಽಥ ವರುಣೋಽಗ್ನಿಶ್ಚ ತಥಾನ್ಯೇಽಪಿ ಸುರರ್ಷಯಃ ।
ದೇವಗಂಧರ್ವಸಿದ್ಧಾನಾಂ ಸಾಧ್ಯಾನಾಂ ಚ ವಿನಾಯಕಾಃ ॥ ೪ ॥

ಲಿಪಿಕರ್ಮಾರ್ಪಿತಾಕಾರಾಃ ಸರ್ವೇ ಧ್ಯಾನಪರಾಯಣಾಃ ।
ಬದ್ಧಪದ್ಮಾಸನಾಸ್ತತ್ರ ನಿರ್ಜೀವಾ ಇವ ಸಂಸ್ಥಿತಾಃ ॥ ೫ ॥

ಅಥ ತೇ ದ್ವಾದಶಾದಿತ್ಯಾಸ್ತಮೇವೋದ್ದೇಶಮಾಗತಾಃ ।
ಬದ್ಧಪದ್ಮಾಸನಾಸ್ತಸ್ಥುಸ್ತಥೈವಾಶು ಯಥೈವ ತೇ ॥ ೬ ॥

---

ಸ್ಪ್ರಾಪ್ತೋ ಬ್ರಹ್ಮಣಾ ಸಹವಿದೇಹಕೈವಲ್ಯಂ ವಿವಿಕ್ಷುಃ ಜೀವನ್ಮುಕ್ತ ಪರಿವಾರ ಸ್ತದ್ವಾ । ತಥಾಚೋಕ್ತಂ–“ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿ ಸಂಚರೆ । ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಂ” ಇತಿ—ತಾ.ಪ್ರ)

೩. ದೇವತೆಗಳ ಸಮೂಹವು ಅಲ್ಲಿ ಇತ್ತು: ಭಾವಿತ್ಮರಾದ ಮುನಿಗಳ ಸಮೂಹವೂ ಇತ್ತು. ಅಲ್ಲಿ ಶುಕ್ರ, ಬೃಹಸ್ಪತಿ ಶಕ್ರ ಕುಬೇರ ಯಮ (ಮೊದ ಲಾದವರೂ ಇದ್ದರು.)

೪. ಸೋಮ, ವರುಣ, ಅಗ್ನಿ, ಮೊದಲಾದ ದೇವತೆಗಳು, ದೇವರ್ಷಿಗಳು, ದೇವ ಗಂಧರ್ವಸಿದ್ಧಸಾಧ್ಯರುಗಳ ವಿನಾಯಕರುಗಳೂ ಇದ್ದರು.

(ವಿನಾಯಕಾ ನಿಯಂತಾರಃ)

೫. ಎಲ್ಲರೂ ಚಿತ್ರದಲ್ಲಿ ಬರೆದವರಂತೆ ಇದ್ದರು. ಎಲ್ಲರೂ ಧ್ಯಾನಪರಾಯಣ ರಾಗಿದ್ದರು. ನಿರ್ಜೀವರಾದಂತೆ ಬದ್ಧಪದ್ಮಾಸನರಾಗಿ ಕುಳಿತಿದ್ದರು.

೬. ಅನಂತರ ಹಿಂದೆ ಪ್ರಲಯವನ್ನು ಮಾಡಿದ ದ್ವಾದಶಾದಿತ್ಯರೂ ಆ ಎತ್ತರ ವಾದ ಪ್ರದೇಶಕ್ಕೆ ಬಂದು ಅಲ್ಲಿದ್ದವರಂತೆ ತಾವೂ ಬದ್ಧಪದ್ಮಾಸನರಾಗಿ ಕುಳಿತರು.

ತತೋ ಮುಹೂರ್ತಮಾತ್ರೇಣ ದೃಷ್ಟವಾನಹಮಬ್ಜಜಂ ।
ಪುರೋವಿನಿದ್ರತಾಂ ಯಾತಃ ಸ್ವಪ್ನದೃಷ್ಟಮಿವಾಗ್ರಗಂ ॥ ೭ ॥

ಬ್ರಹ್ಮಲೋಕಜನಂ ಸರ್ವಂ ಮಹತಾಮಿವ ವಾಸನಾಂ ।
ನಾಪಶ್ಯಂ ಸ್ವಪ್ನನಗರಂ ಬುಧ್ಯಮಾನ ಇವಾಗ್ರಗಂ ॥ ೮ ॥

ಅರಣ್ಯಶೂನ್ಯಮೇವಾಸೀತ್ತದ್ಬ್ರಹ್ಮಸದನಂ ತದಾ ।
ಕರಿನಾಕಾಂಡವಿಧ್ವಸ್ತಂ ಪೃಥಿವ್ಯಾಮಿವ ಪತ್ತನಂ ॥ ೯ ॥

---

೭. ಇನ್ನೊಂದು ಗಳಿಗೆಯೊಳಗಾಗಿ ಅಲ್ಲಿದ್ದ ಬ್ರಹ್ಮನು ಕಣ್ಣಿಗೆ ಬಿದ್ದನು. ನಿದ್ದೆಯಿಂದ ಎದ್ದವನು, ಕನಸಿನಲ್ಲಿ ಕಾಣುತ್ತಿದ್ದುದನ್ನು ಎಚ್ಚರವಾದ ಮೇಲೆಯೂ ಎದುರಿಗೆ ಕಾಣುವಂತೆ ಆತನ ದರ್ಶನವಾಯಿತು.

(ತಸ್ಯಧಾತುಃ ದ್ವಿತೀಯ ಪರಾರ್ಧಾಂತ್ಯ ಮುಹುರ್ತೋ ಮೀಯತೇ ಯೇನ ಚರಮಕ್ಷಣೇನ ಸ ಮುಹೂರ್ತ ಮಾತ್ರಃ ತೇನ ತದೀಯ ಚರಮ ಸಾಕ್ಷಾತ್ಕಾರ ಬೋಧೇಪ್ಧ ಬ್ರಹ್ಮ ಚೈತನ್ಯೇನ ತದವಿದ್ಯಾ ಕಲ್ಪಿತ ತದ್ದೇಹ ಸಹಿತ ತದೀಯ ಸರ್ವ ಪ್ರಪಂಚ ಬಾಧಾದ್ವಿನಿದ್ರಿತಾಂ ಪ್ರಬೋಧಂ ಪ್ರಾಪ್ತಃ ಪುರುಷಃ ಸ್ವಪ್ನದೃಷ್ಟಂ ಸ್ವಾಗ್ರಗಂ ಸ್ವಾಪ್ನ ಪದಾರ್ಥಜಾತಮಿವ ಬಾಧಿತಮಾತ್ಮ ಮಾತ್ರ ಪರಿಶೇಷಮಪಶ್ಯಂ ತದೇವಾಸ್ಯ ವಿದೇಹಕೈವಲ್ಯಂ ಇತ್ಯರ್ಥಃ ॥ —ತಾ ಪ್ರ)

೮ ಆತ್ಮಜ್ಞಾನವನ್ನು ಪಡೆದವರು ತಮ್ಮ ಹಿಂದಿನ ವಾಸನೆಯನ್ನು ಹೇಗೋ ಕಾಣದೆ ಹೋಗುವರೋ ಹಾಗೆ, ಎಚ್ಚರವಾದವನು ಕನಸಿನಲ್ಲಿ ಕಂಡಿದ್ದ ನಗರವನ್ನು ಹೇಗೆ ಕಾಣುವುದಿಲ್ಲವೋ ಹಾಗೆ, ನಾನೂ ಆ ಬ್ರಹ್ಮಲೋಕದಲ್ಲಿದ್ದ ಜನರಲ್ಲಿ ಯಾರನ್ನೂ ಕಾಣಲಿಲ್ಲ

(ಮಹತಾಂ ತತ್ವಜ್ಞಾನಾಂ ಜ್ಞಾನಬಾಧಿತಾಂ ಪೂರ್ವ ವಾಸನಾಮಿವ —ತಾ. ಪ್ರ)

೯. ನಿಷ್ಕರುಣವೂ ಅಕಾರಣವೂ ಆಗಿ ಪೃಥಿವಿಯಲ್ಲಿನ ಪಟ್ಟಣವು ವಿಧ್ವಸ್ತವಾದಾಗ ಆಗುವಂತೆ ಆಗಿ, ಅರಣ್ಯದಂತೆ ಶೂನ್ಯವಾಯಿತು ಆ ಬ್ರಹ್ಮನ ಸೃಷ್ಟಿಯೆಲ್ಲವೂ ಮಾಯವಾಯಿತು

(ತದಾ ತದೀಯ ಚರಮ ಸಾಕ್ಷಾತ್ಕಾರಕ್ಷಣೇ—ತಾ ಪ್ರ.)

ಸರ್ವ ಏವ ಚ ನ ಕ್ವಾಪಿ ತೇ ತಥಾ ತಾದೃಶಾಸ್ತದಾ ।
ಋಷಯೋ ಮುನಯೋ ದೇವಾ ವೇದಾ ವಿದ್ಯಾಧರಾದಯಃ ॥ ೧೦ ॥

ಜ್ಞಾತಂ ತತೋಽವಧಾನೇನ ಮಯಾ ನಭಸಿ ತಿಷ್ಠತಾ ।
ಯಾವನ್ನಿರ್ವಾಣಮಾಪನ್ನಾ ಬ್ರಹ್ಮವತ್ಸರ್ವ ಏವ ತೇ ॥ ೧೧ ॥

ವಾಸನಾಯಾಂ ವಿಲೀನಾಯಾಮದರ್ಶನಮುಪಾಗತಾಃ ।
ಸ್ವಪ್ನಲೋಕಾಃ ಪ್ರಬುದ್ಧಾನಾಮಿವ ಸ್ವಂ ರೂಪಮಾಗತಾಃ ॥ ೧೨ ॥

ಆಕಾಶಾತ್ಮೈವ ದೇಹೋಽಯಂ ಭಾತಿ ವಾಸನಯಾ ಸ್ಫುಟಃ ।
ತದಭಾವಾತ್ತು ನೋ ಭಾತಿ ಸ್ವಪ್ನೋ ಬೋಧವತೋ ಯಥಾ ॥ ೧೩ ॥

---

೧೦. ಅಲ್ಲಿ ತುಂಬಿದ್ದ ಋಷಿಗಳೂ ಮುನಿಗಳೂ ದೇವತೆಗಳೂ ವೇದಗಳೂ ವಿದ್ಯಾಧರಾದಿಗಳೂ, ಅಲ್ಲಿದ್ದವರೆಲ್ಲರೂ ಎಲ್ಲಿಯೂ ಇಲ್ಲವಾದರು.

(ತೇ ಸರ್ವೇ........ . ಶೂನ್ಯಮೇವಾಸನ್ನಿತಿ ವಿಪರಿಣಾಮೇನೇತ್ಯರ್ಥಃ —ತಾ. ಪ್ರ)

೧೧. ಆಕಾಶದಲ್ಲಿದ್ದ ನಾನು ಅವರೆಲ್ಲರೂ ಆ ಬ್ರಹ್ಮನಂತೆಯೇ ನಿರ್ವಾಣವನ್ನು ಹೊಂದಿದರು ಎಂಬುದನ್ನು ಪ್ರಣಿಧಾನದಿಂದ ತಿಳಿದೆನು.

(ನಾಮರೂಪಾತ್ಮನಾ ಶೂನ್ಯ ಭಾವೇಽಪಿ ಸ್ವರೂಪೇಣ ತು ನಿರ್ವಾಣಾತ್ಮತಯಾ ಸ್ಥಿತಾ ಏವೇತ್ಯಾತ್ಮಾನುಭವೇನ ದರ್ಶಯತಿ—ಜ್ಞಾತಮಿತಿ । ಅವಧಾನೇನ ಪ್ರಣಿಧಾನೇನ—ತಾ. ಪ್ರ.)

೧೨. ಅವರು ತಮ್ಮ ಸೃಷ್ಟಿಗೆ ಕಾರಣವಾಗಿದ್ದ ವಾಸನೆಯು ವಿಲೀನವಾಗಲು ಅದರ್ಶನವನ್ನು ಹೊಂದಿದರು. ಎಚ್ಚರವಾದವರಿಗೆ ಸ್ವಪ್ನದಲ್ಲಿರುವವರು ಮರೆಯಾಗುವಂತೆ ಆಗಿ ತಮ್ಮ ತಮ್ಮ ಮೂಲರೂಪವಾದ ಬ್ರಹ್ಮದಲ್ಲಿ ಅಡಗಿದರು.

(ಸೈವ ತೇಷಾಂ ವಾಸನಾ ಕಲ್ಪಿತರೂಪಾಗಮೇನ ವಾಸ್ತವ ಸ್ವರೂಪಾವಾಪ್ತಿರಿತ್ಯಾಶಯೇನಾಹ—ತಾ ಪ್ರ)

೧೩. ಈ ದೇಹವು ಆಕಾಶಾತ್ಮವು: ಆದರೂ ವಾಸನಾ ಬಲದಿಂದಲೇ ಸ್ಫುಟ

ಅಂತರಿಕ್ಷಗತೋ ದೇಹೋ ಯಥಾ ಸ್ವಪ್ನೇ ವಿಲೋಕ್ಯತೇ ।
ಬೋಧೇ ತದ್ವಾಸನಾಶಾಂತೌ ನ ಕಿಂಚಿದಪಿ ಲಕ್ಷ್ಯತೇ　　|| ೧೪ ||

ಜಾಗ್ರತ್ಯಪಿ ತಥೈವಾಯಂ ವಾಸನಾಯಾಃ ಪರಿಕ್ಷಯೇ ।
ನೈವಾತಿವಾಹಿಕೋ ನೈವ ಲಕ್ಷ್ಯತೇಽತ್ರಾಧಿಭೌತಿಕಃ　　|| ೧೫ ||

ಸ್ವಪ್ನಾನುಭವ ಏಷೋಽತ್ರ ದೃಷ್ಟಾಂತತ್ವೇನ ಲಕ್ಷ್ಯತೇ ।
ಆಬಾಲಮೇತತ್ಸಂಸಿದ್ಧಮನುಭೂತಂ ಶ್ರುತಂ ಸ್ಮೃತಂ　　|| ೧೬ ||

---

ವಾಗಿ ಕಾಣಿಸುವುದು. ಆ ವಾಸನೆಯು ಇಲ್ಲವಾಗಲು, ತಾನೂ ಇಲ್ಲವಾಗುವುದು. ಎಚ್ಚರವಾದವನಿಗೆ ಸ್ವಪ್ನವು ಕಾಣದಾಗುವಂತೆಯೇ ಇದೂ !

೧೪ ದೇಹವು ಅಂತರಿಕ್ಷದಲ್ಲಿ ಹಾರಾಡುವಂತೆ ಕನಸಿನಲ್ಲಿ ಕಾಣುವುದು ಹೇಗೋ (ಈ ದೇಹವೂ ವಾಸನಾ ಬಲದಿಂದ ಹಾಗೆಯೇ ಕಾಣುತ್ತಿದ್ದು) ಆತ್ಮ ಜ್ಞಾನಬಲದಿಂದ ಆ ವಾಸನೆಯು ಶಾಂತವಾಗಲು, ಏನೂ ಇಲ್ಲವಾಗುವುದು

೧೫. (ಕನಸಿನಲ್ಲಿ ಹೇಗೋ ಜಾಗ್ರತ್ತಿನಲ್ಲಿಯೂ ಹಾಗೆಯೇ ! ವಾಸನೆಯು ಸಂಪೂರ್ಣವಾಗಿ ಕ್ಷಯವಾಗಲು, ಆತಿವಾಹಿಕ ದೇಹವೂ ಇಲ್ಲವಾಗುವುದು. ಆದಿ ಭೌತಿಕ ದೇಹವೂ ಇಲ್ಲವಾಗುವುದು

(ಸ್ವಪ್ನಾಜ್ಜಾಗರೇ ಸ್ವಾಪ್ನಾಧಿಭೌತಿಕ ಮಾತ್ರ ಬಾಧಸ್ತತ್ತ್ವಬೋಧೇ ತ್ವಾಧಿ ಭೌತಿಕಾದಿ ದೇಹತ್ರಯಾಸ್ಯಾಪಿ ಬಾಧ ಇತಿ ವಿಶೇಷ ಇತ್ಯಾಶಯೇನಾಹ—ಜಾಗ್ರತ್ಯ ಪೀತಿ । ವಾಸನಾಕ್ಷಯ ಹೇತು ತತ್ತ್ವಪ್ರಬೋಧಸ್ಯ ಪ್ರಮಾಣಜನ್ಯ ಜಾಗ್ರತ್ಯೇವ ಸಂಭವಾಜ್ಜಾಗ್ರತ್ಯಪೀತ್ಯುಕ್ತಿಃ — ತಾ ಪ್ರ)

೧೬. ಇಲ್ಲಿ ಸರಿಯಾದ ದೃಷ್ಟಾಂತವು ಸ್ವಪ್ನಾನುಭವವು (ಸ್ವಪ್ನಾನುಭೂತ ವಾಗಿದ್ದ ವಿಷಯವು ಜಾಗ್ರತ್ತಿನಲ್ಲಿ ವಿಲೀನವಾಗುವುದು ಎಂಬ) ಈ ಅನುಭವವು, ಆಬಾಲರಾದಿಯಾಗಿ ಸರ್ವರಿಗೂ ಗೊತ್ತಿರುವುದು : ಅನುಭವದಲ್ಲಿರುವುದು : ಶ್ರುತವು : ಸ್ಮೃತವು. (ಶೃತಿಸ್ಮೃತಿಗಳೂ ಹೇಳುವುವು)

("ತಸ್ಯ ತ್ರಯ ಆವಸಥಾತ್ತ್ರಯಃ ಸ್ವಪ್ನಾಃ" ಇತಿ ಶ್ರುತಂ ಪುರಾಣಾದಿಷು ಚ ಸ್ಮೃತಂ—ತಾ. ಪ್ರ)

ಅಪಹ್ನುತೇ ಚ ವಾ ಯೋಽಪಿ ಸ್ವಮೇವಾನುಭವಂ ಶಠಃ ।
ಸ ತ್ಯಾಜ್ಯಃ ಕೋ ಹ್ಯಲಿಕೇನ ಸುಪ್ತಮುದ್ಬೋಧಯೇತ್ಕಿಲ ॥ ೧೭ ॥

ದೇಹಕಾರಣಕಃ ಸ್ವಪ್ನೋ ದೇಹಭಾವಾನ್ನ ದೃಶ್ಯತೇ ।
ಇತಿ ಚೇತ್ತದದೇಹಾನಾಂ ಪರಲೋಕೋಽಪಿ ನಾಸ್ತಿ ಚ ॥ ೧೮ ॥

ಇತ್ಯೇತದಭವಿಷ್ಯಚ್ಚೇತ್ತಚ್ಛರೀರಕಸಂಕ್ಷಯೇ ।
ನಾಭವಿಷ್ಯದಯಂ ಸರ್ಗಃ ಸ ಚಾಸ್ತ್ಯೇವ ಚ ಸರ್ವದಾ ॥ ೧೯ ॥

---

೧೭. ಯಾವನಾದರೂ ಶಠನು ಇದು ಹೀಗಲ್ಲ ಎಂದು ಹೇಳುವನಾದರೆ ಅವನನ್ನು ಬಿಟ್ಟು ಬಿಡಿ. ಸುಮ್ಮಸುಮ್ಮನೆ ನಿದ್ದೆ ಮಾಡುತ್ತಿರುವೆನೆಂದು ನಟಿಸುವವನನ್ನು ಯಾವನು ಎಬ್ಬಿಸಲಾದೀತು ?

(ಏವಂ ಸ್ವಪರಾನುಭವಸಿದ್ಧಮಪಿ ಸ್ವಪ್ನಬಾಧಂ ಯೋಽಪಹ್ನುತೇ ಸ್ವಪ್ನಾದಿ ಸರ್ವ ದೃಶ್ಯ ಸತ್ಯತಾವಾದಿ ಸ ನ ಪ್ರಬೋಧನೀಯ ಏವೇತ್ಯಾಹ— ತಾ ಪ್ರ )

೧೮. "ಸ್ವಪ್ನವು ದೇಹ ಕಾರಣಕವು : (ಎಂದರೆ ದೇಹವಿರುವುದರಿಂದ ಬರುವುದು ) ದೇಹವಿಲ್ಲದಿದ್ದರೆ ಕಾಣುವುದೇ ಇಲ್ಲ" ಎಂದು ಹೇಳುವುದಾದರೆ, ಆಗ ದೇಹವಿಲ್ಲದವರಿಗೆ ಪರಲೋಕವೂ ಇಲ್ಲವಾಗುವುದು

(ನನು ತಥಾಪಿ ಸ್ವಪ್ನದೃಷ್ಟಾಂತೋ ನ ಯುಜ್ಯತೇ ಪಿತ್ರಾದಿ ದೇಹ ಕಾರಣಕೋ ಹ್ಯಯಂ ದೇಹಃ ಸ್ವಪ್ನದೇಹಸ್ತು ನ ತಥೇತಿ ಸ್ವಪ್ನ ದೇಹಸ್ಯ ಅತ್ಯಂತಾ ಸತ್ವೇನ ವೈಷಮ್ಯಾದಿತಿ ಚೇತ್ ತರ್ಹಿ ಯಜ್ಞಾದಿನಾ ಜಾಯಮಾನ ಸ್ವರ್ಗದೇಹಸ್ಯಾಪಿ ದೇಹಕಾರಣಕತ್ವಾ ಭಾವೇನಾತ್ಯಂತಾ ಸತ್ತ್ವಪ್ರಸಂಗಾನ್ನಾಸ್ತಿಕತ್ವಮೇವ ಪ್ರತಿವಾದಿನಾಂ ಪ್ರಸಜ್ಯೇತೇತ್ಯಾಹ—ತಾ. ಪ್ರ.)

೧೯. ಸ್ವಪ್ನವನ್ನು ಕಾಣುವ ದೇಹವು ಇಲ್ಲವಾದ್ದರಿಂದ ಸ್ವಪ್ನವೂ ಇಲ್ಲ ಎಂಬ) ಮಾತು ನಿಜವಾದರೆ, ಈಗ ಇರುವ ಈ ಶರೀರವು ನಾಶವಾಗಿ ಈ ಸೃಷ್ಟಿಯೂ ಇಲ್ಲವಾಗಬೇಕಾದೀತು. ಆದರೆ ಸರ್ಗವು ( ಈ ಶರೀರವು ಬರುವುದಕ್ಕೆ ಮುಂಚೆಯೂ ಇತ್ತು: ಇದು ಹೋದಮೇಲೆಯೂ ಇರುವುದು ಆದರಿಂದ) ಯಾವಾಗಲೂ ಇದ್ದೇ ಇರುವುದು

ಅವಯುವವಿಭಾಗಾತ್ಮನ್ಯವಶ್ಯಂ ಭಾವಿನಿ ಕ್ಷಯೇ ।
ನ ಕದಾಚಿದನಿತ್ಥಂ ತಜ್ಜಗದಿತ್ಯಪ್ಯಸಂಸ್ಥಿತಂ　　　　॥ ೨೦ ॥

ನ ಕದಾಚಿಜ್ಜಗನ್ನಾಶೋ ದೇಹೋದ್ಭೂತಗುಣಾದಿಕಂ ।
ಮದಶಕ್ತಿರಿವ ಜ್ಞಪ್ತಿರುದೇತೀತಿ ಚ ವಕ್ಷಿ ಚೇತ್　　　　॥ ೨೧ ॥

---

(ಕಿಂಚ ದೇಹಕಾರಣಕಸ್ಯ ದೇಹಸ್ಯಾತ್ಯಂತಾಸತ್ತ್ವೇ ಆತಿವಾಹಿಕ ದೇಹ ಸಮಷ್ಟ್ಯಾತ್ಮನೋ ಹಿರಣ್ಯಗರ್ಭಸ್ಯಾಪ್ಯತ್ಯಂತಾ ಸತ್ತ್ವ ಪ್ರಸಂಗ ಸ್ತಥಾಸತಿ ಸರ್ಗಾದ್ಯರ್ಥಕ್ರಿಯಾಪ್ಯಲೀಕೈವ ಸ್ಯಾದಿತ್ಯಾಹ- ಇತ್ಯೇತದಿತಿ । ಇತಿ ಏವಂ ರೀತ್ಯಾ ತ್ವದುಕ್ತ ಮೇತದಸತ್ತ್ವಮ ಭವಿಷ್ಯಚ್ಚೇತ್ತರ್ಹಿ ಪೂರ್ವಸರ್ಗ ಪ್ರಲಯಾಂತೇ ಸರ್ವಶರೀರ ಸಂಕ್ಷಯೇ ಏತತ್ಸರ್ಗಾದಿ ಕಾಲೇ ಶರೀರ ಹೇತುಕ ಶರೀರ ಭಾವಾದಯಂ ಸರ್ಗೋಽಪಿ ನಾಭವಿಷ್ಯತ್। ಏವಂ ಪೂರ್ವಪೂರ್ವಸರ್ಗೇಽಪ್ಯೇವಮಾಪಾದಯಿತುಂ ಶಕ್ಯಮಿತ್ಯಾಶಯೇನಾಹ–ಸರ್ವದೇತಿ । —ತಾ ಪ್ರ.)

೨೦ ಅವಯುವ ವಿಭಾಗವುಳ್ಳದ್ದು ಯಾವುದೋ ಅದು ತಪ್ಪದೆ ಕ್ಷಯುವನ್ನು ಹೊಂದಬೇಕು ಎಂದು ಒಪ್ಪುವುದಾದರೆ, "ನ ಕದಾಚಿದಪಿ ಅನೀದೃಶಂ ಜಗತ್" ಜಗತ್ತು ಯಾವಾಗಲೂ ಹೀಗೆಯೇ ಇತ್ತು ಎಂಬ ಮತವೂ ಅಸಂಸ್ಥಿತವಾಗುವುದು.

(ನನು ತರ್ಹಿ ಮಾಸ್ತು ಕದಾಪಿ ಪ್ರಲಯಃ, ಅನಾದೌ ಸಂಸಾರೇ ಅವಿಚ್ಛಿನ್ನ ಪ್ರವಾಹಾಃ ಸರ್ವೇ ದೇಹಕಾರಣಕಾ ಏವ ದೇಹಾ ಅರ್ಥಕ್ರಿಯಾ ಸಮರ್ಥಾ ಭವಿಷ್ಯಂತಿ । ಹಿರಣ್ಯಗರ್ಭಸ್ಯ ದೇಹಸ್ಯ ವಾ ಪೂರ್ವಪೂರ್ವ ನಾರಾಯಣ ದೇಹಾ ದುತ್ಪತ್ತಿಃ ಕಲ್ಪಯಿಷ್ಯತೇ । ತಥಾಚ ನ ಕದಾಚಿದನೀದೃಶಂ ಜಗದಿತಿ ಜೈಮಿನೀಯ ಮತಂ ದೂಷಯತಿ–ಅವಯುವೇತಿ । ಕ್ಷಿತ್ಯಾದಿ ಭೂತಾನಾಂ ಹಿ ಸಾವಯುವತ್ವಾದೇವ ಸಂಯೋಗಸ್ಯ ವಿಭಾಗಾವಸಾನತ್ವಾದ್ವಿನಾಶೋ ದುರ್ವಾರಃ । ತಥಾಚ ನ ಕದಾ–ಚಿದನೀದೃಶಂ ಜಗದಿತಿ ಮತಮಸಂಸ್ಥಿತಮಪ್ರತಿಷ್ಠಿಕಮೇವ । ಭೂಮ್ಯಾದಿ ನಾಶೇ ಚತುರ್ವಿಧ ಭೂತಗ್ರಾಮ ಶರೀರಾಣಾಮಾಧಾರಾಭಾವೇನಾವಸ್ಥಾನಾಯೋಗಾ ನ್ನಾರಾಯಣ ದೇಹಸ್ಯಾಪಿ ನಾವಯುವತ್ವಾದ್ವಿನಾಶಿತ್ವಾವಾರಣಾದಪ್ರ್ಸಶಯಾನತ್ವ ಪ್ರಸಿದ್ಧೇರಜನ್ಮವಿನಾಶತ್ವೇ ದೇಹಕಾರಣಕತ್ವೇನಾತ್ಯಂತ್ಯಾ ಸತ್ತ್ವಪ್ರಸಂಗಾಚ್ಚೇತಿ ಭಾವಃ । —ತಾ. ಪ್ರ )

೨೧. ಜಗತ್ತು ಯಾವಾಗಲೂ ನಾಶವಾಗುವುದಿಲ್ಲ. ದೇಹದಲ್ಲಿರುವ ಜಾತ್ಯಾದಿ

ತತ್ಪುರಾಣೇತಿಹಾಸಾನಾಂ ಸರ್ವಸಂಕ್ಷಯವಾದಿನಾಂ ।
ಸ್ಮೃತ್ಯಾದೀನಾಂ ಸವೇದಾನಾಂ ವೈಯರ್ಥ್ಯಮುಪಜಾಯತೇ ॥ ೨೨ ॥

ಅಪ್ರಮಾಣತಯೈತಸ್ಮಿನ್ನರ್ಥೇ ತೇಷಾಂ ಮಹಾಮತೇ ।
ಅನ್ಯತ್ರಾಪಿ ಪ್ರಮಾಣತ್ವಂ ವಂಧ್ಯಾದಾವಪಿ ಕಿಂ ಭವೇತ್ ॥ ೨೩ ॥

---

ಗುಣಾದಿಗಳು ಅವಯವ ಸಂಘಾತದಿಂದ ಆಗುವುವು. ಮದಶಕ್ತಿಯಂತೆ ಜ್ಞಪ್ತಿಯೂ ಅಲ್ಲಲ್ಲಿ ಉದಯಿಸುವುದು ಎನ್ನುವೆಯಾದರೆ,

(ಅತ್ರ ಪ್ರಸಂಗಾಚ್ಚಾರ್ವಾಕಮತಮಪಿ ನಿರಸಿತು ಮನುವದತಿ–ನ ಕದಾಚಿದಿತಿ । ಪೃಥಿವ್ಯಾದಿ ಭೂತಚತುಷ್ಟಯಮೇವ ಹಿ ಚತುರ್ವಿಧ ದೇಹಾಕಾರೇಣ ಘಟಪಟಾದ್ಯಾಕಾರೇಣ ಚ ಸಂಮಿಲಜ್ಜಗತ್ । ತಸ್ಯ ಚ ಪೃಥಿವ್ಯಾದಿ ಭೂತಾತ್ಮನಾ ಕದಾಚಿದಪಿ ನಾಶೋ ನಾಸ್ತಿ । ದೇಹಸ್ತು ಭೂತಾನಾಂ ಮೇಲನೇ ಉದ್ಭೂತ ಜ್ಞಾನೇಚ್ಛಾದಿಗುಣಾ ಹಸ್ತಪಾದಾದ್ಯವಯವ ಸಂಸ್ಥಾನತತ್ತದಭಿವ್ಯಂಗ್ಯಾಜಾತಿರಿತ್ಯೇವಮಾದಿಕಮೇವ ತದೀಯೋ ಧರ್ಮಸಂಘಾತಃ । ತತ್ರ ಯದ್ಯಪಿ ಜ್ಞಪ್ತಿರ್ನೈಕೈಕತ್ರ ಭೂತೇ ದೃಶ್ಯತೇ ತಥಾಪಿ ಸುರಾರಂಭಕೇಷು ಪಿಷ್ಟತೋಯಕ್ಷಾರಕಿಣ್ವಾದಿ ದ್ರವ್ಯೇಷು ಮಿಲಿತೇಷು ಕಾಲಪಾಕಾದಿನಾ ಮದಶಕ್ತಿರಿವ ದೇಹಕಾರ ಪರಿಣತೇಷು ಚತುರ್ಷು ಭೂತೇಷು ಜ್ಞಪ್ತಿಗುಣ ಉದೇತಿ ತೇನ ತದ್ಗುಣಕೋ ದೇಹ ಏವಾತ್ಮೇತಿ, ಹೇ ಚಾರ್ವಾಕ, ತ್ವಂ ವಕ್ಷಿ ಚೇತ್ ಶೃಣು । ತಸ್ಯೋತ್ತರಮಿತಿ ಶೇಷಃ —ತಾ ಪ್ರ)

೨೨ (ಈ ಮಾತನ್ನು ಒಪ್ಪಿಕೊಳ್ಳುವುದಾದರೆ) ಸರ್ವವೂ ಸಂಕ್ಷಯವಾಗುವುದೆಂದು ಹೇಳುವ ಪುರಾಣೇತಿಹಾಸಗಳೂ ಸ್ಮೃತ್ಯಾದಿಗಳೂ ವೇದಗಳೂ ಎಲ್ಲವೂ ವ್ಯರ್ಥವಾಗುವುವು

(ತತ್ತರ್ಹಿ ಸರ್ವ ವಸ್ತೂನಾಂ ಸಂಕ್ಷಯೋ ನಿತ್ಯನೈಮಿತ್ತಿಕ ಪ್ರಾಕೃತಿಕ ವೈಜ್ಞಾನಿಕಾಖ್ಯಾಃ ಚತುರ್ವಿಧಾಃ ಪ್ರಲಯಾಃ, ತದ್ವಾದಿನಾಮಷ್ಟಾದಶಪುರಾಣಾನಾಂ ಭಾರತಾದೀತಿಹಾಸಾನಾಂ ಪಾರಲೌಕಿಕಾತ್ಮ ಹಿತಾಹಿತ ಧರ್ಮಾಧರ್ಮ ಬೋಧಕ ಮನ್ವಾದಿಸ್ಮೃತೀನಾಂ ಸದಾಚಾರಾಣಾಂ ಚ ವೈಯರ್ಥ್ಯಂ ಪ್ರಸಜ್ಯೇತೇತ್ಯರ್ಥಃ—ತಾ. ಪ್ರ.)

೨೩- ಈ ಅರ್ಥದಲ್ಲಿ ಆ ವೇದಾದಿಗಳ ಪ್ರಾಮಾಣ್ಯವು ಇಲ್ಲ: ಅವು

ನ ಚೈತದಿಷ್ಯತೇ ಲೋಕೇ ಜಗದುಚ್ಛೇದಕಾರಣಾತ್ ।
ಅನ್ಯಚ್ಚಾಸ್ತಾಮೇತದಂಗ ಮಮೇದಮಪರಂ ಶೃಣು ॥ ೨೪ ॥

---

ಅಪ್ರಮಾಣ ಎನ್ನುವುದಾದರೆ, ಎಲ್ಲೆ ಮಹಾಮತಿಯೆ, ವಂಧ್ಯಾ (ಪುತ್ರ) ಆದಿ ವಿಷಯಗಳೆಲ್ಲಾ ಪ್ರಮಾಣವು ಎಂದಾಗುವುದೇನು ?

(ನನ್ವಸ್ತು ವೇದಪುರಾಣಾದೀನಾಮ ಪ್ರಾಮಾಣ್ಯಮಭಿಮತಮೇವ ಚಾರ್ವಾಕಾಣಾಮಿದಂ ತ್ವಯಾ ಆಪಾದಿತಮಿತಿ ಚೇತ್ತತ್ರಾಹ–ಅಪ್ರಮಾಣತಯೇತಿ । ನಿರ್ದೋಷಾಣಾಮೇತೇಷಾಂ ವೇದಪುರಾಣಾದೀನಾಮೇತಸ್ಮಿನ್ ಪ್ರಲಯ ಧರ್ಮಾಧರ್ಮಾತ್ಮ ತತ್ತ್ವಲಕ್ಷಣೇ ಅರ್ಥೇ ಅಪ್ರಾಮಾಣ್ಯೇ ಸತಿ ಭೋಗಲಾಂಪಟ್ಯ ಲೋಭ ದ್ವೇಷಾದಿ ದೋಷ ಸಹಸ್ರದುಷ್ಟೇ ಅನ್ಯತ್ರ ತ್ವದ್ವಾಕ್ಯೇಽಪಿ ಇಯಂ ವಂಧ್ಯಾ ಶತಂ ಪುತ್ರಾನ ಸೂತೇತ್ಯಾದಿ ವಾಕ್ಯತುಲ್ಯೇ ಕಿಂ ಪ್ರಾಮಾಣ್ಯಂ ಭವೇತ್ । ತತ್ಸಂಭಾವನಾಪಿ ದುರ್ಲಭೇತ್ಯರ್ಥಃ—ತಾ. ಪ್ರ.)

೨೪ ಇದನ್ನೊಪ್ಪಿಕೊಂಡರೆ ಜಗತ್ತಿನಲ್ಲಿ ಉಚ್ಛೇದವುಂಟಾಗುವುದರಿಂದ ಲೋಕವು ಇದನ್ನು ಒಪ್ಪುವುದಿಲ್ಲ. ಅದರಿಂದ ಬೇರೆ ಹೇಳುವುದನ್ನು ಸಾಕು ಮಾಡಿ, ನಾನಾಡುವ ಈ ಮಾತನ್ನೂ ಕೇಳು.

(ನಚೈತತ್ತ್ವದುಕ್ತಂ ವೇದಪುರಾಣಾದೀನಾಮ ಪ್ರಾಮಾಣ್ಯಂ ಲೋಕೇ ಪ್ರೇಕ್ಷಾವದ್ಭಿರಿಷ್ಯತೇ ಅಂಗೀಕ್ರಿಯತೇ । ಕೃತಗಾನಾಕೃತಾಭ್ಯಾಸಮಾದಿ ದೋಷೇಣ ನಿರ್ಬೀಜ ಪ್ರಯೋಜನ ಸರ್ಗಾದ್ಯ ಸಂಭವೇನ ಚ ಜಗದುಚ್ಛೇದ ಪ್ರಸಂಗಾತ್ । ಕಿಂಚ ದೇಹಾತ್ಮವಾದೇ ಕಿಮವಯವಾಃ ಸರ್ವೇಽಪ್ಯಾತ್ಮಾನ, ಉತಾವಯತ್ಯೇವ । ಆದ್ಯೇ ಬಹೂನಾಂ ಚೇತನಾನಾಂ ಸದೈಕಮತ್ಯನಿಯಮಾ ಭಾವೇನ ವೈಮತ್ಯೇ ದೇಹೋನ್ಮಥನ ಪ್ರಸಂಗಃ । ದ್ವಿತೀಯೇ ವೃಕ್ಣೇ ಹಸ್ತಾದ್ಯೇಕಾದವಯವೇ ಅವಯವಿನಾಶಾಜ್ಜೀವನಾಭಾವ ಪ್ರಸಂಗ ಇತ್ಯಾದ್ಯನ್ಯಚ್ಚ ದೂಷಣ ಸಹಸ್ರಮಸ್ತ್ಯೇವೇತ್ಯಾಸ್ತಾಮೇತತ್ । ಏತೇನ ಹೇ ಅಂಗ, ತ್ವಯಾ ಕಿಣ್ವಪಿಷ್ಟಜಲಾದಿ ಸಂಘಾತೇ ಮದಿರಾಯಾಂ ಮದಶಕ್ತಿರಿವ ಕಾಯಾಕಾರ ಪರಿಣತ ಭೂತ ಸಂಘಾತೇ ಜ್ಞಪ್ತಿಗುಣ ಉತ್ಪದ್ಯತ ಇತಿ ಯದುಕ್ತಂ ತದಪಿ ದತ್ತೋತ್ತರಮೇವ । ತತ್ರ ಇದಮ ಪರಂ ದೂಷಣಂ ಶೃಣ್ವಿತ್ಯರ್ಥಃ ॥—ತಾ. ಪ್ರ.)

ಮದಶಕ್ತ್ಯಾತ್ಮನಿ ಜ್ಞಾನೇ ದೃಷ್ಟಾ ದೇಶಾಂತರೇಷು ಯಾ ।
ಪ್ರಮೃತಾನಾಂ ಪಿಶಾಚಾದಿದೇಹತಾ ಸಾ ನ ಸಿಧ್ಯತಿ ॥ ೨೫ ॥

ಅಥ ಸಾಪಿ ಮುಧಾ ಭ್ರಾಂತಿರ್ಯಾವದ್ದೇಹಂ ಪ್ರದೃಶ್ಯತೇ ।
ಇತಿ ಚೇತನ್ಮೃಧಾ ನಾಮ ಸತ್ಯಮಿತ್ಯೇವ ವೋ ಭವೇತ್ ॥ ೨೬ ॥

---

೨೫ ಜ್ಞಾನವು ಮದಶಕ್ತ್ಯಾತ್ಮಕವಾದುದು ಎನ್ನುವುದಾದರೆ, ದೇಶಾಂತರಗಳಲ್ಲಿ ಸತ್ತವರು ಪಿಶಾಚಾದಿ ದೇಹಗಳನ್ನು ಪಡೆಯುವುದು ನಮ್ಮ ಅನುಭವದಲ್ಲಿದೆಯಲ್ಲಾ ! ಅದು ಇಲ್ಲವಾಗುವುದು.

(ಜ್ಞಾನೇಜ್ಞಾನಗುಣೇ ಮದಶಕ್ತ್ಯಾತ್ಮನಿ, ಮದಶಕ್ತಿರಿವ ಆತ್ಮಾ ಸ್ವಭಾವೋ ಯಸ್ಯ ತಥಾವಿಧೇ ಅಭ್ಯುಪಗಮ್ಯಮಾನೇ ಗುಣಿನೋ ದೇಹಸ್ಯ ನಾಶೇ ಗುಣಸ್ಯಾಪ್ಯವಶ್ಯನಾಶಾದ್ದೇಶಾಂತರೇಷು ಪ್ರಮೃತಾನಾಂ ಜೀವಾನಾಂ ದೇಹಸ್ಯೋಚ್ಛೇದಾತ್ ಪಿಶಾಚಾದಿ ದೇಹಾಂತರೇಣ ಸ್ವದೇಶಾಗಮನಂ, ಪರಶರೀರಾವೇಶೇನ ಪ್ರಾಕ್ತನ ಸ್ವಜನಾದಿ ಪ್ರತ್ಯಭಿಜ್ಞಾ ಸಂಭಾಷಣಾದ್ಯರ್ಥಕ್ರಿಯಾ ಚ ಯಾ ಲೋಕೇ ಪ್ರಸಿದ್ಧಾ ಸಾ ನ ಸಿದ್ಧ್ಯತಿ ॥ —ತಾ. ಪ್ರ)

೨೬ ಆ ಪಿಶಾಚಗಳಾಗುವಿಕೆಯು ಮಿಥ್ಯಾ, ಭ್ರಾಂತಿ, ಅದು ದೇಹವಿರುವವರೆಗೆ ಮಾತ್ರ ಕಾಣುವುದು ಎನ್ನುವುದಾದರೆ, ಮಿಥ್ಯಾ ಎನ್ನುವುದೇ ನೀವು ಹೇಳುವ ಸತ್ಯವಾದೀತು.

(ಅಥ ಯದಿ ಬ್ರೂಯಾಃ ಸಾ ಪಿಶಾಚಾದಿ ಕಲ್ಪನಾಪಿ ಮುಧಾ ಭ್ರಾಂತಿರೇವ। ಪಿಶಾಚಾನಾಮಪ್ರತ್ಯಕ್ಷತ್ವಾತ್ ಚಾರ್ವಾಕಮತೇ ಪ್ರತ್ಯಕ್ಷಾತಿರಿಕ್ತ ಪ್ರಮಾಣಾಭಾವಾತ್ । ನಹಿ ಪ್ರತ್ಯಕ್ಷಾತಿರಿಕ್ತಂ ಪ್ರಮಾಣಂ ಸಂಭವತಿ । ಶತಶೋ ದೃಷ್ಟ ಸಹಚಾರೇಷ್ವಪಿ ಪಾರ್ಥಿವತ್ವ ಲೋಹಲೇಖ್ಯತ್ವಾದಿಷು ವಜ್ರಮಣ್ಯಾದೌ ವ್ಯಭಿಚಾರ ದರ್ಶನಾತ್ । ಉತ್ಪಾತಾದಿ ಕಾಲಾಂತರೇ ಗವಾದೌ ಖರಾದಿ ಪ್ರಸೂತಿ ದರ್ಶನಾತ್, ದೇವತಾ ಪ್ರತಿಮಾದಿಭ್ಯಶ್ಚ ವಿನಾಪಿ ವಹ್ನಿಂ ಧೂಮೋದ್ಗಮ ದರ್ಶನಾತ್ ಸರ್ವತ್ರ ಲಿಂಗೇಷು ದೇಶಾಂತರೇ ಕಾಲಾಂತರೇ ಚ ವ್ಯಭಿಚಾರ ಶಂಕಾಯಾ ವಾರಯಿತು ಮಶಕ್ಯತ್ವೇನಾನುಮಾನಪ್ರಾಮಾಣ್ಯಾ ಯೋಗಾತ್ । ಕೃತ್ಸ್ನೈಕ ದೇಶ ಸಾದೃಶ್ಯ ವಿಕಲ್ಪನೇ ಉಪಮಾನ ಪ್ರಾಮಾಣ್ಯಾಸಿದ್ಧೇರ್ಮಾನಾಂತರಾ ಮೂಲಕ ಶಬ್ದೇಷು ಲೋಕೇ ಅರ್ಥಸಿದ್ಧಿ ನಿಯಮಾದರ್ಶನಾದನ್ಯ ಶಬ್ದಾನಾಮನು

ಏವಂ ಚೇತ್ತತ್ಪರೋ ಲೋಕಃ ಸತ್ಸ್ವರ್ಗನರಕಾದಿಕಂ ।
ಇತ್ಯೇಷಾಪಿ ನ ಸಂವಿತ್ಕಿಂ ಸತ್ಯತಾಮುಪಗಚ್ಛತಿ　　　　॥ ೨೭ ॥

---

ವಾದಿತ್ವಾಚ್ಚ ಶಬ್ದಪ್ರಾಮಾಣ್ಯಾ ಯೋಗಾದರ್ಥಾಪತ್ಯನುಪಲಬ್ಧ್ಯೋಶ್ಚ ವ್ಯತಿರೇಕ ವ್ಯಾಪ್ತ್ಯುಪಜೀವಿನ್ಯೋರನುಮಾನ ಸಮಾನ ಯೋಗಕ್ಷೇಮತ್ವಾತ್ಸಂಭವೈತಿಹ್ಯ ಯೋಃ ಸಂಭಾವನಾ ಮಾತ್ರತ್ವಾದನುಮಾನಾದೌ ಚ ಸಂಭಾವನಾಸ್ವೇವ ಪ್ರಾಮಾ ಣ್ಯಾಭಿಮಾನಾತ್ ಪ್ರವೃತ್ತಿಸಿದ್ಧೇಃ । ಸಂಧಿಗ್ಧೇಽಪಿ ಫಲೇ ಅರ್ಥಾತುರಾಣಾಂ ಪ್ರವೃತ್ತಿ ನಿಯಮ ದರ್ಶನೇನಾರ್ಥ ನಿಶ್ಚಯಸ್ಯ ಪ್ರವೃತ್ತನಂಗಾತ್ವಚ್ಚ ಸರ್ವ ವ್ಯವಹಾರೋತ್ಪತ್ತೇಃ । ಕಿಂ ಚ ಪಿಶಾಚಗ್ರಸ್ತಸ್ಯ ಪಿಶಾಚ ವಾಗ್ವ್ಯವಹಾರೋಽಪಿ ಯಾವದ್ದೇಹಮೇವ ದೃಶ್ಯತೇ ನತು ತನ್ಮರಣೇ । ಅತಸ್ತದ್ದೇಹಸ್ಯೈವ ನಾಸ್ತಿ ಕಾತಿಕ ಭ್ರಾಂತಿರಿವ ಪಿಶಾಚ ಗ್ರಸ್ತೋಽಹಮಿತಿ ವೃಥಾ ಭ್ರಾಂತಿರಿತಿ ಚೇತ್ । ತತ್ತ್ವದುಕ್ತಂ ಸರ್ವಂ ನಾಮ ಶಬ್ದ ಜಾತಂ ಮುಧಾವ್ಯರ್ಥಮೇವ । ಸ್ವೋಕ್ತ್ಯೈವ ವ್ಯಾಹತತ್ವಾತ್ । ನಹಿ ಪ್ರತ್ಯಕ್ಷಾತಿರಿಕ್ತಸ್ಯ ಸರ್ವಸ್ಯ ಪ್ರಮಾಣತ್ವೇ ಚಾರ್ವಾ ಕಾನಾಂ ವಾಕ್ಯಂ ಪ್ರಮಾಣಂ ಭವತಿ । ತಸ್ಯಾಪಿ ಪ್ರತ್ಯಕ್ಷಾತಿರಿಕ್ತತ್ವಾತ್ । ನ ಚಾನುಮಾನಾದೀನಾಮ ಪ್ರಾಮಾಣ್ಯೇ ತ್ವಯಾ ಸ್ವೋಕ್ತೋರ್ಥೋ ಯುಕ್ತಿಭಿ ಸ್ಸಮರ್ಥಯಿತುಂ ಶಕ್ಯಃ। ಯುಕ್ತೀನಾಮನುಮಾನತಯಾ ತತ್ಪ್ರಾಮಾಣ್ಯಾಪತ್ತೇಃ। ನಚ ತೇ ದೃಷ್ಟಾಂತೋಽಸ್ತಿ ಸಾದೃಶ್ಯಸ್ಯೋಪ ಮಾನಗಮ್ಯತ್ವಾತ್ತದ ಪ್ರಾಮಾಣ್ಯೇ ತದಸಿದ್ಧೇಃ । ನಾಪಿ ಸ್ವಪಕ್ಷೇ ಅನುಕೂಲಃ ಪರಪಕ್ಷೇ ಪ್ರತಿಕೂಲೋ ವಾ ತರ್ಕ ಸ್ತ್ವಯೋದ್ಭಾವಯಿತುಂ ಶಕ್ಯಃ । ತರ್ಕಸ್ಯ ಅನ್ವಯವ್ಯತಿರೇಕವ್ಯಾಪ್ತಿ ಘಟಿ ತತ್ವೇನ ತದಪಲಾಪಿನಸ್ತೇ ತದಪ್ರಸಿದ್ಧೇಃ । ಅವತ್ತಿ ವ್ಯತಿರೇಕಯೋರನುಪ ಪತ್ತ್ಯನುಪಲಬ್ಧ್ಯಧೀನತ್ವೇನ ತದುಪಗಮೇ ಅರ್ಥಾಪತ್ತ್ಯನುಪಲಬ್ಧಿ ಪ್ರಾಮಾ ಣ್ಯಾಭ್ಯುಗಮಾಪತ್ತೇಃ । ಪ್ರಮಾಣ ಷಟ್ಕಮಪಿಸತ್ಯಮಿತ್ಯೇವ ವಶ್ಯಾರ್ವಾಕಾ ಣಾಮಭ್ಯುಪಗಂತವ್ಯಂ ಭವೇದಿತ್ಯರ್ಥಃ ॥ —ತಾ ಪ್ರ.)

೨೭. ಹಾಗಾದರೆ, ಪರಲೋಕವನ್ನೂ ಸ್ವರ್ಗನರಕಾದಿಗಳನ್ನೂ ಕುರಿತ ಜ್ಞಾನವೂ ಏಕೆ ಸತ್ಯವಾಗಬಾರದು ?

(ಅಸ್ತ್ವೇವಂ ಕಸ್ತೇ ಲಾಭಸ್ತಮಾಹ—ಏವಂ ಚೇದಿತಿ ಏವಂ ಶಬ್ದಾದೀನಾಂ ಪ್ರಾಮಾಣ್ಯಮಭ್ಯುಪಗತಂ ಚೇತ್ತತ್ತಸ್ಮಾನ್ನಿರ್ದೋಷ ಶಬ್ದರೂಪಾಯಾಃ ಶ್ರುತೇಃ ಪ್ರಾಮಾಣ್ಯಾವಶ್ಯಂ ಭಾವಾದ್ಧೇತೋಃ ಶ್ರುತಿಜನ್ಯಾಪರೋ ಲೋಕಃ ಸ್ವರ್ಗನರಕಾ

ನ ಪಿಶಾಚಪ್ರಮಾ ಸತ್ಯಾ ಮದಶಕ್ತಿಮತೋಽಪಿ ಹಿ ।
ಪ್ರತಿಭಾಸ್ಯ ನ ಸತ್ಯಾ ಸ್ಯಾತ್ಪರಲೋಕಾತ್ಮಿಕಾ ಕಥಂ ॥ ೨೮ ॥

ಪಿಶಾಚೋಸ್ತೀತಿ ಚೇತ್ಸಂವಿತ್ಸತ್ಯಾರ್ಥಾ ತೇನ ಸಂವಿದಃ ।
ಮೃತಸ್ಯಾಸ್ತಿ ಪರೋ ಲೋಕ ಇತ್ಯಸ್ಯಾಂ ಕಿಂ ನ ಸತ್ಯತಾ ॥ ೨೯ ॥

---

ದಿಕಂ ಚ ಸತ್, ಇತ್ಯೇಷಾಪಿ ಸಂವಿತ್ ಸತ್ಯತಾಂ ಪ್ರಾಮಾಣ್ಯಂ ಕಿಂ ನೋಪ ಗಚ್ಛತಿ । ಜ್ಞಾನಾನಾಂ ಹಿ ಸ್ವತ ಏವ ಪ್ರಾಮಾಣ್ಯಂ ಕಾರಣ ದೋಷ ಬಾಧಕ ಜ್ಞಾನಾಭ್ಯಾಂ ಕ್ವಚಿದಪೋದ್ಯತೇ । ನ ಚಾತ್ರಕಾರಣೇ ದೋಷೋಸ್ತಿ, ನಾಪಿ ಸ್ವರ್ಗನರಕಾದಯೋ ನ ಸಂತೀತಿ ಬಾಧಕಂ ಪ್ರಮಾಣಜಜ್ಞಾನಮಸ್ತೀತಿ ಭಾವಃ । —ತಾ. ಪ್ರ.)

೨೮ ಪಿಶಾಚವು ಅನುಭವಸಿದ್ಧವೆಂಬ ಪ್ರಮೆಯು ಸುಳ್ಳು ಎನ್ನುವುದಾದರೆ, ಮದಶಕ್ತಿಯು ಹಿಡಿದಿರುವವರ ಪ್ರತಿಭೆಯೂ ಸುಳ್ಳೇ ಆಗಬೇಕಾಗುವುದು ಅದ ರಿಂದ ನೀನು ಪರಲೋಕಾತ್ಮಿಕಾ ಪ್ರಮೆಯನ್ನು ಸುಳ್ಳು ಎನ್ನುವುದು ಹೇಗೆ ?

(ಅಥ ಸಾಪಿ ಮುಧಾ ಭ್ರಾಂತಿರಿತಿಯದುಕ್ತಂ ತದ್ದೂಷಯತಿ ನೇತಿ । ಪಿಶಾಚಗ್ರಸ್ತಸ್ಯ ಪಿಶಾಚ ವಿಷಯಿಣೀ ಪ್ರಮಾ, ಪಿಶಾಚಸ್ಯ ಪರದೇಹೇ ಸ್ಥಿತಸ್ಯ ತದನುಭವಸಿದ್ಧಾ ದರ್ಶನ ಶ್ರವಣಾದಿ ಪ್ರಮಾ ದ್ರಷ್ಟೄಣಾಮ ಸ್ಮದಾದೀನಾಂ ಪರ ದೇಹೇನ ಪಿಶಾಚ ವ್ಯವಹಾರ ಪ್ರಮಾ ಚ ಜ್ಞಾನಾನಾಂ ಸ್ವತಃ ಪ್ರಾಮಾಣ್ಯಾದೇವ ಲೋಕೇ ಸತ್ಯಾ ಪ್ರಸಿದ್ಧಾ । ಸಾಪಿ ಯದಿ ನ ಸತ್ಯಾ ತರ್ಹಿ ಅಸ್ಯ ಕ್ಷೀಬಸ್ಯ ಮದಿರಾ ದೇರ್ಮದಶಕ್ತಿಮತೋ ದ್ರವಸ್ಯ ಮದಶಕ್ತಿ ಪ್ರತಿಭಾಪಿ ನ ಸತ್ಯಾ ಸ್ಯಾತ್ । ನಹ್ಯ ಮತ್ತಾನುಭವ ಸಿದ್ಧಾರ್ಥಾಪಲಾಪಿನಸ್ತೇ ಪ್ರಮತ್ತ ಪ್ರತೀತಿ ಸಿದ್ಧ ಮದಶಕ್ತಿಃ ಪರೇಣಾಪಲಪನೀಯಾ । ತಥಾ ಚ ತವ ದೃಷ್ಟಾಂತಾ ಸಿದ್ಧ್ಯಾ ಜ್ಞಾನಸ್ಯ ಭೂತಗುಣತ್ವಾ ಸಿದ್ಧೇಃ ಪರಲೋಕಾತ್ಮಿಕಾ ಸ್ವರ್ಗನರಕಾದಿ ಸ್ಥಿತಿಃ ಕಥಂ ತ್ವಯಾ ನಿರಸಿತುಂ ಶಕ್ಯೇತಿ ಶೇಷಃ —ತಾ ಪ್ರ.)

೨೯. ಪಿಶಾಚವು ಉಂಟು ಎನ್ನುವುದಾದರೆ, ಆಗ ಆ ಜ್ಞಾನವು ಸತ್ಯಾರ್ಥ ವಾಯಿತು. ಅದರಿಂದ, ಸತ್ತವನಿಗೆ ಪರಲೋಕವುಂಟು ಎನ್ನುವ ಸಂವಿತ್ತು ಕೂಡ ನಿಜವಾಗುವುದು. ಹೀಗಿರಲು ಪರಲೋಕವುಂಟೆಂಬ ಸಂವಿತ್ತು ಏಕೆ ಸತ್ಯವಲ್ಲ ?

ಕಾಕತಾಲೀಯವದ್ದೇಹಾತ್ಪೈಶಾಚೀ ಜ್ಞಪ್ತಿರಸ್ತಿ ಚೇತ್ ।
ಪರಲೋಕಾರ್ಥಸಂವಿತ್ತಿಃ ಕಥಂ ನಾಸ್ತಿ ಸಕಾರಣಾ ॥ ೩೦ ॥

ಯಾಂತರ್ವೇತ್ತಿ ಯಥಾ ಸಂವಿತ್ಸಾ ತಥಾನುಭವತ್ಯಲಂ ।
ಅಸ್ತು ಸತ್ಯಮಸತ್ಯಂ ವಾ ಸಿದ್ಧಮಿತ್ಯನುಭೂತಿತಃ ॥ ೩೧ ॥

---

(ತೇನ ಸರ್ವಜನ ಪ್ರಸಿದ್ಧೇನ ಜ್ಞಾನಾನಾಂ ಸ್ವತಃ ಪ್ರಾಮಾಣ್ಯೇನ ಪಿಶಾಚೋಽಸ್ತೀತಿ ಸಂವಿತ್ ಸತ್ಯಾರ್ಥಾ ಚೇತ್ ಅನುಭವ ಬಲಾತ್ ಪ್ರಸಿದ್ಧಾವ್ಯೃತ ನ್ಯಾಪಿ ಪರಲೋಕೋಽಸ್ತೀತಿ ಶ್ರುತಿಜನ್ಯಾಯಾಂ ಪ್ರತೀತೌ ತದ್ಬಲಾದೇವ ಕಿಂ ನ ಸತ್ಯತಾ ॥ —ತಾ ಪ್ರ)

೩೦. "ಹಾಗಲ್ಲ ಪಿಶಾಚ ಸಂಬಂಧವಾದ ಜ್ಞಪ್ತಿಯು ಕಾಕತಾಲೀಯದಂತೆ ದೇಹದಿಂದಲೇ ಸಂಭವಿಸುವುದು" ಎನ್ನುವುದಾದರೆ, ಪರಲೋಕವುಂಟೆಂಬ ಸಕಾರಣ ಸಂವಿತ್ತು ಕೂಡ ಏಕೆ ಸತ್ಯವಲ್ಲ ?

(ಕಿಂಚ ಪಿಶಾಚಗ್ರಸ್ತಸ್ಯ ಪೈಶಾಚೀ ಜ್ಞಪ್ತಿರ್ನ ಶ್ರುತಿಸದೃಶ ದೃಢತರಪ್ರಮಾಣಜಾ ಕಿಂತು ಕಾಕತಾಲೀಯವದಾಕಸ್ಮಿಕೀ । ತಥಾವಿಧಾಪಿ ಸಾ ಸ್ವಾನುಭವಾಪಲಾಪಾಯೋಗಾದಸ್ತಿ ಪ್ರಮಾ ಚೇತ್ಸಕಾರಣಾ ದೃಢತರ ಶ್ರುತ್ಯಾದಿ .ಕಾರಣ ಸಯಿತಾ ಪರಲೋಕಾರ್ಥಸಂವಿತ್ತಿಃ ಕಥಂ ನಾಸ್ತಿ ಕುತೋ ನ ಪ್ರಮಾ-ಇತ್ಯರ್ಥಃ —ತಾ ಪ್ರ)

೩೧. ಯಾವುದು ಒಳಗೆ ಹೇಗೆ ತಿಳದುಕೊಳ್ಳುವುದೋ, ಆ ಸಂವಿತ್ತು ಹೇಗಿರುವುದೋ ಹಾಗೆಯೇ ಹೊರಗೂ ಅನುಭವವಾಗುವುದು. ಅದು ಸತ್ಯವಾಗಲಿ ಅದು ಸಿದ್ಧವು ಎಂಬುದು ಅನುಭವವು.

(ನನು ನಾನುಭವ ಬಲಾದೇವಾರ್ಥಸತ್ತ್ವಮವಧಾರಯಿತುಂ ಶಕ್ಯಂ ಶುಕ್ತಿರಜತಾನುಭವೇಽಪಿ ತದರ್ಥಸತ್ತ್ವಾದರ್ಶನಾದಿತ್ಯಾಶಂಕ್ಯಾಹ-ಯೇತಿ । ಯಾ ಸಂವಿತ್ ಅಂತರ್ಯದರ್ಥಸತ್ತ್ವಂ ಯಥಾವೇತ್ತಿ ತದರ್ಥಸತ್ತ್ವಂ ತಥಾನುಭವತಿ ತತ್ರ ಶುಕ್ತಿ ರಜತ ಸಂವಿತ್ ಸ್ವಪ್ರತಿಭಾಸಕಾಲಿಕಮರ್ಥ ಸತ್ತ್ವಮವಗಾಹತೇ । ನೇದಂ ರಜತಮಿತ್ಯುತ್ತರ ಕಾಲಿಕೀ ಬಾಧ ಸಂವಿತ್ತು ತ್ರೈಕಾಲಿಕಂ ರಜತಾಸತ್ತ್ವಂ ।

ಮೃತಸ್ಯಾಸ್ತಿ ಪರೋ ಲೋಕೋ ವಿದಿತ್ಯೇವಂಮಯಿಾ ಭವೇತ್ ।
ಸತಿ ವಾಽಸತಿ ದೇಹೇಽಸ್ಮಿಂಸ್ತೇನ ಕಿಂ ಸದಸಚ್ಚ ಕಿಂ ॥ ೩೨ ॥

ತಸ್ಮಾತ್ಸ್ವಭಾವಃ ಪ್ರಥಮಂ ಪ್ರಸ್ಫುರನ್ವೇತ್ತಿ ಸಂವಿದಂ ।
ವಾಸನಾಕಾರಣಂ ಪಶ್ಚಾದ್ಬುದ್ಧ್ವಾ ಸಂಪಶ್ಯತಿ ಭ್ರಮಂ ॥ ೩೩ ॥

---

ತತ್ರಾದ್ಯಸಂವಿದ್ಬಲಾತ್ಪ್ರಾತಿಭಾಸಿಕಂ ರಜತಾದೇಃ ಸತ್ತ್ವಮಸ್ತು । ದ್ವಿತೀಯ ಸಂವಿದ್ಬಲಾತ್ ಪ್ರಾತಿಭಾಸಿಕಂ ರಜತಾದೇಃ ಸತ್ವಮಸ್ತು । ದ್ವಿತೀಯ ಸಂವಿದ್ಬಲಾದ ಸತ್ತ್ವಂ ವಾ ಅನುಭೂತಿತಃ ಸಿದ್ಧಂ। ಅರ್ಥರೂಪಂ ವಾನುಭವ ಮಂತರೇಣಾಪಲಪಿತುಂ ಶಕ್ಯಮಿತ್ಯರ್ಥಃ ॥—ತಾ. ಪ್ರ.)

೩೨ ಮೃತನಿಗೆ ಪರಲೋಕವುಂಟು ಎಂಬ ಜ್ಞಾನವು ಹೀಗೆ ಪ್ರಮಾಣಸಿದ್ಧವೆಂದ ಮೇಲೆ ಅದು ದೇಹವಿದ್ದರೆ ಸತ್ಯ, ದೇಹವಿಲ್ಲದಿದ್ದರೆ ಅಸತ್ಯ ಎಂದು ಆಗುವುದೂ ಉಂಟೇನು ? (ಸತ್ಯವು ದೇಹವಿದ್ದರೂ ಸತ್ಯವೇ! ದೇಹವಿಲ್ಲದಿದ್ದರೂ ಸತ್ಯವೇ ಅಲ್ಲವೇ ?)

(ತತ್ರ ಯದಿ ಜೀವತಃ ಸತಿ ದೇಹೇ ಶ್ರುತ್ಯಾದಿ ಪ್ರಮಾಣವಶಾದ್ವಾ ಮೃತಸ್ಯ ಅಸತಿ ದೇಹೇ ಸ್ವಪ್ನವತ್ ಪ್ರತಿಭಾಮಾತ್ರಬಲಾದ್ವಾ ಯದಿ ಪರೋ ಲೋಕೋಽಸ್ತೀತ್ಯೇವಂ ಮಯೀ ಏವಮನುಭವರೂಪಾ ಸಂವಿದವಶ್ಯಂ ಭವೇದಿತಿ ತರ್ಹಿ ತೇನ ಮರಣೇನ ಕಿಂ ಜೀವದನುಭವಸಿದ್ಧಂ ಸನ್ಮೃತಾನುಭವಸಿದ್ಧ ಮಸದಿತ್ಯಪಲಪ್ಯೇತ ಕಿಂವಾ ವೈಪರೀತ್ಯೇನ। ನೋಭಯಮಪ್ಯಲಪಿತುಂ ಶಕ್ಯಮಿತಿ ಸಿದ್ಧಂ ಶ್ರುತ್ಯಾದಿ ಪ್ರಾಮಾಣ್ಯಮಿತ್ಯರ್ಥಃ ॥—ತಾ ಪ್ರ.)

೩೩. ಅದರಿಂದ (ಹೀಗೆ ಹೇಳುವುದು ಸರಿ ) ಸ್ವಭಾವವು (ಚಿತ್ತು) ಮೊದಲು ಸ್ಫುರಣವಾಗಿ ಸಂಪತ್ತನ್ನು ತಿಳಿಯುವುದು. (ಎಂದರೆ ತ್ರಿಪುಟೀಭಾವ ಸಂಪನ್ನವಾಗುವುದು.) ಅಲ್ಲಿಂದಾಚೆಗೆ ಬುದ್ಧಿಯು ವಾಸನಾ ಕಾರಣವಾಗಿ ತನ್ನ ಭ್ರಮವನ್ನು ತಾನೇ ಕಾಣುವುದು.

(ಸ ಯದಿ ಬ್ರೂಯಾತ್ಕಾಯಾಕಾರಪರಿಣತೇಭ್ಯೋ ಭೂತೇಭ್ಯಃ ಸಂವಿದುದ್ಭವಾನ್ನ ಮೃತಸ್ಯ ಕಾಯನಾಶೇ ಪಾರಲೌಕಿಕೀ ಸಂವಿದುದ್ಭವಿಷ್ಯತೀತಿ ತರ್ಹಿ ಸ

ತತ್ ಕ್ಷಯಾಚ್ಛಮಮಾಯಾತಿ ದ್ರಷ್ಟೃದೃಶ್ಯದೃಗಾಮಯಃ ।
ತತ್ಸತ್ತಾಯಾಮುದೇತೀಯಂ ಸಂಸೃತ್ಯಾಖ್ಯಾ ಪಿಶಾಚಿಕಾ ॥ ೩೪ ॥

ಉಪಲಂಭ ಉದೇತ್ಯಾದೌ ಬ್ರಹ್ಮಣೋ ವಾಸನಾ ತತಃ ।
ತಚ್ಛಾಂತಿಂ ವಿದ್ಧಿ ನಿರ್ವಾಣಂ ತತ್ಸತ್ತಾಂ ಸಂಸೃತಿಭ್ರಮಂ ॥ ೩೫ ॥

ಸಂವಿದಃ ಶಾಶ್ವತತ್ವಾತ್ಸ್ವತಸ್ಸಿದ್ಧತ್ವಾಚ್ ಪ್ರತ್ಯುತ ತತ್ಸಿದ್ಧಿಬಲೇನೈವ ವಾಸನಾ ಮಯುಸ್ಯಾತಿ ವಾಹಿಕ ದೇಹಸ್ಯ ತತ್ಕಲ್ಪಿತ ಸ್ಥೂಲದೇಹಸ್ಯ ಬಾಹ್ಯಪ್ರಪಂಚಸ್ಯ ಚ ಪಶ್ಚಾತ್ಸಿದ್ಧೇಸ್ತದನ್ಯಸ್ಯ ದೃಶ್ಯಸಿದ್ಧಿಹೇತೋರಪ್ರಸಿದ್ಧೇರ್ನ ದೇಹಾಧೀನಂ ಸಂವಿಜ್ಜನ್ಮೇತಿ ಪ್ರತಿವಕ್ತವ್ಯ ಇತಿ ಸೂಚಯಂ ಸ್ತತ್ಪ್ರತಿ ವಚನ ಮುಪಸಂಹೃತ್ಯ "ವಾಸನಾಯಾಂ ವಿಲೀನಾಯಾಮುದರ್ಶನ ಮುಪಾಗತಾ" ಇತ್ಯಾದಿನಾ ಪ್ರಾಗನು ಕ್ರಾಂತಂ ವಾಸನಾ ಕ್ಷಯಾದೇವ ಸರ್ವದೃಶ್ಯೋಚ್ಛೇದಂ ಸಮರ್ಥಯಿತುಂ ಪ್ರಸ್ತೌತಿ –ತಸ್ಮಾದಿತ್ಯಾದಿನಾ । ತಸ್ಮಾದ್ವೇದಾದಿಪ್ರಾಮಾಣ್ಯಸ್ಯ ಜ್ಞಾನಾನಾಂ ಸ್ವತಃ ಪ್ರಾಮಾಣ್ಯಸ್ಯ ಚ ಸಿದ್ಧತ್ವಾಜ್ಞಾನಸ್ವಭಾವಃ ಪರಮಾತ್ಮಾ ಸ್ವಪ್ರಕಾಶತ್ವಾತ್ ಸರ್ವ ವ್ಯವಹಾರಾತ್ಪ್ರಥಮಂ ಸ್ವರೂಪಾಂ ಸಂವಿದಂ ಸ್ವತ ಏವ ನಿತ್ಯಸಿದ್ಧಾಂ ವೇತ್ತಿ ನ ತದ್ವೇದನ ಫಲಮನ್ಯತೋಽಪೇಕ್ಷತೇ ಸ್ವೌಷ್ಣ್ಯ ಪ್ರಕಾಶಾತ್ಮತಾಮಿವ ವಹ್ನಿರಿತ್ಯರ್ಥಃ। ವಾಸನಾನಾಂ ಕಾರಣಮುದ್ಭವೋಪಾದಾನಂ ಸರ್ವಜಗದ್ವಾಸನಾ ಮಯಮಾತಿವಾಹಿಕದೇಹಂ ತು ತತಃ ಪಶ್ಚಾತ್ಸೃಷ್ಟಿ ಜಾಗ್ರದಾರಂಭಕ್ಷಣೇ ಸ್ವರೂಪಚಿತಃ ಸ್ವಭಾವಬಲಾದೇವ ಬುದ್ಧ್ವಾ ತತೋ ದೇಹಾದಿ ಭ್ರಮಂ ಸಂಪಶ್ಯತೀತಿ ನ ಸರ್ವತಃ ಪೂರ್ವಸಿದ್ಧ ಸಂವಿತ್ಸಿದ್ಧಿರ್ದೇಹಾಧೀನಾ–ಇತಿ ಭಾವಃ —ತಾ. ಪ್ರ.)

೩೪. ಆದರಿಂದ, ಆ ವಾಸನಾ ಕ್ಷಯವಾದರೆ ದ್ರಷ್ಟೃ ದೃಶ್ಯ ದರ್ಶನವೆಂಬ ತ್ರಿಪುಟೀ ರೂಪವಾದ ರೋಗವು ಕ್ಷಯವಾಗುವುದು. ಅದು ಇರುವುದಾದರೆ, ಸಂಸೃತಿಯೆಂಬ ಪಿಶಾಚಿಕೆಯು ಉದಯಿಸಲೇ ಉದಯಿಸುವುದು.

೩೫ ಆದಿಯಲ್ಲಿ ಬ್ರಹ್ಮದಿಂದ ವಾಸನಾಗರ್ಭವಾದ ಉಪಲಂಭವು ಉದಯಿ ಸುವುದು. ಅನಂತರ ವಾಸನೆಯು ಉದಯಿಸುವುದು. ಆ ವಾಸನಾ ಶಾಂತಿಯೇ ನಿರ್ವಾಣವೆಂದು ತಿಳಿ. ಆದರ ಇರುವಿಕೆಯೇ ಸಂಸೃತಿಭ್ರಮವು.

ಉತ್ಪನ್ನೈವ ಚ ಸಾನಾದೌ ಪರಬ್ರಹ್ಮಣ್ಯಸಂಭವಾತ್ ।
ಉತ್ಪನ್ನಾ ಸಮಯಾದ್ಯಾಸೌ ಬ್ರಹ್ಮೈವ ಪರಮೇವ ಸತ್ ॥ ೩೬ ॥

---

(ತತ್ರ ಸರ್ಗಾದೌ ಬ್ರಹ್ಮಣ ಆದೌ ವಾಸನಾಂತರ್ಗತ ಪ್ರಪಂಚ ಪರ್ಯಾಲೋಚನಾತ್ಮಾ ಉಪಲಂಭ ಉದೇತಿ "ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ" ಇತಿ ಶ್ರುತೇಃ । ತತಸ್ತಸ್ಮಾತ್ ಪ್ರಾಕ್ತನ ಜಗದ್ವಾಸನಾನಾಂ ಜಗದಾತ್ಮನಾ ಉದ್ಭವೋ ಭವತಿ । ವಾಸನಾಶಾಂತೌ ತು ಬೀಜಾಭಾವಾದೇವ ಜಗದನುದ್ಭವಾರ್ಥಸಿದ್ಧಂ ನಿರ್ವಾಣ ಮಿತ್ಯಾಹ ॥—ತಾ. ಪ್ರ )

೩೬ ಆ ವಾಸನೆಯು ಪರಬ್ರಹ್ಮದಲ್ಲಿಯೇ ಆದಿಯಲ್ಲಿ ಹುಟ್ಟಿತು ಎನ್ನಲಾಗುವುದಿಲ್ಲ ಅದು ಅಸಂಭವ. ಹಾಗಾದರೆ ಅದು ಹುಟ್ಟಿದುದು ಹೇಗೆ ಎಂದರೆ, ಶಾಸ್ತ್ರ ಸಮಯದಿಂದ. ಈ ವಾಸನಾ ಎನ್ನುವುದೂ ಸತ್ಸ್ವರೂಪವಾದ ಪರಬ್ರಹ್ಮವೇ ಹೊರತು ಬೇರೆಯಲ್ಲ.

(ನನು ವಾಸನಾ ಕುತ ಉತ್ಪನ್ನಾ । ನ ತಾವದ್ಬ್ರಹ್ಮಣಃ । ತಸ್ಯ "ತದೇತದ್ಬ್ರಹ್ಮಾಪೂರ್ವಮನ ಪರಮನಂತರಮಬಾಹ್ಯಂ" ಇತ್ಯಾದಿ ಶ್ರುತಿಭಿಃ ಕಾರಣತ್ವ ಪ್ರತಿಷೇಧಾದಸಂಗಕೂಟಸ್ಥಾದ್ವಯತ್ವಶ್ರುತೇಶ್ಚ ನಾಪಿ ಪೂರ್ವಕಲ್ಪೀಯ ಜಗತಃ । ತಸ್ಯ ಪ್ರಲಯೇ ಸ್ವಯಂ ವಿನಶ್ಯತಃ ಅನ್ಯೋತ್ಪಾದನಾಶಕ್ತೇಃ। ನನು ನ ವಿನಶ್ಯತಿ । ಸ್ವಯಮೇವ ಚರಮಭಾವವಿಕಾರೇಣ ಸೂಕ್ಷ್ಮೀಭೂಯ ತಿಷ್ಠತಿ ತಥಾ ಸ್ಥಿತಿರೇವಾಸ್ಯ ಪ್ರಲಯೋ ವಾಸನಾತ್ಮೇತಿ ಚೇನ್ನ । ತಥಾ ಸ್ಥಿತಿರಸ್ಯ ಕಿಂ ಪ್ರಲಯೇ ಸ್ವಸತ್ತಯಾ ಉತ ಬ್ರಹ್ಮಸತ್ತಯಾ ಆದ್ಯೇ "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ" ಇತ್ಯಾದಿ ಶ್ರುತಿವಿರೋಧಾತ್ । ದ್ವಿತೀಯೇ ಸ್ವತೋಽಸತ್ಪರಸತ್ತಯಾ ತಿಷ್ಠತೀತಿ ಪ್ರಲಾಪಸ್ಯಾಲಿಕೇಽವ್ಯತಿಪ್ರಸಕ್ತತ್ವಾತ್ ಪಕ್ಷದ್ವಯೇಽಪಿ ಸೃಷ್ಟಿಪ್ರಲಯ ಯೋರ ವಿಶೇಷಾಪತ್ತೇರಭಾನಮಾನ ಸತ್ತಾಽಪ್ರಸಿದ್ಧೇರ್ನಷ್ಟಂ ತಿಷ್ಠತೀತಿ ಚ ವ್ಯಾಘಾತಾದಿತಿ ಚೇತ್ಸತ್ಯಂ । ಸಾ ವಾಸನಾ ಆದೌ ಪ್ರಲಯೇ ಪೂರ್ವಸರ್ಗೇ ವಾ ಉತ್ಪನ್ನೈವ ನ । ಅಸಂಗಾದ್ವಯೇ ಪರಬ್ರಹ್ಮಣ್ಯ ಸಂಭವಸ್ಯ ತ್ವಯೈವೋಕ್ತತ್ವಾತ್ । ತಥಾಪ್ಯದ್ವಿತೀಯ ಬ್ರಹ್ಮ ಬೋಧನೋಪಾಯತಯಾ ಶಾಸ್ತ್ರಕಲ್ಪಿತಾತ್ಸರ್ಗಾದಿ ಸಮಯಾನ್ನಿರ್ಬೀಜ ಜಗದುತ್ಪತ್ತ್ಯ ಯೋಗಾತ್ಸಾ ವಾಸನಾಪಿ ಪ್ರಾಕ್ ಕೇನ ಚಿನ್ನಿಮಿತ್ತೇನೋತ್ಪನ್ನೇತಿ ಯಾವದ್ಬೋಧೋದಯಂ ಸ್ವೀಕ್ರಿಯತಾಂ । ಬೋಧೋದಯೇ ತು ಸರ್ವಂ ಜಗದ್ಬ್ರಹ್ಮೈವ ಸಾ ವಾಸನಾಪಿ ಪರಂಬ್ರಹ್ಮೈವೇತಿ ಪರ್ಯವಸ್ಯತೀತ್ಯರ್ಥಃ । —ತಾ. ಪ್ರ)

ಏತಾವದ್ಯತ್ಪರಿಜ್ಞಾನಂ ತನ್ನಿರ್ವಾಣಂ ವಿದುರ್ಬುಧಾಃ ।
ಯವತ್ರೈವಾಪರಿಜ್ಞಾನಂ ತಂ ಬಂಧಂ ವಿದ್ಧಿ ರಾಘವ ॥ ೩೭ ॥

ವಿಜ್ಞಾನಘನ ಏವಾಯಂ ಕಚನಾಕಚನಾತ್ಮಕಃ ।
ಸ್ವಯಮೇವ ಕಚತ್ಯಂತರ್ನ ಕಚತ್ಯೇವ ವಾ ಸ್ವಯಂ ॥ ೩೮ ॥

ಸಂವಿದಂಶಪರಾವೃತ್ತಿಮಾತ್ರೇ ವೇಲವರೂಪಿಣಿ ।
ಬಂಧದೃಂಗ್ಮೋಕ್ಷದೃಕ್ ಚೇತಿ ಕ್ಲೇಶಸ್ತತ್ಸಾಧನಂ ಕಿಯತ್ ॥ ೩೯ ॥

---

೩೭. ಇದಿಷ್ಟನ್ನು ತಿಳಿಯುವುದು ಯಾವುದುಂಟೋ ಅದನ್ನೇ ವಿದ್ವಾಂಸರು ನಿರ್ವಾಣವೆನ್ನುವರು ಇದನ್ನು ತಿಳಿಯದಿರುವುದೇ ಬಂಧವು. ಇದನ್ನು ರಾಘವ ತಿಳಿದುಕೋ

(ನಚ ಶ್ರುತಿಭ್ಯಃ ಅಸಂಗಾದ್ವಯಂ ಬ್ರಹ್ಮಾಪರಿಜ್ಞಾಯ ತತ್ರ ವಾಸನಾದ್ಯ ಸಂಭವಸ್ತ್ವಯೋದ್ಭಾವಯಿತುಂ ಶಕ್ಯಃ । ತತ್ಪರಿಜ್ಞಾನೇ ತು ಸರ್ವಸಂಶಯ ಬೀಜಾಜ್ಞಾನೋಚ್ಛೇದಾನ್ನಿರ್ವಾಣಮೇವ ಸಂಪನ್ನಮಿತಿ ನ ವಾಸನೆ ೇತ್ಪತ್ತ್ಯಾದ್ಯ ನುಪಪತ್ತಿ ಶಂಕಾ ಪ್ರಸಕ್ತಿರಿತ್ಯಾಶಯೇನಾಹ—ತಾ ಪ್ರ.)

೩೮. ಈ ಆತ್ಮನು ವಿಜ್ಞಾನಘನನು: (ವಿಜ್ಞಾನವಲ್ಲದ ಇನ್ನೇನೂ ಅಲ್ಲ.) ಕಚನ, ಅಕಚನ, ಎರಡೂ ಇದೆ ಈತನಲ್ಲಿ. ಅದರಿಂದ ತಾನೇ ತನ್ನೊಳಗೇ ಕಚನ ಮಾಡುವನು ಎಂದರೂ ಸರಿ. ತಾನಾಗಿ ಕಚನ ಮಾಡುವುದಿಲ್ಲ ಎನ್ನುವುದೂ ಸರಿ

(ಯನೌಕ್ತಿಕದೃಷ್ಟ್ಯಾ ನಿಷ್ಕರ್ಷೇ ತು ಅಜ್ಞಾನಂ ಬ್ರಹ್ಮೈವ ಜಗತ್ತದ್ವಾಸನಾ ತದವಿದ್ಯಾ ಚಾಜ್ಞಾತಂ ಬ್ರಹ್ಮೈವ ತನ್ನಿವೃತ್ತಿರ್ವಿದ್ಯಾ ತತ್ಫಲಂ ನಿರ್ವಾಣಂ ಚೇತಿ ಪರ್ಯವಸ್ಯತೀತ್ಯಾಶಯೇನಾಹ-ವಿಜ್ಞಾನೇತಿ । ಶ್ರುತ್ಯಾದಿ ಪ್ರಮಾಣಲಾಭಾತ್ಪ್ರಾಕ್ ನ ಕಚತ್ಯೇವ ।—ತಾ ಪ್ರ.)

೩೯. ಸೂಕ್ಷ್ಮರೂಪವಾದ ಸಂವಿದಂಶವು ಭ್ರಾಂತಿಗೊಂಡಿರುವಾಗ ಮಾತ್ರ

ಸಂವಿದುದ್ಬೋಧನೇ ಬಂಧಸ್ತದನುದ್ಬೋಧನೇ ಶಿವಂ ।
ಅಸತ್ಸದ್ವಜ್ಜಗದ್ಭಾತಿ ಸಂವಿದುದ್ಬೋಧನೋದರಂ ॥ ೪೦ ॥

ಅಜಡಂ ವೇದನಂ ಸುಪ್ತಂ ಮೋಕ್ಷ ಇತ್ಯಭಿಧೀಯತೇ ।
ಪ್ರಬುದ್ಧಂ ಬಂಧ ಇತ್ಯಾಹುರ್ಯದಿಚ್ಛಸಿ ತದಾಹರ ॥ ೪೧ ॥

---

ಬಂಧ ದೃಷ್ಟಿ, ಮೋಕ್ಷ ದೃಷ್ಟಿಗಳುಂಟು (ಅದರಿಂದ ಅದನ್ನು ತಪ್ಪಿಸಿಕೊಳ್ಳು ವುದರಲ್ಲಿ) ಎಷ್ಟು ಕ್ಲೇಶವಾದೀತು ?

(ಬದ್ಧಾಸ್ಮೀತಿ ಸ್ವಭಾವತಃ । ಸ್ವಾಂ ಮನ್ಯಮಾನಾ ಸ್ವಯಮೇವ ಸ್ವಬಂಧೋ ನಿತ್ಯಮುಕ್ತಾಸ್ಮೀತಿ ಪ್ರಮಾಣತಃ ಸ್ವಾಂ ಪ್ರಬುದ್ಧಾ ಸಾ ಸ್ವಯಮೇವ ಮೋಕ್ಷ ಇತಿ ನಿಷ್ಕರ್ಷೇಽವಗತೇ ನ ಕಶ್ಚಿನ್ಮೋಕ್ಷ ಸಾಧನೇ ಕ್ಲೇಶ ಇತ್ಯಾಹ —ತಾ ಪ್ರ.)

೪೦. ಸಂವಿತ್ತಿನ ಉದ್ಬೋಧವಾದರೆ ಬಂಧವು: ಅದು ಅನುದ್ಬೋಧವೇ ಮೋಕ್ಷವು: ಅದೇ ಶಿವವು: ಸಂವಿತ್ತಿನ ಉದ್ಬೋಧದಲ್ಲಿ ಅಡಗಿರುವ ಜಗತ್ತು ಅಸತ್ತಾದರೂ ಸತ್‌ನಂತೆ ಭಾಸವಾಗುವುದು.

(ತದಿದಂ ಪರೀಕ್ಷಕೈರ್ವ್ಯುತ್ಥಾನ ಸಮಾಧಿಭ್ಯಾಂ ವ್ಯುತ್ಥಾನ ಸುಷುಪ್ತಿಭ್ಯಾಂ ಚ ಸ್ಪಷ್ಟಂ ದ್ರಷ್ಟುಂ ಶಕ್ಯಮಿತ್ಯಾಶಯೇನಾಹ–ಸಂವಿದುದ್ಬೋಧನೇ ಇತಿ । ಸಂವಿದ ಉದ್ಬೋಧನೇ ಬಹಿರ್ಮುಖತ್ವಾಪಾದನೇ । ಶಿವಂ ನಿರ್ವಾಣಂ ।—ತಾ ಪ್ರ.)

೪೧. "ಜಡವಲ್ಲದ ವೇದನವು ಸುಪ್ತವಾಗಿರುವಿಕೆಯೇ ಮೋಕ್ಷವು. ಅದು ಪ್ರಬುದ್ಧವಾಗಿರುವುದೇ ಬಂಧವು'' ಎಂದು ವಿದ್ವಾಂಸರು ಹೇಳುವರು. ಯಾವುದು ಬೇಕೋ ಅದನ್ನು ಪಡೆದುಕೊ.

ನಿರ್ವಾಣವಾಸನಮನಂತಮನಾದ್ಯಮಚ್ಛ-
ಬೋಧೈಕತಾನಮುಪಯಂತ್ರಣಮಸ್ತಶಂಕಂ ।
ಅದ್ವೈತಮೈಕ್ಯರಹಿತಂ ಚ ನಿರಸ್ತಶೂನ್ಯ-
ಮಾಕಾಶಕೋಶವಿಶದಾಶಯಶಾಂತಮಾಸ್ಸ್ವ ॥ ೪೨ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ವಾಸನಾಭಾವಪ್ರತಿಪಾದನಂ" ನಾಮ
ಏಕೋನಾಶೀತಿತಮಃ ಸರ್ಗಃ

---

೪೨. ವಾಸನಾ ಮುಕ್ತನಾದರೆ, ಅನಂತವೂ, ಅನಾದ್ಯವೂ ಆದ ಅಚ್ಛ ಬೋಧವು ತಾನೇ ತಾನಾಗಿ, ಬಂಧರಹಿತವಾಗಿ, ಶಂಕಾರಹಿತವಾಗಿ ಇರಲಾಗುವುದು. ಅಲ್ಲಿ ಅದ್ವೈತವು: ಅದು ಐಕ್ಯವಲ್ಲ: ಶೂನ್ಯವಲ್ಲ: ಆಕಾಶಕೋಶದಂತೆ ಶುದ್ಧವಾಗಿರುವ ಚಿತ್ತಶಾಂತಿಯನ್ನು ಪಡೆದು ಸುಖವಾಗಿರು.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಾಸನಾಭಾವಪ್ರತಿಪಾದನ" ಎಂಬ
ಎಪ್ಪತ್ತೊಂಭತ್ತನೆಯ ಸರ್ಗವು.

## ಅಶೀತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ.—

ಇತಿ ತೇ ಸರ್ವ ಆಯಾತಾ ಬ್ರಹ್ಮಲೋಕನಿವಾಸಿನಃ ।
ಅದೃಶ್ಯತಾಮೇವ ಗತಾ ದೀಪಾಃ ಕ್ಷೀಣದಶಾ ಇವ ॥ ೧ ॥

ಅಥ ತೇ ದ್ವಾದಶಾದಿತ್ಯಾ ಬ್ರಹ್ಮಣಿ ಬ್ರಹ್ಮತಾಂ ಗತೇ ।
ಜಗದ್ವದ್ಬ್ರಹ್ಮಲೋಕಂ ತಮದಹನ್ಭಾಸ್ವರಾರ್ಚಿಷಃ ॥ ೨ ॥

---

## ಎಂಭತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು :—

೧. ಹೀಗೆ, ಆ ಬ್ರಹ್ಮಲೋಕದ ನಿವಾಸಿಗಳೆಲ್ಲರೂ ದೀಪವು ಆರಿಹೋದ ಹಾಗೆ ಅದೃಶ್ಯತೆಯನ್ನು ಹೊಂದಿದರು.

(ಧಾತುರ್ವಾಸನಾ ಕಲ್ಪಿತಸ್ಯ ತಲ್ಲೋಕದೇವಭುವನಾದಿ ಸರ್ವ ಪ್ರಪಂಚಸ್ಯ ತತ್ಪ್ರಾರಬ್ಧಕ್ಷಯಕ್ಷಣೋತ್ಪನ್ನೇ ಸಾಕ್ಷಾತ್ಕಾರೇಣ ಯೋ ಬಾಧಸ್ತಲ್ಲಕ್ಷಣೋ ವೈಜ್ಞಾನಿಕಃ ಪ್ರಲಯೋ "ನಾಪಶ್ಯಂ ಸ್ವಪ್ನನಗರಂ ಬುಧ್ಯಮಾನ ಇವಾಗ್ರಗಂ" ಇತ್ಯಾದಿನಾ ಸ್ವಪ್ನಬಾಧಸದೃಶಃ ಸೋಪಪತ್ತಿಕಂ ಮುಕ್ತದೃಶಾ ಉಪವರ್ಣಿತಃ । ಬದ್ಧದೃಶಾ ತು ಧಾತುರ್ದೇಹಸ್ಯ ತದಾರಂಭಕೋಪಾಧೀನಾಂ ತದಿಂದ್ರಿಯಾದೀನಾಂ ಚ ಸ್ವಸ್ವಕಾರಣೇ ಲಯದ್ವಾರಾ ಮಾಯಾ ಶಬಲೇ ಬ್ರಹ್ಮಣಿ ಲಯಲಕ್ಷಣಂ ಪ್ರಲಯಮುಪವರ್ಣಯಿತುಂ ಉಪಕ್ರಮತೇ —ತಾ ಪ್ರ.)

೨. ಅನಂತರ ಆ ದ್ವಾದಶಾದಿತ್ಯರೂ ಬ್ರಹ್ಮದಲ್ಲಿ ಬ್ರಹ್ಮತ್ವವನ್ನು ಹೊಂದಿದ ಮೇಲೆ, ಆ ಆದಿತ್ಯರ ಜ್ವಾಲೆಗಳು ಜಗತ್ತನ್ನು ಸುಟ್ಟಂತೆ ಆ ಬ್ರಹ್ಮಲೋಕವನ್ನೂ ಸುಡಲಾರಂಭಿಸಿದುವು.

ವೈರಿಂಚನಗರಂ ದಗ್ಧ್ವಾ ಧ್ಯಾನಂ ಕೃತ್ವಾ ವಿರಂಚಿವತ್ ।
ತೇಽಪಿ ನಿರ್ವಾಣಮಾಜಗ್ಮುರ್ನಿಃಸ್ನೇಹದಶದೀಪವತ್ ॥ ೩ ॥

ತತ ಏಕಾರ್ಣವಾಪೂರೋ ವಿರಿಂಚನಗರಾಂತರಂ ।
ರಾತ್ರೌ ಭುವಮಿವ ಧ್ವಾಂತಂ ಪೂರಯಾಮಾಸ ಸೂರ್ಮಿಮಾನ್ ॥ ೪ ॥

ಆಬ್ರಹ್ಮಲೋಕಮಭವಜ್ಜಗದಾಪೂರ್ಣಮರ್ಣಸಾ ।
ತುಲ್ಯಂ ರಸೈಕಪೂರ್ಣೇನ ಪಕ್ವದ್ರಾಕ್ಷಾಫಲೇನ ತತ್ ॥ ೫ ॥

ತತ್ತದೂರ್ಮಿಗಿರಿವ್ರಾತಖಗೈರಾವಲಿತಾಃ ಖಿಲಾಃ ।
ವಿಚ್ಛಿನ್ನಾಃ ಕಲ್ಪಜಲದಾ ಜಲ ಏವ ನಿಲಿಲ್ಯಿರೇ ॥ ೬ ॥

ಏತಸ್ಮಿನ್ನಂತರೇ ತತ್ರ ದೃಷ್ಟವಾನಹಮಂಬರಾತ್ ।
ಯಾವದಭ್ಯುದಿತಂ ಭೀಮಂ ಭೀತಃ ಕಿಂಚಿನ್ನಭೋಽಂತರಾತ್ ॥ ೭ ॥

---

೩. ಆ ಬ್ರಹ್ಮಲೋಕವನ್ನು ಸುಟ್ಟು, ಬ್ರಹ್ಮನಂತೆಯೇ ಧ್ಯಾನಮಾಡುತ್ತ ಎಣ್ಣೆಯಿಲ್ಲದ ದೀಪದಂತೆ, ಅವರೂ ನಿರ್ವಾಣವನ್ನು ಹೊಂದಿದರು.

೪ ಅನಂತರ ಏಕಾರ್ಣವ ಪೂರವು ಆ ವಿರಂಚಿ ನಗರವನ್ನೂ ರಾತ್ರಿಯಾಗುತ್ತಲೂ ಭೂಮಿಯನ್ನು ಆವರಿಸುವ ಕತ್ತಲಂತೆ, ತರಂಗಗಳಿನ್ನೆಸೆಯುತ್ತಾ ಆವರಿಸಿತು.

(ಮೂರ್ತಿಮಾ ಇತಿ ಪಾಠೇ ಪಂಚೀಕೃತಜಲಾತ್ಮಾ—ತಾ. ಪ್ರ.)

೫. ಜಗತ್ತು ಬ್ರಹ್ಮಲೋಕದವರೆಗೂ ನೀರಿನಿಂದ ತುಂಬಿ ಹೋಯಿತು. ರಸೈಕಪೂರ್ಣವಾದ ಪಕ್ವ ದ್ರಾಕ್ಷಾಫಲದ ಹಾಗೆ ಆಯಿತು.

೬. ಆ ಪ್ರಲಯಾರ್ಣವದ ತರಂಗಗಳೆಂಬ ಹಾರುತ್ತಿರುವ ಪರ್ವತ ಪಂಗ್ತಿಗಳು ಬಂದು ಬೀಳಲು ಖಿಲಗಳಾಗಿ ವಿಚ್ಛಿನ್ನಗಳಾಗಿ ಕಲ್ಪಮೇಘಗಳೂ ನೀರಿನಲ್ಲಿ ಕರಗಿ ಹೋದುವು.

೭. ಅಷ್ಟರೊಳಗೆ ನಾನು ಆಕಾಶದಲ್ಲಿರುವ ಆಕಾಶದಿಂದ ಯಾವುದೋ ಒಂದು ಭೀಮಾಕಾರವು ಹುಟ್ಟಿ ಬಂದುದನ್ನು ಕಂಡು ಕೊಂಚ ಹೆದರಿದೆನು.

ಕಲ್ಪಾಂತಜಗದಾಕಾರಂ ಕೃಷ್ಣಮಾಪೂರಿತಾಂಬರಂ ।
ಆಕಲ್ಪಂ ಸಂಭೃತಂ ನೈಶಂ ದೇಹೇನೇವೋತ್ಥಿತಂ ತಮಃ ॥ ೮ ॥

ತರುಣಾದಿತ್ಯಲಕ್ಷಾಣಾಂ ತೇಜ ಆಭಾಸ್ವರಂ ದಧತ್ ।
ಆದಿತ್ಯತ್ರಯಸಂಕಾಶೈಃ ಸ್ಥಿರವಿದ್ಯುಚ್ಚಯೋಲ್ಬಣೈಃ ॥ ೯ ॥

ನೇತ್ರೈರಾಭಾಸ್ವರಮುಖಂ ಜ್ವಾಲಾಪುಂಜಸಮುದ್ಗಿರಂ ।
ಪಂಚಾನನಂ ದಶಭುಜಂ ತ್ರಿನೇತ್ರಂ ಶೂಲಪಾಣಿಕಂ ॥ ೧೦ ॥

ಆಯಾಂತಮಂತಮುಕ್ತೇಽಪಿ ವ್ಯೋಮ್ನೀವ ವಿತತಾಕೃತಿಂ ।
ಖಮಿವಾಸಿಘನಶ್ಯಾಮಂ ದೇಹಮಾಸಾದ್ಯ ಸಂಸ್ಥಿತಂ ॥ ೧೧ ॥

ಸ್ಥಿತಮೇಕಾರ್ಣವಾಪೂರ್ಣಾದ್ಬ್ರಹ್ಮಾಂಡಾದ್ಬಹಿರಂಬರೇ ।
ವ್ಯೋಮೇವ ಹಸ್ತಪಾದಾದಿಸಂನಿವೇಶೇನ ಲಕ್ಷಿತಂ ॥ ೧೨ ॥

---

೮. ಕಲ್ಪಾಂತ ಜಗತ್ತಿನ ಆಕಾರವಾಗಿ ಕಪ್ಪನೆ ಆಕಾಶವನ್ನೆಲ್ಲ ತುಂಬಿ, ಜಗತ್ತು ಆರಂಭವಾದಂದಿನಿಂದ ಇದುವರೆಗೂ ನಿಶೆನಿಶೆಯು ಬರುತ್ತಿದ್ದ ತಮವೆಲ್ಲ ಇಂದು ಒಂದೇ ದೇಹದಿಂದ ಹುಟ್ಟಿಬಂತೋ ಎಂಬ ಹಾಗಿತ್ತು.

೯–೧೦. ಒಂದು ಲಕ್ಷ ತರುಣಾದಿತ್ಯರ ತೇಜವೆಲ್ಲವನ್ನೂ ಧರಿಸಿರುವ ಭಾಸ್ವರ ಮೂರ್ತಿಯೋ, ಆದಿತ್ಯತ್ರಯರ ಪ್ರಕಾಶದಿಂದ ಕೂಡಿ, ಸ್ಥಿರವಿದ್ಯುಚ್ಚಯದಿಂದ ಉಲ್ಬಣವಾಗಿರುವ ಕಣ್ಣುಗಳಿಂದ ಪ್ರಕಾಶವಾಗಿರುವ ಮುಖವುಳ್ಳವನಾಗಿ, ಜ್ವಾಲಾ ಮಾಲೆಗಳನ್ನು ಗುಳುವವನಾಗಿ, ಐದು ಮುಖಗಳಿಂದಲೂ ಹತ್ತು ಭುಜಗಳಿಂದಲೂ ತ್ರಿನೇತ್ರಗಳಿಂದಲೂ ಕೂಡಿ ಶೂಲಪಾಣಿಯಾಗಿತ್ತು ಆ ಮೂರ್ತಿ.

೧೧. ಆಗ ಆಕಾಶದಂತೆ ವಿಸ್ತಾರವಾದ ಆಕಾರವುಳ್ಳವನಾಗಿ, ಖಡ್ಗ ದಂತೆಯೂ ಮೋಡದಂತೆಯೂ ಶ್ಯಾಮನಾಗಿ ಆಕಾಶವೇ ದೇಹವನ್ನು ಪಡೆದು ಬಂದಂತಿರುವ

೧೨. ಏಕಾರ್ಣವದಿಂದ ತುಂಬಿರುವ ಬ್ರಹ್ಮಾಂಡದ ಹೊರಗಿನ ಆಕಾಶದಲ್ಲಿ ಹಸ್ತಪಾದಾದ್ಯವಯವಗಳಿಂದ ಕೂಡಿರುವ ಆಕಾಶವೋ ಎಂಬಂತಿರುವ

ಘೋಣಾನಿಲಪರಾವೃತ್ತಿವಿಧೂತೈಕಮಹಾರ್ಣವಂ ।
ಗೋವಿಂದಮಿವ ದೋರ್ದಂಡಕ್ಷೋಭಿತಕ್ಷೀರಸಾಗರಂ ॥ ೧೩ ॥

ಕಲ್ಪಾರ್ಣವಜಲಾಪೂರಂ ಪುಂಸ್ತ್ವೇನೇವ ಸಮುತ್ಥಿತಂ ।
ಮೂರ್ತಿಯುಕ್ತಮಹಂಕಾರಮಸ್ತ್ರಕಾರಣಮಾಗತಂ ॥ ೧೪ ॥

ಕುಲಾಚಲಬೃಹದ್ವೃಂದಮಿವೋಡ್ಡಯನಡಂಬರೈಃ ।
ಪಕ್ಷೌಘೈರುತ್ಥಿತಂ ವ್ಯೋಮ ಸಮಸ್ತಮಭಿಪೂರಯತ್ ॥ ೧೫ ॥

ತತಸ್ತ್ರಿಶೂಲನಯನೈರ್ಮಯಾ ರುದ್ರೋಽಯಮಿತ್ಯಸೌ ।
ದೂರಾದೇವ ಪರಿಜ್ಞಾಯ ಪರಮೇಶೋ ನಮಸ್ಕೃತಃ ॥ ೧೬ ॥

---

೧೩. ಆ ಮಹಾಮೂರ್ತಿಯ ನಾಸಾಪುಟದಿಂದ ಬರುತ್ತಿರುವ ಶ್ವಾಸ ವಾಯುವು ಆ ಪ್ರಲಯ ಸಮುದ್ರವನ್ನು ಕಲಕುತ್ತಿತ್ತು. ಅದನ್ನು ನೋಡಿದರೆ ಕ್ಷೀರಸಾಗರವನ್ನು ತನ್ನ ತೋಳುಗಳಿಂದ ಗೋವಿಂದನು ಕಲಕುತ್ತಿರುವನೋ ಎಂಬಂತಿತ್ತು.

೧೪. ಪ್ರಲಯಾರ್ಣವದ ಜಲಪ್ರವಾಹವೆಲ್ಲ ಪುರುಷಾಕೃತಿಯನ್ನು ಪಡೆದು ಬಂತೋ ಎಂಬಂತೆ, ಜಗತ್ತಿನ ವ್ಯಕ್ತಿವ್ಯಕ್ತಿಯಲ್ಲಿಯೂ ಇರುವ ಅಹಂಕಾರವೆಲ್ಲವೂ ಒಟ್ಟುಗೂಡಿ ಒಂದು ದೇಹವನ್ನು ಪಡೆದು ಅಸ್ತ್ರಕಾರಣವಾಗಿ ಬಂತೋ ಎಂಬಂತೆಯೂ ಇತ್ತು.

(ಸರ್ವಕಾರಣತ್ವಾತ್ ಸ್ವಯಮಸ್ತ್ರಕಾರಣಂ —ತಾ. ಪ್ರ.)

೧೫. ಕುಲಾಚಲ ಪರ್ವತಗಳೆಲ್ಲವೂ ಒಟ್ಟು ಸೇರಿ ರೆಕ್ಕೆಗಳನ್ನು ಬಡಿದು ಕೊಂಡು ಹಾರಬೇಕೆಂದು ಮೇಲಕ್ಕೆದ್ದು ಆಕಾಶವನ್ನೆಲ್ಲ ತುಂಬಿರುವುದೋ (ಎಂಬಂತಿತ್ತು.)

೧೬. ಹೀಗಿರುವ ಆ ಮೂರ್ತಿಯನ್ನು ಕಂಡು, ತ್ರಿಶೂಲದಿಂದಲೂ ಮೂರು ಕಣ್ಣುಗಳಿಂದಲೂ ಈತನು ರುದ್ರನಿರಬೇಕು ಎಂದು ದೂರದಿಂದಲೇ ತಿಳಿದುಕೊಂಡು ಆ ಪರಮೇಶ್ವರನಿಗೆ ನಮಸ್ಕರಿಸಿದೆನು.

**ಶ್ರೀ ರಾಮ ಉವಾಚ:—**

ಕಿಂ ಸ ತಾದೃಗ್ವಿಧೋ ರುದ್ರಃ ಕಿಂ ಕೃಷ್ಣಃ ಕಿಂ ಮಹಾಕೃತಿಃ ।
ಕಿಂ ಪಂಚವದನಃ ಕಸ್ಮಾದ್ದಶಬಾಹುಃ ಸ ತಿಷ್ಠತಿ ॥ ೧೭ ॥

ಕಿಂ ತ್ರಿನೇತ್ರಃ ಕಿಮುಗ್ರಾತ್ಮಾ ಕಿಮೇಕಃ ಕಿಂಪ್ರಯೋಜನಃ ।
ಕೇನೇರಿತಃ ಕಿಮಕರೋಚ್ಛಾಯಾಸೀದ್ವದ ಕಾ ಮುನೇ ॥ ೧೮ ॥

---

**ಶ್ರೀ ರಾಮನು ಕೇಳಿದನು :—**

೧೭. ರುದ್ರನು ಆ ವಿಧವಾಗಿರುವುದೇಕೆ ? ಅವನು ಕಪ್ಪಗಿರುವುದೇಕೆ ? ಮಹಾಕೃತಿಯಾಗಿರುವುದೇಕೆ ? ಆತನು ಪಂಚಮುಖನಾಗಿರುವುದೇಕೆ ? ದಶ ಬಾಹುವಾಗಿರುವುದೇಕೆ ?

(ನನು ಪರಮೇಶ್ವರೋ "ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ" ಇತ್ಯಾದಿ ಶ್ರುತಿಷು ಮಾಯಾಶಬಲಂ ಬ್ರಹ್ಮೈವಾಮೂರ್ತಂ ಮಹೇಶ್ವರ ಇತಿ ಪ್ರಸಿದ್ಧಂ ತತ್ಕಿಮರ್ಥಂ ಕೃಷ್ಣೋಪಾದಿಭಿಃ ಪಂಚವದನ ವಿಶಿಷ್ಟಾಂ ಮೂರ್ತಿಂ ಧತ್ತೇ ಸರ್ವಾತ್ಮನೋ ವಾ ಕಥಂ ಪರಿಚ್ಛಿನ್ನಮೂರ್ತಿಭಾವಃ, ಇತಿ ವಿವಿಚ್ಯ ಜಿಜ್ಞಾಸಮಾನೋ ರಾಮಃ ಪೃಚ್ಛತಿ—ಕಿಂ ಸ ಇತಿ । ಸ ಸರ್ವ ಶ್ರುತಿ ಪ್ರಸಿದ್ಧಃ ಪರಮೇಶಸ್ತಾ ದೃಗ್ವಿಧಸ್ತ್ವದ್ವರ್ಣಿತರೀತ್ಯಾ ಭಯಾನಕ ಸ್ವರೂಪಃ ಕಿಂ ನಿಮಿತ್ತಂ ಕೇನೋಪಾಧಿನ ಸ್ಥಿತ ಇತಿ ಪ್ರಶ್ನಸ್ಯ ಪ್ರಪಂಚಭೂತಾ ದಶಪ್ರಶ್ನಾ ಸ್ತ್ರಯಃ ಸ್ವತಂತ್ರಾಃ । ಸ ತಿಷ್ಠತೀತ್ಯತ್ರಾಪಿ ಕ್ವೇತ್ಯಾಧ್ಯಾಹೃತ್ಯಾಧಾರಪ್ರಶ್ನೋ ಬೋಧ್ಯಃ । ಏವಂ ಕಿಮುಗ್ರಃ ಕಿಮಾತ್ಮೇತಿ ಕಿಮಃ ಪ್ರತ್ಯೇಕಂ ಸಂಬಂಧಾದ್ದ್ವೌ ಪ್ರಶ್ನೌ ॥ —ತಾ. ಪ್ರ )

೧೮ ಆತನು ತ್ರಿನೇತ್ರನಾಗಿರುವುದೇಕೆ ? ಆತನು ಉಗ್ರನಾಗಿರುವುದೇಕೆ ? ಆತನು ಒಬ್ಬನೇ ಇರುವುದೇಕೆ ? ಆತನು ಹಾಗೆ ಬರಲು ಪ್ರಯೋಜನವೇನು ? ಆತನನ್ನು ಆ ಕಾರ್ಯಕ್ಕೆ ಪ್ರೇರಿಸಿದವರು ಯಾರು ? ಆತನೇನು ಮಾಡಿದನು? ಆತನ ಛಾಯೆಯಾಗಿದ್ದವಳು ಯಾರು ? ಎಲೈ ಮುನೀಂದ್ರನೇ ಹೇಳು.

(ಸ ಕಿಂ ಸ್ವತಂತ್ರ ಉತ ಪರತಂತ್ರ । ಯದಿ ಸ್ವತಂತ್ರಃ ತರ್ಹಿ ಪೂರ್ಣ ಕಾಮಸ್ಯಾಸ್ಯ ಕಿಮರ್ಥಂ ಸಂಹಾರೇ ಪ್ರವೃತ್ತಿಃ । ಯದಿ ಪರತಂತ್ರಸ್ತರ್ಹಿ ಕೇನೇರಿತಃ । ತಸ್ಮಿನ್ನೀಶ್ವರೇ ರುದ್ರರೂಪೇ ಸತಿ ತದೀಯಚ್ಛಾಯಾರೂಪಾ ಮಾಯಾಪಿ ಕಾ ಆಸೀತ್ತದ್ವದೇತ್ಯರ್ಥಃ ॥ —ತಾ. ಪ್ರ.)

ಶ್ರೀ ವಸಿಷ್ಠ ಉವಾಚ:—

ಕಾಕುತ್ಸ್ಥ ರುದ್ರನಾಮಾಸಾವಹಂಕಾರತಯೋತ್ಥಿತಃ ।
ವಿಷಮೈಕಾಭಿಮಾನಾತ್ಮಾ ಮೂರ್ತಿರಸ್ಯಾಮಲಂ ನಭಃ । ॥ ೧೯ ॥

ವ್ಯೋಮಾಕೃತಿಃ ಸ ಭಗವಾನ್ವ್ಯೋಮವರ್ಣೋ ಮಹಾದ್ಯುತಿಃ ।
ಚಿದ್ವ್ಯೋಮಮಾತ್ರಸಾರತ್ವಾದಾಕಾಶಾತ್ಮಾ ಸ ಉಚ್ಯತೇ ॥ ೨೦ ॥

ಸರ್ವಭೂತಾತ್ಮಭೂತತ್ವಾತ್ಸರ್ವಗತ್ವಾನ್ಮಹಾಕೃತಿಃ ।
ಯಾನಿ ತಸ್ಯಾನುಷಕ್ತಾನಿ ಪಂಚ ಖಾನೀಂದ್ರಿಯಾಣ್ಯಲಂ ॥ ೨೧ ॥

ತಾನಿ ತಸ್ಯ ಮುಖಾನ್ಯಾಹುಸ್ತತ್ಪದರ್ಶ್ರುವಾಣಿ ಸರ್ವತಃ ।
ಕರ್ಮೇಂದ್ರಿಯಾಣಿ ವಿಷಯಾಸ್ತೇ ಹಿ ತಸ್ಯ ಭುಜಾ ದಶ ॥ ೨೨ ॥

---

ಶ್ರೀ ವಸಿಷ್ಠನು ಹೇಳಿದನು.—

೧೯. ಎಲೈ ಕಾಕುತ್ಸ್ಥನೇ, ಈ ರುದ್ರನು ಅಹಂಕಾರದಿಂದ ಹುಟ್ಟಿದವನು. ವಿಷಯಾಭಿಮಾನದಿಂದ ಅಳಿಸುತ್ತಾ, ಏಕಾಭಿಮಾನದಿಂದ ಕಾಪಾಡುತ್ತಾ ಇರುವ ಮೂರ್ತಿಯು ರುದ್ರನು ಈತನು ಶುದ್ಧವಾದ ಆಕಾಶದೇಹಿಯು.

(ಸ್ಥಿತಿಸಂಹಾರಾದಿಗೋಚರ ಸಂಕಲ್ಪಾಧ್ಯವಸಾಯಾದಿ ಬೀಜಭೂತಸರ್ವಾಭಿಮಾನಾತ್ಮಕ ಮಾಯಾವೃತ್ತಿರೂಪಯಾ ಅಹಂಕಾರತಯಾ ಸರ್ವಜಗದಧ್ಯಾಸ ಮೂಲಸ್ತಂಭ ಭೂತಯಾ । ಸರ್ವಪ್ರಾಣಿರೋದನೇ ಸರ್ವ ಶರಣಾಗತರುಗ್ದ್ರಾವಣೇ ತು ನಿಮಿತ್ತ ಭೂತಯಾ ರುದ್ರನಾಮಾ ಸನ್ನುತ್ಥಿತಃ । ತತ್ರ ರೋದನೇ ವಿಷಮಾಭಿಮಾನಾತ್ಮಾ ರುಗ್ದ್ರಾವಣೇ ಏಕಾಭಿಮಾನಾತ್ಮಾ ಸಂಪದ್ಯತೇ । ಅಸ್ಯ ಸಾ ಮಯಾ ದೃಷ್ಟಾ ಮೂರ್ತಿ ಸ್ತ್ವಮಲಂ ನಭ ಆಕಾಶಮೇವ ॥ —ತಾ. ಪ್ರ.)

೨೦ ವ್ಯೋಮಾಕೃತಿಯಾಗಿರುವ ಆ ಭಗವಂತನು ವ್ಯೋಮವರ್ಣನೇ ಆಗಿ ಮಹಾ ತೇಜಃಪುಂಜನಾಗಿರುವನು. ಚಿದಾಕಾಶಮಾತ್ರಸಾರನಾಗಿರುವುದರಿಂದ ಆತನು ಆಕಾಶಾತ್ಮಾ ಎನ್ನಿಸಿಕೊಳ್ಳುವನು.

(ಅನೇನ ಕಿಂ ಸ ತಾದೃಗ್ವಿಧಃ ಕಿಂ ಕೃಷ್ಣಃ ಕಿಂ ಮಹಾಕೃತಿರಿತಿ ಪ್ರಶ್ನತ್ರಯಂ ಸಮಾಹಿತಮಿತ್ಯಾಹ ॥ —ತಾ. ಪ್ರ.)

೨೧–೨೨. (ಅಷ್ಟೇ ಅಲ್ಲ) ಈತನು ಸರ್ವಭೂತಾತ್ಮಭೂತನಾದುದರಿಂದ, ಸರ್ವಗನಾದುದರಿಂದ ಮಹಾಕೃತಿಯು. ಆತನ ದೇಹದಲ್ಲಿರುವ ಪಂಚೇಂದ್ರಿಯಗಳು

ಸರ್ವಭೂತನರೈಃ ಸಾರ್ಧಂ ಬ್ರಹ್ಮಣಾ ಪರಮೇಯುಷಾ ।
ಯದಾಸೌ ಸಂಪರಿತ್ಯಕ್ತಸ್ತದಾ ಸ್ವಾಂ ಮೂರ್ತಿಮಾಗತಃ ॥ ೨೩ ॥

ಸ ಚೈಕಾಂಶೈಕರೂಪಾತ್ಮಾ ನಾಸ್ತಿ ತಸ್ಯ ಹಿ ನಾಕೃತಿಃ ।
ತಥಾ ದೃಶ್ಯತ ಏವಾಸೌ ಭ್ರಾಂತಿಮಾತ್ರೇಣ ಮೂರ್ತಿಮಾನ್ ॥ ೨೪ ॥

---

ಯಾವವುಂಟೋ ಅವೇ ಸರ್ವತಃ ಹೊಳೆಯುವ ರೂಪಗಳಾಗಿ ಆತನ ಐದು ಮುಖ ಗಳಾದುವು ಕರ್ಮೇಂದ್ರಿಯ ಪಂಚಕವೂ ವಿಷಯ ಪಂಚಕವೂ ಸೇರಿ ಆತನ ಹತ್ತು ಭುಜಗಳಾದುವು

೨೩. ಸರ್ವ ಪ್ರಾಣಿಗಳಿಂದಲೂ ನರರಿಂದಲೂ ಕೂಡಿ ಆ ಬ್ರಹ್ಮನು ಪರಮ ಪದವನ್ನು ಕುರಿತು ಹೊರಟಾಗ ಎಲ್ಲರಿಂದಲೂ ಪರಿತ್ಯಕ್ತನಾದೀತನು ಮೂರ್ತಿ ಯಾಗಿ ಎದುರಿಗೆ ಬಂದನು.

(ವಾಕ್ಪಾಣಿಪಾದಪಾಯೂಪಸ್ಥಾಖ್ಯಾನಿ ಪಂಚಕರ್ಮೇಂದ್ರಿಯಾಣಿ ದಕ್ಷಿಣತಃ ವಚನಾದಾನವಿಹರಣೋತ್ಸರ್ಗಾನಂದಾಖ್ಯಾಂ ಪಂಚ ತದ್ವಿಷಯಾಶ್ಚ ವಾಮತಃ ಇತಿ ಕ್ರಮಾತ್ ತಸ್ಯ ದಶಭುಜಾ ಇತ್ಯರ್ಥಃ । ತರ್ಹ್ಯಸೌ ಪ್ರಾಗಪಿ ತಾದೃಶ ಮೂರ್ತ್ಯಾ ಕುತೋ ನ ದೃಷ್ಟ ಇತಿ ಚೇಚ್ಚರಾಚರ ನಾಮರೂಪಕಾರ್ಯ್ಯಾಕಾರಾಧ್ಯಾ ರೋಪ ವ್ಯಾಮೂಢ ದೃಷ್ಟಿಭಿಸ್ತದಂತರ್ಗತ ಕಾರಣ ಸ್ವಭಾವಸ್ಯ ದುರ್ಗ್ರಹತ್ವಾ ದೇವೇತ್ಯಾಶಯೇನಾಹ–ಸರ್ವೇತಿ । ಸರ್ವೈರ್ಭೂತೈಶ್ಚತುರ್ವಿಧಶರೀರೈರ್ನರೈಸ್ತತ್ತ ಜ್ಜೀವೈಶ್ಚ ಸಾರ್ಧಂ ಪರಂ ಕಾರಣಂ ಮಾಯಾಶಬಲಂ ಬ್ರಹ್ಮ ಆ ಈಯುಷಾ ಪ್ರಲಯೇನ ಪ್ರಾಪ್ತವತಾ ಬ್ರಹ್ಮಣಾ ಚತುರ್ಮುಖೇನ ಸ್ವಾಧ್ಯಾರೋಪಿತ ಕಾರ್ಯೇಣ ಪಟೇನ ತಂತುರಿವ ಯದಾಸೌ ಪರಿತ್ಯಕ್ತಸ್ತದಾ ಸ್ವಾಂ ಪ್ರಾಗುಕ್ತಾಕಾಶಮಾತ್ರ ಪರಿಶೇಷರೂಪಾಂ ವರ್ಣಿತಾಂ ಮೂರ್ತಿಮಾಗತಃ । ಕಾರಣರೂಪೇಣ ಸ್ಫುಟೀ ಭೂತ ಇತಿ ಯಾವತ್ ॥ —ತಾ. ಪ್ರ)

೨೪ ಆ ರುದ್ರನು (ಎಲ್ಲವೂ ಕಳೆದು ಹೋಗಿ ಉಳಿದಿರುವ) ಕಾರಣೈಕಾಂಶ ರೂಪ ಮಾತ್ರ ಉಳ್ಳವನಾದ್ದರಿಂದ ಆತನಿಗೆ ಆಕೃತಿಯೇ ಇಲ್ಲ. ಆದರೂ ಉಪಾಸ ಕರ ಉಪಾಸನಾರೂಪ ವಾಸನಾ ಬಲದಿಂದ ಜನಿಸಿರುವ) ಭ್ರಾಂತಿಯಿಂದ ಹಾಗೆ ಮೂರ್ತಿಮಂತನಾಗಿ ಕಾಣಿಸಿಕೊಳ್ಳುವನು.

ಚಿದಾಕಾಶಗತೇ ಸ್ಫಾರೇ ಭೂತಾಕಾಶೇ ಸ ತಿಷ್ಠತಿ ।
ದೇಹೇ ಚ ಸರ್ವಭೂತಾನಾಂ ನಿತ್ಯಂ ವಾಯುರಿವೇಶ್ವರಃ ॥ ೨೫ ॥

ಸರ್ವಭೂತಪರಿತ್ಯಕ್ತಸ್ತಸ್ಮಿನ್ಕಾಲೇ ಖಮೂರ್ತಿಮಾನ್ ।
ಕ್ಷೋಭಯನ್ನ ಕ್ಷಣಂ ಕ್ಷೀಣಃ ಪರಮಾಂ ಶಾಂತಿಮೇಷ್ಯತಿ ॥ ೨೬ ॥

ಯೇ ಗುಣಾಕೃತಯಃ ಕಾಲಾಶ್ಚಿತ್ತಾಹಂಕಾರಬುದ್ಧಯಃ ।
ಪ್ರಣವಸ್ಯ ಚ ಯೇ ವರ್ಣಾ ಯೇ ಚ ವೇದಾಸ್ತಥಾ ತ್ರಯಃ ॥ ೨೭ ॥

ರುದ್ರಸ್ಯ ತಸ್ಯ ತೇ ನೇತ್ರಸಂನಿವೇಶೇನ ಸಂಸ್ಥಿತಾಃ ।
ತ್ರಿಶೂಲಂ ತೇನ ತ್ರೈಲೋಕ್ಯಂ ಗೃಹೀತಂ ಕರಕೋಟರೇ ॥ ೨೮ ॥

ಯಸ್ಮಾತ್ತದ್ವ್ಯತಿರೇಕೇಣ ಸರ್ವಭೂತಗಣೇಷ್ವಪಿ ।
ಅನ್ಯನ್ನ ವಿದ್ಯತೇ ಕಿಂಚಿದ್ದೇಹಾತ್ಮೈವ ತತಃ ಸ್ಥಿತಃ ॥ ೨೯ ॥

---

೨೫. ಚಿದಾಕಾಶದಲ್ಲಿರುವ ವಿಸ್ತಾರವಾದ ಭೂತಾಕಾಶದಲ್ಲಿ ಈತನು ಇರುವನು. ಪ್ರತಿಯೊಂದು ಭೂತದ ದೇಹದಲ್ಲಿಯೂ ವಾಯುವಿನಂತೆ ಇದ್ದರೂ ಈಶ್ವರನಾಗಿ ಯಾವಾಗಲೂ ಇರುವನು.

೨೬. ಆಗ ಇನ್ನು ಯಾವ ಭೂತವೂ ಇರಲಿಲ್ಲವಾಗಿ ಆತನು ತಾನೇ ಒಬ್ಬ ಮೂರ್ತಿಯಾಗಿ ಬಂದನು. ಒಂದು ಕ್ಷಣ ಕಾಲ ಇತರರನ್ನು ಕ್ಷೋಭೆಗೊಳಿಸಿ ಕ್ಷೀಣನಾಗಿ ಪರಮಶಾಂತಿಯನ್ನು ಹೊಂದುವನು.

೨೭–೨೮. ಗುಣಗಳು, ಕಾಲಗಳು, ಚಿತ್ತಾಹಂಕಾರ ಬುದ್ಧಿಗಳು, ಪ್ರಣವದಲ್ಲಿರುವ ವರ್ಣಗಳು, ವೇದಗಳು, ಇವೆಲ್ಲವೂ ಮೂರು ಮೂರಾಗಿರುವವಷ್ಟೆ? ಅವೇ ರುದ್ರನ ಕಣ್ಣುಗಳಾಗಿ ಇರುವುವು. ತ್ರಿಶೂಲವು ತ್ರೈಲೋಕ್ಯವು. ಅದು ತ್ರಿಲೋಕಗಳೂ ಆತನ ಕೈಯಲ್ಲಿರುವುವು ಎಂಬುದನ್ನು ತೋರಿಸುವುದು

೨೯. ವ್ಯತಿರೇಕದಿಂದ (ಎಂದರೆ ಅದಿಲ್ಲದಿದ್ದರೆ ಇದೂ ಇಲ್ಲ ಎಂಬ ನ್ಯಾಯ) ಆತನನ್ನು ಬಿಟ್ಟು ಸರ್ವಭೂತಗಣಗಳಲ್ಲಿ ಯಾವುದೂ ಇಲ್ಲವೇ ಇಲ್ಲವಾಗಿ, ಎಲ್ಲ ಭೂತಗಳ ದೇಹಾತ್ಮಕವು ಆತನಾಗಿ ಬಂತು.

ಸರ್ವಸತ್ವೋಪಲಂಭಾತ್ಮಾ ಸ್ವಭಾವೋಽಸ್ಯ ಪ್ರಯೋಜನಂ ।
ಈರಿತಃ ಶಿವರೂಪೇಣ ಚಿನ್ಮಾತ್ರಾಕಾಶರೂಪಿಣಾ ॥ ೩೦ ॥

ತೇನೈವ ಚ ನಿಗೀರ್ಣಃ ಸನ್ಪರಮಾಂ ಶಾಂತಿಮೇತ್ಯಸೌ ।
ನಿರ್ಮಲಾಕಾಶರೂಪಾತ್ಮಾ ಕೃಷ್ಣ ಇತ್ಯೇಷ ಈಶ್ವರಃ ॥ ೩೧ ॥

---

(ಸರ್ವಭೂತಾನಾಮಹಂಕಾರಾತ್ಮಕ ರುದ್ರಾಭಿಧ್ಯಾನಾದೇವ ದೇಹಾತ್ಮತ್ವಾಭಿಮಾನಃ । ತಥಾಚ ಭಗವತೋಬಾದರಾಯಣಸ್ಯ ಸೂತ್ರಂ "ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ" ಇತಿ —ತಾ. ಪ್ರ)

೩೦ ತಾನು ಹುಟ್ಟಿಸಿರುವ ಸರ್ವ ಜಂತುಗಳಿಗೂ ಅಜ್ಞಾನದಶೆಯಲ್ಲಿ ಭೋಗವನ್ನೂ ಜ್ಞಾನದಶೆಯಲ್ಲಿ ಆತ್ಮಜ್ಞಾನವನ್ನೂ ಕೊಡುವುದೇ ಆತನ ಸ್ವಭಾವವು. ಅದೇ ಪ್ರಯೋಜನವು. ಚಿನ್ಮಾತ್ರಾಕಾಶರೂಪಿಯಾದ ಶಿವರೂಪಿ ಆತ್ಮನಿಂದಲೇ ಈತನು ಈ ಕಾರ್ಯಕ್ಕೆ ಪ್ರೇರಿತನಾಗಿರುವನು.

(ಕಿಂ ಪ್ರಯೋಜನ ಇತ್ಯಸ್ಯೋತ್ತರಮಾಹ—ಸರ್ವೇತಿ । ಸ್ವಸೃಷ್ಟಾನಾಂ ಸರ್ವೇಷಾಂ ಸತ್ವಾನಾಂ ಸ್ವಸ್ವಕರ್ಮಾನುರೂಪ ವಿಷಯ ಭೋಗಾತ್ಮಕೋ ಯ ಉಪಲಂಭಃ ಕ್ರಮಾಜ್ಞಾನಸಾಧನ ಪ್ರಾಪ್ತಾವಂತೇ ಯಃ ಸ್ವಾತ್ಮತತ್ವೋಪಲಂಭಶ್ಚ ತದಾತ್ಮಾ ಯಃ ಶಾಸ್ತ್ರೀಯ ವಿಹಿತ ನಿಷಿದ್ಧ ಕರ್ಮಜ್ಞಾನ ಫಲದಾನ ಸ್ವಭಾವಃ ಸ ಏವಾಸ್ಯ ಸರ್ಗಾದೌ ಪ್ರಯೋಜಕತ್ವಾತ್ಪ್ರಯೋಜನಂ । ತಥಾ ಚೋಕ್ತಂ ಗೌಡಪಾದೈಃ "ದೈವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ" ಇತಿ । ಕೇನೇರಿತ ಇತಿ ಪ್ರಶ್ನಂ ಸಮಾಧತ್ತೇ—ಈರಿತ ಇತಿ । ಚಿನ್ಮಾತ್ರಾಕಾಶರೂಪಿಣಾ ಶಿವಂ ವಾಙ್ಮನಸಗೋಚರ ನಿರತಿಶಯ ಭೂಮಾನಂದಾತ್ಮಕಂ ಪರಮಕಲ್ಯಾಣಂ ಸ್ವರೂಪಂ ಯಸ್ಯ ತಥಾವಿಧೇನ ಪರಮಾತ್ಮನೈವ 'ಬಹುಸ್ಯಾಂ ಪ್ರಜಾಯೇಯೇತಿ' ಸಂಕಲ್ಪಾತ್ಮಕಮಾಯಾವೃತ್ತ್ಯಾ ಈರಿತಃ ಸರ್ಗಾದ್ಯುನ್ಮುಖತಯಾ ಪ್ರೇರಿತಃ ಸೃಜತಿ ॥ —ತಾ ಪ್ರ)

೩೧. ಈತನ ಜನ್ಮಕ್ಕೆ ಕಾರಣನಾದ ಶಿವನೇ ಈತನನ್ನು ನುಂಗುವನು. ಆಗ ಈತನು ಪರಮಶಾಂತಿಯನ್ನು ಹೊಂದುವನು ನಿರ್ಮಲಾಕಾಶರೂಪಾತ್ಮನಾದ ಈತನೇ ಕೃಷ್ಣ (ಕಪ್ಪಗಿರುವವನು) ನು. ಈತನೇ ಈಶ್ವರನು.

ಕೃತ್ವಾ ಕಲ್ಪಂ ಜಗತ್ಸರ್ವಂ ತತ್ಪೀತ್ವೈಕಾರ್ಣವಂ ತದಾ ।
ಸ ಪ್ರಯಾತಿ ಪರಾಂ ಶಾಂತಿಮಭೂಯಃಸಂನಿವೃತ್ತಯೇ ॥ ೩೨ ॥

ಅನಂತರಂ ಮಯಾ ದೃಷ್ಟಸ್ತತ್ರಾಸೌ ಯಾವದುದ್ಯಮಾತ್ ।
ಪ್ರವೃತ್ತಃ ಪ್ರಾಣವೇಗೇನ ತಮಾಕ್ರಷ್ಟುಂ ಮಹಾರ್ಣವಂ ॥ ೩೩ ॥

ಅಥ ತಸ್ಯ ಮುಖಂ ಸ್ಫಾರಂ ಜ್ವಾಲಾಮಾಲಾಕುಲಾಂತರಂ ।
ಪ್ರಾಣಾಕೃಷ್ಟೋ ಮಹಾಂಭೋಧಿರ್ಬಾಡವಾಗ್ನಿಮಿವಾವಿಶತ್ ॥ ೩೪ ॥

ಸ ಏಷ ಬಾಡವೋ ಭೂತ್ವಾ ವಹ್ನಿರಾಕಲ್ಪವರ್ಣವೇ ।
ಅಹಂಕಾರಃ ಪಿಬತ್ಯಂಬು ರುದ್ರಃ ಸರ್ವಂ ತು ತತ್ತದಾ ॥ ೩೫ ॥

---

(ಪ್ರಲಯಾರ್ಥಮೀರಿತಶ್ಚ ಸರ್ಗಕ್ರಮವಿಪರೀತಕ್ರಮೇಣ ಜಗನ್ನಿಗೀರ್ಯಾಕಾಶಭಾವೇನ ಸ್ಥಿತಃ ಸ್ವಯಮಪಿ ತೇನೈವ ಶಿವರೂಪೇಣ ಸ್ವಾತ್ಮನಾ ನಿಗೀರ್ಣಃ ಸ್ವ ಆಕಾಶಭಾವಮಪಿ ವಿಹಾಯ ಪರಮಾಂ ಭೂಮಾನಂದ ಸ್ವರೂಪ ಪ್ರತಿಷ್ಠಾ ಲಕ್ಷಣಾಂ ಶಾಂತಿಮೇತ್ಯರ್ಥಃ ॥ —ತಾ. ಪ್ರ)

೩೨. ಜಗತ್ಸರ್ವವನ್ನೂ ಪ್ರಲಯ ಮಾಡಿ, ಆಗ ಆದ ಏಕಾರ್ಣವವನ್ನು ಪೂರ್ಣವಾಗಿ ಪಾನಮಾಡಿ, ಮತ್ತೆ ಹಿಂತಿರುಗಿ ಬರದಿರುವ ಪರಮಶಾಂತಿಯನ್ನು ಹೊಂದುವನು.

೩೩. ಅನಂತರದಲ್ಲಿ ಈ ರುದ್ರನು ಶ್ವಾಸಬಿಟ್ಟು ಎಳೆಯುವಷ್ಟು ವೇಗವಾಗಿ ಆ ಮಹಾರ್ಣವವನ್ನು ಪ್ರಯತ್ನಪೂರ್ವಕವಾಗಿ ಆಕರ್ಷಣ ಮಾಡುತ್ತಿರುವುದನ್ನು ಕಂಡೆನು.

೩೪ ಆಗ ಆ ಪ್ರಲಯಮಹಾಂಭೋಧಿಯು ಆ ಶ್ವಾಸಗಳಿಂದ ಆಕೃಷ್ಟವಾಗಿ ಬಾಡಬಾಗ್ನಿಯ ಮುಖವನ್ನು ಪ್ರವೇಶಿಸುವಂತೆ, ಆ ರುದ್ರನ ಜ್ವಾಲಾಮಾಲಾಕುಲವಾದ, ವಿಶಾಲವಾಗಿ ತೆರೆದಿರುವ ಮುಖಾಂತರವನ್ನು ಪ್ರವೇಶಿಸಿತು

೩೫. ರುದ್ರನೇ ಬಾಡಬನಾಗಿ ಅಗ್ನಿಸ್ವರೂಪನಾಗಿ ಕಲ್ಪಾಂತದವರೆಗೂ ಅರ್ಣವದಲ್ಲಿರುವನು. ಅಹಂಕಾರಸ್ವರೂಪಿಯಾದ ರುದ್ರನು ನೀರೆಲ್ಲವನ್ನೂ ಕುಡಿಯುತ್ತಿರುವನು.

ಪಾತಾಲಮಿವ ಪಾನೀಯಂ ಸರ್ಪೋ ಬಿಲಮಿವ ಕ್ಷಣಾತ್ ।
ಪಂಚವಾಯುರಿವಾಕಾಶಮವಿಶತ್ತನ್ಮುಖಂ ಜವಾತ್ ॥ ೩೬ ॥

ಸಮುಪೇತ್ಯಾಪಿಬದ್ರುದ್ರಃ ಸ ಮುಹೂರ್ತೇನ ತತ್ಪಯಃ ।
ಕೃಷಾಂಗೋರ್ಕ ಇವ ಧ್ವಾಂತಂ ಸತ್ಸಂಪರ್ಕ ಇವಾಗುಣಂ ॥ ೩೭ ॥

ಆಬ್ರಹ್ಮಲೋಕಪಾತಾಲಂ ಶಾಂತಂ ಶೂನ್ಯಮಥಾಭವತ್ ।
ರಜೋಧೂಮಾನಿಲಾಂಭೋಧಿಭೂತಮುಕ್ತಂ ಸಮಂ ನಭಃ ॥ ೩೮ ॥

ಕೇವಲಂ ತತ್ರ ದೃಶ್ಯಂತೇ ಚತ್ವಾರೋ ವ್ಯೋಮನಿರ್ಮಲಾಃ ।
ಇಮೇ ಪದಾರ್ಥಾ ನಿಸ್ಪಂದಾಃ ಶೃಣು ತಾನ್ರಘುನಂದನ ॥ ೩೯ ॥

---

(ಇತರ ಕಾಲೇಽಪಿ ಜಲಶೋಷೇ ತೇಜಸ್ಯೈವೋಪಸಂಹಾರಃ ಪ್ರಸಿದ್ಧ ಇತ್ಯಾಶಯೇನಾಹ—ತಾ. ಪ್ರ.)

೩೬. ಸರ್ಪವು ಪಾತಾಲ ಬಿಲವನ್ನು ಹೋಗುವಂತೆ, ಒಂದೇ ಕ್ಷಣದಲ್ಲಿ, ಪಂಚವಾಯುಗಳು ಆಕಾಶದಲ್ಲಿ ವಿಲೀನವಾಗುವಂತೆ, ನೀರುಗಳೆಲ್ಲವೂ ಆತನ ಮುಖವನ್ನು ಪ್ರವೇಶಿಸಿದುವು.

೩೭. ಸೂರ್ಯನು ಕತ್ತಲನ್ನು ನುಂಗುವಂತೆ, ಸತ್ಸಂಪರ್ಕವು ದೋಷಜಾತವನ್ನು ನುಂಗುವಂತೆ, ಆ ಕೃಷ್ಣಾಂಗ ರುದ್ರನು ಒಂದೇ ಒಂದು ಗಳಿಗೆಯೊಳಗಾಗಿ ಆ ನೀರುಗಳನ್ನೆಲ್ಲ ಸೇರಿಸಿ ಕುಡಿದುಬಿಟ್ಟನು.

೩೮. ಬ್ರಹ್ಮಲೋಕದಿಂದ ಪಾತಾಲದವರೆಗೂ ಎಲ್ಲವೂ ಶಾಂತವೂ ಶೂನ್ಯವೂ ಆಗಿ ಹೋಯಿತು ರಜಸ್ಸು (ಧೂಳು) ಧೂಮ ವಾಯು ಅಂಬೋಧಿ ಪ್ರಾಣಿಗಳು ಯಾವವೂ ಇಲ್ಲವಾಗಿ ಆಕಾಶದಂತೆ ಆಗಿ ಹೋಯಿತು.

೩೯. ಆಗ ಅಲ್ಲಿ ಆಕಾಶದಂತೆ ನಿರ್ಮಲವಾದ ನಾಲ್ಕು ಪದಾರ್ಥಗಳು ಮಾತ್ರ ಕಣ್ಣಿಗೆ ಕಾಣಿಸುತ್ತಿದ್ದುವು. ಅವೂ ನಿರ್ವ್ಯಾಪಾರವಾಗಿದ್ದುವು. ಅವುಗಳನ್ನು ಕುರಿತು ಹೇಳುವೆನು ಕೇಳು.

ಏಕಸ್ತಾವದಸೌ ಮಧ್ಯೇ ರುದ್ರಃ ಕೃಷ್ಣಾಂಬರಾಕೃತಿಃ ।
ನಿರಾಧಾರಃ ಸ್ಥಿತೋ ವ್ಯೋಮ್ನಿ ನಿಷ್ಪಂದಾಮೋದಬಿಂಬವತ್ ॥ ೪೦ ॥

ದ್ವಿತೀಯೋವಸ್ಥಿತೋ ದೂರೇ ಪೃಥ್ವ್ಯಾಕಾಶತಲೋಪಮಃ ।
ಭಾಗೋ ಬ್ರಹ್ಮಾಂಡಸದನಸ್ಯಾಧಃ ಪಾತಾಲಸಪ್ತಕಾತ್ ॥ ೪೧ ॥

ಪಾತಾಲಭೂತಲದಿವಾಂ ಸಶೈಲೇಂದ್ರದಿವೌಕಸಾಂ ।
ವ್ಯಾಪ್ತಃ ಪಾರ್ಥಿವಭಾಗೇನ ಪಂಕಮಾತ್ರಾತ್ಮನಾತ್ಮಭಾಕ್ ॥ ೪೨ ॥

ತೃತೀಯೋತ್ರ ಪದಾರ್ಥೋಭೂದೂರ್ಧ್ವಂ ಬ್ರಹ್ಮಾಂಡಭಾಗಭೂಃ ।
ದೃಷ್ಟಿಕ್ಷಯಾತ್ಸುದೂರತ್ವಾದ್ದುರ್ಲಕ್ಷ್ಯಗಗನಾಸಿತಃ ॥ ೪೩ ॥

ದೂರವಿಶ್ಲಿಷ್ಟಯೋರ್ಮಧ್ಯಂ ಯತ್ತದ್ಬ್ರಹ್ಮಾಂಡಖಂಡಯೋಃ ।
ತದಾಕಾಶಮನಾದ್ಯಂತಂ ಬ್ರಹ್ಮ ನಿರ್ಮಲಮಾತತಂ ॥ ೪೪ ॥

---

೪೦. ಅವುಗಳಲ್ಲಿ ಮೊದಲನೆಯದು ಕೃಷ್ಣಾಂಬರಾಕೃತಿಯಾದ ರುದ್ರ. ಆತನು ನಿರಾಧಾರನಾಗಿ ಆಕಾಶದಲ್ಲಿ ವ್ಯಾಪಾರ ರಹಿತವು ನಿರ್ಗಂಧವೂ ಆದ ಸಮುದ್ರದಂತೆ ಇದ್ದನು.

೪೧. ಎರಡನೆಯದು ದೂರದಲ್ಲಿ ಪ್ರಥಿವೀ ಆಕಾಶಗಳ ತಲದಂತೆ ಇದ್ದ, ಬ್ರಹ್ಮಾಂಡವೆಂಬ ಮನೆಯ ಕೆಳಗಿದ್ದು ಸಪ್ತ ಪಾತಾಲಗಳವರೆಗೂ ವ್ಯಾಪಿಸಿದ್ದ ಭಾಗವು.

೪೨–೩. ಪಾತಲ ಭೂತಲ ಸ್ವರ್ಗಗಳ, ಶೈಲೇಂದ್ರಗಳೂ ದೇವತೆಗಳೂ ತುಂಬಿದ್ದು ಪಾರ್ಥಿವ ಭಾಗವು ಉರ್ಧ್ವಭಾಗದ ಬ್ರಹ್ಮಾಂಡ ಭಾಗವಾಗಿದ್ದು ದೃಷ್ಟಿಗೆ ಸಿಕ್ಕದಷ್ಟು ದೂರದಲ್ಲಿ ದುರ್ಲಕ್ಷ್ಯವಾದ ನೀಲಿ ಗಗನದಂತೆ, ಕೆಸರಾಗಿ ಎಲ್ಲಿಯೋ ಉಳಿದಿದ್ದುದು ಮೂರನೆಯದು.

೪೪. ದೂರದೂರವಾಗಿ ಬಿದ್ದು ಹೋಗಿದ್ದ ಆ ಬ್ರಹ್ಮಾಂಡ ಖಂಡಗಳ ನಡುವೆ ಅನಾದ್ಯಂತವಾದ ಆ ಆಕಾಶವನ್ನು ತುಂಬಿರುವ ನಿರ್ಮಲ ಶುದ್ಧಬ್ರಹ್ಮವೊಂದು.

ಚತುರ್ಥೋsಸೌ ಪದಾರ್ಥಸ್ತು ತದಾ ಸಂಲಕ್ಷಿತೋ ಮಯಾ ।
ಚತುಷ್ಟಯಾದತ್ರ ನಾನ್ಯದೇತಸ್ಮಾದೇವ ಕಿಂಚನ ॥ ೪೫ ॥

ಶ್ರೀ ರಾಮ ಉವಾಚ:—

ಬಹಿಃ ಕಿಂ ವಿದ್ಯತೇ ಬ್ರಹ್ಮನ್ಬ್ರಹ್ಮಸದ್ಮಕಟಾಹತಃ ।
ಕಾಸ್ತತ್ರಾವರಣಾ ಬ್ರೂಹಿ ಕಿಯತ್ಯಃ ಸಂಸ್ಥಿತಾಃ ಕಥಂ ॥ ೪೬ ॥

ಶ್ರೀ ವಸಿಷ್ಠ ಉವಾಚ.—

ಬ್ರಹ್ಮಾಂಡಖಂಡಯೋಃ ಪಾರೇ ತತೋ ದಶಗುಣಂ ಜಲಂ ।
ಸಂಧ್ಯಾಕಾಶಮನಂತಂ ತದ್ವರ್ಜಯಿತ್ವಾ ತತಃ ಸ್ಥಿತಂ ॥ ೪೭ ॥

---

೪೫. ಅದೇ ನಾಲ್ಕನೆಯ ಪದಾರ್ಥ. ಅದನ್ನು ಆಗ ನಾನು ಕಂಡೆನು. ಈ ನಾಲ್ಕನ್ನು ಬಿಟ್ಟು ಇನ್ನೇನೂ ಎಳ್ಳಷ್ಟೂ ಇರಲಿಲ್ಲ.

ಶ್ರೀ ರಾಮನು ಕೇಳಿದನು :—

೪೬. ಎಲೈ ಬ್ರಹ್ಮನೆ, ಬ್ರಹ್ಮಾಂಡ ಕಟಾಹದ ಹೊರಗೆ ಏನು ಇದೆ ? ಅಲ್ಲಿ ಆವರಣಗಳೇನಾಗಿ ಎಷ್ಟಾಗಿ ಹೇಗೆ ಇವೆ ?

ಶ್ರೀ ವಸಿಷ್ಠನು ಹೇಳಿದನು :—

೪೭. ಬ್ರಹ್ಮಾಂಡ ಖಂಡಗಳಾಚೆ ಅನಂತವಾಗಿ ಹರಡಿರುವ ಸಂಧಿ—ಆಕಾಶದ ಹೊರಗೆ, ದಶಗುಣವಾಗಿ ಹರಡಿಕೊಂಡು ಜಲವಿರುವುದು.

( ತಚ್ಚ ಜಲಮಂತಮತಿವಿಸ್ತೃತಂ ಖಂಡದ್ವಯಸಂಧ್ಯಾಕಾಶಮಂತರ್ವರ್ಜಯಿತ್ವಾ ಬಹಿರೇವಾತತಂ ಸ್ಥಿತಂ । ಯದ್ಯಪಿ ಖಂಡದ್ವಯಸಂಧ್ಯಾಕಾಶೋ ಬೃಹದಾರಣ್ಯಕೇ "ತದ್ಯಾವತೀ ಕ್ಷುರಸ್ಯಧಾರಾ, ಯಾವದ್ವಾ ಮಕ್ಷಿಕಾಯಾಃ ಪತ್ರಂ, ತಾವಾನಂತರೇಣಾಕಾಶಃ" ಇತಿ ಕ್ಷುರಧಾರಾ ಮಕ್ಷಿಕಾಪಕ್ಷಪರಿಮಿತೋsತ್ಯಂತಸೂಕ್ಷ್ಮಃ ಪ್ರತಿಪಾದಿತಸ್ತಥಾಪಿ ಪ್ರಾಗತ್ರ ಚತುರ್ಮುಖೋ ಬ್ರಹ್ಮಾಂಡ ಖಂಡದ್ವಯಂ ವಿಭೇದ್ಯ ತಚ್ಚ ಭಿನ್ನಂ ದೂರತರಂ ಗತಮಿತಿ ವರ್ಣಿತತ್ವಾತ್ತ್ರದನುಸಾರೇಣ ಸಂಧ್ಯಾಕಾಶಸ್ಯಾನಂ ತತ್ವೋಕ್ತಿರಿತಿ ಬೋಧ್ಯಂ ॥—ತಾ. ಪ್ರ.)

ತತಸ್ತಥೈವ ಜ್ವಾಲಾತ್ಮ ತೇಜೋ ದಶಗುಣಂ ಸ್ಥಿತಂ ।
ತತಸ್ತಥೈವ ಪವನಃ ಪವನೋ ನಿರ್ಮಲಃ ಸ್ಥಿತಃ ॥ ೪೮ ॥

ತತಸ್ತಥೈವ ವಿಮಲಂ ನಭೋ ದಶಗುಣಂ ಸ್ಮೃತಂ ।
ತತಃ ಪರಮಮತ್ಯಚ್ಛಂ ಬ್ರಹ್ಮಾಕಾಶಮನಂತಕಂ ॥ ೪೯ ॥

ಅನ್ಯತ್ರಾನ್ಯತ್ರ ತಸ್ಯಾಥ ದೃಷ್ಟಯೋನ್ಯಾಸ್ತಥೈವ ಖೇ ।
ಕಚಂತ್ಯನಂತಾ ದೂರಸ್ಥಾ ಮಿಥೋ ದೃಷ್ಟಾತ್ಮಸೃಷ್ಟಯಃ ॥ ೫೦ ॥

---

೪೮. ಹಾಗೆಯೇ ಜಲಮಂಡಲವಾದ ಮೇಲೆ ಅದಕ್ಕೆ ದಶಗುಣವಾಗಿ ಜ್ವಾಲಾಮಯವಾದ ತೇಜೋಮಂಡಲವಿರುವುದು. ಅದರಾಚೆ, ಪವನ ಮಂಡಲವು ನಿರ್ಮಲವಾಗಿ ಬೀಸುತ್ತಾ ಇರುವುದು.

(ತಥೈವ ಜಲವದೇವ ಪವನಃ ತಜ್ಜಲಪವಿತ್ರೀ ಕರಣಃ ಸ್ವಯಂ ಚ ರಜೋಮಾಲಿನ್ಯರಹಿತಃ ಪವನೋ ವಾಯುಸ್ಸ್ಥಿತಃ—ತಾ. ಪ್ರ.)

೪೯. ಆದರಿಂದಾಚೆ ಅದಕ್ಕೆ ದಶಗುಣವಾಗಿ ಶುದ್ಧವಾದ ನಭೋಮಂಡಲವಿರುವುದು. ಅದರಿಂದಾಚೆಗೆ ಪರಮವೂ ಅತ್ಯಚ್ಛವೂ ಆದ ಬ್ರಹ್ಮಾಕಾಶವು ಅನಂತವಾಗಿ ಹರಡಿರುವುದು.

(ಅತ್ಯಚ್ಛಂ ಮಾಯಾ ಶಬಲಿತ ಬ್ರಹ್ಮಾಕಾಶಂ—ತಾ. ಪ್ರ.)

೫೦. ಆ ಮಾಯಾಶಬಲಿತ ಬ್ರಹ್ಮಾಕಾಶದಲ್ಲಿ, ಅನ್ಯ-ಅನ್ಯವಾಗಿ, ಅಹಂಕಾರ, ಮಹತ್, ತತ್ವಗಳು ದಶದಶಗುಣವಾಗಿ, ಅದರಾಚೆ ಪ್ರಕೃತಿ, ಎಂದೂ ಅನ್ಯತ್ರ ಅನ್ಯತ್ರ ಯೋಗಿ ಮಾಹೇಶ್ವರ ಪಾಂಚರಾತ್ರ, ಕಾಪಿಲಾದಿ ತಂತ್ರಗಳಲ್ಲಿ ಆವರಣ ಕಲ್ಪನಾ ದೃಷ್ಟಿಗಳು ಅನಂತವಾಗಿ ಹೇಳಲ್ಪಟ್ಟಿವೆ. ಅವೆಲ್ಲವೂ ಒಂದಕ್ಕೊಂದು ಸಂವಾದಿಗಳಾಗಿ, ಅನಂತವಾಗಿ ದೃಷ್ಟಾತ್ಮ ಸೃಷ್ಟಿಗಳಾಗಿ ದೂರದೂರವಾಗಿ ಇರುವುವು.

(ತಾಶ್ಚ ಮಿಥಃ ಪರಸ್ಪರಂ ಸಂವಾದೇನ ದೃಷ್ಟಾತ್ಮಕಲ್ಪನಾಸೃಷ್ಟಯಃ ಪುರಾಣೇಷು ಕೀರ್ತ್ಯಂತೇ ನ ಶ್ರುತಿಷು, ತಾಃ ಪ್ರಕ್ರಿಯಾಃ ಸಂತೀತ್ಯಸ್ಮಾಭಿರುಪೇಕ್ಷಿತಾ

ಶ್ರೀ ರಾಮ ಉವಾಚ:—

ಊರ್ಧ್ವೇ ಬ್ರಹ್ಮಾಂಡಖಂಡಸ್ಯ ತಥಾಧಸ್ತಾನ್ಮುನೀಶ್ವರ ।
ತಜ್ಜಲಾದಿಮಹಾಕಾರಂ ಕ್ವ ಕಥಂ ಕೇನ ಧಾರ್ಯತೇ ॥ ೫೧ ॥

ಶ್ರೀ ವಸಿಷ್ಠ ಉವಾಚ :—

ಸ ಪಾರ್ಥಿವಪದಾರ್ಥಾನಾಂ ಸ್ಥಿತಃ ಪುಷ್ಕರಪತ್ರವತ್ ।
ಭಾಗಸ್ತಮೇವಾಧಾವಂತಿ ತೇ ಸುತಾ ಮಾತರಂ ಯಥಾ ॥ ೫೨ ॥

ಅತೋ ಯದೇವ ನೇದೀಯೋ ಬ್ರಹ್ಮಾಂಡಾಖ್ಯಂ ಮಹಾವಪುಃ ।
ತತ್ಪದಾರ್ಥಾಃ ಪ್ರಧಾವಂತಿ ತೃಷಿತಾಃ ಸಲಿಲಂ ಯಥಾ ॥ ೫೩ ॥

---

ಇತ್ಯರ್ಥಃ। ಬ್ರಹ್ಮಾಂಡ ಭೇದ ದೃಷ್ಟಿ ಪರತಯಾ ವಾ ಶ್ಲೋಕೋ ವ್ಯಾಖ್ಯೇಯಾಃ॥
—ತಾ. ಪ್ರ )

ಶ್ರೀ ರಾಮನು ಕೇಳಿದನು :—

೫೧. ಎಲೈ ಮುನೀಶ್ವರ, ಬ್ರಹ್ಮಾಂಡಖಂಡದ ಊರ್ಧ್ವ ಪ್ರದೇಶದಲ್ಲಿಯೂ ಅಧಃ ಪ್ರದೇಶದಲ್ಲಿಯೂ ಇರುವ ಆ ಜಲಾದಿಮಹಾಮಂಡಲಗಳು ಎಲ್ಲಿ, ಹೇಗೆ, ಯಾರಿಂದ, ಧರಿಸಲ್ಪಟ್ಟಿವೆ ?

ಬ್ರಹ್ಮಾಂಡಾದಪ್ಯುತ್ತರೋತ್ತರಂ ದಶದಶಗುಣ ವಿಸ್ತಾರಾನ್ಮಹಾಕಾರಂ ॥
—ತಾ ಪ್ರ )

ಶ್ರೀ ವಸಿಷ್ಠನು ಹೇಳಿದನು:—

೫೨. ಪಾರ್ಥಿವ ಪದಾರ್ಥಗಳೂ ಇರುವ ಭಾಗವು ತಾವರೆಯೆಲೆಯಂತೆ ಇರುವುದು. ಇತರ ಭೂತ ಭಾಗಗಳೆಲ್ಲವೂ ಆ ಭಾಗವನ್ನೇ ಮಕ್ಕಳು ತಾಯಿಯರ ಬಳಿ ಹೋಗುವಂತೆ, ಆ ಪಾರ್ಥಿವ ಭಾಗವನ್ನೇ ಆಧಾರಕ್ಕಾಗಿ ಆಶ್ರಯಿಸಿರುವುವು.

(ತಂ ಪಾರ್ಥಿವಂ ಬ್ರಹ್ಮಾಂಡ ಕರ್ಪರಭಾಗಮೇವ ಆಧಾವಂತಿ, ಆಧಾರಾದಿ ಭಾವೇನಾ ಶ್ರಯಂತಿ । ಯಥಾ ಸುತಾ ವಾನರೀಶಿಶುವಃ ಮಾತರಮುದರೇ ದೃಢಂ ಗೃಹೀತ್ವಾ ಪ್ಲವನೇಽಪಿ ನ ಪತಂತಿ ತದ್ವದಿತ್ಯರ್ಥಃ ॥—ತಾ. ಪ್ರ )

೫೩. ಆದರಿಂದ, ಸಮೀಪ ತಮವಾಗಿರುವ ಬ್ರಹ್ಮಾಂಡವೆಂಬ ಮಹಾವಪುವು

ಅವಲಂಬ್ಯ ತದೇವಾಂತಃ ಸಂಸ್ಥಿತಾಸ್ತೈಜಸಾದಯಃ ।
ನ ಸ್ಥಿತಿಂ ಪ್ರವಿಮುಂಚಂತಿ ಸ್ವಾಂ ಯಧಾವಯವಾ ಇವ ॥ ೫೪ ॥

ಶ್ರೀರಾಮ ಉವಾಚ:—

ಬ್ರಹ್ಮನ್ಬ್ರಹ್ಮಾಂಡಖಂಡೇ ತೇ ತಿಷ್ಠತಃ ಕಥಮುಚ್ಯತಾಂ ।
ಕಿಮಾಕೃತೀ ಧೃತೇ ಕೇನ ಕಥಂ ವಾ ಪರಿನಶ್ಯತಃ ॥ ೫೫ ॥

ಶ್ರೀ ವಸಿಷ್ಠ ಉವಾಚ—

ಅಧೃತಂ ಧೃತಮೇವೋಚ್ಚೈರಪತಚ್ಚೈವ ವಾ ಪತತ್ ।
ಅನಾಕೃತ್ಯೈವ ಸಾಕಾರಂ ಜಗತ್ಸ್ವಪ್ನ ಪುರಂ ಯಥಾ ॥ ೫೬ ॥

---

ಯಾವುದೋ ಅದನ್ನೇ ಆ ಪದಾರ್ಥಗಳೆಲ್ಲವೂ, ಬಾಯಾರಿದವರು ನೀರನ್ನು ಹುಡುಕಿಕೊಂಡು ಹೋಗುವ ಹಾಗೆ ಹುಡುಕಿಕೊಂಡು ಹೋಗುತ್ತವೆ.

(ಊರ್ಧ್ವ ಖರ್ಪರೋಪರಿತನ ಜಲಸ್ಯಾಪ್ಯಪತನೇ ಅಯಮೇವ ನ್ಯಾಯಃ ಸಮಾಗ್ಯಾನುಗೃಹೀತೋ ಬೋಧ್ಯ ಇತ್ಯಾಶಯೇನಾಹ—ತಾ. ಪ್ರ)

೫೪. ಶರೀರದಲ್ಲಿರುವ ಅವಯವಾದಿಗಳೆಲ್ಲವೂ ಶರೀರದಲ್ಲಿ ಸೇರಿಕೊಂಡಿರುವಂತೆ, ತೈಜಸಾದಿಪದಾರ್ಥಗಳೆಲ್ಲವೂ ಆ ಮಹಾ ವಪುವನ್ನೇ ಹಿಡಿದುಕೊಂಡು ಸ್ಥಿತಿಯನ್ನು ಬಿಡದೆ ಇರುವುವು.

ಶ್ರೀರಾಮನು ಕೇಳಿದನು:—

೫೫ ಎಲೈ ಬ್ರಹ್ಮನೆ, ಆ ಎರಡು ಬ್ರಹ್ಮಾಂಡ ಖಂಡಗಳು ಹೇಗೆ ನಿಂತಿರುವುವೋ ಅದನ್ನು ಹೇಳು. ಅವುಗಳ ಆಕಾರವೇನು ? ಯಾರು ಧರಿಸಿರುವರು ? ಹೇಗೆ ಅವು ನಾಶವಾಗುವುವು ?

(ಇತರಾವರಣಾಧಾರಯೋಃ ಬ್ರಹ್ಮಾಂಡ ಖರ್ಪರಯೋಃ ಅತಿಗುರುತ್ವಾದವಶ್ಯಂ ಪಿಪತಿಷಯೋಃ ಕಸ್ತದ್ಯಾಧಾರ ಇತಿ ರಾಮಃ ಪೃಚ್ಛತಿ ಕಥಂ ಕೇನಾಧಾರೇಣ—ತಾ. ಪ್ರ.)

ಶ್ರೀ ವಸಿಷ್ಠನು ಹೇಳಿದನು .—

೫೬. ಬ್ರಹ್ಮಾಂಡವು ಅಧೃತವಾಗಿದ್ದರೂ ಧೃತವಾಗಿಯೇ ಇರುವುದು. ಅದು

ಕಿಮಸ್ಯ ನಾಮ ಪತತಿ ಕಿಂವಾ ಕೇನಾಸ್ಯ ಧಾರ್ಯತೇ ।
ಯಥಾ ಸಂವಿತ್ತಿ ಕಚನಂ ತಥೈ ತದವತಿಷ್ಠತೇ ॥ ೫೭ ॥

ಯಥಾ ಕೇಶೋಂಡ್ರಕಂ ವ್ಯೋಮ್ನಿ ಯಥಾ ಚ ವ್ಯೋಮ್ನಿ ಶೂನ್ಯತಾ ।
ಯಥಾ ವಾ ಪವನೇ ಸ್ಪಂದೋ ಜಗಚ್ಚಿದ್ಗಗನೇ ತಥಾ ॥ ೫೮ ॥

ಚಿತೌ ಸಂಕಲ್ಪನಗರಂ ಬ್ರಹಾಂಡಾಖ್ಯಂ ಜಗದ್ಗೃಹಂ ।
ಖೇ ಖಮೇವಾಪ್ಯನಾಕಾರಂ ಪ್ರತ್ಯಾಕಾರಮಿವ ಸ್ಥಿತಂ ॥ ೫೯ ॥

---

ಅಪತತ್ ಆಗಿದ್ದರೂ ಪತತ್ (ಬೀಳುವುದು).ಆಗಿರುವುದು. ಅನಾಕೃತಿಯಾದರೂ ಸಾಕಾರವಾಗಿರುವುದು. ಈ ಜಗತ್ತು ಸ್ವಪ್ನ ಪುರವಿದ್ದಂತೆ ಇರುವದು.

(ಸತ್ಯತಾದೃಷ್ಟ್ಯಾಪಿ ಯಮಾಧಾರಾದಿಚಿಂತಾ । ಮಿಥ್ಯಾದೃಷ್ಟೌ ತು ನ ಗರುತರಾಣಾಮಪ್ಯಾಧಾರಾದಿ ನಿಯಮೋಽಸ್ತೀತಿ ಸ್ವಪ್ನ ದೃಷ್ಟಾಂತೇನ ವಸಿಷ್ಠ ಉತ್ತರಮಾಹ—ತಾ. ಪ್ರ.)

(ಆಡುವ ಮಾತು ಒಂದಕ್ಕೊಂದಕ್ಕೆ ಸಂವಾದಿಯಾಗಿರುವುದನ್ನು ಗಮನಿಸಿ )

೫೭. (ಸ್ವಪ್ನಪುರ ವಿಷಯದಲ್ಲಿ) ಬೀಳುವುದು ಎಂದರೇನು ? ಯಾವುದನ್ನು ಯಾರು ಧರಿಸುವರು ? ಸಂವಿತ್ತು ಹೇಗೆ ಕಚನವಾದರೆ ಹಾಗೆ ಇರುವಂತೆ ತೋರುವುದು.

೫೮. ಆಕಾಶದಲ್ಲಿ ಕೋಶೋಂಡ್ರಕಗಳು ಕಾಣುವಂತೆ, ಆಕಾಶದಲ್ಲಿರುವ ಶೂನ್ಯತೆಯಂತೆ, ಪವನದಲ್ಲಿ ಕಾಣಿಸುವ ಸ್ಪಂದದಂತೆ, ಜಗತ್ತು ಚಿದ್ಗಗನದಲ್ಲಿ ಇರುವುದು.

೫೯. ಚಿತಿಯ ಸಂಕಲ್ಪ ನಗರವು ಯಾವುದುಂಟೋ ಅದೇ ಬ್ರಹ್ಮಾಂಡವೆಂಬ

ಪಾತಸಂವಿತ್ಸಮುದ್ಭೂತಂ ಪತೆದಾಸ್ತೇ ದಿವಾನಿಶಂ ।
ಗಚ್ಛಂತ್ಯಾ ಸಂವಿದ್ಭೂತಂ ಗಚ್ಛದಾಸ್ತೇ ದಿವಾನಿಶಂ ॥ ೬೦ ॥

ಸ್ಥಿತಸಂವಿತ್ಸಮುದ್ಭೂತಂ ತಿಷ್ಠದಾಸ್ತೇ ದಿವಾನಿಶಂ ।
ಉತ್ಪತಂತ್ಯಾ ಚಿತೋದ್ಭೂತಮುತ್ಪತಚ್ಚೈವ ತಿಷ್ಠತಿ ॥ ೬೧ ॥

ಏತಿ ನಾಶವಿದಾ ನಾಶಂ ಮಹಾಕಲ್ಪಾದಿವೇದನೈಃ ।
ಜಾಯತೇ ಜನ್ಮಸಂವಿತ್ತ್ಯಾ ವ್ಯೋಮ್ನಿ ಸರ್ವಾದಿವೇದನೈಃ ॥ ೬೨ ॥

---

ಈ ಜಗದ್ಗೃಹವು ಆಕಾಶದಲ್ಲಿ ಆಕಾರರಹಿತವಾದ ಆಕಾಶವೇ ಮತ್ತೊಂದಾಕಾರವನ್ನು ಪಡೆದಂತೆ ಇರುವುದು.

(ಪ್ರತ್ಯಾಕಾರಂ ಪ್ರತಿನಿಯತಾಕಾರಮಿವ—ತಾ. ಪ್ರ.)

೬೦. ಸಂವಿತ್ತು ಬೀಳುತ್ತಿರುವಂತೆ ಭಾವಿಸಿಕೊಂಡರೆ, ಹಗಲೂ ಇರುಳೂ ಬೀಳುತ್ತಿರುವಂತೆಯೇ ಭಾವಿಸಿಕೊಳ್ಳುತ್ತಿರುವುದು. ಗಮನವು ಸಂವಿತ್ತಿಗೆ ಬಂದರೆ, ಹಗಲೂ ಇರುಳೂ ಗಮನವಾಗುತ್ತಿರುವಂತೆಯೇ ಹೊಳೆಯುತ್ತಿರುವುದು.

(ಸರ್ವಪದಾರ್ಥಾನಾಂ ಯಥಾ ಸಂವೇದನಮೇವ ಸ್ವಭಾವೋ ನಿಯತೋಽನಿಯತೋ ವಾ ಸಿದ್ಧ್ಯತೀತ್ಯಾಹ—ತಾ ಪ್ರ.)

೬೧. ಸಂವಿತ್ತಿಗೆ ಸ್ಥಿತಿಯ ಅಧ್ಯಾಸ ಬಂದರೆ, ದಿವಾನಿಶಗಳಲ್ಲಿ ಸ್ಥಿತಿಯೇ ಇರುವಂತೆ ತೋರುವುದು. ಉತ್ಪತನದ ಅಧ್ಯಾಸಬಂದರೆ ಹಾರತ್ತಲೇ ಇರುವಂತೆ ಇರುವುದು.

೬೨. ಹಾಗೆಯೇ ನಾಶದ ಅಧ್ಯಾಸ ಬಂದರೆ, ನಾಶವನ್ನು ಹೊಂದುವುದು. ಆಗ ಮಹಾಕಲ್ಪಾದಿಗಳ ವೇದನವು ಬರುವುದು. ಜನ್ಮ ಸಂವಿತ್ತಿನಿಂದ ಜನಿಸುವುದು. ಆಗ ಆಕಾಶದಲ್ಲಿ ಸರ್ವವೂ ಉಂಟೆಂಬ ವೇದನವು ಬರುವುದು.

ಆಭಾತಿ ಮೌಕ್ತಿಕಗಣಃ ಶರದಂಬರಾಂತ-
ರ್ದೃಗ್ದೋಷವಸತ್ಯ ಉದಿತೋಽಪ್ಯತಿಸತ್ಯರೂಪಃ ।
ಭ್ರಾಂತ್ಯಾ ಯಥಾ ನಭಸಿ ಚ ಸ್ಫುರತಾಂ ತಥೈಷಾಂ
ಸಂಖ್ಯಾಂ ವಿಧಾತುಮಿಹ ಕೋ ಜಗತಾಂ ಸಮರ್ಥಃ ॥ ೬೩ ॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು ನಿರ್ವಾಣ ಪ್ರಕರಣೇ "ಭ್ರಾಂತಿಮಾತ್ರತ್ವಪ್ರತಿಪಾದನಂ" ನಾಮ ಅಶೀತಿತಮಃ ಸರ್ಗಃ**

---

೬೩. ಶರತ್ಕಾಲದ ಮೋಡದಲ್ಲಿ ಮುತ್ತಿನ ಸರವು ಕಾಣಿಸುವುದು. ಹಾಗೆ ಕಾಣಿಸುವುದು ದೃಷ್ಟಿಯಲ್ಲಿರುವ ದೋಷದಿಂದ. ಅಸತ್ಯವಾಗಿದ್ದರೂ ಅದು ಬಹುವಾಗಿ ಸತ್ಯವೇ ಎಂಬಂತಿರುವುದು. ಅದು ಹಾಗೆ ಕಾಣುವುದು ಭ್ರಾಂತಿಯಿಂದ. ಅದರಂತೆಯೇ ಕಾಣಿಸುವ ಈ ಜಗತ್ತುಗಳ ಸಂಖ್ಯೆಯು ಇಷ್ಟೇ ಎಂದು ಗೊತ್ತು ಮಾಡಲು ಯಾರು ಸಮರ್ಥರು ?

**ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಭ್ರಾಂತಿಮಾತ್ರತ್ವಪ್ರತಿಪಾದನ" ಎಂಬ ಎಂಭತ್ತನೆಯ ಸರ್ಗವು**

## ಏಕಾಶೀತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ :—

ಅಥ ರಾಘವ ರುದ್ರಂ ತಂ ತದಾ ತಸ್ಮಿನ್ಮಹಾಂಬರೇ ।
ಪ್ರವೃತ್ತಂ ನರ್ತಿತುಂ ಮತ್ತಮಪಶ್ಯಂ ವಿತತಾಕೃತಿಂ ॥ ೧ ॥

ವ್ಯೋಮೇವಾಕೃತಿಮಾಪನ್ನಮಜಹದ್ವ್ಯಾಪಿತಾಂ ನಿಜಾಂ ।
ಮಹಾಕಾರಂ ಘನಶ್ಯಾಮಂ ದಶಾಶಾಪರಿಪೂರಕಂ ॥ ೨ ॥

ಅರ್ಕೇಂದುವಹ್ನಿನಯನಂ ಚಲದ್ದಶದಿಗಂಬರಂ ।
ಘನದೀರ್ಘಪ್ರಭಾಜಾಲಮಾಲಾನಂ ಶ್ಯಾಮಲಾರ್ಚಿಷಾಂ ॥ ೩ ॥

---

## ಎಂಭತ್ತೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು :—

೧. ಅನಂತರದಲ್ಲಿ, ರಾಘವ, ಆಗ ಆ ರುದ್ರನು ಆ ಮಹಾಕಾಶದಲ್ಲಿ ನರ್ತಿಸುವುದಕ್ಕೆ ಆರಂಭಿಸಿದನು. ಆ ಮಹಾಕೃತಿಯು ಹಾಗೆ ನರ್ತಿಸುವುದನ್ನು ನಾನು ನೋಡಿದೆನು.

೨. ಆಕಾಶವು ತನ್ನ ವ್ಯಾಪ್ತಿಧರ್ಮವನ್ನು ಬಿಡದೆ ಆಕೃತಿಯನ್ನೇನಾದರೂ ಧರಿಸಿತೋ ಎಂಬಂತಿರುವ ಆ ಮಹಾಕಾರವು ಘನಶ್ಯಾಮವಾಗಿ ಹತ್ತು ದಿಕ್ಕುಗಳನ್ನೂ ತುಂಬಿತ್ತು.

೩. ಸೂರ್ಯಚಂದ್ರವಹ್ನಿಗಳು ಆತನಿಗೆ ನಯನಗಳು ಚಲಿಸುತ್ತಿರುವ ದಿಕ್ಕುಗಳೇ ಆತನ ವಸ್ತ್ರವು. ಘನವೂ ದೀರ್ಘವೂ ಆದ ಪ್ರಭಾ.ಜಾಲಗಳನ್ನು ಉಗುಳುವ ನೀಲ ಜ್ವಾಲೆಗಳ ಸ್ತಂಭವೋ (ಎಂಬಂತಿದ್ದನಾರುದ್ರನು)

ವಡವಾಗ್ನಿದೃಶಂ ಲೋಲಭುಜೋರ್ಮಿಭರಭಾಸುರಂ ।
ಏಕಾರ್ಣವಾರ್ಣೋ ದ್ರಾಗ್ದೇಹಬಂಧೇನೇವ ಸಮುತ್ಥಿತಂ ॥ ೪ ॥

ಪಶ್ಯಾಮ್ಯನಂತರಮಹಂ ಯಾವತ್ತಸ್ಯ ಶರೀರತಃ ।
ಛಾಯೇವ ಪರಿನಿರ್ಯಾತಿ ನರ್ತನಾನುವಿಧಾಯಿನೀ ॥ ೫ ॥

ಸೂರ್ಯೇಷ್ವವಿದ್ಯಮಾನೇಷು ಮಹಾತಮಸಿ ಚಾಂಬರೇ ।
ಸ್ಥಿತಾ ಕಥಮಿಯಂ ಛಾಯಾ ಭವೇದಿತಿ ಮತಿರ್ಮಮ ॥ ೬ ॥

ಯಾವದ್ವಿಚಾರಯಾಮ್ಯಾಶು ತಾವತ್ತಸ್ಯ ತದಾ ಪುರಃ ।
ಸಾ ಸ್ಥಿತಾ ಪರಿನೃತ್ಯಂತೀ ವಿಸ್ತೀರ್ಣಾ ಶ್ರೀತ್ರಿಲೋಚನಾ ॥ ೭ ॥

ಕೃಷ್ಣಾ ಕೃಶಾ ಶಿರಾಲಾಂಗೀ ಜರ್ಜರಾ ವಿತತಾಕೃತಿಃ ।
ಜ್ವಾಲಾಕುಲಾನಲಾಲೋಲವನಸಂಭಾರಶೇಖರಾ ॥ ೮ ॥

---

೪. ಲೋಲವಾಗಿರುವ ಭುಜಗಳ ತರಂಗಗಳಂತಿರಲು, ಏಕಾರ್ಣವದ ನೀರುಗಳೆಲ್ಲವೂ ಒಂದು ದೇಹವನ್ನು ಪಡೆದು ಬಡಬನ್ನು ಕಣ್ಣು ಮಾಡಿಕೊಂಡು ಬಂದುವೋ? ಎಂಬಂತಿದ್ದನಾತನು.

೫. ಹಾಗೆಯೇ ನೋಡುತ್ತಿರಲು, ಆ ರುದ್ರನ ಶರೀರದಿಂದ ಆತನ ನರ್ತನದಂತೆಯೇ ನರ್ತನ ಮಾಡುತ್ತಿರುವ, ಛಾಯೆಯಂತಹ ಆಕಾರವೊಂದು ಹೊರಕ್ಕೆ ಬಂತು.

೬. ಸೂರ್ಯರಶ್ಮಿಯೇ ಇಲ್ಲದಿರಲು, ಆಕಾಶವೆಲ್ಲವೂ ಮಹಾ ತಮಸ್ಸಿನಲ್ಲಿ ಇರಲು, ಈ ಛಾಯೆಯು ಹೇಗೆ ಆಯಿತು ಎಂದು ನನಗೆ ಸಂಶಯವು ತೋರಿತು

೭. ಹೀಗೆ ನಾನು ವಿಚಾರ ಮಾಡುತ್ತಿರಲು, ಆತನ ಮುಂದೆ ಆಕೆಯು ಕುಣಿಯುತ್ತಾ ಇರುವುದನ್ನು ಕಂಡೆನು. ಆಕೆಯೂ ಆತನಂತೆಯೇ ಮಹಾ ಕೃತಿಯಾಗಿ ತ್ರಿಲೋಚನಗಳುಳ್ಳವಳಾಗಿದ್ದಳು.

೮. ಆಕೆಯು ಕೃಷ್ಣೆಯು; ಕೃಶೆಯು; ನರಗಳು ಎದ್ದುಕೊಂಡಿರುವ ಶಿಥಿ

ಭಿನ್ನಾಂಜನತಮಃಶ್ಯಾಮಾ ಯಾಮಿನೀವಾಕೃತಿಂ ಗತಾ ।
ತಮಃಶ್ರೀರ್ದೇಹಯುಕ್ತೇವ ಸಾಕಾರೇವಾಂಬರದ್ಯುತಿಃ ॥ ೯ ॥

ಅತಿದೀರ್ಘಾ ಕರಾಲಾಸ್ಯಾ ನಭೋ ಮಾತುಮಿವೋದ್ಯತಾ ।
ದೀರ್ಘಜಾನುಭುಜಭ್ರಾಂತ್ಯಾ ಮಾತುಕಾಮೇವ ದಿಂಙ್ಮುಖಂ ॥ ೧೦ ॥

ಕೃಶಾ ಬಹೂಪವಾಸೇವ ಪರಿನಿಮ್ನ ಮಹಾತನುಃ ।
ಕಜ್ಜಲಶ್ಯಾಮಲಾ ಮೇಘಮಾಲೇವ ಪವನಾಕುಲಾ ॥ ೧೧ ॥

ಕೃಶಾಶಕ್ತಾ ಯದಾ ಸ್ಥಾತುಂ ಸುದೀರ್ಘಾ ವಿಧಿನಾ ತದಾ ।
ಗ್ರಥಿತೇವ ಶಿರಾರೂಪೈರ್ದಾಮಭಿರ್ದೈರ್ಘ್ಯಶಾಲಿಭಿಃ ॥ ೧೨ ॥

---

ಲಾಂಗವುಳ್ಳ ಮಹಾಕೃತಿಯು. ಜ್ವಾಲೆಗಳನ್ನುಗುಳುತ್ತಾ ಸಂಚರಿಸುತ್ತಿರುವ ವನಗಳನ್ನು ಆಭರಣಗಳನ್ನಾಗಿ ಧರಿಸಿಕೊಂಡಿದ್ದಳು.

೯. ಚೆನ್ನಾಗಿ ಅರೆದ ಕಾಡಿಗೆಯಂತೆ ಕಪ್ಪಾಗಿದ್ದಳು. ರಾತ್ರಿಯೇ ಆಕಾರವನ್ನು ಧರಿಸಿಬಂತೋ ಎಂಬಂತಿದ್ದಳು. ಕತ್ತಲೆಯ ಬೊಂಬೆಯಂತಿದ್ದಳು. ಆಕಾಶದ ನೀಲಿಯೆಲ್ಲವೂ ಒಟ್ಟುಗೂಡಿ ಬಂದಂತಿದ್ದಳು.

೧೦. ಅತಿದೀರ್ಘಳೂ ಕರಾಲಮುಖಿಯೂ ಆಗಿ ಆಕಾಶವನ್ನು ಅಳೆಯುವವಳೋ ಎಂಬಂತಿತ್ತು. ದೀರ್ಘವಾದ ಭುಜಗಳೂ ಕಾಲುಗಳೂ ದಿಙ್ಮುಖವನ್ನು ಅಳೆಯುವುದಕ್ಕೋ ಎಂಬಂತಿತ್ತು.

೧೧. ಬಹೂಪವಾಸಗಳಿಂದ ಕೃಶಳಾಗಿರಲು ದೊಡ್ಡ ದೇಹವು ಬಹಳ ಒಣಗಿಹೋಗಿತ್ತು. ಗಾಳಿಗೆ ಸಿಕ್ಕಿ ಒದ್ದಾಡುತ್ತಿರುವ ಮೇಘಮಾಲೆಯ ಹಾಗೆ, ಕಾಡಿಗೆಯ ಹಾಗೆ, ಕಪ್ಪಾಗಿದ್ದಳು.

೧೨. ಸುದೀರ್ಘಳಾಗಿದ್ದವಳು ಕೃಶಳಾಗಿ ನಿಲ್ಲುವುದಕ್ಕೂ ಅಶಕ್ತಳಾಗಿರುವಳೆಂದು ಬ್ರಹ್ಮನು ಶಿರಾರೂಪಗಳಾದ ಉದ್ದವಾದ ಹಗ್ಗಗಳಿಂದ ಬಿಗಿದು ಕಟ್ಟಿರುವನೋ ಎಂಬಂತೆ ಇತ್ತು.

ತಥಾ ನಾಮ ಸುದೀರ್ಘಾ ಸಾ ಯಥಾ ತಸ್ಯಾಃ ಶಿರಃಖುರಂ ।
ಮಯಾ ದೃಷ್ಟಂ ಪ್ರಯತ್ನೇನ ಚಿರೊಧ್ವಾರ್ಧೋಗಮಾಗಮೈಃ ॥ ೧೩ ॥

ಅಂತ್ರಾಂತ್ರತಂತ್ರೀಗ್ರಥಿತಶಿರಃಕರಖುರೋತ್ಕರಾ ।
ಆಮೂಲಾತ್ಸೂತ್ರವಲಿತಾ ಕಂಟಕಾನಾಮಿವ ಸ್ಥಲೀ ॥ ೧೪ ॥

ವಿಶ್ವರೂಪಮಯಾರ್ಕಾದಿಶಿರಃಕಮಲಜಾಲಕೈಃ ।
ಕೃತಮಾಲಾಮಲಾಲೋಕವಾತವಹ್ನಿಮಯಾಂಚಲಾ ॥ ೧೫ ॥

ಪ್ರಲಂಬಕರ್ಣಾ ಲುಲಿತನಾಗಾ ನೃಶವಕುಂಡಲಾ ।
ಶುಷ್ಕತುಂಬೀಲತಾಕ್ಷೀಲಾ ದೀರ್ಘಾ ಲೋಲಾಸಿತಸ್ತನೀ ॥ ೧೬ ॥

---

೧೩. ಅವಳು ಎಷ್ಟು ದೀರ್ಘವಾಗಿದ್ದಳು ಎಂದರೆ ಆಕೆಯ ತಲೆಯನ್ನು ಕಾಲನ್ನು ನೋಡಲು ನಾನು ಮೇಲೂ ಕೆಳಗೂ ಪ್ರಯತ್ನಪಟ್ಟು ಹುಡುಕಿ ನೋಡ ಬೇಕಾಯಿತು.

೧೪. ನರಗಳ ಹುರಿಗಳಿಂದ ಕಟ್ಟಿರುವ ಶಿರಸ್ಸು, ಕೈ, ಕಾಲು, ಮೊದಲಾದ ಅಂಗಾಂಗಗಳುಳ್ಳವಳಾಗಿ, ಮುಳ್ಳುಗಳ ಪೊದರುಗಳು ತುಂಬಿರುವ ಕಾಡಿನಂತೆ, ಈ ಕೊನೆಯಿಂದ ಆ ಕೊನೆಯವರೆಗೂ ಕಾಣುತ್ತಿದ್ದಳು.

೧೫. ನಾನಾ ರೂಪವಾಗಿರುವ ದೇವದಾನವರ ಶಿರಸ್ಸುಗಳನ್ನೆಲ್ಲಾ ಪೋಣಿಸಿ ಮಾಲೆಯನ್ನು ಮಾಡಿಕೊಂಡು ಧರಿಸಿಕೊಂಡಿದ್ದಳು. ಅವಳ ಸೀರೆಯ ಸೆರಗು ಒಳ್ಳೆಯ ಚೆನ್ನಾಗಿ ಗಾಳಿಯಿಂದ ಉರಿಯುತ್ತಿರುವ ಬೆಂಕಿಯ ಹಾಗಿದ್ದಿತು.

೧೬. ಅವಳ ಕಿವಿಗಳು ಉದ್ದವಾಗಿದ್ದುವು: ಅವಳು ಧರಿಸಿದ್ದ ನಾಗಗಳು. ಅಲೆಯುತ್ತಿದ್ದುವು: ನರಶವಗಳನ್ನು ಕುಂಡಲಗಳಂತೆ ಧರಿಸಿದ್ದಳು. ಒಣಗಿಹೋಗಿರುವ ಸೋರೆಯ ಬುರುಡೆಗಳಂತೆ ಮಂಡಿಯವರೆಗೂ ಜೋಲಾಡುತ್ತಿರುವ ಕರಿಯ ಸ್ತನಗಳು ಇದ್ದುವು.

ಕುಮಾರಬರ್ಹಿಪಿಚ್ಛೌಘೈರ್ಬ್ರಾಹ್ಮಮೂರ್ಧಜಮಂಡಲೈಃ ।
ಲಾಂಛಿತೋಚ್ಚಸುರಾಧೀಶಶಿರಃಖಟ್ವಾಂಗಮಂಡಲಾ ॥ ೧೭ ॥

ದಂತೇಂದುಮಾಲಾವಿಮಲಾವಿವಃಲೋದ್ದ್ಯೋತಪಾತತಃ ।
ತಮೋರ್ಣವೋದ್ಧ್ವರ್ಲೇಖೇವ ವೃತ್ತಾವರ್ತವಿವರ್ತಿನೀ ॥ ೧೮ ॥

ಶುಷ್ಕತುಂಬೀಲತೇವೋಚ್ಚೈರಾಕಾಶತರುಸಂಸ್ಥಿತಾ ।
ವಿಲೋಲಾವಯವಾಸ್ಥಿಲಾ ವಾತೈಃ ಪಟಪಟಾರವಾ ॥ ೧೯ ॥

ಬೃಹತ್ತರಂಗೋರ್ಧ್ವಭುಜಾ ಶ್ಯಾಮಲೋಲ್ಲಾಸಶಾಲಿನೀ ।
ಏಕಾರ್ಣವೋರ್ಮಿಮಾಲೇವ ನೃತ್ತಾನೃತ್ತಿವಿವರ್ತಿನೀ ॥ ೨೦ ॥

ಕ್ಷಣಮೇಕಭುಜಾಕಾರಾ ಕ್ಷಣಂ ಬಹುಭುಜಾಕುಲಾ ।
ಅನಂತೋಗ್ರಭುಜಾಕ್ಷಿಪ್ತಜಗನ್ನರ್ತನಮಂಡವಾ ॥ ೨೧ ॥

---

೧೭. ಕುಮಾರನ ನವಿಲಿನ ಗರಿಗಳು, ಬ್ರಹ್ಮನ ಕೂದಲುಗಳು, ಇಂದ್ರಾದಿ ದೇವಾಧೀಶರುಗಳ ತಲೆಗಳನ್ನೂ ಕಡಿದಿರುವ ಖಟ್ವಾಂಗ, ಇವುಗಳನ್ನು ಹಿಡಿದು ಕೊಂಡಿದ್ದಳು.

೧೮. ಅವಳ ಒಂದೊಂದು ಹಲ್ಲು ಒಂದೊಂದು ಚಂದ್ರಮಂಡಲದಷ್ಟಿದ್ದು, ಅವೆಲ್ಲ ಬೆಳಗುತ್ತಿರಲು, ಆ ತಮಸ್ಸಾಗರದ ತಲೆಯ ಮೇಲೆ ಕಾಣಿಸುವ ಅಂಚೋ ಎಂಬಂತೆ ಮೆರೆಯುತ್ತಿದ್ದಳು.

೧೯. ಆಕಾಶವೆಂಬ ಮರವನ್ನು ಹತ್ತಿ, ಕೊನೆಯವರೆಗೂ ಹೋಗಿ ಒಣಗಿ ಹೋಗಿರುವ ಸೋರೆಯ ಬಳ್ಳಿಯೋ ಎಂಬಂತಿದ್ದ ಗಾಳಿಯು ಬಂದಾಗೆಲ್ಲ ಪಟಪಟಾ ರವದಿಂದ ಅವಳ ಅಂಗಗಳು ಅಲ್ಲಾಡುತ್ತಿದ್ದವು.

೨೦. ಅವಳ ಭುಜಗಳು ಬೃಹತ್ತರಂಗಗಳಂತೆ ಕಾಣಿಸುತ್ತಿದ್ದುವು. ಆ ಶ್ಯಾಮಲಾಂಗಿಯ ವಿಲಾಸ ಶಾಲಿನಿಯಾಗಿ, ಆ ಪ್ರಲಯಾರ್ಣವದ ತರಂಗ ರಾಜಿ ಗಳಂತೆ ನರ್ತಿಸುತ್ತಿದ್ದಳು.

೨೧. ಒಂದು ಗಳಿಗೆಯ ಹೊತ್ತು ಒಂದೇ ಭುಜವಿದ್ದ ಹಾಗೆ ಕಾಣುವುದು; ಇನ್ನೊಂದು ಗಳಿಗೆ ಬಹು ಭುಜಗಳನ್ನು ಆಡಿಸುತ್ತಿರುವಳು. ಅನಂತವಾಗಿರುವ ಉಗ್ರಭುಜಗಳು ಜಗನ್ನರ್ತನಮಂಡಪವನ್ನು ಮೇಲಕ್ಕೆ ಎತ್ತುವಂತಿದ್ದುವು.

ಕ್ಷಿಪ್ರಮೇಕಮುಖಾಕಾರಾ ಕ್ಷಿಪ್ರಂ ಬಹುಮುಖಾಕೃತಿಃ ।
ಅನಂತೋಗ್ರಮುಖೀ ಕ್ಷಿಪ್ರಂ ನಿರ್ಮುಖೀ ಚಾಪಿ ಚ ಕ್ಷಣಂ ॥ ೨೨ ॥

ಏಕಪಾದಾನ್ವಿತಾ ಕ್ಷಿಪ್ರಂ ಕ್ಷಿಪ್ರಂ ಪಾದಶತಾನ್ವಿತಾ ।
ಕ್ಷಣಂ ಚಾನಂತಪಾದಾಢ್ಯಾ ನಿಷ್ಪಾದಾಕಾರಿಣೀ ಕ್ಷಣಂ ॥ ೨೩ ॥

ಕಾಲರಾತ್ರಿರಿಯಂ ಸೇತಿ ಮಯಾನುಮಿತದೇಹಿಕಾ ।
ಕಾಲೀ ಭಗವತೀ ಸೇಯಮಿತಿ ನಿರ್ಣೀತಸಜ್ಜನಾ ॥ ೨೪ ॥

ಜ್ವಾಲಾಪೂರ್ಣಾರಘಟ್ಟೋಗ್ರಖಾತಾಭನಯನತ್ರಯಾ ।
ಜ್ವಲದ್ಧರೇಂದ್ರನೀಲಾದ್ರಿಸಾನೂಪಮಲಲಾಟಭೂಃ ॥ ೨೫ ॥

ಲೋಕಾಲೋಕೇಂದ್ರನೀಲೋಗ್ರಶ್ವಭ್ರಭೀಮಹನುದ್ವಯಾ ।
ವಾತಸ್ಕಂಧಗುಣಪ್ರೋತತಾರಾಮುಕ್ತಾಕಲಾಪಿನೀ ॥ ೨೬ ॥

---

೨೨. ಒಂದು ಸಲ ಏಕಮುಖವಾಗಿರುವಳು. ಎರಡನೆಯ ಗಳಿಗೆಯೊಳಗಾಗಿ ಬಹುಮುಖಿಯಾಗುವಳು. ಅನಂತಗಳೂ ಉಗ್ರಗಳೂ ಆದ ಆ ಮುಖಗಳು ಇನ್ನೊಂದು ಗಳಿಗೆಯಲ್ಲಿ ಇಲ್ಲದೆಯೇ ಹೋಗುವುವು.

೨೩. ಒಂದುಗಳಿಗೆ ಒಂದೇ ಕಾಲಿನಲ್ಲಿ ನಿಂತಿರುವಳು: ಕೂಡಲೆ ನೂರಾರು ಕಾಲುಗಳಾಗುವುವು. ಇನ್ನೊಂದು ಗಳಿಗೆಯೊಳಗಾಗಿ ಅನಂತ ಪಾದಗಳೂ ಇಲ್ಲವಾಗುವುವು.

೨೪. ಕಾಲರಾತ್ರಿಯು ಈಕೆಯೇ ಇರಬಹುದು ಎಂದು ನಾನು ಊಹಿಸಿದೆನು. ಸಜ್ಜನರೆಲ್ಲರೂ ಭಗವತೀ ಕಾಲೀ ಎನ್ನುವುದು ಈಕೆಯನ್ನೇ ಇರಬೇಕು ಎನ್ನಿಸಿತು

೨೫. ಹತ್ತಿಕೊಂಡು ಉರಿಯುತ್ತಿರುವ ನೀಲ ಪರ್ವತದ ಸಾನುಗಳಂತಿರುವ ಲಲಾಟ ಭಾಗವೂ, ಜ್ವಾಲಾ ಪೂರ್ಣವಾಗಿರುವ ಬೀಸುವ ಕಲ್ಲುಗಳೋ ಎಂಬಂತಿರುವ, ದೊಡ್ಡ ಹಳ್ಳಗಳಂತಿರುವ ಮೂರು ಕಣ್ಣುಗಳು ಇದ್ದುವು

೨೬. ಲೋಕಾಲೋಕಪರ್ವತದಲ್ಲಿ ಇಂದ್ರ ನೀಲ ಮಣಿಗಳಿಂದಾದ ಉಗ್ರವಾದ ಕಣಿವೆಗಳಂತೆ ತೋರುತ್ತ ಭಯಂಕರವಾಗಿರುವ ಕೆನ್ನೆಗಳು ವಾತಸ್ಕಂಧವೆಂಬ

ಇಂದ್ರನೀಲಾದ್ರಿತುಲ್ಯೋಚ್ಚತೋರಣೋಚ್ಚೈಃಪ್ರಭಾಂಬರೇ ।
ವಿಶ್ರಾಂತಕಾಚಶೈಲಾಭಭಗಭೀಷಣವಾಯಸೀ ॥ ೨೭ ॥

ನೃತ್ಯದ್ಭುಜಲತಾಪುಷ್ಪೈರ್ನಖಶುಭ್ರಾಭ್ರಮಂಡಲೈಃ ।
ಪೂರ್ಣಚಂದ್ರಶತಾನೀವ ಭ್ರಮಯಂತೀ ನಭಸ್ತಲೇ ॥ ೨೮ ॥

ಭ್ರಮದ್ಭಿರ್ವ್ಯಾಪ್ತದಿಕ್ಚಕ್ರಾ ಭುಜೈಃ ಕಲ್ಪಾಂಬುದೈರಿವ ।
ವರ್ಷದ್ಭಿಃ ಪ್ರಾಣಿಜಪ್ರಾಂತತಾರಾಲೀಖಾಬೃಹತ್ಪ್ರಭಾಃ ॥ ೨೯ ॥

ನಖಪುಷ್ಪಾಂಗುಲೀವಲ್ಲೀಜಾಲೈರ್ಭ್ರಾಂತಭುಜದ್ರುಮೈಃ ।
ಕೃಷ್ಣೈಃ ಕಾನನಿತಾಶೇಷಗಗನಾಗ್ರ್ಯೋಗ್ರಮೂರ್ತಿಭಿಃ ॥ ೩೦ ॥

---

ಪಾರದಲ್ಲಿ ಪೋಣಿಸಿ ಮುಡಿದುಕೊಂಡಿರುವ ನಕ್ಷತ್ರಗಳೆಂಬ ಮುತ್ತಿನ ಗೊಂಚಲುಗಳು.

೨೭. ಇಂದ್ರ ನೀಲ ಪರ್ವತಗಳಂತೆ ಇರುವ ಎತ್ತರವಾದ ತೋರಣಗಳಿಂದ ಮೆರೆಯುತ್ತಿರುವ ಆಕಾಶದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿರುವ ಗಾಜಿನ ಬೆಟ್ಟವೋ ಎಂಬಂತಿರುವ ಭಗವಾಯಸವೂ ಇದ್ದುವು.

೨೮. ಕುಣಿಯುತ್ತಿರುವ ಭುಜಲತಾಪುಷ್ಪಗಳೂ ನಖಗಳೆಂಬ ಶುಭ್ರವಾದ ಅಭ್ರಮಂಡಲಗಳೂ ನಭಸ್ತಲದಲ್ಲಿ ಆಕೆಯು ತಿರುಗುತ್ತಿರುವ ಪೂರ್ಣಚಂದ್ರ ಶತಗಳೋ ಎಂಬಂತಿದ್ದುವು.

೨೯. ಆಕೆಯು ತಿರುಗಿಸುತ್ತಿರುವ ಕೈಗಳೆರಡು ಕಲ್ಪಮೇಘಗಳು ದಿಗಂತಗಳವರೆಗೂ ಹೋಗಿ ದಿಕ್ಚಕ್ರಗಳನ್ನು ತುಂಬಿದ್ದುವು. ಆಕೆಯ ಕೈಯ ಉಗುರುಗಳ ಪ್ರಭೆಯು ಮುಕ್ತಾಹಾರಗಳಂತಿದ್ದುವು.

೩೦. ನಖಗಳೆಂಬ ಪುಷ್ಪಗಳನ್ನುಳ್ಳ ಬೆರಳುಗಳೆಂಬ ಲತೆಗಳನ್ನು ವಹಿಸಿಕೊಂಡಿರುವ ಭುಜಗಳೆಂಬ ದ್ರುಮಗಳು ಆಕಾಶವನ್ನೆಲ್ಲ ತುಂಬಿ ಕರಿಯ ಕಾಡನ್ನು ಮಾಡಿದ್ದುವು.

ತಮಾಲತಾಲತಃ ಸ್ಥೂಲಾಂ ಭುವಂ ದಗ್ಧಮಹಾವನೈಃ ।
ವಿಡಂಬಯಂತೀ ವಲಿತಾಂ ಜಂಘಾಸಂಘೇನ ಲೋಲತಾ ॥ ೩೧ ॥

ಅಪ್ಯನಂತೇ ಮಹಾವ್ಯೋಮ್ನಿ ಪಾರಂ ಪ್ರಾಪ್ತೈಃ ಶಿರೋರುಹೈಃ
ಕುರ್ವಾಣೇವಾತತಂ ವಾಸಂ ಚರತ್ತಿಮಿರದಂತಿನಃ ॥ ೩೨ ॥

ಉಹ್ಯಂತೇ ಮೇರವೋ ಯೇನ ತೇನ ನಿಃಶ್ವಾಸವಾಯುನಾ ।
ಘನಘೋಂಘುಮದಿಕ್ಚಕ್ರಗಗನಗ್ರಾಮಘೋಷಿಣಾ ॥ ೩೩ ॥

ಘನಮಾರುತಫೂತ್ಕಾರಕ್ಷ್ವೇಡಗೇಯಂ ಪ್ರಗಾಯತಾ ।
ನಿಯತಾನುನಯೇನೇವ ಚಲಿತಾ ಸಾನುವೃತ್ತಿನಾ ॥ ೩೪ ॥

ತತೋ ನೃತ್ತವಶಾವೇಶಾದ್ವರ್ಧಮಾನಶರೀರಿಣೀ ।
ಮಯಾ ದೃಷ್ಟಾವಧಾನೇನ ಗಗನಾಭೋಗಭೂರಿಣಾ ॥ ೩೫ ॥

---

೩೧. ಒಲೆಯುತ್ತಿರುವ ಜಂಘಾಸಂಘಗಳಿಂದ ಹುಟ್ಟಿದ ಬೆಂಕಿಯು ಮಹಾ ವನಗಳೆಲ್ಲವನ್ನೂ ಸುಟ್ಟಿರಲು, ಉಳಿದ ತಮಾಲ ತಾಲಗಳಿಗಿಂತ ಎತ್ತರವಾದ ಭೂಮಿಯನ್ನು ಅನುಕರಣ ಮಾಡುತ್ತಿರುವಳೋ ಎಂಬಂತಿದ್ದಳು ಆಕೆ.

೩೨. ಆ ಅನಂತವಾದ ಮಹಾಕಾಶದಲ್ಲಿ ಅದರ ಕೊನೆಯುವರೆಗೂ ಆಕೆಯ ಕೇಶಗಳು ಹರಡಿರಲು, ತಿರುಗುತ್ತಿರುವ ಕತ್ತಲೆಂಬ ಆನೆಗಳಿಗೆ ವಿಸ್ತಾರವಾದ ನಿಲು ಗಡೆಗಳನ್ನು ಕಟ್ಟುತ್ತಿರುವಳೋ ಎಂಬಂತಿತ್ತು.

೩೩. ಮೇರು ಪರ್ವತಗಳನ್ನೂ ಹಾರಿಸುವ ಆ ನಿಃಶ್ವಾಸ ವಾಯುವಿನಿಂದ, ಹುಟ್ಟಿದ ಘೋಷಗಳು ಗಗನಗ್ರಾಮದಿಂದ ಹೊರಟು ದಿಕ್ಚಕ್ರಗಳಲ್ಲಿ ಪ್ರತಿಧ್ವನಿತ ವಾಗುತ್ತಿದ್ದುವು.

೩೪. ಘನವಾದ ಮಾರುತ ಫೂತ್ಕಾರದಿಂದ ಗಾನವನ್ನು ಹಾಡುತ್ತ, ಕಾಲಕ್ಕೆ ಸರಿಯಾಗಿ ತಾಳ ಹಾಕುವಂತೆ ಇತ್ತು.

೩೫ ಅನಂತರ ಆ ಕುಣಿಯುವ ಆವೇಶದಲ್ಲಿ ಆಕೆಯ ಶರೀರವು ಬೆಳೆಯಿತು ನಾನು ನೋಡು ನೋಡುತ್ತಿದ್ದಂತೆಯೇ ಆ ಶರೀರವು ಗಗನದಷ್ಟು ವಿಸ್ತಾರಿತ ವಾಯಿತು.

ಯಾವತ್ತಯಾವೃತಾ ದೇಹೇ ಹೇಲಾವಲನಸಾರಯಾ ।
ಮಾಲಾ ಮಲಯಕೈಲಾಸಸಹ್ಯಮಂದರಮೇರುಭಿಃ ॥ ೩೬ ॥

ಆಸೀತ್ತಸ್ಯಾ ಯುಗಾಂತಾಭ್ರಮಾಲಿಕಾಪಟ್ಟಪಟ್ಟಿಕಾ ।
ಆದರ್ಶಮಂಡಲಾನ್ಯಂಗೇ ತ್ರೀಣಿ ಲೋಕಾಂತರಾಣಿ ಚ ॥ ೩೭ ॥

ಕರ್ಣಯೋರ್ಹಿಮವನ್ಮೇರೂ ರೂಪ್ಯಕಾಂಚನಮುದ್ರಿಕೇ ।
ಬ್ರಹ್ಮಾಂಡಘುಂಘುಮೈರ್ಮಾಲಾ ಮಹತೀ ಕಟಿಮೇಖಲಾ ॥ ೩೮ ॥

ಸ್ರಜಃ ಕುಲಾಚಲಾಃ ಶೃಂಗವನಪತ್ತನಗುಚ್ಛಕಾಃ ।
ಜರುತ್ಪುರವನದ್ವೀಪಗ್ರಾಮಪೇಲವಪಲ್ಲವಾಃ ॥ ೩೯ ॥

ತಸ್ಯಾ ಅಂಗೇಷು ದೃಷ್ಟಾನಿ ಪುರಾಣಿ ನಗರಾಣಿ ಚ ।
ಋತವಶ್ಚ ತ್ರಯೋ ಲೋಕಾ ಮಾಸಾಹೋರಾತ್ರಮಾಲಿಕಾಃ ॥ ೪೦ ॥

---

೩೬. ವಿಲಾಸದಿಂದ ನರ್ತಿಸುತ್ತಿರುವ ಆಕೆಯ ದೇಹದಲ್ಲಿ ಮಲಯ ಕೈಲಾಸ ಸಹ್ಯ ಮಂದಾರ ಮೇರುಗಳಿಂದ ಆದ ಮಾಲೆಯು ಕಾಣಿಸಿತು.

೩೭. ಆಕೆಗೆ ಪ್ರಲಯಕಾಲದ ಪುಷ್ಕರಾವರ್ತಮೇಘ ಮಾಲೆಗಳು ನಡುವಿನ ಪಟ್ಟಿಕೆಗಳಾದುವು. ಮೂರು ಲೋಕಗಳು ಆಕೆಯ ಪಟ್ಟೆಯಲ್ಲಿ ನೇತಾಡುವ ಅರಳೆಲೆ, ಮಾಂಗಾಯಿ ಮುಂತಾದ ಮಣಿಮಯಿಯಾದರ್ಶ ಮಂಡಲಗಳಾದುವು

೩೮. ಕರ್ಣಗಳಲ್ಲಿ ಹಿಮವನ್ಮೇರು ಪರ್ವತಗಳು ನೇತಾಡುವ ಅಂಜನ ಮುದ್ರಿಕೆಗಳಾದವು. ಬ್ರಹ್ಮಾಂಡಗಳನ್ನು ಪೋಣಿಸಿ ಕಟ್ಟಿದ ಮಾಲೆಯು ಆಕೆಯ ನಡುವಿನ ಮಹಾಮೇಖಲೆಯಾಗಿತ್ತು.

೩೯. ಶೃಂಗ, ವನ, ಪತ್ತನಗಳೆಂಬ ಗುಚ್ಛಕಗಳನ್ನುಳ್ಳ ಕುಲಾಚಲಗಳು ಆಕೆಯ ಕತ್ತಿನ ಹಾರಗಳಾದುವು ಆಯುಸ್ಸು ಮುಗಿದ ಪುರ ವನ ದ್ವೀಪ ಗ್ರಾಮಗಳು ಆಕೆಯು ಸಿಂಗರಿಸಿಕೊಂಡಿದ್ದ ಪೇಲವಪಲ್ಲವಗಳಾದುವು.

೪೦. ಆಕೆಯ ಅಂಗಗಳಲ್ಲಿ ಪುರಗಳೂ ನಗರಗಳೂ ಋತುಗಳೂ ಲೋಕತ್ರಯಗಳೂ ಮಾಸಗಳೂ ಅಹೋರಾತ್ರಗಳೂ ಮಾಲಿಕೆಗಳಾಗಿ ಒಲೆಯುತ್ತಿದ್ದುವು.

ಮುಕ್ತಾಲತಾದಿಕಂ ಸದ್ಯಃ ಕಾಲಿಂದೀತ್ರಿಪಥಾದಿಕಾಃ ।
ಧರ್ಮಾಧರ್ಮಾವುಭೌ ಕರ್ಣಭೂಷಣೇ ಚಾನ್ಯಕರ್ಣಯೋಃ ॥ ೪೧ ॥

ಸ್ತನಾಸ್ತಸ್ಯಾಸ್ತು ಚತ್ವಾರಃ ಪ್ರವದ್ಧರ್ಮಪಯೋಲವಾಃ ।
ವೇದಾಃ ಸಕಲಶಾಸ್ತ್ರಾರ್ಥಚತುಃಸಂಸ್ಥಾನಚೂಚುಕಾಃ ॥ ೪೨ ॥

ತ್ರಿಶೂಲೈಃ ಪಟ್ಟಿಶೈಃ ಪ್ರಾಸೈಃ ಶರಶಕ್ತ್ಯೃಷ್ಟಿಮುದ್ಗರೈಃ ।
ನಿರ್ಯದಾಯುಧಜಾಲಾನಿ ಸ್ರಗ್ಧಾಮಾನಿ ಬಿಭರ್ತಿ ಸಾ ॥ ೪೩ ॥

ಚತುರ್ದಶವಿಧಾ ಭೂತಜಾತಯೋ ಯಾಃ ಸುರಾದಿಕಾಃ ।
ತಸ್ಯಾಃ ಶರೀರಶಾಲಿನ್ಯಾಸ್ತಾ ಲೋಮಾವಲಯಃ ಸ್ಥಿತಾಃ ॥ ೪೪ ॥

ತಸ್ಯಾಶ್ಚ ನಗರಗ್ರಾಮಗಿರಯೋ ದೇಹಶಾಯಿನಃ ।
ನೃತ್ಯಂತ್ಯಾ ಸಹ ನೃತ್ಯಂತಿ ಪುನರ್ಜನ್ಮ ಮುದೇವ ತೇ ॥ ೪೫ ॥

---

೪೧. ಕಾಲಿಂದೀ, ಗಂಗಾ ಮುಂತಾದ ನದಿಗಳೆಲ್ಲ ಮುಕ್ತಾಹಾರಗಳಾಗಿದ್ದುವು ಧರ್ಮಾಧರ್ಮಗಳೆರಡೂ. (ಹಿಂದೆ ಹೇಳಿದ್ದಲ್ಲದ ಇತರ) ಕರ್ಣಗಳಲ್ಲಿ ಕುಂಡಲಗಳಾಗಳಿದ್ದುವು.

೪೨. ಆಕೆಗೆ ನಾಲ್ಕು ಸ್ತನಗಳಿದ್ದುವು. ಅವುಗಳಿಂದ ಕೊಂಚ ಕೊಂಚವಾಗಿ ಬೆವರು ಇಳಿಯುತ್ತಿತ್ತು. ನಾಲ್ಕೂ ವೇದಗಳು ಸಕಲ ಶಾಸ್ತ್ರಗಳೂ ಆಕೆಯ ಸ್ತನಗಳ ಚೂಚುಗಳಾಗಿದ್ದುವು.

೪೩. ತ್ರಿಶೂಲ, ಪಟ್ಟಿಶ, ಪ್ರಾಸ, ಶರ, ಶಕ್ತಿ, ಯಷ್ಟಿ, ಮುದ್ಗರ ಮೊದಲಾದ ಆಯುಧ ಜಾಲಗಳನ್ನು ಹೂವಿನ ಮಾಲೆಗಳ ಹಾಗೆ ಆಕೆಯು ಧರಿಸಿಕೊಂಡಿದ್ದಳು.

೪೪. ಸುರರೇ ಮೊದಲಾದ ಚತುರ್ದಶಭೂತಜಾತಗಳು ಶರೀರಧಾರಿಣಿಯಾದ ಆಕೆಯ ಶರೀರದಲ್ಲಿ ಕೂದಲುಗಳಾಗಿದ್ದರು.

೪೫. ಆಕೆಯ ದೇಹದಲ್ಲಿ ನಗರ ಗ್ರಾಮ ಗಿರಿಗಳು ಸುಖವಾಗಿ ಪವಡಿಸಿದ್ದು, ಕುಣಿಯುತ್ತಿರುವ ಆಕೆಯೊಡನೆ ಪುನರ್ಜನ್ಮ ಬಂತೆಂಬ ಸಂತೋಷದಿಂದ ಕುಣಿಯುವಂತೆ ಕುಣಿಯುತ್ತಿದ್ದುವು

ಜಂಗಮಾತ್ಮೈಕಮೇವೈತಜ್ಜಗದಸ್ಥಾವರಂ ತದಾ ।
ನೃತ್ಯತೀತಿ ಮಯಾ ಜ್ಞಾತಂ ಪರಲೋಕೇ ಸುಖಂ ಸ್ಥಿತಂ　　॥ ೪೬ ॥

ನಿಗೀರ್ಣಂ ಜಗದಂಗಸ್ಥಂ ಕೃತ್ವಾ ತೃಪ್ತಿಮುಪಾಗತಾ ।
ಪರಿನೃತ್ಯತಿ ಸಾ ಮತ್ತಾ ಜಗಜ್ಜೀರ್ಣಾ ಹಿ ಚಾತಕೀ　　॥ ೪೭ ॥

ಆದರ್ಶಪ್ರತಿಬಿಂಬಸ್ಥಮಿವಾಭಾತ್ಯಖಿಲಂ ಜಗತ್ ।
ತಸ್ಯಾ ವಪುಷಿ ವಿಸ್ತೀರ್ಣೇ ಸ್ವರೂಪಿಣಿ ಸರೂಪಧೃಕ್　　॥ ೪೮ ॥

ಸಾ ನ ನೃತ್ಯತಿ ತತ್ಸರ್ವಂ ಸಶೈಲವನಕಾನನಂ ।
ಜಗನ್ನೃತ್ಯತಿ ನಾನಾತ್ಮ ಮೃತ್ವಾ ಪುನರುಪಾಗತಂ　　॥ ೪೯ ॥

---

೪೬. ಜಗತ್ತೆಲ್ಲವೂ ಆಗಿ ಸ್ಥಾವರವಾದ ಏನೊಂದೂ ತನ್ನಲ್ಲಿ ಇಲ್ಲವೆಂಬಂತೆ ಕೇವಲ ಜಂಗಮಾತ್ಮಕವಾಗಿ ಹೋಯಿತು. ಪರಲೋಕದಲ್ಲಿ ಸುಖವಾಗಿ ಕುಣಿಯುತ್ತಿರುವಂತೆ ತೋರಿತು.

೪೭. ಜಗತ್ತಿನ ಅಂಗಗಳಾಗಿದ್ದುವೆಲ್ಲವನ್ನೂ ನುಂಗಿ, ತೃಪ್ತಿಯನ್ನು ಹೊಂದಿ, ಜಗತ್ತೆಲ್ಲವೂ ಜೀರ್ಣವಾಗಿ ಹೋಗಲು ಮತ್ತಳಾದ ಕುಣಿಯುತ್ತಿರುವ ಚಾತಕಿಯೋ ಎಂಬಂತಿತ್ತು.

೪೮. ಜಗತ್ತೆಲ್ಲವೂ ಹಿಂದಿನ ಜಗತ್ತಿನಂತೆಯೇ ರೂಪವನ್ನು ಧರಿಸಿ ಸ್ವರೂಪವನ್ನು ಧರಿಸಿರುವ ಆಕೆಯ ವಿಸ್ತಾರವಾದ ದೇಹದಲ್ಲಿ ಪ್ರತಿಬಿಂಬವಾಗಿ ಕುಳಿತಿದೆಯೆನ್ನುವಂತೆ ಕಾಣಿಸುತ್ತಿತ್ತು

೪೯. ಆಕೆಯು ನರ್ತಿಸುತ್ತಿಲ್ಲ: ಸತ್ತು ಮತ್ತೆ ಹುಟ್ಟಿದ ಜಗತ್ತೆಲ್ಲವೂ ನಾನಾ ರೂಪಗಳಾಗಿ ಸಶೈಲವನ ಕಾನನವಾಗಿ ಆಕೆಯಲ್ಲಿ ಕುಣಿಯುತ್ತಿದೆ ಎನಿಸುತ್ತಿತ್ತು.

ತಜ್ಜಗಸ್ನರ್ತನಂ ಚಾರು ತದ್ದೇಹಾದರ್ಶಸಂಸ್ಥಿತಂ |
ಚಿರಂ ಮಯಾ ತದಾ ದೃಷ್ಟಮವಿನಷ್ಟಂ ಪುನಃ ಸ್ಥಿತಂ || ೫೦ ||

ವಿಚಲತ್ತಾರಕಾಜಾಲಂ ಭ್ರಮತ್ಪರ್ವತಮಂಡಲಂ |
ಮಶಕವ್ಯೂಹವದ್ವಾತವ್ಯಾಧೂತಾಮರದಾನವಂ || ೫೧ ||

ಸಂಗ್ರಾಮೋನ್ಮುಕ್ತಚಕ್ರಾಭದ್ವೀಪಾರ್ಣವವೃತಾಂಬರಂ |
ಹೇಲಾವಿವಲನಾವರ್ತಪ್ರೌಢಶೈಲಧರಾತೃಣಂ || ೫೨ ||

ನೀಲಮೇಘಾಂಶುಕಾವೃತ್ತಿವಾತಘುಂಘುಮಿತಾಂಬರಂ |
ಕಾಷ್ಠಾಸ್ಥ್ಯಾದಿಸ್ಫುಟಾಸ್ಫೋಟಪರತ್ಪಟಪಟಾರವಂ || ೫೩ ||

ಜಗತ್ಪದಾರ್ಥೈರ್ವ್ಯಾಮಿಶ್ರೈರಮಿಶ್ರೈರ್ಮುಕುರೈರ್ಯಥಾ |
ವ್ಯಾಪ್ತಮಾಭೋಗಿಭಾಂಕಾರೈರಂಗೈರಂಗಭ್ರಮಸ್ತಥಾ || ೫೪ ||

---

೫೦. ಅವಿನಷ್ಟವಾಗಿ ಮತ್ತೆ ಹುಟ್ಟಿಬಂದ ಜಗತ್ತೆಲ್ಲವೂ ಕುಣಿಯುತ್ತಿತ್ತು ಅದರ ಪ್ರಕಾಶವು ಆಕೆಯ ದೇಹವೆಂಬ ಆದರ್ಶದಲ್ಲಿ ಕಾಣುತ್ತಿತ್ತು ಅದನ್ನು ನಾನು ಬಹುಕಾಲ ನೋಡಿದೆನು

೫೧. ನಕ್ಷತ್ರಗಳೆಲ್ಲವೂ ಚಲಿಸುತ್ತಿದ್ದುವು: ಪರ್ವತಮಂಡಲಗಳೆಲ್ಲವೂ ಸುತ್ತುತ್ತಿದ್ದುವು· ಅಮರ ಅಸುರ ಮಂಡಲಗಳೆಲ್ಲ ಮಶಕವ್ಯೂಹಗಳಂತೆ ಗಾಳಿಯ ಏಟಿಗೆ ಸಿಕ್ಕಿತ್ತು.

೫೨. ಸಂಗ್ರಾಮದಲ್ಲಿ ಪ್ರಯೋಗಿಸಿದ ಚಕ್ರದಂತೆ ದ್ವೀಪ, ಅರ್ಣವಗಳಿಂದ ಪರಿವೃತವಾದ ಆಕಾಶವು, ಗಿರ್ರನೆ ಸುತ್ತುತ್ತಿತ್ತು: ದೊಡ್ಡ ಶೈಲಗಳನ್ನೂ ಧರಾ ಮಂಡಲಗಳನ್ನೂ ವಾಯುವು ಲೀಲಾಜಾಲವಾಗಿ ತೃಣಗಳಂತೆ ಹಾರಿಸುತ್ತಿತು.

೫೩. ನೀಲಮೇಘಗಳೆಂಬ ವಸನವನ್ನುಟ್ಟಿರುವ ಆಕೆಯು ತಿರುಗುತ್ತಿದ್ದರೆ, ಆ ವಸ್ತ್ರಗಳಿಂದ ಹುಟ್ಟಿದ ಗಾಳಿಯೂ ಶಬ್ದವೂ ಆ ಆಕಾಶವನ್ನೆಲ್ಲ ತುಂಬಿದ್ದುವು ಆ ಶಬ್ದವು ದಿಗಂತಗಳನ್ನೂ ಒಡೆಯುವಂತೆ ಪಟಪಟವೆನ್ನುತ್ತಿತ್ತು.

೫೪. ಆಕೆಯು ನರ್ತಿಸುತ್ತಿರುವಾಗ ಆಕೆಯ ಅಂಗಾಂಗಗಳನ್ನೆಲ್ಲ ತಿರುಗಿಸುತ್ತಿರಲು, ಒಂದೊಂದು ಗಳಿಗೆಯಲ್ಲೂ ಜಗತ್ಪದಾರ್ಥಗಳು ಒಂದಕ್ಕೊಂದು ತಾಕ

ಮೇರುರ್ನೃತ್ಯತಿ ಲೊಲೋಚ್ಚಕುಲಾಚಲಬೃಹದ್ಭುಜಃ ।
ಭ್ರಮದಭ್ರಪಟೋಪೇತನಮತ್ತನುತನೂರುಹಃ ॥ ೫೫ ॥

ಅತ್ಯಜಂತಃ ಸಮುದ್ರಾಶ್ಚ ಮರ್ಯಾದಾಮುದ್ರಣಂ ದ್ರುಮಾಃ ।
ಭೂಮೇರ್ನಭಸ್ತಲಂ ಯಾಂತಿ ನಭಸೋ ಯಾಂತಿ ಭೂತಲಂ ॥ ೫೬ ॥

ಪುರಾಣಿ ಘರ್ಘರಾರಾವೈರ್ದೃಶ್ಯಂತೇ ಲುಠಿತಾನ್ಯಧಃ ।
ಸಗೃಹಾಟ್ಟಾಲವಾಸ್ತವ್ಯಂ ನಚ ಕಿಂಚಿಲ್ಲುಠತ್ಯಧಃ ॥ ೫೭ ॥

ತಸ್ಯಾಂ ಭ್ರಮಂತ್ಯಾಂ ಚತುರಂ ಚಂದ್ರಾರ್ಕದಿನರಾತ್ರಯಃ /
ನಖಾಗ್ರಲೇಖಾ ಲೋಕಾಂತಭ್ರಾಂತಿ ಕಾಂಚನಸೂತ್ರವತ್ ॥ ೫೮ ॥

---

ಲಾಡುವುವು: ಆದರೂ ಒಂದರೊಂಡನೊಂದು ಮುಕುರಗಳಂತೆ ಅಮಿಶ್ರಗಳಾಗಿರುವುವು: ಆಗ ಆದ ಭಾಂಕಾರವು ವ್ಯಾಪ್ತವಾಗಿ ವಿಸ್ತಾರವಾಗಿ ಹರಡುವುದು.

೫೫. ತನ್ನನ್ನು ಸುತ್ತಿರುವ ಮೇಘಪಟಲವು ತನ್ನೊಡನೆ ಸುತ್ತುತ್ತಿರಲು, ತನ್ನ ಮೈ ಕೂದಲುಗಳೆಲ್ಲ ಬಗ್ಗುತ್ತಿರಲು, ಉಚ್ಚ ಕುಲಾಚಲಗಳೆಂಬ ಬೃಹದ್ಭುಜಗಳನ್ನು ಅಲ್ಲಾಡಿಸಿಕೊಂಡು ಮೇರುವು ನರ್ತಿಸುತ್ತಿರುವುದು.

೫೬. ಭೂಮಿಯ ಮರಗಳು, ಮರ್ಯಾದೆಯನ್ನು ಮೀರದ ಸಮುದ್ರಗಳೂ ಆಕಾಶಕ್ಕೆ ಹೋಗುವುವು: ಆಕಾಶದಿಂದ ಭೂಮಿಗೆ ಬರುವುವು.

೫೭. ಪುರಗಳೆಲ್ಲವೂ ಕೆಳಗೆ ಉರುಟಾಡುತ್ತ ಘರ್ಘರನೆ ದನಿಮಾಡುತ್ತಿರುವುದು ಕಾಣುವುದು ಅಲ್ಲಿರುವ ಗೃಹ ಅಟ್ಟಾಲಗಳಲ್ಲಿರುವುವೆಲ್ಲವೂ ಕೂಡ ಕೊಂಚವೂ ಅಲ್ಲಾಡದೆ ಇರುವುದು.

೫೮. ಆಕೆಯು ನೈಪುಣ್ಯದಿಂದ ನರ್ತಿಸುತ್ತಿರಲು, ಚಂದ್ರ ಸೂರ್ಯ ದಿನ ರಾತ್ರಿಗಳು, ಕಾಲುಗುರಿನಲ್ಲಿ ಪ್ರತಿಬಿಂಬಿಸಿ, ಲೋಕಾಂತದಲ್ಲಿ ಕಾಂಚನ ಸೂತ್ರದಂತೆ ಕಾಣಿಸುವುವು.

ವಿಭಾಂತಿ ಸೃಷ್ಟಯಸ್ತಸ್ಯಾ ಘರ್ಮಾಣಿ ಜಲಜಾಲಿಕಾಃ ।
ಇವ ನೀಹಾರಹಾರಿಣ್ಯಾ ನೀಲವಾರಿದವಾಸಸಃ ॥ ೫೯ ॥

ಖಮೇವ ತಸ್ಯಾಃ ಸಂಪನ್ನಂ ಕಬರೀಮಂಡಲಂ ಬೃಹತ್ ।
ಪಾತಾಲಂ ಚರಣೌ ಭೂಮಿರುದರಂ ಬಾಹವೋ ದಿಶಃ ॥ ೬೦

ದ್ವೀಪಾಬ್ಧಯೋಽಂತ್ರವಲಯಾಃ ಪಾರ್ಶ್ವಕಾಃ ಸರ್ವಪರ್ವತಾಃ ।
ಪ್ರಾಣಾಪಾನಾವಲೀದೋಲಾಃ ಪವನಸ್ಕಂಧಶಾಲಿಕಾಃ ॥ ೬೧ ॥

ತದಾನುಭೂತಂ ನೃತ್ಯಂತ್ಯಾಸ್ತಸ್ಯಾ ವಪುಷಿ ವಿಸ್ತೃತೇ ।
ಹಿಮವನ್ಮೇರುಸಹ್ಯಾದ್ಯೈರ್ದೋಲನಭ್ರಮಮದ್ರಿಭಿಃ ॥ ೬೨ ॥

ತರದದ್ರಿಗುಲುಚ್ಛಾಸ್ತಾ ವಲಯಂತ್ಯಾ ತಯಾ ಸ್ರಜಃ ।
ಪುನಃ ಕಲ್ಪಾಂತ ಆರಬ್ಧ ಇವ ತಾಂಡವಹೇಲಯಾ ॥ ೬೩ ॥

---

೫೯. ನೀಹಾರಹಾರಿಣಿಯಾಗಿ ನೀಲ ಮೇಘ ವದನೆಯಾದ ಆಕೆಯು ಬೆವರು ಹನಿಗಳು ಜಲಜಾಲಿಕವಾದ ಸೃಷ್ಟಿಗಳಾಗಿ ಮೆರೆಯುವುವು.

೬೦. ಆಕಾಶವೇ ಆಕೆಯ ಕಬರೀ ಮಂಡಲವಾಗಿರುವುದು: ಪಾತಾಲವು ಆಕೆಯ ಚರಣ: ಭೂಮಿಯು ಉದರವು: ಬಾಹುಗಳು ದಿಶೆಗಳು.

೬೧. ದ್ವೀಪ ಸಮುದ್ರಗಳು ಅಂತರವಲಯಗಳು ಸರ್ವಪರ್ವತಗಳೂ ಆಕೆಯ ಪಾರ್ಶ್ವಗಳು ಅವೆಲ್ಲವೂ ಪವನಸ್ಕಂಧದಲ್ಲಿ ಸಿಕ್ಕಿಕೊಂಡು ಪ್ರಾಣಾಪಾನ ಗತಿಗಳಿಂದ ತೂಗುವುವು.

೬೨. ಆಕೆಯು ನರ್ತನ ಮಾಡುತ್ತಿರುವಾಗ,ಆಕೆಯ ವಿಸ್ತಾರವಾದ ದೇಹದಲ್ಲಿ ಹಿಮವಂತ, ಮೇರು, ಸಹ್ಯ, ಮೊದಲಾದ ಮಹಾ ಪರ್ವತಗಳು ದೋಲಾವಿಹಾರ ಸೌಖ್ಯವನ್ನು ಅನುಭವಿಸಿದುವು.

೬೩. ಅತ್ತ ಕಡೆ ಇತ್ತ ಕಡೆ ಒಲೆಯುತ್ತಿರುವ ಆಕೆಯೊಡನೆ ಹಾರಾಡುತ್ತಿರುವ ಪರ್ವತಗಳೆಂಬ ಹೂ ಗೊಂಚಲುಗಳು ಹಾರಗಳಾಗಿರಲು, ಮತ್ತೆ ಕಲ್ಪಾಂತವು ತಾಂಡವಲೀಲೆಯನ್ನು ಆರಂಭಿಸಿತೋ ಎಂಬಂತಿತ್ತು.

ಸುರಾಸುರೋರಗಾನೀಕರೋಮಶಾಂಗಃ ಶರೀರಕಃ ।
ನಿಷ್ಪಂದಂ ಸ್ಥಾತುಮಶಕನ್ನಸೌ ಭ್ರಮತಿ ಚಕ್ರವತ್ ॥ ೬೪ ॥

ನಾನಾವಿಭವವಿಜ್ಞಾನಯಜ್ಞಯಜ್ಞೋಪವೀತಿನೀ ।
ನಾ ಸರಂತೀ ನಭಸ್ಯಾಸೀದ್ಘನಘೂತ್ಕಾರಘೋಷಿಣೀ ॥ ೬೫ ॥

ತತ್ರ ಭೂತಲಮಾಕಾಶಮಾಕಾಶಮಪಿ ಭೂತಲಂ ।
ಪ್ರತಿಕೃತಿ ಭವತ್ಯಂತರ್ನಚ ಕಿಂಚಿದ್ವಿವರ್ತತೇ ॥ ೬೬ ॥

ಬೃಹನ್ನಾಸಾಗುಹಾಗೇಹನಿರ್ಗತಾ ಘನಘುಂಘುಮಾಃ ।
ತತ್ರೋಗ್ರಾ ವಾಯವೋ ವಾಂತಿ ಘೋರಘೂತ್ಕಾರಕಾರಿಣಃ ॥ ೬೭ ॥

---

೬೪. ಸುರ ಅಸುರ ಉರಗರ ಗುಂಪುಗಳು ಎಂಬ ರೋಮಗಳನ್ನುಳ್ಳ ಶರೀರವು ಆಕೆಯು ಕುಣಿಯುತ್ತಿರಲು ನಿಶ್ಚಲವಾಗಿರಲಾರದೆ ಚಕ್ರದಂತೆ ಸುತ್ತುತ್ತಿತ್ತು.

೬೫. ಕರ್ಮಫಲಭೂತಗಳಾದ ವಿಭವಗಳು, ಆ ಕರ್ಮವನ್ನು ಮಾಡುವುದಕ್ಕೆ ಬೇಕಾದ ವಿಜ್ಞಾನಗಳು, ಅದನ್ನು ಅನುಷ್ಠಾನ ಮಾಡುವ ಯಜ್ಞಗಳು, ಎಂಬ ಮೂರೆಳೆಗಳುಳ್ಳ ಯಜ್ಞೋಪವೀತವನ್ನು ಧರಿಸಿ, ಘನವಾಗಿ ಘೂತ್ಕಾರಘೋಷ ಮಾಡುತ್ತ ಆಕೆಯು ಆಕಾಶದಲ್ಲಿ ಸಂಚಾರ ಮಾಡುತ್ತಿದ್ದಳು.

೬೬. ಆಕೆಯು ಸಂಚರಿಸುತ್ತ ಇದ್ದ ಎಡೆಯಲ್ಲಿ ಆಕಾಶವು ಭೂತಲವಾಗಿತ್ತು: ಭೂತಲವು ಆಕಾಶವಾಗಿತ್ತು. ಒಂದನ್ನೊಂದು ಪ್ರತಿಬಿಂಬಿಸಿದಂತೆ ಇದ್ದು, ಒಳಗೆ ಏನೂ ವ್ಯತ್ಯಾಸವಿಲ್ಲದೆ ಇತ್ತು.

೬೭. ಆಕೆಯ ಆ ಭಾರಿ ಮೂಗಿನ ಹೊಳ್ಳೆಗಳೆಂಬ ಗುಹೆಗಳಿಂದ ಘನವಾದ ಘುಂಘುಂ ಶಬ್ದವನ್ನು ಮಾಡುತ್ತ ಹೊರಟ ಉಗ್ರವಾದ ನಿಃಶ್ವಾಸ ವಾಯುಗಳು ಘೋರವಾಗಿ ಘೂತ್ಕಾರ ಮಾಡುತ್ತ ಬೀಸುವುವು.

ನಭಃಕರಶತೈಸ್ತಸ್ಯಾಸ್ತತುರಾವೃತ್ತಿವರ್ತಿಭಿಃ ।
ಭಾತಿ ಚಂಡಾನಿಲೋದ್ಧೂತೈರಾಕೀರ್ಣಮಿವ ಪಲ್ಲವೈಃ ॥ ೬೮ ॥

ತದಂಗಜಜಗದ್ವಸ್ತುಜಾತಭ್ರಮಣಸಂಭವಾತ್ ।
ದೃಷ್ಟಿರ್ದ್ಧೀರಾಪಿ ಮೇ ಮೋಹೇ ಸನ್ನಾ ಸೇನೇವ ಸಂಗರೇ ॥ ೬೯ ॥

ಪ್ರೋಹ್ಯಂತೇ ಯಂತ್ರವಚ್ಛೈಲಾ ನಿಪತಂತಿ ನಭಶ್ಚರಾಃ ।
ಲುಠಂತ್ಯಮರಗೇಹಾನಿ ವಲಿತೇ ದೇಹದರ್ಪಣೇ ॥ ೭೦ ॥

ಮೇರವಃ ಪರ್ಣವದ್ವ್ಯೂಢಾ ಮಲಯಾಃ ಪಲ್ಲವಾ ಇವ ।
ಹಿಮಾದ್ರಯೋ ಹಿಮಕಣಾ ಇವೌರ್ವ್ಯೋಽಬ್ಜಲತಾ ಇವ ॥ ೭೧ ॥

ಸಹ್ಯಾ ಮಹ್ಯಾಮಿವ ಖಗಾ ವಿಂಧ್ಯಾ ವಿದ್ಯಾಧರಾ ಇವ ।
ವೃತ್ತಾವರ್ತೆ ಭ್ರಮಂತೋಂತಾ ರಾಜಹಂಸಾ ಇವಾಂಬರೇ ॥ ೭೨ ॥

---

೬೮-೬೯ ಆಕೆಯ ಅಂಗಗಳಿಂದ ಹುಟ್ಟಿದ ಜಗದ್ವಸ್ತುಜಾತಗಳು ತಿರುಗುತ್ತಿರುವುದನ್ನು ನೋಡಿ, ನನ್ನ ದೃಷ್ಟಿಯು ಸ್ಥಿರವಾಗಿದ್ದರೂ, ಸಂಗ್ರಾಮದಲ್ಲಿರುವ ಸೈನ್ಯದಂತೆ, ಮೋಹವನ್ನು ಪಡೆಯಿತು.

೭೦. ಆಕೆಯ ದೇಹವೆಂಬ ದರ್ಪಣವು ಅಲ್ಲಾಡಲು, ಯಂತ್ರದಲ್ಲಿಟ್ಟು ಎಸೆದಂತೆ ಶೈಲಗಳು ಹಾರುತ್ತಿರುವುವು: ನಭಶ್ಚರರು ಬಿದ್ದು ಹೋಗುತ್ತಿರುವರು: ಅಮರರ ಮಂದಿರಗಳು ಒದ್ದಾಡುತ್ತಿರುವುವು.

೭೧ ಮೇರು ಪರ್ವತಗಳು ಎಲೆಗಳಂತೆ ಹಾರಿದುವು. ಮಲಯಗಳು ಚಿಗುರೆಲೆಯಂತೆ ಹಾರಾಡಿದುವು ಹಿಮಾದ್ರಿಗಳು ಹಿಮಕಣಗಳಾದುವು. ಭೂಮಿಗಳು ಬಿಸಲತೆಗಳಂತೆ ನೆಗೆದಾಡಿದುವು.

೭೨. ಸಹ್ಯಗಳು ಮಹಿಯಲ್ಲಿನ ಖಗಗಳಾದುವು. ವಿಂಧ್ಯಗಳು ವಿಧ್ಯಾಧರರಾದುವು: ಹೀಗಾಗಿ ಆಕಾಶದಲ್ಲಿ ರಾಜಹಂಸಗಳ ಹಾಗೆ, ಸುಳಿಗಳಲ್ಲಿ ಸಿಕ್ಕಿಕೊಂಡ ಮರಗಳ ಹಾಗೆ, ಆದುವು.

ದ್ವೀಪಾನ್ಯಪಿ ತೃಣಾನೀವ ಸಮುದ್ರಾ ವಲಯಾ ಇವ ।
ಸುರಲೋಕಾಲಯಃ ಪದ್ಮಾ ಆಸಂಸ್ತದ್ದೇಹವಾರಿಣಿ ॥ ೭೩ ॥

ವಿಶದಾಕಾಶಸಂಕಾಶೇ ಸ್ವಪ್ನಾಂಜನಪುರೋಗಮೇ ।
ಅಂಗೇ ತಸ್ಯಾ ಬೃಹಜ್ಜಂಘೇ ಪಿಂಡಾದಿತ್ಯಸಮುತ್ಥಿಷಿ ॥ ೭೪ ॥

ವಿಂಧ್ಯೋ ನೃತ್ಯತಿ ಕಾಂಚನಾಚಲವನೇ ಸಹ್ಯಶ್ಚ ಸಹ್ಯೋ ಗಿರಿಃ
ಕೈಲಾಸೋ ಮಲಯೋ ಮಹೇಂದ್ರಶಿಖರೀಕ್ರೌಂಚಾಚಲೋ ಮಂದರಃ ।
ಗೋಕರ್ಣೋ ಗಗನಾಂಗಣೇ ವಸುಮತೀ ವಿದ್ಯಾಧರಾಣಾಂ ಪುರಂ
ಸರ್ವೇ ಜಂಗಮತಾಂ ಗತಾ ವನಭುವಸ್ತಸ್ಯಾಃ ಶರೀರೇ ಸದಾ ॥ ೭೫ ॥

ಅಬ್ಧಿರ್ನೃತ್ಯತಿ ಪರ್ವತೇ ಗಿರಿರಪಿ ಪ್ರೋಚ್ಚೈರ್ನಭಃಕೋಟರೇ
ವ್ಯೋಮಾಪೀಂದುದಿವಾಕರೈಃ ಕ್ವ ಚಲಿತಂ ಭೂಮೇರಧಸ್ತಾದ್ಗತಂ ।
ಸದ್ವೀಪಾಚಲಪತ್ತನೋ ವನಗಣಃ ಪ್ರೋತ್ಕೀರ್ಣಪುಷ್ಪೋ ದಿವಿ-
ವ್ಯಾಲೋಲಂ ಜಗದಂಬುಧಾವಿವ ತೃಣಂ ದಿಕ್ಚಕ್ರಕೇ ಭ್ರಾಮ್ಯತಿ ॥ ೭೬ ॥

---

೭೩. ದ್ವೀಪಗಳು ತೃಣಗಳಾಗಿ, ಸಮುದ್ರಗಳು ವಲಯಗಳಾಗಿ, ಸ್ವರ್ಗಲೋಕವು ಪದ್ಮವಾಗಿ, ಆಕೆಯ ದೇಹವೆಂಬ ನೀರು ಮೆರೆಯಿತು

೭೪. ವಿಶದವಾಗಿರುವ ಆಕಾಶಕ್ಕೆ ಸಮನಾಗಿ, ಸ್ವಪ್ನಾಂಜನಪುರದಂತೆ, ನೂರಾರು ಆದಿತ್ಯಮಂಡಲಗಳು ಪುಡಿಪುಡಿಯಾಗಿ ಈ ಜಂಘೆಗಳು ಆದುವೋ ಎಂಬಂತೆ ಆಕೆಯ ಅಂಗವು ಇತ್ತು

೭೫. ಆಕೆಯ ಶರೀರದಲ್ಲಿ ವಿಂಧ್ಯವು ಕಾಂಚನ ಪರ್ವತದಲ್ಲಿರುವ ವನದಲ್ಲಿ ಹಿಂದಿನ ವೈರವನ್ನು ಮರೆಯಿಸಬೇಕೆಂಮೋ ಎಂಬಂತೆ ನರ್ತಿಸಿತು. ಕೈಲಾಸ, ಮಲಯ, ಮಹೇಂದ್ರ, ಕ್ರೌಂಚ, ಮಂದರ, ಗೋಕರ್ಣ ಮೊದಲಾದ ಪರ್ವತಗಳೂ ಭೂಮಿಯೂ, ವಿದ್ಯಾಧರ ಪುರಗಳೂ, ಎಲ್ಲವೂ ಆಕಾಶವೆಂಬ ಅಂಗಳದಲ್ಲಿ ಕಾಣಿಸಿತು. ಅಷ್ಟೇನು? ವನಭೂಮಿಗಳೇ ಮೊದಲಾದ ಸರ್ವವೂ ಜಂಗಮವಾಗಿ ಹೋಯಿತು.

೭೬ (ಆಕೆಯು ಕುಣಿಯುತ್ತಿರುವಾಗ) ಸಮುದ್ರವು ಪರ್ವತದಲ್ಲಿ ಕುಣಿಯಿತು. ಪರ್ವತವು ಎತ್ತರವಾದ ಆಕಾಶ ಕೋಟರದಲ್ಲಿ ಕುಣಿಯಿತು. ಆಕಾ

ವ್ಯೋಮ್ನಿ ಭ್ರಮಂತಿ ಗಿರಯೋಂಬುಧಯೋ ದಿಗಂತೇ
ಲೋಕಾಂತರಾಣಿ ಪುರಪತ್ತನಮಂಡಲಾನಿ ।
ನದ್ಯಃ ಸರಾಂಸಿ ಮುಕುರಾಂತರಿವ ಪ್ರವೃದ್ಧ-
ವಾತಾವರ್ಕೀರ್ಣತೃಣವಿಕ್ರಮಣಕ್ರಮೇಣ ॥ ೭೭ ॥

ಮತ್ಸ್ಯಾಶ್ಚರಂತಿ ಚ ಮರೌ ವರವಾರಿಣೀವ
ವ್ಯೋಮ್ನಿ ಸ್ಥಿರಾಣಿ ನಗರಾಣಿ ಭುವೀವ ಭಾಂತಿ ।
ಖೇ ಭೂಧರಾ ಗಗನಸಂಕ್ಷಯವಾರಿವಾಹ
ಮುತ್ಪಾತವಾತಪರಿವೃತ್ತಗಿರಿಸ್ಥಿತಂ ತತ್ ॥ ೭೮ ॥

ಋಕ್ಷೋತ್ಕರೋ ಭ್ರಮತಿ ದೀಪಸಹಸ್ರಯಂತ್ರ-
ಚಕ್ರಕ್ರಮೇಣ ಮಣಿವರ್ಷಣವೇಗಚಾರುಃ ।
ಅಂತರ್ಬಹಿಶ್ಚ ಪರಿತಃ ಪ್ರಣಯೇನ ಮುಕ್ತಂ
ವಿದ್ಯಾಧರಾಮರಗಣೈರಿವ ಪುಷ್ಪವರ್ಷಂ ॥ ೭೯ ॥

---

ಶವೂ ಚಂದ್ರ ಸೂರ್ಯರೊಡನೆ ಚಲಿಸಿ ಭೂಮಿಯ ಕೆಳಗೆ ಎಲ್ಲಿಯೋ ಹೋಯಿತು ದ್ವೀಪ, ಪರ್ವತ, ಪತ್ತನಗಳೆಲ್ಲಾ ಸೇರಿದ ಚೆನ್ನಾಗಿ ಹೂವು ಬಿಟ್ಟಿರುವ ವನಗಣವು ಆಕಾಶದಲ್ಲಿ ಆಟವಾಡಿತು. ಜಗತ್ತು ಅಂಬುಧಿಯಲ್ಲಿ ತೇಲುವ ತೃಣದಂತೆ ದಿಕ್ಚಕ್ರದಲ್ಲಿ ಸುತ್ತಿತು.

೭೭. ಗಿರಿಗಳೂ ಸಾಗರಗಳೂ ಲೋಕಾಂತರಗಳೂ ಅವುಗಳಲ್ಲಿರುವ ಪುರ ಪತ್ತನ ಮಂಡಲಗಳೂ ನದಿಗಳೂ ಸರಸ್ಸುಗಳೂ ತಾನೇತಾನಾದ ಬಿರುಗಾಳಿಯಲ್ಲಿ ಹಾರುತ್ತಿರುವ ಹುಲ್ಲಿನ ಹಾರಾಟದ ಹಾಗೆ, ಕನ್ನಡಿಯಲ್ಲಿ ಹೇಗೋ ಹಾಗೆ, ದಿಗಂತಗಳಲ್ಲಿರುವ ಆಕಾಶದಲ್ಲಿ ಭ್ರಮಣ ಮಾಡಿದುವು.

೭೮. ಒಳ್ಳೆಯ ನೀರಿನಲ್ಲಿ ಸಂಚರಿಸುವಂತೆ ಮತ್ಸ್ಯಗಳು ಮರುಭೂಮಿಯಲ್ಲಿ ಸಂಚರಿಸುತ್ತವೆ. ಭೂಮಿಯಲ್ಲಿ ಹೇಗೋ ಹಾಗೆಯೇ ಅಂತರಿಕ್ಷದಲ್ಲಿ ನಗರಗಳು ಸ್ಥಿರವಾಗಿ ವಿರಾಜಿಸುತ್ತಿವೆ. ಪರ್ವತಗಳು ಆಕಾಶದಲ್ಲಿ ಮೆರೆಯುತ್ತಿವೆ. ಆಕಾಶವನ್ನು ವಿನಾಶ ಮಾಡುವ ಪ್ರಲಯಕಾಲದ ಮೇಘಗಳು ಉತ್ಪಾತವಾಯುವು ತಲೆಕೆಳಗು ಮಾಡಿರುವ ಪರ್ವತಗಳಲ್ಲಿ ನಿಂತಿರುತ್ತವೆ.

೭೯. ತಾರಾಮಂಡಲವು ರತ್ನ ವೃಷ್ಟಿಯನ್ನು ಕರೆಯುತ್ತಿರುವ ದೀಪ ಸಹಸ್ರ ಯಂತ್ರ ಚಕ್ರದಂತೆ ಸುತ್ತುತ್ತದೆ. ಅದನ್ನು ನೋಡುತ್ತಿದ್ದರೆ ವಿದ್ಯಾಧರ ಅಮರ

ಸಂಹಾರಸರ್ಗನಿಚಯಾ ದಿನರಾತ್ರಿಭಾಗೇ
ಬಿಂದೂಪಮಾ ರಜತಯೋರ್ದಿವಸೋತ್ಕರಾಶ್ಚ ।
ಕೃಷ್ಣಾಃ ಸಿತಾಶ್ಚ ಪರಿತೋಽಮಲಶುಕ್ಲಕೃಷ್ಣ
ಸ್ವಾದರ್ಶಮಂಡಲವದಾಕುಲಮುಲ್ಲಸಂತಿ ॥ ೮೦ ॥

ರತ್ನಾನಿ ಭಾಸ್ಕರನಿಶಾಕರಮಂಡಲಾನಿ
ತಾರೋತ್ಕರಾಸ್ತರಲಮಂಡಲಕಾಂತಿಹಾರಾಃ ।
ಸ್ವಚ್ಛಾಂಬರಾಣಿ ವಲಿತಾನಿ ಮಹಾಂಬರಾಣಿ
ಕುರ್ವಂತ್ಯನಾರತಮನಲ್ಪಮಲಾತಲೇಖಾಃ ॥ ೮೧ ॥

---

ಗಣಗಳು ಪ್ರಣಯದಿಂದ ಅಂತರ್ಬಹಿಶ್ಚ, ಸುತ್ತಲೂ ಸುರಿಯುತ್ತಿರುವ ಪುಷ್ಪ ವರ್ಷವಿದ್ದಂತೆ ಕಾಣುತ್ತದೆ.

೮೦. ಆ ಮಹಾಕಾಲಿಯ ದೇಹದಲ್ಲಿ ದಿನ ರಾತ್ರಿ ವ್ಯವಸ್ಥೆಗಳಿವೆ. ಆಯಾ ಭಾಗಗಳಲ್ಲಿ ಮಲಿನವೂ ಶುದ್ಧವೂ ಆದ ರಜತ ಬಿಂದುಗಳಂತೆ ಸಂಹಾರವೂ ಸರ್ಗವೂ ಗುಂಪುಗುಂಪಾಗಿ ನಡೆಯುತ್ತಿವೆ. ದಿವಸಗಳೇ ಒಂದು ಕಡೆ, ರಾತ್ರಿಗಳೇ ಒಂದುಕಡೆ, ಇದ್ದು, ನಿರ್ಮಲವೂ ಶುಕ್ಲವೂ ಆದ ಕೆಲವು, ಕೃಷ್ಣವೂ ಮಲಿನವೂ ಆದ ಕೆಲವು ಆದರ್ಶ (ಕನ್ನಡಿ) ಮಂಡಲಗಳನ್ನೂ ಕಟ್ಟಿರುವಂತೆಯೂ ಕುಣಿಯುವಾಗ ಅವು ಅಲ್ಲಾಡುತ್ತಿರುವಂತೆಯೂ ಕಾಣುತ್ತವೆ.

೮೧ ಭಾಸ್ಕರ, ನಿಶಾಕರ, ಮಂಡಲಗಳೆಂಬ ರತ್ನಗಳು, ನಕ್ಷತ್ರ ರಾಶಿಯು ತರಲವಾದ ಮಂಡಲಕಾಂತಿಯಿಂದ ಕೂಡಿರುವ ರತ್ನ ಹಾರವು. ಸುತ್ತಿರುವ ಮಹಾಕಾಶಗಳು ಸ್ವಚ್ಛವಾದ ವಸ್ತ್ರಗಳು. ಹೀಗಿರಲು, ಆಕೆಯು ನರ್ತನ ಮಾಡುವಾಗ ಆಕೆಯ ಸುತ್ತಲೂ ಸುತ್ತುವ ಅನಲ್ಪವಾದ ನಿರಂತರವಾದ ಅಲಾತ ಚಕ್ರವೋ ಎಂಬಂತಿವೆ.

(ಅಲಾತಚಕ್ರ :–ಕೊಳ್ಳಿಯನ್ನು ಗಿರ್ರನೆ ತಿರುಗಿಸಿದರೆ ಅದು ಒಂದು ಅಗ್ನಿ ಮಂಡಲವಾಗಿರುವಂತೆ ತೋರುತ್ತದೆ. ಅದು ಅಲಾತಚಕ್ರ.)

ಕಲ್ಪಾಂತಕಾಲ ವಿಲುಠತ್ತ್ರಿಜಗನ್ಮಣೀನಿ
ವ್ಯಾವರ್ತನೈರ್ಝಗಿತಿ ಜಾತಝುಣಜ್ಝಣಾನಿ ।
ತೇಜಾಂಸಿ ಝುಂಕೃತತತಯೋರ್ಧ್ವಮಧಶ್ಚ ಯಾಂತಿ
ನಾನಾವಿಧಾನಿ ಗುಣವಂತಿ ವಿಭೂಷಣಾನಿ ॥ ೮೨ ॥

ಸಂಗ್ರಾಮಮತ್ತಭಟಖಡ್ಗಮರೀಚಿವೀಚಿ-
ಶ್ಯಾಮಾಯಮಾನಸಕಲಾತಪವಾಸರಾಣಾಂ ।
ವ್ಯಾವೃತ್ತಿಭಿರ್ವಿಲುಠತಾಮಪಿ ಸುಸ್ಥಿರಾಣಾ
ಮಾಕರ್ಣ್ಯತೇ ಕಲಕಲೋ ಜನಮಂಡಲಾನಾಂ ॥ ೮೩ ॥

ಬ್ರಹ್ಮೇಂದ್ರವಿಷ್ಣುಹರವಹ್ನಿರವೀಂದುಪೂರ್ವಾ
ದೇವಾಸುರಾಃ ಪರಿವಿವೃತ್ತಿಭಿರಾತಪಂತಃ ।
ಅನ್ಯೋನ್ಯ ಏವ ವಿವಿಧಾ ಉಪಯಾಂತಿ ಯಾಂತಿ
ವಾತಾವಧೂತಮಶಕಾಶನಿವಿಭ್ರಮೇಣ ॥ ೮೪ ॥

---

೮೨. ಕಲ್ಪಾಂತ ಕಾಲದಲ್ಲಿ ಉದುರುತ್ತಿರುವ ತ್ರಿಜಗತ್ತುಗಳೆಂಬ ಮಣಿಗಳು ಸುತ್ತುತ್ತಿರುವಾಗ ಝುಣತ್ ಝುಣತ್ ಎಂದು ಧ್ವನಿ ಮಾಡುವುವು. ಆಗ ಒಂದ ಕ್ಕೊಂದು ತಾಗಿ, ಅವುಗಳಿಂದ ಝುಂ ಎಂದು ತೇಜಸ್ಸುಗಳು ಸಿಡಿದು ಮೇಲೆ ಕೆಳಗೆ ಹಾರುವುವು. ಅವೆಲ್ಲವೂ ನಾನಾ ವಿಧವಾಗಿರುವ ನಾನಾ ರೂಪವಾದ ಭೂಷಣ ಗಳಂತಿರುವುವು.

೮೩. ಯುದ್ಧ ಮದವೇರಿರುವ ಭಟರು ಖಡ್ಗಗಳನ್ನು ತಿರುಗಿಸುವಾಗ ಅವು ಗಳ ಬೆಳಕು ಅಲೆ ಅಲೆಯಾಗಿ ಹರಡಿ ಬೆಳಕು ತುಂಬಿದ ದಿವಸ ಭಾಗವನ್ನೂ ನೀಲಿಯ ಬೆಳಕಿನಿಂದ ಮೆರೆಯುವಂತೆ ಮಾಡುವುದು ಅಂತಹ ವೀರ ಮಂಡಲ ಗಳೂ ಆಕೆಯು ನರ್ತಿಸುವಾಗ ಜಾರಿ ಬೀಳುವುವು ಹಾಗೆ ಬಿದ್ದರೂ ಬಿದ್ದ ದ್ದಲ್ಲಿಯೇ ನಿಂತು ಕೋಲಾಹಲ ಮಾಡುತ್ತಿರುವುದು ಅದೂ ಕೇಳಿಬರುವುದು

೮೪. ಬ್ರಹ್ಮ, ಇಂದ್ರ, ವಿಷ್ಣು, ಹರ, ವಹ್ನಿ, ರವಿ ಇಂದು ಮೊದಲಾದ ದೇವತೆಗಳೂ ಅಸುರರೂ ಆಕೆಯು ಮಂಡಲಾಕಾರವಾಗಿ ನರ್ತಿಸುವಾಗ ಬೆಳಗುತ್ತ, ಒಬ್ಬರಮೇಲೊಬ್ಬರು ಬೀಳುತ್ತ, ಗಾಳಿಯು ಬೀಸುತ್ತಿರುವಾಗ ಅದಕ್ಕೆ ಸಿಕ್ಕಿ

ಸಂಹಾರಸರ್ಗಸುಖದುಃಖಭವಾಭವೇಹಾ-
ನೀಹಾನಿಷೇಧವಿಧಿಜನ್ಮಮೃತಿಭ್ರಮಾದ್ಯಾಃ ।
ಸಾರ್ಧಂ ಪೃಥಕ್ಚ ವಿಲಸಂತಿ ಸದೈವ ಸರ್ಗೇ
ವ್ಯಾಮಿಶ್ರತಾಮುಪಗತಾ ಅಪಿ ತತ್ರ ಭಾವಾಃ ॥ ೮೫ ॥

ಭಾವೋದ್ಭವಸ್ಥಿತಿವಿಪತ್ಕರಣಭ್ರಮಾಣಾಂ
ಸಂಹಾರಸರ್ಗಭುವನಾವನಿವಿಭ್ರಮಾಣಾಂ ।
ಮಿಥ್ಯೈವ ಖೇ ಪ್ರಕಟತಾಂ ಖಶರೀರಕಾಣಾಂ
ಸಂಲಕ್ಷ್ಯತೇಽತ್ರ ನ ಮನಾಗ ಅಪಿ ನಾಮಸಂಖ್ಯಾ ॥ ೮೬ ॥

ಉತ್ಪಾತಶಾಂತಿಮರಣೋತ್ಸವಯುದ್ಧಸಾಮ್ಯ-
ವಿದ್ವೇಷರಾಗಭಯವಿಶ್ವಸನಾದಿ ತತ್ರ ।
ಏಕತ್ರ ಕೋಶ ಇವ ರತ್ನಚಯೋ ವಿಭಾತಿ
ನಾನಾರಸಾಪ್ರತಿಘಸರ್ಗಪರಂಪರಂ ತತ್ ॥ ೮೭ ॥

---

ಹೊಡೆದುಕೊಂಡು ಹೋಗುವ ಸೊಳ್ಳೆಗಳಂತೆಯೂ ಮಿಂಚುಗಳಂತೆಯೂ ಸೇರುತ್ತ ಬಿಡುತ್ತ ಮೆರೆಯುತ್ತಿರುವರು.

೮೫. ಸಂಹಾರ ಸರ್ಗಗಳೂ ಸುಖದುಃಖಗಳೂ ಭವ ಅಭವಗಳೂ ಈಹ-ಅನೀಹಗಳೂ ವಿಧಿ ನಿಷೇಧಗಳೂ ಜನನ ಮರಣಗಳೂ ಮೊದಲಾದ ಪರಸ್ಪರ ವಿರೋಧಿಗಳಾದ ಭಾವಗಳೆಲ್ಲವೂ, ಒಂದಕ್ಕೊಂದು ಕಲಬೆರಕೆಯಾದಂತೆ ಒಟ್ಟಿಗೆ ಸೇರಿ ಒಂದು, ಪೃಥಕ್ಕಾಗಿ ಒಂದು ಸಲ, ಹೀಗೆ ಆಡುತ್ತಾ ಯಾವಾಗಲೂ ಸರ್ಗವೇ ಆಗಿರುವಂತೆ ಪ್ರಕಾಶಿಸುತ್ತಿರುವುವು.

೮೬. ಆಕೆಯ ಚಿದಾಕಾಶಮಯವಾದ ದೇಹದಲ್ಲಿ ಆಕೆಯ ದೇಹವಾಗಿಯೇ ಮಿಥ್ಯಾಭೂತವಾಗಿಯೇ ಕಂಡು ಮರೆಯಾಗುವ, ಹುಟ್ಟು, ಇರುವಿಕೆ, ಸಾವು ಎಂಬ ಪರಿಣಾಮಗಳನ್ನು ಪಡೆಯುತ್ತಿರುವ, ಚಿತ್ತಿನಿಂದ ಹುಟ್ಟುತ್ತಿರುವ, ಹುಟ್ಟಿ ಇರುವ ಸಾಯುತ್ತಿರುವ ಬ್ರಹ್ಮಾಂಡಗಳ ನಾಮಗಳನ್ನೂ ಸಂಖ್ಯೆಗಳನ್ನೂ ಯಾರೂ ಹೇಳುವಂತಿಲ್ಲ.

೮೭. ಉತ್ಪಾತ, ಶಾಂತಿ, ಮರಣ, ಉತ್ಸವ, ಯುದ್ಧ, ಸಾಮ್ಯ, ವಿದ್ವೇಷ,

ತಸ್ಯಾಶ್ಚಿದಂಬರಮಯೀ ವಪುಷಿ ಸ್ವಭಾವೇ-
ಭೂತಾ ಸ್ಫುಟಾನುಭವಭಾವಜಗದ್ವ್ಯವಸ್ಥಾಃ ।
ಸರ್ವಕ್ಷಯಾ ಮಲಿನದೃಕ್ಕಲಿತಾಂಬರಸ್ಥ-
ಕೇಶೋಂಡ್ರಕಸ್ಫುರಣವತ್ಪರಿತಃ ಸ್ಫುರಂತಿ ॥ ೮೮ ॥

ಜಗತ್ಸಂಕ್ಷುಬ್ಧಮಕ್ಷುಬ್ಧಂ ದೃಶ್ಯತೇ ಸ್ಥಿತಿಸಂಸ್ಥಿತಿ ।
ಸಂಚಾಲ್ಯಮಾನಮುಕುರಪ್ರತಿಬಿಂಬ ಇವಾಸಿತಂ ॥ ೮೯ ॥

---

ರಾಗ, ಭಯ, ವಿಶ್ವಾಸ ಮೊದಲಾದ ವಿರೋಧ ಭಾವಗಳೆಲ್ಲವೂ ಭಂಡಾರದಲ್ಲಿ ಸೇರಿರುವ ನಾನಾ ವರ್ಣಗಳ ರತ್ನಗಳಂತೆ ಒಂದೇ ಎಡೆ ಸೇರಿರುವುವೋ ಎಂಬಂತೆ ಆಕೆಯ ದೇಹದಲ್ಲಿ ನಾನಾ ಭಾವಗಳಿಂದ ತುಂಬಿರುವ ಸರ್ಗ ಪರಂಪರೆಗಳು ಭರ್ತಿಯಾಗಿರುವುವು.

೮೮. ಆಕೆಯ ಚಿದಾಕಾಶಮಯವಾದ ದೇಹದಲ್ಲಿ ಸಹಜವಾಗಿ, ದೇಹಲಕ್ಷಣವಾಗಿ, ಜಗತ್ತಿನ ಬೇರೆ ಬೇರೆ ಅವಸ್ಥೆಗಳೆಲ್ಲ ಸ್ಫುಟವಾಗಿ ಅನುಭವಕ್ಕೆ ಬರುತ್ತಿರುವುವು. ಹಾಗೆಯೇ ಮರೆಯೂ ಆಗುತ್ತಿರುವುವು. ಅದು ಹೇಗೆಂದರೆ, ದೃಷ್ಟಿದೋಷವಿರುವವರಿಗೆ, ಆಕಾಶದಲ್ಲಿ ಕೋಶೋಂಡ್ರಕಗಳು ಸುತ್ತಲೂ ಕಂಡು ಕಂಡು ಮರೆಯಾಗುತ್ತಿರುವಂತೆ !

(ಕಿಂಚ ತಸ್ಯಾಃ ಪರಮಾರ್ಥತಶ್ಚಿದಂಬರಮಯೀ ವಪುಷಿ ಸ್ವಭಾವಭೂತಃ ಅಶಾಸ್ತ್ರೀಯ ಪ್ರತೀತಿಸಿದ್ಧೋ ಯೋ ಮಾಯಾ ವರಣ ಲಕ್ಷಣೋಽಸ್ಫುಟಾನುಭವ ಭಾವಸ್ತತ್ಪ್ರಯುಕ್ತಾ ಜಗದ್ವ್ಯವಸ್ಥಾಃ ಸರ್ವಕ್ಷಯಾಶ್ಚ ಪರಿತಸ್ತಿಮಿರರೋಗ ಮಲಿನದೃಶಾ ಕಲಿತಾನಿ ಅಂಬರಸ್ಥ ಕೋಶೋಂಡ್ರಕ ಸ್ಫುರಣಾನೀವ ಸ್ಫುರಂತಿ —ತಾ. ಪ್ರ.)

೮೯. ತಿರುಗಿಸುತ್ತಿರುವ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ, ಸ್ಥಿತವಾದರೂ ಅಸ್ಥಿರವಾಗಿರುವುದರಿಂದ ಅಸ್ಥಿತವೇ ಆಗಿ, ಜಗತ್ತು ಸಂಕ್ಷುಬ್ಧವಾಗಿ, ಸುಸ್ಥಿತವಾಗಿ, ಅಕ್ಷುಬ್ಧವಾಗಿ, ಸುಸ್ಥಿತವಾದ ಅಧಿಷ್ಠಾನದಲ್ಲಿ ಸಂಸ್ಥಿತಿಯುಳ್ಳದ್ದಾಗಿ ತೋರುವುದು.

(ಅಚಲಾಯಾ ಮಧಿಷ್ಠಾನ ಸನ್ಮಾತ್ರಸ್ಥಿತೌ ಸಂಸ್ಥಿತಿರ್ಯಸ್ಯ ತಥಾವಿಧಂ

ನೃತ್ಯಸ್ಫುರತ್ಪ್ರತಾಪಾಂತರ್ಜಗದಿತ್ಥಾಃ ಪ್ರತಿಕ್ಷಣಂ ।
ಸ್ಥಿತಿಂ ತ್ಯಜಂತಿ ಗೃಹ್ಣಂತಿ ಬಾಲಸಂಕಲ್ಪಸರ್ಗವತ್ ॥ ೯೦ ॥

ಕ್ರಿಯಾಶಕ್ತಿಃ ಶರೀರೇಽಂತಃ ಪೂರ್ಯಮಾಣಾ ಅನಾರತಂ ।
ರಾಶೀಭೂಯ ವಿಶೀರ್ಯಂತೇ ಜಗನ್ಮೃದ್ಗಕಣೋತ್ಕರಾಃ ॥ ೯೧ ॥

ಕ್ಷಣಮಾಲಕ್ಷ್ಯತೇ ಕಿಂಚಿನ್ನ ಕಿಂಚಿದಪಿ ಸಾ ಕ್ಷಣಂ ।
ಕ್ಷಣಮಂಗುಷ್ಠಮಾತ್ರೈವ ಕ್ಷಣಮಾಕಾಶಪೂರಿಣೀ ॥ ೯೨ ॥

---

ಜಗದಕ್ಷುಬ್ಧಮೇವ ಮಾಯಾ ಕ್ಷೋಭ ದೃಷ್ಟ್ಯಾ ಸಂಕ್ಷುಬ್ಧಂ ದೃಶ್ಯತೇ ಯತಸ್ತ ದ್ಬಿಂಬಾತ್ಮನಾ ಅಚಲ ಏವ ಗಿರಿಃ ಸಂಚಾಲ್ಯಮಾನಮುಕುರಪ್ರತಿಬಿಂಬಃ ಸಂಶ್ಚಲ ಇವ ಭವತಿ ತದ್ವದಸ್ಥಿತಮಿತ್ಯರ್ಥಃ—ತಾ. ಪ್ರ.)

೯೦. ಆಕೆಯು ಕುಣಿಯುತ್ತಿದ್ದರೆ, ಆ ನರ್ತನದಲ್ಲಿ ಒಂದೊಂದು ಭಾವ ಕಂಡಂತೆ ಒಂದೊಂದು ಜಗತ್ತೇ ಕಂಡಂತಾಗುವುದು. ಹೀಗೆ ಪ್ರತಿಕ್ಷಣವೂ ಆಗುತ್ತ, ಹುಡುಗರ ಮನಸ್ಸಿನಲ್ಲಿ ಬರುವ ಕಲ್ಪನೆಗಳಂತೆ, ಜಗತ್ಪದಾರ್ಥಗಳು ಹುಟ್ಟಿ ಬೆಳೆದು ನಾಶವಾಗುತ್ತಿರುವುವು.

(ತಥಾಚಾಹುಃ ಸಾಂಖ್ಯಾಃ "ಪ್ರತಿಕ್ಷಣ ಪರಿಣಾಮಿನೋ ಹಿ ಸರ್ವೇ ಭಾವಾಃ" ಇತಿ— ತಾ. ಪ್ರ.)

೯೧. ಕ್ರಿಯಾ ಶಕ್ತಿಯು ಶರೀರದೊಳಗೆ ಒಂದೇಸಮನಾಗಿ ತುಂಬುತ್ತಿರು ವುದು ಆದರ ಫಲವಾಗಿ ಜಗತ್ತು ಜಗತ್ತುಗಳೆಂಬ ಹೆಸರುಕಾಳುಗಳ ತುಂಡುಗಳು ರಾಶಿಯಾಗುತ್ತಿರುವುವು: ನಾಶವಾಗುತ್ತಿರುವುವು.

(ಸರ್ವಪದಾರ್ಥಾನಾಮುತ್ಪಾದನಾರ್ಥಮೇವ ಕಾರಕಕ್ರಿಯಾ ಶಕ್ತಯ ಉಪ ಯುಜ್ಯಂತೇ। ಉತ್ತರೇ ತು ಭಾವವಿಕಾರಾಃ ಸ್ವತ ಏವ ಕಾಲೇ ಪ್ರವರ್ತಂತೇ ಯಥಾ ಮುದ್ಗಾನಾಂ ರಾಶೀಕರಣೇ ಕಾರಕಕ್ರಿಯಾಶಕ್ತಿರುಪಯುಜ್ಯತೇ ವಿಶೀರ್ಯ ಪ್ರಸರಣೇ ತು ಸ್ವಃಸ್ನಿಗ್ಧತಾ ಸ್ವಭಾವ ಏವ ಹೇತುರ್ನ ಕಾರಕಾಂತಕ್ರಿಯಾಶಕ್ತಿ ತದ್ವದಿತ್ಯಾಹ—ತಾ. ಪ್ರ.)

೯೨. ಆಕೆಯು ಒಂದು ಕ್ಷಣ ದೃಷ್ಟಿಗೋಚರಳಾಗಿ ಏನೋ ಒಂದಾಗಿ ಕಾಣುವಳು; ಇನ್ನೊಂದು ಕ್ಷಣದಲ್ಲಿ ಏನೂ ಆಗಿ ಕಾಣುವುದಿಲ್ಲ. ಒಂದು

ಯಸ್ಮಾತ್ಸಾ ಸಕಲಾ ದೇವೀ ಸಂವಿಚ್ಛಕ್ತಿರ್ಜಗನ್ಮಯೀ ।
ಅನಂತಾ ಪರಮಾಕಾಶಕೋಶಶುದ್ಧಶರೀರಿಣೀ ॥ ೯೩ ॥

ಕಾಲತ್ರಯಸ್ಥಿತಜಗತ್ರಿತಯಾಂತರೀ ಹಿ
ಚಿತ್ಸಾ ತಥಾ ಕಚತಿ ತೇನ ಯಥಾಸ್ಥಿತೇನ ।
ರೂಪೇಣ ಚಿತ್ರಕೃದುದಾರಮನಃಸ್ಥಚಿತ್ರ-
ಸಂಸಾರಜಾಲಸದೃಶೇನ ಕಚಜ್ಜವೇನ ॥ ೯೪ ॥

---

ಕ್ಷಣ ಅಂಗುಷ್ಠಮಾತ್ರವಾಗಿ ಕಂಡು, ಮತ್ತೊಮ್ಮೆ ಆಕಾಶರೂಪಿಣಿಯಾಗಿ ಕಾಣು ವಳು.

(ಪರಿಣಾಮ ಸ್ವಭಾವ ಜಡಜಗನ್ಮಯೀತ್ವಾದೇವ ಸಾ ದೇವೀ ಪ್ರತಿಕ್ಷಣಮನ್ಯ ಥಾನ್ಯಥಾ ಲಕ್ಷ್ಯತ ಇತ್ಯಾಹ—ತಾ. ಪ್ರ.)

೯೩. ಸಂವಿತ್-ಶಕ್ತಿಯಾದ ಆ ದೇವಿಯು ಸಕಲವೂ ತಾನೇ ಆಗಿರುವಳು: ಅದರಿಂದಲೇ ಜಗನ್ಮಯಿಯಾಗಿರುವಳು. (ಆಕೆಯಲ್ಲಿ ಜಗತ್ತುಗಳೂ ತುಂಬಿರು ವುವು: ಆಕೆಯೂ ಜಗತ್ತಿನಲ್ಲಿ ತುಂಬಿರುವಳು.) ಆಕೆಯು ಅನಂತಳು. ಪರಮಾ ಕಾಶ ಕೋಶದಂತೆ ಶುದ್ಧ ಶರೀರವುಳ್ಳವಳು.

೯೪. ಕಾಲತ್ರಯಗಳಲ್ಲೂ ಇರುವ ಜಗತ್ತ್ರಯಗಳೊಳಗೆಲ್ಲಾ ಇರುವ ಚಿತ್ತೇ ಆಕೆಯು. ಯಥಾಸ್ಥಿತವಾಗಿರುವ ತನ್ನ ರೂಪದಿಂದ ಕಚನ ಮಾಡುವಳು. ಅದು ಚಿತ್ರಕಾರನ ಪ್ರತಿಭಾ ಸಂಪನ್ನವಾದ ಮನಸ್ಸಿನಲ್ಲಿರುವ ಚಿತ್ರದಂತೆ, ಸಂಸಾರ ಜಾಲರೂಪವಾಗಿ ಎಲ್ಲರಿಗೂ ಹೊಳೆಯುವುದು.

(ಸಾ ಹಿ ದೇವೀ ಕಾಲತ್ರಯಸ್ಥಿತಸ್ಯ ಸರ್ವತತ್ತ್ವತ್ ಪರಿಣಾಮ ವೈಚಿತ್ರ್ಯ ಶಾಲಿನೋ ಜಗತ್ರಿತಯಸ್ಯಾಂತರ್ಭವಾ ಆಂತರೀ ಚಿತ್ । ಅತಃ ಕಾರಣಾದ್ಯಥಾ ಸ್ಥಿತೇನಪರ್ಯಾಯವರ್ತಿನಾ ತತ್ತತ್ಕಾಮ ಕರ್ಮ ವಾಸನಾ ಪರಿಪಾಕಾನುಸಾರೇಣ ಕಚಜ್ಜನೇನ ಚಿತ್ರಕೃತಃ ಪುರುಷಸ್ಯ ಉದಾರೇ ಮನಸಿ ಸ್ಥಿತಂ ಯಚ್ಚಿತ್ರ ಸಂಸಾರ ಜಾಲಂ ತತ್ಸದೃಶೇನ ಯಥಾ ಸ್ಥಿತೇನ ತೇನ ತೇನ ವಿಚಿತ್ರೇಣ ರೂಪೇಣ ತಥಾ ಕಚತಿ ಇತ್ಯರ್ಥಃ—ತಾ. ಪ್ರ.)

ಸರ್ವಾತ್ಮಕೈಕವಪುರೇಕಚಿದಾತ್ಮಕತ್ವಾ-
ತ್ಸಂಶಾಂತಖೈಕವಪುರೇಕಚಿದಾತ್ಮತತ್ತ್ವಾತ್ ।
ಏವಂ ನಿಮೇಷಣಸಮುನ್ಮಿಷಿತೈಕರೂಪಂ
ಸಾ ಬಿಭ್ರತೀ ವಪುರನಂತಮನಾದಿ ಭಾತಿ ॥ ೯೫ ॥

ತಸ್ಯಾಂ ವಿಭಾತಿ ತದನಂತಶಿಲಾತ್ಮಕೋಶೇ
ಲೇಖಾಬ್ಜಚಕ್ರರಚನಾದಿವದೇವ ದೃಶ್ಯಂ ।
ವ್ಯೋಮಾತ್ಮಕಂ ಗಗನಮಾತ್ರಶರೀರವತ್ಯಾಂ
ಚಿತ್ತ್ವಾದ್ದ್ರವಜ್ಜಲಧಿಕೋಶ ಇವೋರ್ಮಿಲೇಖಾ ॥ ೯೬ ॥

---

೯೫. ಸರ್ವಾತ್ಮಗಳೂ ಒಂದೇ ದೇಹವನ್ನು ಆಶ್ರಯಿಸಿರುವುವು. ಎಲ್ಲವೂ ಏಕ ಚಿದಾತ್ಮಕಗಳು. ಸರ್ವಾತ್ಮಾಶ್ರಯವಾದ ದೇಹವೂ ಚಿದಾತ್ಮ ತತ್ವವೇ ಆದ್ದರಿಂದ ಅದು ಇದ್ದಂತೆ ಇದ್ದರೂ ಸಂಶಾಂತವು. ಹೀಗೆ, ಒಂದೇ ನಿಮಿಷದಲ್ಲಿ ಒಂದು ಸಾಂತ ರೂಪವನ್ನು ತೋರಿಸಿ, ಮರುಕ್ಷಣದಲ್ಲಿಯೇ ಅನಂತವೂ ಅನಾದಿಯೂ ಆದ ವಪುವನ್ನು ಧರಿಸಿ ಮೆರೆಯುವಳು

(ತರ್ಹಿ ಕಿಂ ಸಾ ಸಪ್ರಪಂಚೈವ ನೇತ್ಯಾಹ—ಸರ್ವಾತ್ಮಕೇತಿ। ಸಾ ದೇವೀ ಅವಿದ್ಯಾವೃತ್ತ್ಯೈಕ ಚಿದಾತ್ಮಕತ್ವಾತ್ಸರ್ವ ಸಂಸಾರಾತ್ಮಕೈಕವಪುಶ್ಚಿತ್ರಭಿತ್ತಿರಿವಾಸ್ತೇ । ವಿದ್ಯಾನಿರಸ್ತಾ ವಿದ್ಯೈಕ ಚಿದಾತ್ಮಕತ್ವಾತ್ತು ಸಂಶಾಂತಂ ಯತ್ ಸ್ವಮಾಕಾಶಂ ತದ್ವಪುರ್ನಿಷ್ಪ್ರಪಂಚೈವಾಸ್ತೇ । ಏವಂ ಬದ್ಧದೃಶಾ ಮುಕ್ತದೃಶಾ ಚ ಗಮ್ಯಂ ನಿಮೇಷೇಣೇನ ಸಮುನ್ಮಿಷಿತೇನ ಚಾವಿದ್ಯಾ ವಿದ್ಯಾಭ್ಯಾಂ ಪರ್ಯಾಯ ವ್ಯಂಜಿತೇನೋಪಲಕ್ಷಿತಂ ಪರಮಾರ್ಥತ್ವಾದೇಕರೂಪಮನಾದ್ಯನಂತ ವಪುರ್ಬಿಭ್ರತೀ ಸಾ ಭಾತೀತ್ಯರ್ಥಃ—ತಾ ಪ್ರ

೯೬. ಅನಂತವಾಗಿರುವ ಸ್ಫಟಿಕ ಶಿಲಾತ್ಮಕೋಶದಲ್ಲಿ ಕಾಣುವ ರೇಖೆಗಳೂ ಅಬ್ಜ ಚಕ್ರಗಳು ಮೊದಲಾದ ರಚನೆಗಳಂತೆಯೇ ಈ ದೃಶ್ಯವೆಲ್ಲವೂ ಆಕೆಯ ದೇಹದಲ್ಲಿಯೇ ಕಾಣುವುವು ಹಾಗೆ ಕಂಡರೂ ಗಗನ ಮಾತ್ರ ಶರೀರಳಾದ ಆಕೆಯು ಚಿತ್ತೇ ಆದ್ದರಿಂದ ಅವೆಲ್ಲವೂ ಚಿದಾಕಾಶಸ್ವರೂಪವೇ! ಇದು ಹೇಗೆ ಎಂದರೆ ದ್ರವಾತ್ಮಕವಾದ ಜಲವಿರುವ ಸಮುದ್ರದಲ್ಲಿ ತರಂಗಗಳು ಎದ್ದು ಬರುವಂತೆ!

ಮಹತೀ ಭೈರವೀ ದೇವೀ ನೃತ್ಯಂತ್ಯಾಪೂರಿತಾಂಬರಾ ।
ತಸ್ಯ ಕಲ್ಪಾಂತರುದ್ರಸ್ಯ ಸಾ ಪುರೋ ಭೈರವಾಕೃತೇಃ ॥ ೯೭ ॥

ಶಿರೋಮುಂದಾಶ್ರಿತೋಗ್ರಾಗ್ನಿದಗ್ಧಸ್ಥಾಣುವನಾವನಿಃ ।
ಕಲ್ಪಾಂತವಾತವ್ಯಾಧೂತಾ ವನಮಾಲೇವ ನೃತ್ಯತಿ ॥ ೯೮ ॥

ಕುದ್ದಾಲೋಲೂಖಲಬೃಸೀಫಲಕುಂಭಕರಂಡಕೈಃ ।
ಮುಸಲೋದಂಚನಸ್ಥಾಲೀಸ್ತಂಭೈಃ ಸ್ರಗ್ದಾಮಧಾರಿಣೀ ॥ ೯೯ ॥

ಏವಂವಿಧಾನಾಂ ಸ್ರಗ್ದಾಮಜಾಲಾನಾಂ ಕುಸುಮೋತ್ಕರಂ ।
ಕಿರಂತೀ ಸಂಸೃಜಂತೀವ ನೃತ್ತಕ್ಷುಬ್ಧಂ ಕ್ಷಯಕ್ಷತಂ ॥ ೧೦೦ ॥

ವಂದ್ಯಮಾನಸ್ತಯಾ ಸೋಪಿ ತಥೈವಾಕಾಶಭೈರವಃ ।
ತಥೈವ ವಿತತಾಕಾರಸ್ತದ್ವೋಚ್ಚೈಃ ಪರಿನೃತ್ಯತಿ ॥ ೧೦೧ ॥

---

೯೭. ಆ ಭೈರವೀ ದೇವಿಯು ಮಹಾರೂಪವುಳ್ಳವಳು: ಆಕಾಶವನ್ನೆಲ್ಲಾ ಆಕ್ರಮಿಸಿಕೊಂಡು ಆ ಭೈರವಾಕೃತಿಯಾದ ಕಲ್ಪಾಂತ ರುದ್ರನ ಮುಂದೆ ಕುಣಿಯುವಳು.

೯೮. ಕಲ್ಪಾಂತ ರುದ್ರನ ಲಲಾಟನೇತ್ರದ ಉಗ್ರಾಗ್ನಿಗೆ ಸಿಕ್ಕಿ ಭೂಮಿಯೆಲ್ಲವೂ ನಾಮಾವಶೇಷವಾಗಿರಲು, ಈ ಭೈರವೀ ದೇವಿಯು ಪ್ರಲಯ ಕಾಲದ ಬಿರುಗಾಳಿಗೆ ಸಿಕ್ಕಿದ ವನಮಾಲೆಯಂತೆ ಕುಣಿದಳು

೯೯. ಗುದ್ದಲಿ, ಒರಳು, ಮಣೆ, ಫಲಕುಂಭ, ಕರಣೆ, ಬನಕೆ, ಗಿಂಡಿ, ಕಂಭ, ಮೊದಲಾದವುಗಳಿಂದಾದ ಹಾವಗಳನ್ನು ಧರಿಸಿದ್ದಳು.

೧೦೦. ಹೀಗಿರುವ ನಾನಾ ಹಾರಗಳು ಕುಣಿಯುತ್ತಿರುವಾಗ ಕಿತ್ತುಹೋಗಿ ಹೂಗಳಂತೆ ಹಾರುತ್ತಿರಲು, ನಾನಾ ವಿಧವಾದ ನಾಶಗಳನ್ನೇ ಸೃಜಿಸುತ್ತಿರುವವಳಂತೆ ತೋರುವಳು.

೧೦೧. ಆ ಆಕಾಶಭೈರವನೂ ಅವಳಿಂದ ವಂದನೆಗಳನ್ನು ಪಡೆಯುತ್ತಾ ತಾನೂ ಆಕಾಶದಂತೆ ವಿತತವಾದ ಆಕಾಶವುಳ್ಳವನಾಗಿ ಅವಳೊಡನೆ ಭಯಂಕರವಾಗಿ ನರ್ತನ ಮಾಡುವನು.

ಡಿಂಬಂಡಿಂಬಂ ಸುಡಿಂಬಂ ಪಚಪಚ ಸಹಸಾ ಝುಮ್ಯಝುಮ್ಯಂ ಪ್ರಝುಮ್ಯಂ
ನೃತ್ಯಂತೀ ಶಬ್ದವಾದ್ಯೈಃಸ್ರಜಮುರಸಿಶಿರಃಶೇಖರಂ ತಾರ್ಕ್ಷ್ಯಪಕ್ಷೈಃ ।
ಪೂರ್ಣಂ ರಕ್ತಾಸವಾನಾಂ ಯಮಮಹಿಷಮಹಾಶೃಂಗಮಾದಾಯ ಪಾಣೌ
ಪಾಯಾದ್ವೋವಂದ್ಯಮಾನಃಪ್ರಲಯಮುದಿತಯಾಭೈರವಃಕಾಲರಾತ್ರ್ಯಾ ॥೧೦೨॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಕಾಲರಾತ್ರಿವರ್ಣನಂ" ನಾಮ
ಏಕಾಶೀತಿತಮಃ ಸರ್ಗಃ

---

೧೦೨. ಡಿಂಬಂ, ಡಿಂಬಂ, ಸುಡಿಂಬಂ, ಪಚ, ಪಚ, ಝುಮ್ಯಂ, ಝುಮ್ಯಂ, ಪ್ರಝುಮ್ಯಂ, ಎಂದು ಶಬ್ದ ವಾದ್ಯಗಳೊಡನೆ ಕುಣಿಯುವಾಗ ಎದೆಯಲ್ಲಿದ್ದ ಕಪಾಲ ಮಾಲೆಯು ತಾನೂ ತಾಳಕ್ಕೆ ಸರಿಯಾಗಿ ಕುಣಿಯುತ್ತಿರಲು, (ವಿಷ್ಣುವಾಹನನಾದ) ಗರುಡನ ರೆಕ್ಕೆಗಳನ್ನು ತಲೆಯಲ್ಲಿ ಸಿಕ್ಕಿಕೊಂಡು ಯಮನ ಮಹಾ ಮಹಿಷದ ಮಹಾ ಶೃಂಗವನ್ನು ಕೈಯಲ್ಲಿ ತೆಗೆದುಕೊಂಡು ಅದರಲ್ಲಿ ರಕ್ತಾಸವವನ್ನು ತುಂಬಿಕೊಂಡು ಕುಡಿಯುತ್ತಾ ಪ್ರಲಯ ಕಾಲದಲ್ಲಿ ಎಲ್ಲವನ್ನು ತಿಂದು ಸಂತೋಷ ಪಡುತ್ತಿರುವ ಕಾಲರಾತ್ರಿಯೊಡನೆ ಕುಣಿಯುತ್ತಿರುವ ವಂದ್ಯಮಾನನಾದ ಪ್ರಲಯ ಭೈರವನು ನಿಮ್ಮನ್ನು ಕಾಪಾಡಲಿ

(ಸರ್ವಪ್ರಾಣಿನಾಂ ಡಿಂಬಮನರ್ಥಭೋಗೋಪಾಧಿಂ ಸ್ಥೂಲಶರೀರಾದಿ ಪ್ರಪಂಚಂ ಅಝುಮ್ಯ ಝಮು ಅದನೆ । ಭಕ್ಷಯಿತ್ವಾ ತತೋ ಡಿಂಬಂ ಸೂಕ್ಷ್ಮ ಶರೀರಾದಿ ಪ್ರಪಂಚಮಪಿ ಝುಮ್ಯಂ ಭಕ್ಷ್ಯಂಕೃತ್ವಾ ತತೋಪಿ ಸುಡಿಂಬಂ ಮೂಲೋಪಾಧಿಭೂತಂ ರಣಶರೀರಮಪಿ ಚರಮ ಸಾಕ್ಷಾತ್ಕಾರೇ ತತ್ವತ ಆವಿರ್ಭೂಯ ಪ್ರಝುಮ್ಯಂ ಸಮ್ಯಗ್ಭಕ್ಷಂ ಕೃತ್ವಾ ಪಂಚಮಾಪಿ ಯೋಗಭೂಮಿಕಾರೋಪಣೇನ ಸಹಸಾ ಶೀಘ್ರೇಣೇವ ಪಚಪಚ ಸಪ್ತಮಭೂಮಿಕಾ ಪರ್ಯಂತಂ ಸಮ್ಯಕ್ಪರಿಪಾಚ್ಯ ವಿದೇಹ ಕೈವಲ್ಯೇನ ಜರಯೇತಿ ಸ್ತೂಯಮಾನ ಇತಿ ।—ತಾ. ಪ್ರ.)

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಕಾಲರಾತ್ರಿವರ್ಣನ" ಎಂಬ
ಎಂಭತ್ತೊಂದನೆಯ ಸರ್ಗವು

## ದ್ವ್ಯಶೀತಿತಮಃ ಸರ್ಗಃ

ಶ್ರೀರಾಮ ಉವಾಚ.—

ಕಿಮೇತದ್ಭಗವನ್ಸರ್ವನಾಶೇ ನೃತ್ಯತೀ ಕೇನ ಸಾ ।
ಕಿಂ ಶೂರ್ಪಫಲಕುಂಭಾದ್ಯೈಸ್ತಸ್ಯಾಃ ಸ್ರಗ್ದಾಮಧಾರಣಂ ॥ ೧ ॥

ಕಿಂ ನಷ್ಟಂ ತ್ರಿಜಗದ್ಭೂಯಃ ಕಿಂ ಕಾಲ್ಯಾ ದೇಹಸಂಸ್ಥಿತಂ ।
ಪರಿನೃತ್ಯತಿ ನಿರ್ವಾಣಂ ಕಥಂ ಪುನರುಪಾಗಮತ್ ॥ ೨ ॥

---

## ಎಂಭತ್ತೆರಡನೆಯ ಸರ್ಗವು

ಶ್ರೀ ರಾಮನು ಕೇಳಿದನು —

೧. ಎಲೈ ಭಗವಂತನೆ, ಆ ಭೈರವಿಯು ಸರ್ವನಾಶವಾದಾಗ ಯಾವುದರೊಡನೆ (ಯಾವ ದೇಹದೊಡನೆ) ಕುಣಿಯುವಳು? ಆಕೆಯು ಶೂರ್ಪ, ಫಲಕುಂಭ ಮೊದಲಾದವುಗಳಿಂದ ಹಾಗೆ ಹಾರ ಮೊದಲಾದ ಭೂಷಣಗಳನ್ನು ಮಾಡಿಕೊಳ್ಳುವುದು ಎಂದರೇನು ?

(ಸರ್ವಸ್ಯ ಪ್ರಪಂಚಸ್ಯ ವಿಸ್ತರೇಣ ಪ್ರಾಕ್ ಪ್ರಲಯೋ ವರ್ಣಿತಃ । ಪ್ರಲೀನಸ್ಯ ಚ ತಸ್ಯ ನೃತ್ಯಂತ್ಯಾಃ ಕಾಲರಾತ್ರ್ಯಾಂ ಭೂಷಣಾದಿ ಭಾವೇನಾಂಗೇ ಸದ್ಭಾವೋ ನೃತ್ತಭ್ರಮಣಾದಿ ಚ ವರ್ಣಿತಮಿತಿ ನಷ್ಟಸ್ಯ ಪುನರುನ್ಮಜ್ಜನ ಮುಕ್ತಾಮಸಂಭಾವಿತಂ ಮನ್ಯಮಾನೋ ರಾಮಃ ಪೃಚ್ಛತಿ—ತಾ ಪ್ರ)

೨ ತ್ರಿಜಗತ್ತು ನಷ್ಟವಾಯಿತು ಎನ್ನುವುದೇನು ? ಮತ್ತೆ ಕಾಲೀದೇವಿಯ ದೇಹದಲ್ಲಿ ಇದೆಯೆನ್ನುವುದೇನು ? ಆಕೆಯು ನಿರ್ವಾಣದಲ್ಲಿ ಕುಣಿಯುವಳು ಎನ್ನುವುದೇನು ? ಮತ್ತೆ (ಎಲ್ಲವೂ) ಹೇಗೆ ಬಂತು ?

ಶ್ರೀ ವಸಿಷ್ಠ ಉವಾಚ:—

ನಾಸೌ ಪುಮಾನ್ನ ಚಾಸೌ ಸ್ತ್ರೀ ನತನ್ನೃತ್ತಂ ನ ತಾವುಭೌ ।
ತಥಾಭೂತೇ ತಥಾಚಾರೇ ಆಕೃತೀ ನ ಚ ತೇ ತಯೋಃ ॥ ೩ ॥

ಅನಾದಿಚಿನ್ಮಾತ್ರನಭೋ ಯತ್ತತ್ಕಾರಣಕಾರಣಂ ।
ಅನಂತಂ ಶಾಂತಮಾಭಾಸಮಾತ್ರಮವ್ಯಯಮಾತತಂ ॥ ೪ ॥

---

ಶ್ರೀ ವಸಿಷ್ಠನು ಹೇಳಿದನು:—

೩. ಅಲ್ಲಿ ಕುಣಿಯುತ್ತಿದ್ದ ವ್ಯಕ್ತಿಯು ಗಂಡೂ ಅಲ್ಲ ಹೆಣ್ಣೂ ಅಲ್ಲ. ಅದು ಆಯಿಬ್ಬರೂ ಅಲ್ಲ. ಹಿಂದೆ ವರ್ಣಿಸಿದ ಆಕಾರವಾಗಲಿ ಆಚಾರವಾಗಲಿ ವುಳ್ಳ ಭೈರವ ಭೈರವಿಯರೂ ಇಲ್ಲ: ಅವರ ನರ್ತನವೂ ಇಲ್ಲ.

(ಯದಿ ಪರಮಾರ್ಥದೃಷ್ಟ್ಯಾ ಮದುಕ್ತಂ ವ್ಯಾಹತಂ ಮನ್ಯಸೇ ತರ್ಹ್ಯಸು ನಾಮ ಪರಮಾರ್ಥಶ್ಚಿನ್ಮಾತ್ರೈಕರಸಪೂರ್ಣಾನಂದ ಸನ್ಮಾತ್ರಾತಿರಿಕ್ತಸ್ತ್ರೀಪುಂಸಾದಿ ಜಗದ್ರೂಪಸ್ಯ ರುದ್ರದೇವ್ಯಾದಿವಿಭಾಗಸ್ಯ ಚಾತ್ಯಂತಾ ಸಂಭಾವಿತತ್ವಾತ್ । ಭ್ರಾಂತದೃಶಾತು ನ ಕಿಂಚಿದ್ವ್ಯಾಹತಂ । ಬ್ರಹ್ಮಸತ್ತಯಾ ಸದಾ ಸತಾಂ ಸರ್ವ ವಸ್ತೂನಾಂ ನಾಶಾನಾಶಯೋರ್ವಿಶೇಷಸ್ಯ ದುರ್ನಿರೂಪ ತಾದಿತ್ಯಸಕೃದಾವೇದಿ ತತ್ವಾನ್ನಷ್ಟಾನಾಮಪಿ ಸ್ವಪ್ನೋನ್ಮಾದಯೋಗುನ್ಮಜ್ಜಗ ಪ್ರಸಿದ್ಧೇರ್ವ್ಯತಾನಾಮಪಿ ಚಿರಾದ್ಭಸ್ಮೀಭೂತಾನಾಂ ಮುನಿಸಿದ್ಧೇಷ್ವಿಂದಿ ವರಪ್ರಭಾವಾತ್ಪುನರಾಗಮನ ಪ್ರಸಿದ್ಧೇರ್ಯಾವದಜ್ಞಾನಂ ಜಗದಾಕಾರಸ್ಯ ಚಿತ್ತೇ ಸಂಸ್ಕಾರಾತ್ಮನಾ ಸರ್ವೇಷಾಂ ಸದ್ಭಾವೇನಾತ್ಯಂತಭ್ರಾಂತ್ಯೈಃ ಕೇವಲ ಜಗದ್ರೂಪೇಣ ಸರ್ವಜಗದ್ಘಟಿತೈಕಮೂರ್ತ್ಯಾತ್ಮನಾ ರುದ್ರ ದೇವ್ಯಾದ್ಯುಪಾಸಕೈರ್ನಾತ್ತದೃಶರೂಪೇಣ ಚ ಯೋಗಸಿದ್ಧಿ ಬಲಾದ್ದ್ರಷ್ಟುಂ ಶಕ್ಯತ್ವಾದಿತ್ಯಾಶಯೇನ ವಸಿಷ್ಠ ಉತ್ತರಮಾಹ— ತಾ. ಪ್ರ.)

೪. ಅನಾದಿ ಚಿನ್ಮಾತ್ರವಾದ ಆಕಾಶವು ಕಾರಣಗಳಿಗೆಲ್ಲ ಕಾರಣವಾಗಿ ಅನಂತ ವಾಗಿ ಶಾಂತವಾಗಿ ಆಭಾಸಮಾತ್ರವಾಗಿ ಅವ್ಯಯವಾಗಿ ಹರಡಿಕೊಂಡಿರುವುದು.

ಶಿವಂ ತತ್ಸಚ್ಛಿವಂ ಸಾಕ್ಷಾಲ್ಲಕ್ಷ್ಯತೇ ಭೈರವಾಕೃತಿ ।
ತಥಾಸ್ಥಿತೋ ಜಗಚ್ಛಾಂತೌ ಪರಮಾಕಾಶ ಏವ ಸಃ ॥ ೫ ॥

ಚೇತನತ್ವಾತ್ತಥಾಭೂತಸ್ವಭಾವವಿಭವಾದೃತೇ ।
ಸ್ಥಾತುಂ ನ ಯುಜ್ಯತೇ ತಸ್ಯ ಯಥಾ ಹೇಮ್ನಾ ನಿರಾಕೃತಿ ॥ ೬ ॥

ಕಥಮಾಸ್ತಾಂ ವದ ಪ್ರಾಜ್ಞ ಚಿನ್ಮಾತ್ರಂ ಚೇತನಂ ವಿನಾ ।
ಕಥಮಾಸ್ತಾಂ ವದ ಪ್ರಾಜ್ಞ ಮರಿಚಂ ತಿಕ್ತತಾಂ ವಿನಾ ॥ ೭ ॥

---

೫. ಅದು ಶಿವವು: ಶಿವವೇ ಸತ್, ಅದೇ ಭೈರವಾಕೃತಿಯಾಗಿ ಕಾಣುವುದು. ಜಗತ್ತು ಶಾಂತವಾದಾಗ ಹಾಗೆ ಕಂಡರೂ ಹಾಗೆ ಕಂಡುದು ಪರಮಾಕಾಶವೇ ಹೊರತು ಮತ್ತೇನೂ ಅಲ್ಲ.

(ಶಿವಂ ನಿರತಿಶಯಾನಂದೈಕರಸಂ ತತ್ಸದ್ಬ್ರಹ್ಮೈವ ಶಿವಂ ನೀಲಕಂಠ ತ್ರಿನೇತ್ರತ್ವಾದಿ ಶಿವರೂಪಂ ಸತ್ಪ್ರಲಯಕಾಲೇ ಭೈರವಾಕೃತಿ ಲಕ್ಷತೇ ಉಪಾಸಕೈರಿತಿ ಶೇಷಃ ಯತಸ್ತದ್ವಾಸನಾನುಸಾರೇಣ ಸ ಪರಮಾಕಾಶ ಏವ ತಥಾ ತಯಾ ಆಕೃತ್ಯಾ ಸ್ಥಿತ ಇತ್ಯರ್ಥಃ—ತಾ. ಪ್ರ)

೬. ಬ್ರಹ್ಮವು ಚೇತನವು. ಅದರಿಂದ ಹಿಂದೆ ವರ್ಣಿಸಿದ ಆಕಾರಾದಿ ಸ್ವಭಾವ ವಿಭವವಿಲ್ಲದೆ, ಇರುವುದು ಸಾಧ್ಯವಿಲ್ಲ: ಹೇಮವು ನಿರಾಕೃತಿಯಾಗಿರುವುದೆಂತು ?

(ಕಿಂಚ ಚೇತನೇ ಬ್ರಹ್ಮಣಿ ಜಗದುಪ ಸಂಹಾರಃ ಶ್ರುತಿಷು ಪ್ರಸಿದ್ಧಃ ನಚ ನಿರಾಕಾರಶ್ಚೇನನೋಲೋಕೇ ಕೇನ ಚಿದ್ದೃಶ್ಯತ ಇತಿ ಶ್ರೌತೋ ಹಿ ಸಂಹರ್ತೇಶ್ವರ ಉಮಾ ಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಶಾಂತಮಿತ್ಯಾದಿ ಶ್ರುತಿ ಪ್ರಸಿದ್ಧ ರೂಪೇಣ ಸಂಭಾವನೀಯ ಇತ್ಯಾಶಯೇನಾಹ। ಚೇತನತ್ವಾದಿತಿ ತೂ ಯಥಾ ಹೇಮ್ನಃ ನಿರಾಕೃತಿ ಯಥಾ ಸ್ವಾತ್ತಥಾ ಸ್ಥಾತುಂ ನಯುಜ್ಯತೇ ತಥಾ ತೇನ ತೇನಾ ಪೀತ್ಯರ್ಥಃ ॥—ತಾ. ಪ್ರ)

೭. ಚಿನ್ಮಾತ್ರವು ಚೇತನವಿಲ್ಲದೆ ಇರುವುದೆಂತು ಹೇಳು. ಪ್ರಾಜ್ಞ ! ಮೆಣಸು ಖಾರವಿಲ್ಲದೆ ಇರುವುದೆಂತು ? ಹೇಳು

(ಯಥಾ ಹೇಮ್ನಃ ಹೇಮಾದಿ ದ್ರವಸ್ಯ ಪಿಂಡಕುಂಡಲಾದ್ಯನ್ಯತಮಾಕಾರಾ

ಕಟಕಾದಿವಿನಾ ಹೇಮ ಕಥಮಾಸ್ತಾಂ ವಿಲೋಚ್ಯತಾಂ ।
ಕಥಂ ಸ್ವಭಾವೇನ ವಿನಾ ಪದಾರ್ಥಸ್ಯ ಭವೇತ್ಸ್ಥಿತಿಃ ॥ ೮ ॥

ವಿನಾ ತಿಷ್ಠತಿ ಮಾಧುರ್ಯಂ ಕಥಮೇಕ್ಷುರಸಃ ಕಥಂ ।
ನಿರ್ಮಾಧುರ್ಯಶ್ಚ ಯಸ್ತ್ವಿಕ್ಷುರಸೋ ನಹಿ ಸ ತದ್ರಸಃ ॥ ೯ ॥

ಅಚೇತನಂ ಯಚ್ಚಿನ್ಮಾತ್ರಂ ನ ತಚ್ಚಿನ್ಮಾತ್ರಂಮುಚ್ಯತೇ ।
ನ ಚ ಚಿನ್ಮಾತ್ರನಭಸೋ ನಷ್ಟಂ ಕ್ವಚನ ಯುಜ್ಯತೇ ॥ ೧೦ ॥

ಸ್ವಸತ್ತಾಮಾತ್ರಕಾದನ್ಯತ್ಕಿಂಚಿತ್ತಸ್ಯ ನ ಯುಜ್ಯತೇ ।
ಅನ್ಯತ್ವಮುದರೀಕರ್ತುಂ ವ್ಯೋಮಾನನ್ಯಮಸೌ ಕಿಲ ॥ ೧೧ ॥

---

ವಶ್ಯಂ ಭಾವ ನಿಯಮಸ್ತಥಾ ಚಿತ್ತೋಽಪ್ಯವಶ್ಯಂ ಚೇತ್ಯಾಕಾರಾವಲಂಬನ ನಿಯಮೋ ಲೋಕೇ ಪ್ರಸಿದ್ಧ ಇತಿ ನಿರಾಕಾರ ಪರಿಶೇಷ ಪಕ್ಷ ಏವ ಪ್ರತ್ಯುತಾ ಸಂಭಾವಿತ ಇತಿ ಪ್ರೌಢಿವಾದೇನಾಹ—ತಾ. ಪ್ರ.)

೮ ಕಟಕಾದಿರೂಪಗಳಿಲ್ಲದೆ ಹೇಮವು ಹೇಗೆ ತಾನೇ ಇರಬಲ್ಲುದೋ ಯೋಚಿಸು. ಯಾವ ಪದಾರ್ಥವೇ ಆಗಲಿ ತನ್ನ ಸ್ವಭಾವವನ್ನು ಬಿಟ್ಟು ಇರುವುದು ತಾನೇ ಎಂತು ?

೯. ಇಕ್ಷುರಸವು ತನ್ನ ಮಾಧುರ್ಯವನ್ನು ಬಿಟ್ಟು ಇರುವುದು .ಹೇಗೆ ? ಮಾಧುರ್ಯವಿಲ್ಲದ ಇಕ್ಷುರಸವೊಂದುಂಟು ಎನ್ನುವುದಾದರೆ, ಅದು ಇಕ್ಷುವಿನ ರಸವೇ ಅಲ್ಲ

೧೦ ಅಚೇತನವಾದ ಚಿನ್ಮಾತ್ರವೂ ಬಂದಿದೆಯೆನ್ನುವುದಾದರೆ ಅದು ಚಿನ್ಮಾತ್ರವೇ ಅಲ್ಲ. ಚಿನ್ಮಾತ್ರವಾದ ಆಕಾಶವು ನಷ್ಟವಾಯಿತು ಎನ್ನುವುದು ಎಲ್ಲಿ ಒಪ್ಪಿಗೆ ಯಾದೀತು ?

(ಅಪಿಚ ನಷ್ಟಾನಾಮಪಿ ಸ್ಮೃತೌ ಭಾನದರ್ಶನಾಚ್ಚಿದ್ದೃಷ್ಟ್ಯಾ ಕಸ್ಯಾಪಿ ನಿರನ್ವಯಾನಾಶ ಏವಾಪ್ರಸಿದ್ಧ ಇತ್ಯಾಹ—ತಾ. ಪ್ರ.)

೧೧. ಚಿನ್ಮಾತ್ರವು ಸ್ವಸತ್ತಾಮಾತ್ರಕ್ಕಿಂತ ಬೇರೆಯಾದ ಇನ್ನೇನೂ ಅಲ್ಲ ಎನ್ನುವುದರಿಂದ (ಚಿತ್ತು ಬಿಟ್ಟು ಇನ್ನೇನೂ ಇಲ್ಲವಾದ್ದರಿಂದ) ಇನ್ನೊಂದನ್ನು ಪ್ರಕಟಿಸಲು ತನ್ನಿಂದ ಬೇರೆಯಲ್ಲದ ವ್ಯೋಮವನ್ನು ಸೃಷ್ಟಿಸುವುದಲ್ಲವೆ ?

ತಸ್ಮಾತ್ತಸ್ಯ ಯದಕ್ಷುಬ್ಧಂ ಸತ್ತಾಮಾತ್ರಂ ಸ್ವಮಾಸನಂ ।
ಅನಾದಿಮಧ್ಯಪರ್ಯಂತಂ ಸರ್ವಶಕ್ತಿಮಯಾತ್ಮಕಂ ॥ ೧೨ ॥

ತದೇತತ್ತ್ರಿಜಗತ್ಸರ್ಗಕಲ್ಪಾಂತೌ ವ್ಯೋಮ ಭೂರ್ದಿಶಃ ।
ನಾಶ ಉತ್ಪಾದನಂ ನಾಮ ವಿನಾಮಾಭಾಸನಂ ನಭಃ ॥ ೧೩ ॥

ಜನನಂ ಮರಣಂ ಮಾಯಾ ಮೋಹಮಾಂದ್ಯಮವಸ್ತುತಾ ।
ವಸ್ತುತಾ ಚ ವಿವೇಕಶ್ಚ ಬಂಧೋ ಮೋಕ್ಷಃ ಶುಭಾಶುಭೇ ॥ ೧೪ ॥

ವಿದ್ಯಾವಿದ್ಯಾ ವಿದೇಹತ್ವಂ ಸದೇಹತ್ವಂ ಕ್ಷಣಶ್ಚಿರಂ ।
ಚಂಚಲತ್ವಂ ಸ್ಥಿರತ್ವಂ ವಾ ತ್ವಂ ಚಾಹಂ ಚೇತರಶ್ಚ ತತ್ ॥ ೧೫ ॥

ಸದಸಚ್ಚಾಥ ಸದಸನ್ಮೌರ್ಖ್ಯಂ ಪಾಂಡಿತ್ಯಮೇವ ಚ ।
ದೇಶಕಾಲಕ್ರಿಯಾದ್ರವ್ಯಕಲನಾಕೇಲಿಕಲ್ಪನಂ ॥ ೧೬ ॥

ರೂಪಾಲೋಕಮನಸ್ಕಾರಕರ್ಮಬುದ್ಧೀಂದ್ರಿಯಾತ್ಮಕಂ ।
ತೇಜೋವಾರ್ಯನಿಲಾಕಾಶಪೃಥ್ವ್ಯಾದಿಕಮಿದಂ ತತಂ ॥ ೧೭ ॥

ಏತತ್ಸರ್ವಮಸೌ ಶುದ್ಧಚಿದಾಕಾಶೋ ನಿರಾಮಯಃ ।
ಅಜಹದ್ವ್ಯೋಮತಾಮೇವ ಸರ್ವಾತ್ಮೈವೈವಮಾಸ್ಥಿತಃ ॥ ೧೮ ॥

---

೧೨. ಆದರಿಂದ, ಆ ಬ್ರಹ್ಮದ ಅಕ್ಷುಬ್ಧವೂ ಸತ್ತಾಮಾತ್ರವೂ ತಾನೇ ತಾನಾಗಿ ಆಸಾನವಾಗಿರುವುದೂ, ಆದಿಮ್ಯಧ್ಯಪರ್ಯಂತಗಳಿಲ್ಲದುದೂ ಸರ್ವಶಕ್ತಿಮಯಾತ್ಮಕವೂ ಆದುದೇ ಸ್ವರೂಪವು.

೧೩. ಅದೇ ಬ್ರಹ್ಮವೇ ತ್ರಿಜಗತ್ತಾಗಿ ಸರ್ಗವಾಗಿರುವುದು ಕಲ್ಪಾಂತದಲ್ಲಿ ಆಕಾಶ, ಭೂಮಿ, ದಿಕ್ಕುಗಳು, ಇವುಗಳ ನಾಶವು ಆಗುವುದು ಎಂದರೆ, ವಿ‑ನಾಮವಾಗಿ ಆಕಾಶವು ಆಭಾಸನವಾಗುವುದು.

೧೪–೧೮. ಜನನ ಮರಣ ಎಂಬಿವೆಲ್ಲವೂ ಮಾಯಾ (ವಿಕ್ಷೇಪ) ಮೋಹ (ಆವರಣ) ಇವುಗಳಿಂದ ಆದ ಮಾಂಧ್ಯವು. ಅದು ಅವಸ್ತುವು. ಹಾಗಾದರೆ ವಸ್ತುವು ಯಾವುದು ಎಂದರೆ ವಿವೇಕವು (ಆದರಿಂದ) ಬಂಧ ಮೋಕ್ಷ, ಶುಭ ಅಶುಭ, ವಿದ್ಯಾ ಅವಿದ್ಯಾ, ವಿದೇಹತ್ವ ಸದೇಹತ್ವ, ಕ್ಷಣ ಚಿರ, ಚಂಚಲತ್ವ ಸ್ಥಿರತ್ವ. ನೀನು ನಾನು ಇತರ ಆದು ಎಂಬಿವು, ಸತ್ ಅಸತ್, ಮೌರ್ಖ್ಯ ಪಾಂಡಿತ್ಯ, ದೇಶ ಕಾಲ ಕ್ರಿಯಾ

ಏತತ್ಸರ್ವಂ ಚ ವಿಮಲಂ ಖಮೇವಾತ್ರ ನ ಸಂಶಯಃ ।
ಅಸ್ಮಾದನನ್ಯತ್ಸ್ವಪ್ನಾದ್ರಿರ್ದೃಷ್ಟಾಂತೋಽತ್ರಾವಿಖಂಡಿತಃ ॥ ೧೯ ॥

ಚಿನ್ಮಯಃ ಪರಮಾಕಾಶೋ ಯ ಏವ ಕಥಿತೋ ಮಯಾ ।
ಏಷೋಽಸೌ ಶಿವ ಇತ್ಯುಕ್ತೋ ಭವತ್ಯೇಷ ಸನಾತನಃ ॥ ೨೦ ॥

ಸ ಏಷ ಹರಿರಿತ್ಯಾಸ್ತೇ ಭವತ್ಯೇಷ ಪಿತಾಮಹಃ ।
ಚಂದ್ರೋಽರ್ಕ ಇಂದ್ರೋ ವರುಣೋ ಯಮೋ ವೈಶ್ರವಣೋಽನಲಃ ॥ ೨೧ ॥

ಅನಿಲೋ ಜಲದೋಂಭೋಧಿರ್ಯೋ ಯದ್ವಸ್ತ್ವಸ್ತಿ ನಾಸ್ತಿ ಚ ।
ಇತ್ಯೇತೆ ಚಿನ್ಮಯಾಕಾಶಕೋಶಲೇಶಾಃ ಸ್ಫುರಂತ್ಯಲಂ ॥ ೨೨ ॥

ಏವಂವಿಧಾಭಿಃ ಸಂಜ್ಞಾಭಿರ್ಮುಧಾ ಭಾವನಯೋದೃಶಾಃ ।
ಸ್ವಭಾವಮಾತ್ರಬೋಧೇನ ಭವಂತ್ಯೇತೆ ತು ತಾದೃಶಾಃ ॥ ೨೩ ॥

---

ದ್ರವ್ಯ ಕಲನಾ ಎಂಬ ಸಂಕಲ್ಪದ ಆಟಗಳುರೂಪಾಲೋಕಮನಸ್ಕಾರಗಳು, ಕರ್ಮ, ಬುದ್ಧಿ, ಇಂದ್ರಿಯಾದಿಗಳು, ತೇಜಸ್ಸು ವಾರಿ ವಾಯು ಆಕಾಶ ಪೃಥಿವ್ಯಾದಿ ಪಂಚಭೂತಗಳು, ಇದಂ ಎಂದ್ದೃಶ್ಯವಾಗಿ ಹರಡಿರುವುದು, ಇದೆಲ್ಲವೂ ಶುದ್ಧವಾದ ನಿರಾವಯವಾದ ಚಿದಾಕಾಶವೇ !

೧೯. ಎಲ್ಲವೂ, ಇರುವುದೆಲ್ಲವೂ, ನಿರ್ಮಲವಾದ ಚಿದಾಕಾಶವೇ ! ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಬೇರೆಯಾಗಿ ಕಾಣುವುದೆಲ್ಲವೂ ಸ್ವಪ್ನದಲ್ಲಿ ಕಂಡ ಪರ್ವತದಂತೆ ಎಂಬ ದೃಷ್ಟಾಂತವು ಖಂಡಿತವಾಗಿ ಇದ್ದೇ ಇರುವುದು

೨೦ ನಾನು ಹೇಳಿದ ಚಿನ್ಮಯವಾದ ಪರಮಾಕಾಶವೇ ಈಗ ಹೇಳಿದ ಶಿವನು! ಇದು ಸನಾತನವಾದುದು

೨೧–೨೨. ಆತನೇ ಹರಿಯಾಗಿರುವನು: ಆತನೇ ಪಿತಾಮಹನಾಗುವನು ಚಂದ್ರ ಸೂರ್ಯ ಇಂದ್ರ ವರುಣ ಯಮ ಕುಬೇರ ಅಗ್ನಿ ವಾಯು ಮೇಘ ಸಮುದ್ರ ಆರೇತಕಾಲ, ಮೊದಲಾದ ಯಾವ ಯಾವುದು ವಸ್ತುರೂಪವಾಗಿ ಇರುವುದೋ ಅವು ವಸ್ತುರೂಪವಾಗಿಲ್ಲದುವೂ ಎಲ್ಲವೂ ಚಿನ್ಮಯಾಕಾಶಕೋಶದ ಲೇಶ ಲೇಶಗಳು ಅವು ಹಾಗೆ ಹಾಗೆ ಸ್ಫುರಣವಾಗುವುವು.

೨೩ ಹೀಗಿರುವ ನಾನಾ ಪ್ರಕಾರಗಳಾದ ಸಂಜ್ಞೆಗಳಿಂದ, ಅನ್ಯಥಾ ಗ್ರಹಣ ಕಾರಿಣಿಯಾದ ಅವಿದ್ಯಾರೂಪವಾದ ವೃಥಾ ಭಾವನೆಯಿಂದ ಕಣ್ಣಿಗೆ ಕಾಣುವ ಸ್ವಭಾವವನ್ನು ಮಾತ್ರ ನೋಡುವುದರಿಂದ, ನಾನಾ ರೂಪಗಳಾಗಿ ಕಾಣುವುವು.

ಅಬೋಧೋ ಬೋಧ ಇತ್ಯೇವಂ ಚಿದ್ವ್ಯೋಮ್ನ್ಯೇವಾತ್ಮನಿ ಸ್ಥಿತಂ ।
ತಸ್ಮಾದ್ಭೇದೋ ದ್ವೈತಮೈಕ್ಯಂ ನಾಸ್ತ್ಯೇವೇತಿ ಪ್ರಶಾಮ್ಯತಾಂ ॥ ೨೪ ॥

ತಾವತ್ತರಂಗತ್ವಮಯಂ ಕರೋತಿ
ಜೀವಃ ಸ್ವಸಂಸಾರಮಹಾಸಮುದ್ರೇ ।
ಯಾವನ್ನ ಜಾನಾತಿ ಪರಂ ಸ್ವಭಾವಂ
ನಿರಾಮಯಂ ತನ್ಮಯತಾಮುಪೇತಃ ॥ ೨೫ ॥

ಜ್ಞಾನೇ ತು ಶಾಂತಿಂ ಸ ತಥೋಪಯಾತಿ
ಯಥಾ ನ ಸೋಽಬ್ಧಿರ್ನ ತರಂಗಕೋಽಸೌ ।
ಯಥಾಸ್ಥಿತಂ ಸರ್ವಮಿದಂ ಚ ಶಾಂತಂ
ಭವತ್ಯನಂತಂ ಪರಮೇವ ತಸ್ಯ ॥ ೨೬ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಶಿವಸ್ವರೂಪವರ್ಣನಂ" ನಾಮ
ದ್ವ್ಯಶೀತಿತಮಃ ಸರ್ಗಃ

---

೨೪. ಆದರಿಂದ ಅಜ್ಞಾದೃಷ್ಟಿಯಿಂದ ಅಬೋಧವಾಗಿರುವ ಚಿತ್ತೇ ಜ್ಞಾದೃಷ್ಟಿಯಿಂದ ಬೋಧವಾಗುವುದು. ಅದೇ ಚಿದಾಕಾಶವು. ಅದು ಆತ್ಮನಲ್ಲಿಯೇ ಇರುವುದು. ಆದರಿಂದ ಭೇದವಾಗಲಿ, ದ್ವೈತ ಐಕ್ಯ ಎಂಬ ಭಾವನೆಯಾಗಲಿ, ಇಲ್ಲವೇ ಇಲ್ಲವೆಂದು ಶಾಂತನಾಗು.

೨೫. (ಹೀಗೆ ಚಿದ್ರೂಪವಾಗಿರುವ) ಜೀವನು ತಾನು ಪರವಸ್ತುವೆಂಬುದನ್ನು ಎಲ್ಲಿಯವರೆಗೂ ತಿಳಿಯುವುದಿಲ್ಲವೋ ಅಲ್ಲಿಯವರೆಗೂ ಸ್ವಸಂಹಾರ ಮಹಾ ಸಮುದ್ರದಲ್ಲಿ ಜನ್ಮ ಮರಣ ಭ್ರಮಣಾದಿ ನಾನಾ ತರಂಗಗಳನ್ನು ಎಬ್ಬಿಸುತ್ತಿರುವನು. ತನ್ನ ಸ್ವಭಾವವನ್ನು ತಿಳಿಯುತ್ತಲೂ,ಯಾವ ಯೋಚನೆಯು ಇಲ್ಲದೆ,ತನ್ಮಯನಾಗಿ ಹೋಗುವನು.

೨೬. ಜೀವನಿಗೆ ಜ್ಞಾನವು ಲಭಿಸಲು ಹಾಗೆಯೇ ಶಾಂತಿಯನ್ನು ಹೊಂದುವನು. ಆಗಸಮುದ್ರವೂ ಇಲ್ಲ; ತರಂಗವೂ ಇಲ್ಲ. ಇದ್ದುದು ಇದ್ದಂತೆ ಇರುವಾಗ ಎಲ್ಲವೂ ಶಾಂತವೆ! ಅನಂತವೇ! ಪರಮವೇ ಆಗುವುದು.

ಇಂತಿದು ಆರ್ಷವೂ, ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಶಿವಸ್ವರೂಪವರ್ಣನ" ಎಂಬ
ಎಂಭತ್ತೆರಡನೆಯ ಸರ್ಗವು

**ಹತ್ತೊಂಬತ್ತನೆಯ ಸಂಪುಟವು ಮುಗಿದುದು**